# ಕನ್ನಡ ಅಧ್ಯಯನ

# ಕರ್ನಾಟಕದ ಆರ್ಥಿಕತೆ

ಸಂಪುಟ 4 ಸಂಚಿಕೆ 1- 2

ಸಂಪಾದಕರು

ಪ್ರೊ. ಅಬ್ದುಲ್ ಅಜೀಜ್

ಕೆ. ಜಿ. ವಾಸುಕಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ

## ಕನ್ನಡ ಅಧ್ಯಯನ

# ಕರ್ನಾಟಕದ ಆರ್ಥಿಕತೆ

ಸಂಪಾದಕರು

**ಪ್ರೊ. ಅಬ್ದುಲ್ ಅಜೀಜ್**

**ಕೆ.ಜಿ. ವಾಸುಕಿ**




ಪ್ರಸಾರಾಂಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

**KARNATAKADA AARTHIKATHE**
Proceedings of the Seminar on Karnataka Economy
held at Kannada University, Hampi

Edited by
Prof. Abdul Aziz, K.G. Vasuki

ಸಂಪುಟ ೪, ಸಂಚಿಕೆ ೧-೨

Published by
**Prof. A.V. Navada**
Director, Prasaranga
Kannada University, Hampi
Vidyaranya, Kamalapura 583 221

Pages: xxiv + 322 First Edition 1997

Rs. 100/-



ಪ್ರಕಾಶಕರು:
**ಪ್ರೊ. ಎ.ವಿ. ನಾವಡ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧
ರೂ. ೧೦೦/-

ಮುಖಪುಟ: **ಕೆ.ಕೆ. ಮಕಾಳಿ**

ಮುದ್ರಣ:
**ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.**
೧೬೪, ೫ನೇ ಮುಖ್ಯ ರಸ್ತೆ
ಚಾಮರಾಜಪೇಟೆ, ಬೆಂಗಳೂರು ೫೬೦ ೦೧೮
ದೂರವಾಣಿ: ೬೨೫೬೩೬

# ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿ ಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿ ಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿಬರುವ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಾಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಈ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ ಈಗಾಗಲೇ ಮಹತ್ವದ ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗವು ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ಕನ್ನಡ ವಿಶ್ವವಿದ್ಯಾಲಯ ಹಂಪಿ ಮತ್ತು ಕರ್ನಾಟಕದ ಪ್ರಸಿದ್ಧ ಸಂಶೋಧನ ಸಂಸ್ಥೆಯಾಗಿರುವ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆ ಅಧ್ಯಯನ ಸಂಸ್ಥೆ, ಬೆಂಗಳೂರು ಇವರ ಸಹಯೋಗದಲ್ಲಿ 'ಕರ್ನಾಟಕದ ಆರ್ಥಿಕತೆ' ಎಂಬ ವಿಷಯದ ಬಗ್ಗೆ ನಮ್ಮ ವಿಶ್ವವಿದ್ಯಾಲಯದ ಆವರಣದಲ್ಲಿ ವಿಚಾರ ಸಂಕಿರಣವೊಂದನ್ನು ನಡೆಯಿಸಿತು. ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆ ಅಧ್ಯಯನ ಸಂಸ್ಥೆಯ ಪ್ರೊ. ಅಬ್ದುಲ್ ಅಜೀಜ್‌ರವರ ನೇತೃತ್ವದಲ್ಲಿ ವಿಚಾರ ಸಂಕಿರಣವು ಯಶಸ್ವಿಯಾಗಿ ನಡೆಯಿತು. ವಿಚಾರ ಸಂಕಿರಣದಲ್ಲಿ ಮಂಡಿತವಾದ ಕರ್ನಾಟಕದ ಆರ್ಥಿಕತೆ ಕುರಿತ ಅಧ್ಯಯನ ಪ್ರಬಂಧಗಳು ಇಲ್ಲಿ ಸಂಕಲಿತಗೊಂಡಿವೆ.

ಅಭಿವೃದ್ಧಿ ಕುರಿತಂತೆ ಕನ್ನಡ ವಿಶ್ವವಿದ್ಯಾಲಯವು ತನ್ನದೇ ಆದ ಪರಿಪ್ರೇಕ್ಷ್ಯವನ್ನು ಇಟ್ಟುಕೊಂಡಿದೆ. ಈಗ ಇಲ್ಲಿ ಅಭಿವೃದ್ಧಿ ಅಧ್ಯಯನ ವಿಭಾಗವು ಕೆಲಸ ಮಾಡುತ್ತಿದೆ. ಪ್ರಸ್ತುತ ಸಂಕಲನವು ಕರ್ನಾಟಕದ ಅಭಿವೃದ್ಧಿಯ ಬಗ್ಗೆ ಒಂದು ಸ್ಥೂಲ ನೋಟವನ್ನು ನೀಡುತ್ತದೆ. ವಿಚಾರ ಸಂಕಿರಣದಲ್ಲಿ ಪ್ರಬಂಧಗಳನ್ನು ಮಂಡಿಸಿದ ವಿದ್ವಾಂಸರಿಗೆ ಹಾಗೂ ಸಂಕಲನವನ್ನು ಸಿದ್ಧಮಾಡಿಕೊಟ್ಟ ಪ್ರೊ. ಅಬ್ದುಲ್ ಅಜೀಜ್ ಹಾಗೂ ಕೆ.ಜಿ. ವಾಸುಕಿ ಅವರಿಗೆ ನನ್ನ ಕೃತಜ್ಞತೆಗಳು.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಮುನ್ನುಡಿ

ಕನ್ನಡ ವಿಶ್ವವಿದ್ಯಾಲಯದ ಮಾಹಿತಿ ಕೇಂದ್ರದ ಆಶ್ರಯದಲ್ಲಿ ದಿನಾಂಕ ೧೩-೧೧-೯೫ ಮತ್ತು ೧೪-೧೧-೯೫, ಈ ಎರಡು ದಿನಗಳ ಕಾಲ 'ಕರ್ನಾಟಕದ ಆರ್ಥಿಕತೆ' ಕುರಿತ ಮಹತ್ವದ ವಿಚಾರ ಸಂಕಿರಣ ನಡೆಯಿತು. ಕರ್ನಾಟಕ ರಾಜ್ಯದ ಆರ್ಥಿಕ ಪರಿಸ್ಥಿತಿಯ, ಸ್ಥಿತಿ-ಗತಿಗಳ ಕುರಿತು ಕನ್ನಡದಲ್ಲಿ ಆಲೋಚಿಸಿ, ಚರ್ಚಿಸಿ, ಪ್ರಗತಿಗೆ ಪೂರಕವಾದ ಅಂಶಗಳನ್ನು ಮನದಟ್ಟು ಮಾಡಿಕೊಂಡು, ಮುಂದಿನ ಹೆಜ್ಜೆಗಳನ್ನು ಹಾಕುವುದರ ಹಿನ್ನೆಲೆಯಲ್ಲಿ ಈ ವಿಚಾರ ಸಂಕಿರಣ ಏರ್ಪಾಟಾಗಿತ್ತು.

ಕನ್ನಡ ವಿಶ್ವವಿದ್ಯಾಲಯದ ವಿದ್ಯಾರಣ್ಯ ಅವರಣದ 'ಚಾವಡಿ'ಯಲ್ಲಿ ನಡೆದ ಈ ವಿಚಾರ ಸಂಕಿರಣದಲ್ಲಿ ನಾಡಿನ ಗಣ್ಯ ಅರ್ಥಶಾಸ್ತ್ರಜ್ಞರು, ವಿದ್ವಾಂಸರು, ರೈತಮುಖಂಡರು, ವಿವಿಧ ಗಣ್ಯರು ಪಾಲ್ಗೊಂಡಿದ್ದರು. ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ದಿ ೧೩-೧೧-೧೯೯೫ರಂದು ಬೆಳಿಗ್ಗೆ ವಿಚಾರ ಸಂಕಿರಣವನ್ನು ಉದ್ಘಾಟಿಸಿದರು. ಖ್ಯಾತ ಅರ್ಥಶಾಸ್ತ್ರಜ್ಞರಾದ ಪ್ರೊ. ಅಬ್ದುಲ್ ಅಜೀಜ್ ಪ್ರಾಸ್ತಾವಿಕ ಭಾಷಣ ಮಾಡಿದರು. ಐಸೆಕ್ ಸಂಸ್ಥೆಯ ಡಾ. ಎಂ. ವೆಂಕಟರೆಡ್ಡಿ ಅಧ್ಯಕ್ಷತೆ ವಹಿಸಿದ್ದರು. ಉದ್ಘಾಟನೆಯ ನಂತರ ಗೋಷ್ಠಿಗಳು ಆರಂಭವಾದವು.

ಪ್ರೊ. ಅಬ್ದುಲ್ ಅಜೀಜ್ ಅವರ ಅಧ್ಯಕ್ಷತೆಯಲ್ಲಿ ಆರಂಭವಾದ ಬೆಳಗಿನ ಮೊದಲ ಗೋಷ್ಠಿಯಲ್ಲಿ ಮುಖ್ಯರಾಗಿ ಮೂರು ಪ್ರಬಂಧಗಳನ್ನು ಮಂಡಿಸಲಾಯಿತು. ಡಾ. ಪಿ. ಬ್ರಹ್ಮಾನಂದ ಅವರ 'ಕರ್ನಾಟಕದ ಬೆಳವಣಿಗೆಯ ಕೆಲವು ಅಂಶಗಳು' ಕುರಿತ ಪ್ರಬಂಧವನ್ನು ಅವರಗೈರು ಹಾಜರಿಯಲ್ಲಿ ಡಾ. ಶಿವಣ್ಣ ಮಂಡಿಸಿದ್ದರು. ಡಾ. ಎಂ. ಪ್ರಹ್ಲಾದಾಚಾರ್ ಅವರು 'ಕರ್ನಾಟಕದಲ್ಲಿ ಕೈಗಾರಿಕಾಭಿವೃದ್ಧಿ: ಅನುಭವ ಸಮಸ್ಯೆ ಹಾಗೂ ಅವಕಾಶಗಳು' ಬಗ್ಗೆ ಡಾ. ಎಂ.ವಿ. ನಾಡಕರ್ಣಿ ಮತ್ತು ಡಾ. ಜಿ.ಎಸ್. ಶಾಸ್ತ್ರಿ, ಔದ್ಯೋಗಿಕರಣದ ಇನ್ನೊಂದು ಮುಖದ ಬಗ್ಗೆ ಪ್ರಬಂಧಗಳನ್ನು ಮಂಡಿಸಿದರು. ಈ ಉಪನ್ಯಾಸಗಳ ನಂತರ ಅರ್ಥಪೂರ್ಣ ಚರ್ಚೆ ನಡೆಯಿತು. ಮಾಹಿತಿ ಕೇಂದ್ರದ ನಿರ್ದೇಶಕರಾದ ಶ್ರೀ ಕೆ.ಜಿ. ವಾಸುಕಿ ಹಾಗೂ ಡಾ. ಪಿ.ಕೆ. ರೇಣುಕಾಚಾರ್ಯ ಅವರು ಗೋಷ್ಠಿಯ ಸಂಯೋಜಕರಾಗಿ ಕಾರ್ಯ ನಿರ್ವಹಿಸಿದರು.

ದಿ. ೧೩-೧೧-೯೫ರಂದು ನಡೆದ ಎರಡನೇ ಗೋಷ್ಠಿಯಲ್ಲಿ ಒಟ್ಟು ನಾಲ್ಕು ಪ್ರಬಂಧಗಳು ಮಂಡಿತವಾದವು. ಡಾ. ಎಂ. ವೆಂಕಟರೆಡ್ಡಿ ಅವರು 'ನೀರಾವರಿ ಅಭಿವೃದ್ಧಿಯ ಸಮಸ್ಯೆಗಳು' ಬಗ್ಗೆ ಪ್ರಬಂಧ ಮಂಡಿಸಿದರು. ಡಾ. ಪಿ.ವಿ. ಶೆಣೈ ಅವರ ಗೈರು ಹಾಜರಿಯಲ್ಲಿ ಶ್ರೀ ಎಂ. ವಿವೇಕಾನಂದ ಅವರು 'ಕರ್ನಾಟಕದಲ್ಲಿ ಕೃಷಿ ಅಭಿವೃದ್ಧಿ' ಕುರಿತು ವಿಚಾರ ಮಂಡಿಸಿದರು. ಡಾ. ವಿ.ಎಂ. ರಾವ್ ಅವರು 'ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ' ಕುರಿತು ಹಾಗೂ ಡಾ. ಸಿ.ಕೆ. ರೇಣುಕಾಚಾರ್ಯ ಅವರು 'ಕರ್ನಾಟಕದಲ್ಲಿ ಕೈಗಾರಿಕಾ ಸಂಬಂಧಗಳು' ಕುರಿತು ಪ್ರಬಂಧಗಳನ್ನು ಮಂಡಿಸಿದರು. ಡಾ. ಹನುಮಂತ ರಾಯಪ್ಪ ಅವರು ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಗೋಷ್ಠಿಯ ನಂತರ ಚರ್ಚೆ-ಸಂವಾದಗಳು ನಡೆದವು. ಶ್ರೀ ಬಿ.ಎಸ್. ಶ್ರೀಕಂಠಾರಾಧ್ಯ ಮತ್ತು ಶ್ರೀ ಟಿ.ಎಸ್. ಸತ್ಯನಾಥ್ ಗೋಷ್ಠಿಯ ಸಂಯೋಜಕರಾಗಿದ್ದರು.

ದಿನಾಂಕ ೧೪-೧೧-೯೫ರಂದು ಆರಂಭವಾದ ಮೂರನೇ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ. ಎಂ. ಪ್ರಹ್ಲಾದಾಚಾರ್ ವಹಿಸಿದ್ದರು. ಪ್ರೊ. ಬಿ.ಎಸ್. ಶ್ರೀಕಂಠಾರಾಧ್ಯ ಅವರು 'ಕರ್ನಾಟಕದ ಸಾರ್ವಜನಿಕ ಉದ್ಯಮಗಳು : ಬೆಳವಣಿಗೆ ಮತ್ತು ಕಾರ್ಯನಿರ್ವಹಣೆ' ಕುರಿತು 'ಕರ್ನಾಟಕ ರಾಜ್ಯದ ಹಣಕಾಸು' ಬಗ್ಗೆ ಕೆ. ಗಾಯತ್ರಿ ಅವರು ಪ್ರಬಂಧಗಳನ್ನು ಮಂಡಿಸಿದರು. ಡಾ. ಎಂ. ಜಾನ್ಸನ್ ಸಾಮ್ಯುಯೆಲ್ ಮತ್ತು ಶ್ರೀ ಎಂ. ಲಿಂಗರಾಜು ಅವರು 'ಕರ್ನಾಟಕದಲ್ಲಿ ಆರ್ಥಿಕ ಸಾಧನ ಸಂಪತ್ತುಗಳು:ಸಮಸ್ಯೆಗಳು ಹಾಗೂ ನಿರೀಕ್ಷೆಗಳು' ಕುರಿತು ಪ್ರೊ. ಸಿ. ಹನುಮಂತಪ್ಪ ರಾಯಪ್ಪ ಮತ್ತು ಶ್ರೀಮತಿ ಕೆ.ಎಸ್. ಉಮಾಮಣಿ ಅವರು 'ಜನಸಂಖ್ಯಾ ಬೆಳವಣಿಗೆ, ಕುಟುಂಬ ಯೋಜನೆ ಹಾಗೂ ಆರೋಗ್ಯ ಸೌಕರ್ಯಗಳ' ಬಗ್ಗೆ ಹಾಗೂ ಶ್ರೀ ವಿ. ಶಾಂತಪ್ಪ ಮತ್ತು ಶ್ರೀ ಕೇಶವ ಅವರು 'ಬಡತನ ನಿರುದ್ಯೋಗ ಮತ್ತು ರಕ್ಷಣಾ ಕಾರ್ಯಕ್ರಮಗಳ' ಬಗ್ಗೆ ತಮ್ಮ ವಿಚಾರಪೂರ್ಣ ಪ್ರಬಂಧಗಳನ್ನು ಮಂಡಿಸಿದರು. ಗೋಷ್ಠಿಯ ನಂತರ ವಿಚಾರಮಂಥನ ನಡೆಯಿತು. ಪ್ರೊ. ಶೇಷಾದ್ರಿ ಮತ್ತು ಡಾ. ಪುರುಷೋತ್ತಮ ಬಿಳಿಮಲೆ ಅವರು ಗೋಷ್ಠಿಯ ಸಂಯೋಜಕರಾಗಿದ್ದರು ಹಾಗೂ ಮಂಗಳೂರು ವಿಶ್ವವಿದ್ಯಾಲಯದ ಪತ್ರಿಕೋದ್ಯಮ ಮತ್ತು ಸಂವಹನ ವಿಭಾಗದ ಉಪನ್ಯಾಸಕರಾದ ಶ್ರೀ ಪೂರ್ಣಾನಂದ ಅವರು ವಿಶೇಷ ಆಹ್ವಾನಿತರಾಗಿ ಗೋಷ್ಠಿಯಲ್ಲಿ ಭಾಗವಹಿಸಿದ್ದರು.

ನಾಲ್ಕನೆಯ ಗೋಷ್ಠಿಯಲ್ಲಿ ಪ್ರೊ. ಅಬ್ದುಲ್ ಅಜೀಜ್ ಅವರು ಡಾ. ಐ.ಜಿ.ಎಚ್. ಲೂಯಿಸ್ ಅವರ ಭೌತಿಕ ಜೀವನ ಗುಣಮಟ್ಟ ಸೂಚಿ-ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಒಂದು ಮಾಪನ ಎಂಬ ಪ್ರಬಂಧವನ್ನು ಪ್ರೊ. ಅಬ್ದುಲ್ ಅಜೀಜ್ ಅವರು ಮಂಡಿಸಿದರು. ಡಾ.ಎನ್. ಶಿವಣ್ಣ ಅವರು 'ಸಾಮಾಜಿಕ ಬದಲಾವಣೆ: ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಪಾತ್ರ'ದ ಬಗ್ಗೆ ಹಾಗೂ ಶ್ರೀ ಗೋವಿಂದರಾಜು ಅವರು 'ಕರ್ನಾಟಕದಲ್ಲಿ ರೇಷ್ಮೆ

ಕೃಷಿ ಮತ್ತು ಉದ್ಯಮ' ಕುರಿತು ಪ್ರಬಂಧಗಳನ್ನು ಮಂಡಿಸಿದರು. ಪ್ರೊ. ಹಿ.ಚಿ. ಬೋರಲಿಂಗಯ್ಯನವರು ಗೋಷ್ಠಿಯ ಸಂಯೋಜಕರಾಗಿ ಕಾರ್ಯ ನಿರ್ವಹಿಸಿದರು.

೧೪-೧೧-೯೫ರಂದು ಸಂಜೆ ವಿಚಾರ ಸಂಕಿರಣದ ಸಮಾರೋಪ ಸಮಾರಂಭ ನಡೆಯಿತು. ಪ್ರೊ. ಅಬ್ದುಲ್ ಅಜೀಜ್ ಸಮಾರೋಪ ಭಾಷಣ ಮಾಡಿದರು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಅಧ್ಯಕ್ಷತೆ ವಹಿಸಿದ್ದರು.

ಒಟ್ಟು ಎರಡು ದಿನಗಳ ವಿಚಾರ ಸಂಕಿರಣದಲ್ಲಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಅಧ್ಯಾಪಕರು, ಸಂಶೋಧಕರು ಹಾಗೂ ಇತರೆ ಸಿಬ್ಬಂದಿ ಪಾಲ್ಗೊಂಡು, ಚರ್ಚೆಗೆ ಅನುವು ಮಾಡಿಕೊಟ್ಟು ಅದರ ಲಾಭ ಪಡೆದರು. ಈ ವಿಚಾರ ಸಂಕಿರಣ ನಡೆಸಲು ತಗುಲಿದ ಒಟ್ಟು ವೆಚ್ಚ ಸುಮಾರು ರೂ. ೫೨,೦೦೦-೦೦ಗಳು. ಬ್ಯಾಂಕ್ ಆಫ್ ಇಂಡಿಯಾದ ಕಮಲಾಪುರ ಶಾಖೆಯು ರೂ. ೨೦,೦೦೦-೦೦ಗಳ ನೆರವು ನೀಡಿ ವಿಚಾರ ಸಂಕಿರಣದ ಯಶಸ್ಸಿಗೆ ಸಹಕರಿಸಿತು. ವಿಚಾರ ಸಂಕಿರಣದಲ್ಲಿ ಮಂಡಿತವಾದ ಉತ್ತಮ ಪ್ರಬಂಧಗಳನ್ನು ಚರ್ಚೆಯ ಫಲವಾಗಿ ಹೊರಬಂದ ಅಂಶಗಳನ್ನು ಸೇರಿಸಿ ಪುನಃ ಪರಿಷ್ಕರಿಸಿ ಪ್ರಕಟಿಸುವ ತೀರ್ಮಾನ ಕೈಗೊಳ್ಳಲಾಯಿತು.

**ಕೆ.ಜಿ. ವಾಸುಕಿ**
ಸಂಪಾದಕ

# ಪ್ರಸ್ತಾವನೆ

ಕರ್ನಾಟಕ ಆರ್ಥಿಕತೆ ಕೆಲವು ವರ್ಷಗಳ ಹಿಂದೆ ರಾಷ್ಟ್ರದಲ್ಲಿನ ಮೇಲ್ಮಟ್ಟದ ಅಭಿವೃದ್ಧಿ ಪಥದಲ್ಲಿನ ರಾಜ್ಯಗಳ ಪೈಕಿ ಒಂದಾಗಿತ್ತು. ಅದರ ಸರಾಸರಿ ತಲಾದಾಯ ಹಾಗೂ ಬೆಳವಣಿಗೆ ದರವು ರಾಷ್ಟ್ರದ ಸರಾಸರಿಗಿಂತ ಅಧಿಕವಿತ್ತು. ಆದರೆ ಇತ್ತೀಚೆಗೆ ಕರ್ನಾಟಕದ ಬೆಳವಣಿಗೆಯ ದರ ಕುಂಠಿತವಾದ ಕಾರಣ ಅದರ ತಲಾದಾಯವು ರಾಷ್ಟ್ರದಕ್ಕಿಂತ ಕೆಳಕ್ಕೆ ಇಳಿಯಿತು. ಹೀಗಾಗಿ ಅದರ ಸ್ಥಾನ ರಾಷ್ಟ್ರದ ಸರಾಸರಿಗಿಂತ ಕೆಳಕ್ಕೆ ಇಳಿದು ಬಂದಿದೆ. ಇದು ಆತಂಕವನ್ನುಂಟುಮಾಡುವಂತಹ ವಿಷಯವೇ ಸರಿ. ಆದ ಕಾರಣ ಕರ್ನಾಟಕ ಆರ್ಥಿಕತೆಯ ಈ ಒಂದು ಚಿತ್ರಣವನ್ನು ಅರ್ಥ ಮಾಡಿಕೊಂಡು ಅದಕ್ಕೆ ಸೂಕ್ತವಾದ ಕ್ರಮಗಳನ್ನು ಯೋಜಿಸುವುದು ಚಿಂತನಕಾರರ ಹಾಗೂ ಆಡಳಿತಕಾರರ ಜವಾಬ್ದಾರಿಯೆನಿಸುತ್ತದೆ.

ಒಂದು ದೃಷ್ಟಿಯಲ್ಲಿ ನೋಡಿದ್ದೇಯಾದರೆ, ಆರ್ಥಿಕತೆಯ ಬೆಳವಣಿಗೆಯ ದರ ಕಡಿಮೆಯಾದ ಪಕ್ಷದಲ್ಲಿ ಕೆಲವು ಸಂದರ್ಭಗಳಲ್ಲಿ ಆತಂಕ ಪಡುವ ಅವಶ್ಯಕತೆಯಿಲ್ಲ. ಅನೇಕ ವೇಳೆ ಈ ದರವು ಕಡಿಮೆಯಾದರೂ ಆರ್ಥಿಕತೆಯ ಇತರೆ ಬೆಳವಣಿಗೆಯ ಸೂಚಿಗಳಲ್ಲಿ ಉತ್ತಮತೆಯನ್ನು ಕಾಣಬಹುದು. ಉದಾಹರಣೆಗೆ ಕೇರಳದ ಆರ್ಥಿಕತೆಯನ್ನು ತೆಗೆದುಕೊಂಡರೆ ಅಲ್ಲಿ ಆರ್ಥಿಕ ಬೆಳವಣಿಗೆ ದರ ಕಡಿಮೆಯಿದ್ದರೂ ಸಹ ಇತರೆ ಬೆಳವಣಿಗೆ ಸೂಚಿಗಳಾದ ಅಕ್ಷರತೆ ಮತ್ತು ಆರೋಗ್ಯ ಮಟ್ಟ, ಪೌಷ್ಟಿಕತೆ, ಶಿಶು ಮರಣ ಮತ್ತು ಆಯಸ್ಸು ಇವುಗಳಲ್ಲಿ ಉತ್ತಮತೆ ಕಂಡು ಬಂದಿದೆ. ಪರಿಸ್ಥಿತಿ ಹೀಗಿದ್ದ ಪಕ್ಷದಲ್ಲಿ ನಮ್ಮ ಮುಂದೆ ನಿಲ್ಲುವ ಪ್ರಶ್ನೆ ಏನೆಂದರೆ ಕರ್ನಾಟಕ ಆರ್ಥಿಕತೆ ಕಡಿಮೆ ಬೆಳವಣಿಗೆ ದರವನ್ನು ಸೂಚಿಸಿದ್ದಾದರೂ ಇತರೆ ಬೆಳೆವಣಿಗೆ ಸೂಚಿಗಳ ಬಗ್ಗೆಯಾದರೂ ಉತ್ತಮತೆಯನ್ನು ತೋರಿಸುತ್ತಿದೆಯೇ ಎಂಬುದು. ಒಂದು ವೇಳೆ ಈ ಸೂಚಿಗಳು ಸಹ ಉತ್ತೇಜನಕಾರಿ ಅಲ್ಲದಿದ್ದರೆ ನಮ್ಮ ಮುಂದೆ ನಿಲ್ಲುವ ಮತ್ತೊಂದು ಪ್ರಶ್ನೆ ಏನೆಂದರೆ ನಮ್ಮ ಆರ್ಥಿಕತೆಯು ಎಲ್ಲಿ ಎಡವಿದೆ? ಅದರ ಬೆಳವಣಿಗೆಯಲ್ಲಿ ಏನಾದರೂ ಅಡೆತಡೆಗಳು ಕಂಡು ಬಂದಿವೆಯೆ? ಹಾಗಿದ್ದ ಪಕ್ಷದಲ್ಲಿ ಇದನ್ನು ಸರಿಪಡಿಸಲು ಯಾವ ರೀತಿಯ ಪರಿಹಾರವನ್ನು ಸೂಚಿಸಬಹುದು?

ಈ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕ ಆರ್ಥಿಕತೆಯ ಒಂದು ಸಮೀಕ್ಷೆಯನ್ನು ಕೈಗೊಳ್ಳುವ ದೃಷ್ಟಿಯಿಂದ ಕನ್ನಡ ವಿಶ್ವವಿದ್ಯಾಲಯದ ಅಡಿಯಲ್ಲಿ ಒಂದು ಸಂಕಿರಣವನ್ನು ಏರ್ಪಡಿಸಲಾಯಿತು. ಈ ಸಂಕಿರಣದ ಒಂದು ಸಮರ್ಪಕವಾದ ಚೌಕಟ್ಟನ್ನು ತಯಾರಿಸಿ, ಆ ಚೌಕಟ್ಟಿನಲ್ಲಿ ಸೇರ್ಪಡಿಸಬಹುದಾದ ಹದಿನಾರು ವಿಷಯಗಳನ್ನು ಗುರುತಿಸಲಾಯಿತು. ಪ್ರತಿಯೊಂದು ವಿಷಯಕ್ಕೂ ಒಬ್ಬ ಅಥವಾ ಇಬ್ಬರು ತಜ್ಞರನ್ನು ಆರಿಸಿ ಆ ವಿಷಯವನ್ನು ಕುರಿತು ಲೇಖನ ಬರೆಯುವ ಹಾಗೆ ಆಹ್ವಾನ ನೀಡಲಾಯಿತು. ಹಾಗೂ ಈ ಲೇಖನಗಳನ್ನು ಚರ್ಚಾಕೂಟದಲ್ಲಿ ಮಂಡಿಸಿ ಚರ್ಚೆಯಲ್ಲಿ ಬಂದಂತಹ ಸಲಹೆಗಳ ಆಧಾರದ ಮೇಲೆ ಅವುಗಳನ್ನು ಪರಿಷ್ಕರಿಸಲಾಯಿತು. ಈ ಒಂದು ಪ್ರಯತ್ನದ ಫಲವೇ ಪ್ರಸ್ತುತ ಪುಸ್ತಕ. ಈ ಪ್ರಸ್ತಾವನೆಯಲ್ಲಿ ಪ್ರಸ್ತುತ ಪುಸ್ತಕದ ಸ್ಥೂಲ ಪರಿಚಯವನ್ನು ಮಾಡಿಕೊಡುವ ಪ್ರಯತ್ನ ನಡೆದಿದೆ.

ವಿ.ಆರ್. ಬ್ರಹ್ಮಾನಂದ ಅವರು ತಮ್ಮ ಲೇಖನದಲ್ಲಿ ಕರ್ನಾಟಕ ಆರ್ಥಿಕತೆಯ ಸಮಗ್ರ ಚಿತ್ರವನ್ನು ಮೂಡಿಸಿದ್ದಾರೆ. ಅದರ ಬೆಳವಣಿಗೆ ದರ, ಭವಿಷ್ಯತ್ತಿನಲ್ಲಿ ಅದು ಯಾವ ಪಥದಲ್ಲಿ ಮುನ್ನಡೆಯಬಹುದು ಹಾಗೂ ಅದರ ಮುನ್ನಡೆಯ ಪಥದಲ್ಲಿ ಯಾವ ಬಗೆಯ ಅಡೆತಡೆಗಳುಂಟಾಗಬಹುದು ಎಂಬ ಅಂಶಗಳನ್ನು ಅವರದೇ ಆದ ಶೈಲಿಯಲ್ಲಿ ವಿಶ್ಲೇಷಿಸಿದ್ದಾರೆ. ಆರ್ಥಿಕ ಬೆಳವಣಿಗೆ ದರವು ಇತ್ತೀಚೆಗೆ ಕುಂಠಿತವಾಗಿದ್ದು ರಾಷ್ಟ್ರದ ಆರ್ಥಿಕತೆಯ ಸರಾಸರಿಗಿಂತ ಕೆಳಮಟ್ಟದಲ್ಲಿರುವುದನ್ನು ತೋರಿಸಿಕೊಟ್ಟುದರ ಜೊತೆಗೆ ಇದಕ್ಕೆ ಕಾರಣವಾದ ಬಂಡವಾಳ ಕೊರತೆ ಹಾಗೂ ಸರ್ಕಾರದ ಹಣಕಾಸಿನ ನೀತಿಯ ಕೆಲವು ಕೊರತೆಗಳತ್ತ ನಮ್ಮ ಗಮನವನ್ನು ಸೆಳೆಯುತ್ತಾರೆ. ಅಲ್ಲದೆ, ನಮ್ಮ ಆರ್ಥಿಕತೆ ಏರುಗತಿ ಪ್ರಮಾಣದಲ್ಲಿ ಬೆಳೆಯಬೇಕಾದರೆ ಈ ಕೊರತೆಗಳನ್ನು ಸರಿಪಡಿಸುವುದರ ಜೊತೆಗೆ ಹೊರಗಿನ ಬಂಡವಾಳ ಹಾಗೂ ಕೆಲವು ವಿಧದ ತರಬೇತಿ ಹೊಂದಿದ ಮತ್ತು ಕೌಶಲ್ಯವಿರುವ ಕಾರ್ಮಿಕರ ಒಳ ಹರಿಯುವಿಕೆಯನ್ನು ಉತ್ತೇಜಿಸುವ ಹಾಗೂ ಅವುಗಳನ್ನು ತಾಳಿಕೊಳ್ಳುವ ಉದಾರವಾದ ವಾತಾವರಣವನ್ನು ನಾವು ಸೃಷ್ಟಿಸಬೇಕೆಂಬ ಮಾತನ್ನು ಹೇಳುತ್ತಾರೆ.

ಕರ್ನಾಟಕದ ಆರ್ಥಿಕ ಬೆಳವಣಿಗೆ ದರ ಕುಂಠಿತವಾಗಿರುವುದು ನಿಜವಷ್ಟೆ, ಆದರೆ ಬೆಳವಣಿಗೆಯ ಇತರೆ ಸೂಚಿಗಳ ಸ್ಥಿತಿಯೇನೆಂಬುದನ್ನು ನೋಡೋಣ. ಇಲ್ಲಿ ಲೂಯಿಸ್ ಅವರು ರಚಿಸಿರುವ ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ಮಾರ್ಗದರ್ಶಿಯಾಗಿ ತೆಗೆದುಕೊಳ್ಳೋಣ. ಅವರು ಮೂರು ಸಾಮಾಜಿಕ ಅಭಿವೃದ್ಧಿ ಅಂಶಗಳ ಆಧಾರದ ಮೇಲೆ ಈ ಸೂಚಿಯನ್ನು ರಚಿಸಿದ್ದಾರೆ. ಅವು ಯಾವುದೆಂದರೆ: ಒಂದು ವರ್ಷ ಪ್ರಾಯದಲ್ಲಿನ ಜೀವನಾಯುಷ್ಯ, ಶಿಶು ಮರಣ ದರ ಮತ್ತು ಸಾಕ್ಷರತೆ ದರ. ಅವರ ಈ ಸೂಚಿಯ ಪ್ರಕಾರ ಭಾರತದ ಎಲ್ಲಾ ರಾಜ್ಯಗಳನ್ನು ತೆಗೆದುಕೊಂಡಾಗ ಕೇರಳ ಮೊದಲನೆ ಸ್ಥಾನವನ್ನು ಪಡೆಯುತ್ತದೆ. ಕರ್ನಾಟಕ ನಾಲ್ಕನೆ

ಸ್ಥಾನದಲ್ಲಿ ಇದೆ. ಅದರಲ್ಲೂ ಐದನೇ ಸ್ಥಾನದಲ್ಲಿರುವ ತಮಿಳುನಾಡಿಗೂ ನಮಗೂ ಇರುವ ಅಂತರ ತೀರ ಕಡಿಮೆ. ಒಂದು ವೇಳೆ ತಮಿಳುನಾಡು ಇನ್ನು ಸ್ವಲ್ಪವೇ ಬೆಳವಣಿಗೆ ತೋರಿಸಿದರೆ ಸಾಕು ಅದು ನಾಲ್ಕನೇ ಸ್ಥಾನಕ್ಕೆ ಬಂದು ಕರ್ನಾಟಕವು ಐದನೆಯದಕ್ಕೆ ತಳ್ಳಲ್ಪಡುತ್ತದೆ.

ಅಂದ ಮೇಲೆ ಕರ್ನಾಟಕದಲ್ಲಿ ಯಾವುದೇ ಪ್ರಮಾಣದ ಆರ್ಥಿಕ ಬೆಳವಣಿಗೆ ಉಂಟಾಗಿದ್ದರೂ ಸಹ ಅದರ ಪರಿಣಾಮ ಜನಜೀವನದ ಗುಣಮಟ್ಟದ ಮೇಲೆ ಅಷ್ಟಾಗಿ ಉಂಟಾಗಿಲ್ಲ ಎಂದಾಯಿತು. ಹಾಗೂ ಬೆಳವಣಿಗೆ ದರ ಕಡಿಮೆಯಿದ್ದರೂ ಇತರೆ ಸೂಚಿಗಳು ಉತ್ತಮವಾಗಿವೆ ಎಂಬ ಸಮಾಧಾನವನ್ನು ನಾವು ತೆಗೆದುಕೊಳ್ಳುವಂತೂ ಇಲ್ಲ. ಕರ್ನಾಟಕದ ಭೌತಿಕ ಗುಣಮಟ್ಟ ಸೂಚಿಯು ಉತ್ತಮಗೊಳ್ಳಬೇಕಾದರೆ ಲೂಯಿಸ್ ಅವರ ಪ್ರಕಾರ ಶಿಕ್ಷಣ ಹಾಗೂ ಪೌಷ್ಟಿಕತೆ ಕಾರ್ಯಕ್ರಮಗಳಿಗೆ ಸರ್ಕಾರವು ಹೆಚ್ಚಿನ ಗಮನ ಕೊಡಬೇಕು. ಹಾಗೂ ಸಾಕ್ಷರತೆಯ ರಂಗದಲ್ಲಿ ಮಹಿಳಾ ಸಾಕ್ಷರತೆಗೆ ವಿಶೇಷ ಒತ್ತು ನೀಡಬೇಕು. ಏಕೆಂದರೆ ಈ ಕ್ರಮವು ಆರೋಗ್ಯ ಮತ್ತು ನೈರ್ಮಲ್ಯದ ಮೇಲೆ ಹಾಗೂ ಶಿಶು ಮರಣ ದರದ ಮೇಲೆ ಲಾಭದಾಯಕ ಪ್ರಭಾವ ಬೀರುತ್ತದೆ ಎಂಬ ನಂಬಿಕೆ.

ಕರ್ನಾಟಕ ಆರ್ಥಿಕತೆಯ ಬೇರೆ ಬೇರೆ ಮುಖಗಳನ್ನು ಪರಿಚಯ ಮಾಡಿಕೊಡುತ್ತಾ ಉಳಿದ ತಜ್ಞರು ನಿರ್ದಿಷ್ಟವಾದ ಕ್ಷೇತ್ರಗಳನ್ನೂ ಸಮಸ್ಯೆಗಳನ್ನೂ ಕೈಗೆತ್ತಿಕೊಂಡು ಆಳವಾದ ಅಧ್ಯಯನ ಮಾಡಿ ತಮ್ಮ ಅನಿಸಿಕೆಗಳನ್ನು ನಿರೂಪಿಸಿದ್ದಾರೆ. ಈಗ ಅಂತಹ ಲೇಖನಗಳ ಪರಿಚಯದತ್ತ ದೃಷ್ಟಿ ಹರಿಸೋಣ.

ಸಾರಿಗೆ, ವಿದ್ಯುತ್ ಹಾಗೂ ಸಂಪರ್ಕಗಳಂತಹ ಅತಿ ಮುಖ್ಯವೆನಿಸಿದ ಮೂಲಭೂತ ಸೌಕರ್ಯಗಳ ಅಧ್ಯಯನವನ್ನು ಕೈಗೊಂಡ ಜಾನ್ಸನ್ ಸ್ಯಾಮ್ಯುಲ್ ಹಾಗೂ ಲಿಂಗರಾಜು ಅವರು ಆರ್ಥಿಕತೆಯಲ್ಲಿ ಈ ಸೌಲಭ್ಯಗಳ ಪ್ರಾಮುಖ್ಯತೆಯನ್ನು ಗುರುತಿಸುತ್ತಾ ಅವುಗಳ ಕುಂದುಕೊರತೆಗಳನ್ನು ಎತ್ತಿ ತೋರಿಸುತ್ತಾರೆ. ರೈಲು ಸಾರಿಗೆ ಇತ್ತೀಚೆಗೆ ಕರ್ನಾಟಕದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೆಳೆದಿದೆ. ಹಾಗೆಯೆ ರಸ್ತೆ ಸಾರಿಗೆಯೂ ಸಹ. ಆದರೆ ಅವರು ರಸ್ತೆಗಳ ಗುಣಮಟ್ಟದಲ್ಲಿ ಕೊರತೆ ಇರುವುದನ್ನು ತೋರಿಸಿಕೊಡುತ್ತಾರೆ. ಅದರಲ್ಲೂ ರಾಷ್ಟ್ರೀಯ ಹೆದ್ದಾರಿಗಳ ಮತ್ತು ಗ್ರಾಮಾಂತರ ರಸ್ತೆಗಳ ಬಗ್ಗೆ ಸರ್ಕಾರ ಕಾಳಜಿ ವಹಿಸಬೇಕೆಂದು ವಾದಿಸುತ್ತಾರೆ.

ನಮ್ಮಲ್ಲಿ ವಿದ್ಯುತ್ ಕೊರತೆ ಸಮಸ್ಯೆ ಬಹಳ ವರ್ಷಗಳಿಂದಲೂ ಬೇರೂರಿಬಿಟ್ಟಿದೆ. ಕೊರತೆಯ ಜೊತೆಗೆ ರವಾನೆ ಮತ್ತು ಹಂಚಿಕೆಯಲ್ಲಿ ಅಧಿಕ ಪ್ರಮಾಣದಲ್ಲಿ ವಿದ್ಯುತ್ ನಷ್ಟವಾಗುವ ಸಮಸ್ಯೆಯೂ ಸೇರಿಕೊಂಡಿದೆ. ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುವ ಹಾಗೂ ಅದರ ಸೋರಿಕೆಯನ್ನು ಕೂಡಲೇ ತಡೆಗಟ್ಟುವ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಬೇಕು ಹಾಗೂ ಖಾಸಗಿ ಬಂಡವಾಳವು

ವಿದ್ಯುತ್ ಕ್ಷೇತ್ರಕ್ಕೆ ಹರಿದುಬರುವಂತೆ ಉತ್ತೇಜಿಸುವ ನೀತಿಯೊಂದನ್ನು ಸರ್ಕಾರವು ರೂಪಿಸಬೇಕೆಂಬುದು ಇವರ ಅಭಿಪ್ರಾಯ.

ಭೌತಿಕ ಮೂಲಭೂತ ಸೌಕರ್ಯಗಳಲ್ಲದೆ, ಆರ್ಥಿಕ ಅಭಿವೃದ್ಧಿಗೆ ಅನುವಾಗುವ ಮತ್ತೊಂದು ಅತಿ ಮುಖ್ಯವಾದ ಅಂಶವೆಂದರೆ ಮಾನವ ಸಂಪತ್ತು. ವಿದ್ಯಾವಂತ ಹಾಗೂ ಆರೋಗ್ಯಕರವಾದ ಮಾನವ ಸಂಪತ್ತು ಆರ್ಥಿಕ ಬೆಳವಣಿಗೆಗೆ ಬಂಡವಾಳ ರೂಪದಲ್ಲಿ ಸಹಾಯಕವಾಗುತ್ತದೆ. ಆದ ಕಾರಣ ಅತಿ ಹೆಚ್ಚಿನ ಮಟ್ಟದ ಅನಕ್ಷರತೆಯಿರುವ ನಮ್ಮ ಸಮಾಜದಲ್ಲಿ ಅಕ್ಷರತೆಯನ್ನು ಹರಡುವ ಒಂದು ಚಳವಳಿಯನ್ನೇ ಕೈಗೊಂಡು ಮಾನವ ಸಂಪತ್ತನ್ನು ವೃದ್ಧಿಸಬೇಕು. ಈ ಪ್ರಯತ್ನವನ್ನು ಕೈಗೊಂಡ ಕರ್ನಾಟಕ ಸರ್ಕಾರದ ಸಾಧನೆಯನ್ನು ಕುರಿತು ಉಷಾ ರಾಮಕುಮಾರ್ ಅವರು ಬರೆದಿರುವ ಲೇಖನ ಇಲ್ಲಿ ಉಚಿತವೆನಿಸುತ್ತದೆ.

ಶಾಲಾ ಶಿಕ್ಷಣವು ಒಂದು ದೃಷ್ಟಿಯಲ್ಲಿ ಮಾನವ ಸಂಪತ್ತಿನ ಸಮರ್ಪಕ ಬೆಳವಣಿಗೆಗೆ ಮೂಲಭೂತವಾದ ಅಡಿಪಾಯವನ್ನು ಹಾಕುತ್ತದೆಯೆಂದು ಮನಗಂಡು ಸರ್ಕಾರವು ಕರ್ನಾಟಕದಲ್ಲಿ ಅನೇಕ ಯೋಜನೆಗಳನ್ನು ರೂಪಿಸಿ ೬ರಿಂದ ೧೧ ಮತ್ತು ೧೧ರಿಂದ ೧೪ರೊಳಗಿನ ಮಕ್ಕಳ ವಿದ್ಯಾರ್ಜನೆಗೆ ಅವಕಾಶ ಮಾಡಿಕೊಟ್ಟುದಲ್ಲದೆ, ಕಾರಣಾಂತರದಿಂದ ಶಾಲೆ ಬಿಟ್ಟ ಮಕ್ಕಳಿಗಾಗಿ ಅನೌಪಚಾರಿಕ ಶಾಲಾ ಅಭ್ಯಾಸಕ್ಕೆ ಬೇರೆ ವ್ಯವಸ್ಥೆ ಮಾಡಿದೆ. ಶಾಲಾ ಶಿಕ್ಷಣ ಮುಗಿಸಿದ ಮಕ್ಕಳಿಗೆ ಪದವಿಪೂರ್ವ ಮತ್ತು ವೃತ್ತಿ ಶಿಕ್ಷಣ ವ್ಯವಸ್ಥೆ ಹಾಗೂ ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣದ ವ್ಯವಸ್ಥೆಯನ್ನೂ ಮಾಡಿದೆ. ಶಿಕ್ಷಣ ಕ್ಷೇತ್ರವು ಹೆಚ್ಚಿನ ವಿದ್ಯಾರ್ಥಿಗಳಿಗೆ ಅವಕಾಶ ಮಾಡಿಕೊಡುವಂತೆ ಎಲ್ಲಾ ಮಟ್ಟದಲ್ಲೂ ಖಾಸಗಿ ಶಾಲಾ ಕಾಲೇಜುಗಳನ್ನು ಸ್ಥಾಪಿಸುವ ಅನುಕೂಲವನ್ನು ಮಾಡಿಕೊಟ್ಟಿರುವುದು ಗಮನಾರ್ಹ. ಆದರೆ, ಶಿಕ್ಷಣ ಕ್ಷೇತ್ರದಲ್ಲಿ ಕಂಡುಬರುವ ಎರಡು ಅತಿ ಮುಖ್ಯವಾದ ಕೊರತೆಗಳೆಂದರೆ (ಅ) ಮಕ್ಕಳು ಶಾಲೆಯನ್ನು ತ್ಯಜಿಸುವ ಪ್ರಮಾಣದ ಹೆಚ್ಚಳ ಹಾಗೂ ವಿದ್ಯಾರ್ಜನೆಗೆಂದು ಮುಂದೆ ಬರುವ ಹೆಣ್ಣು ಮಕ್ಕಳ ಪ್ರಮಾಣ ಗಂಡು ಮಕ್ಕಳಿಗೆ ಹೋಲಿಸಿದರೆ ಕಡಿಮೆ ಇರುವುದು, ಮತ್ತು (ಆ) ಶಿಕ್ಷಣದ ಗುಣಮಟ್ಟದಲ್ಲಿ ಕೊರತೆ. ಈ ಕೊರತೆಗಳನ್ನು ನೀಗಿಸುವ ದೃಷ್ಟಿಯಿಂದ ಸಮರ್ಪಕವಾದ ಯೋಜನೆಗಳನ್ನು ಸರ್ಕಾರ ರೂಪಿಸಿ ಅನುಷ್ಠಾನಕ್ಕೆ ತರುವ ಅವಶ್ಯಕತೆ ಇದೆ ಎಂಬ ವಾದ ಉಷಾ ಅವರದು.

ಅದೇ ರೀತಿಯಾಗಿ ಮಾನವ ಸಂಪತ್ತನ್ನು ಗುಣಾತ್ಮಕವಾಗಿ ಉತ್ತಮಗೊಳಿಸುವ ಪ್ರಯತ್ನವನ್ನು ನಮ್ಮ ಸರ್ಕಾರ ಅನೇಕ ಯೋಜನೆಗಳನ್ನು ಕೈಗೊಳ್ಳುವುದರ ಮೂಲಕ ತೆಗೆದುಕೊಂಡಿದೆ. ಈ ಕ್ರಮಗಳ ಸ್ಥೂಲ ಪರಿಚಯ ಮಾಡಿಕೊಟ್ಟು ಹಾಗೂ ಅವುಗಳ ಪರಿಣಾಮಗಳೇನೆಂಬುದನ್ನು ವಿಶ್ಲೇಷಿಸುತ್ತಾ ಹನುಮಂತ ರಾಯಪ್ಪ ಮತ್ತು ಉಮಾಮಣಿಯವರು ಒಟ್ಟಿನಲ್ಲಿ ಪರಿಮಾಣಕ್ಕಿಂತ ಗುಣಾತ್ಮಕ ಜನ ಸಂಪತ್ತನ್ನು

ಬೆಳೆಸಲು ಪ್ರಯೋಗಿಸಬಹುದಾದ ಸಲಹೆಗಳನ್ನು ತಮ್ಮ ಲೇಖನದಲ್ಲಿ ಕೊಟ್ಟಿದ್ದಾರೆ. ಸ್ತ್ರೀಯರ ಮದುವೆ ವಯಸ್ಸನ್ನು ಸೂಕ್ತವಾಗಿ ಹೆಚ್ಚಿಸುವುದು, ಕುಟುಂಬ ಯೋಜನಾ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸುವುದು, ಮಕ್ಕಳ ಪಾಲನೆ ಮತ್ತು ಪೋಷಣೆಗೆ ಹೆಚ್ಚಿನ ಒತ್ತು ನೀಡುವುದು ಹಾಗೂ ತಾಯಿ ಮತ್ತು ಮಗುವಿನ ಆರೋಗ್ಯ ಕಾರ್ಯಕ್ರಮಗಳನ್ನು ಕೈಗೊಳ್ಳುವುದು - ಈ ಕ್ರಮಗಳಿಂದ ಜನಸಂಖ್ಯೆ ಬೆಳವಣಿಗೆ ಪ್ರಮಾಣ ಕಡಿಮೆಯಾಗುವುದಲ್ಲದೆ ಜನ ಸಂಪತ್ತಿನ ಗುಣಮಟ್ಟವೂ ಸಹ ಅಧಿಕವಾಗುತ್ತದೆ ಎಂಬ ಅಂಶವು ಅವರ ಲೇಖನದಿಂದ ಮೂಡಿಬರುತ್ತದೆ.

ಜೀವನ ಮಟ್ಟವನ್ನು ಉತ್ತಮಗೊಳಿಸುವ ಇತರೆ ಅಂಶಗಳು ಎಂದರೆ ಬಡತನ ಮತ್ತು ನಿರುದ್ಯೋಗವನ್ನು ತೊಡೆದು ಹಾಕುವುದು. ಈ ಕುತ್ತುಗಳ ಬಗ್ಗೆ ಅಧ್ಯಯನ ಮಾಡಿ ನಮಗಾಗಿ ಲೇಖನ ತಯಾರಿಸಿದವರು ಶಾಂತಪ್ಪ ಮತ್ತು ಕೇಶವ ಅವರು. ಅವರ ಅಧ್ಯಯನದ ಪ್ರಕಾರ ಕರ್ನಾಟಕದಲ್ಲಿ ಬಡತನದ ಮಟ್ಟವು ಗ್ರಾಮೀಣ ಹಾಗೂ ನಗರ ಪ್ರದೇಶಗಳೆರಡರಲ್ಲೂ ಭಾರತದ ಮಟ್ಟಕ್ಕಿಂತ ಹೆಚ್ಚಾಗಿರುವುದು ಕಂಡುಬರುತ್ತದೆ ಹಾಗೂ ನಿರುದ್ಯೋಗ ಮಟ್ಟವನ್ನು ಯಾವುದೇ ವಿಧಾನವನ್ನಳವಡಿಸಿ ಅಳೆದರೂ ಸಹ ಅದು ಭಾರತದ ಸ್ಥಿತಿಗಿಂತ ಗಮನಾರ್ಹವಾಗಿ ಕಡಿಮೆ! ಸಾಮಾನ್ಯವಾಗಿ ಬಡತನ ಮತ್ತು ನಿರುದ್ಯೋಗ ಒಂದಕ್ಕೊಂದು ಅಂಟಿಕೊಂಡು ಚಲಿಸುವ ಚಾಲಕಗಳು, ಆದರೆ ಕರ್ನಾಟಕದ ಸ್ಥಿತಿಯಲ್ಲಿ ಅವುಗಳು ಬೇರೆಯಾಗಿರುವುದು ಗಮನಾರ್ಹ, ಇದಕ್ಕೆ ಕಾರಣ ಬಹುಶಃ ನಮ್ಮಲ್ಲಿನ ಉದ್ಯೋಗಾವಕಾಶಗಳು ಮುಖ್ಯವಾಗಿ ಪ್ರಥಮ ಮತ್ತು ತೃತೀಯ ಕ್ಷೇತ್ರಗಳಲ್ಲಿ ಅಷ್ಟು ಉತ್ಪಾದಕತ್ವದ್ದೂ ಲಾಭದಾಯಕವಾದ್ದೂ ಇಲ್ಲದಿರುವಿಕೆ.

ಬಡತನ ಮತ್ತು ನಿರುದ್ಯೋಗಗಳ ಬೇಗೆಯನ್ನು ಕಡಿಮೆ ಮಾಡುವ ದೃಷ್ಟಿಯಿಂದ ದೇಶದಾದ್ಯಂತ ಮಾಡಿರುವ ಹಾಗೆ ಕರ್ನಾಟಕದಲ್ಲೂ ಸಹ ಅನೇಕ ನೇರ ಕಾರ್ಯಕ್ರಮಗಳನ್ನು ಕೈಗೊಂಡಿರುವುದು ಸರಿಯಷ್ಟೆ. ಇಂತಹ ಕಾರ್ಯಕ್ರಮಗಳು ಎಷ್ಟು ಪರಿಣಾಮಕಾರಿಗಳಾಗಿವೆ ಎಂಬುದನ್ನು ಪರಿಶೀಲಿಸಿದ ಶಾಂತಪ್ಪ ಮತ್ತು ಕೇಶವ ಅವರು ಅವುಗಳನ್ನು ಅನುಷ್ಠಾನಗೊಳಿಸುವಿಕೆಯ ಕೆಲವು ನ್ಯೂನತೆಗಳನ್ನೂ ಎತ್ತಿ ತೋರಿಸಿದ್ದಾರೆ.

ಕೃಷಿ ಪ್ರಧಾನವಾದ ನಮ್ಮ ಆರ್ಥಿಕತೆಯಲ್ಲಿ ಕೃಷಿ ಕ್ಷೇತ್ರದ ಬೆಳವಣಿಗೆ ದರ ಒಟ್ಟಾರೆ ಆರ್ಥಿಕತೆಯ ಬೆಳವಣಿಗೆ ದರವನ್ನು ನಿರ್ಣಯಿಸುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ. ಆದರೆ ನಮ್ಮ ಕೃಷಿ ಕ್ಷೇತ್ರದ ಬೆಳವಣಿಗೆ ದರ ಇತ್ತೀಚೆಗೆ ಅಷ್ಟೊಂದು ಗಮನಾರ್ಹ ಏರಿಕೆಯನ್ನು ತೋರಿಸುತ್ತಿಲ್ಲ. ಈ ಸಂಬಂಧಿತವಾಗಿ ಬೆಳಕನ್ನು ಚೆಲ್ಲುವ ಪ್ರಯತ್ನವನ್ನು ಶೆಣೈ ಹಾಗೂ ವಿವೇಕಾನಂದ ಅವರು ಅವರ ಲೇಖನದಲ್ಲಿ ಕೈಗೊಂಡಿದ್ದಾರೆ. ಹಾಗೂ ಕೃಷಿಗೆ ಸಂಬಂಧಿಸಿದ ಅನುಷ್ಠಾನಗೊಳಿಸಬಹುದಾದ ನೀತಿಯ ಆಯ್ಕೆ ಕುರಿತಂತೆ ಈ ಲೇಖನ ಒಂದು ಮಾರ್ಗದರ್ಶನ ನೀಡುತ್ತದೆ.

ಆದರೆ ಕರ್ನಾಟಕ ಕೃಷಿ ಕ್ಷೇತ್ರದ ಬೆಳವಣಿಗೆ ದರ ಇತ್ತೀಚೆಗೆ ಸ್ಥಗಿತಗೊಂಡಿರುವುದಲ್ಲದೆ ಅದು ರಾಷ್ಟ್ರಕ್ಕಿಂತ ಕೆಳಮಟ್ಟದಲ್ಲಿದೆ. ಇದಕ್ಕೆ ಕಾರಣ ಬೆಳೆಗಳ ಇಳುವರಿಕೆಯಲ್ಲಿ ಹೆಚ್ಚಿನ ಏರಿಕೆ ಇಲ್ಲದಿರುವುದು ಮತ್ತು ಅದು ಕೆಳಮಟ್ಟದಲ್ಲಿ ಸ್ಥಗಿತಗೊಂಡಿರುವುದು. ಹಾಗೂ ಕರ್ನಾಟಕ ಬೆಳೆಗಳ ವಿನ್ಯಾಸದಲ್ಲಿ ಬದಲಾವಣೆಯೂ ಸಹ ಕಂಡುಬಂದಿದೆ. ಇತ್ತೀಚೆಗೆ ಧಾನ್ಯಗಳಿಗಿಂತ ವ್ಯಾಪಾರೀ ಬೆಳೆಗಳಿಗೆ ಒತ್ತು ಹೆಚ್ಚು ಸಿಗುತ್ತಲಿದೆ. ಒಂದು ದೃಷ್ಟಿಯಲ್ಲಿ ಇಂತಹ ಪ್ರವೃತ್ತಿ ಒಳ್ಳೆಯದೇ. ಆದರೆ ಧಾನ್ಯಗಳ ಇಳುವರಿಯನ್ನು ತೀವ್ರ ದರದಲ್ಲಿ ಏರಿಕೆಗೊಳಿಸದಿದ್ದರೆ ನಮ್ಮಲ್ಲಿ ಧಾನ್ಯಗಳಭಾವವಾಗಿ ಬೇರೆ ರಾಜ್ಯಗಳಿಂದ ಅವನ್ನು ಆಮದು ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗುತ್ತದೆ.

ಕೃಷಿ ಉತ್ಪಾದನೆ ಹಾಗೂ ಬೆಳೆಗಳ ಇಳುವರಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಒಂದು ಸಮರ್ಪಕವಾದಂತಹ ಕೃಷಿ ಧೋರಣೆಯನ್ನು ಸರ್ಕಾರ ಅಳವಡಿಸಿಕೊಳ್ಳಬೇಕು. ಭೂ ಸುಧಾರಣೆ, ಕೃಷಿ ಸಾಲ, ಕೃಷಿಗೆ ಬೇಕಾಗುವ ಇತರೆ ಸೌಲಭ್ಯಗಳನ್ನು ಒದಗಿಸುವುದು - ಇವುಗಳು ಅಂತಹ ಧೋರಣೆಗಳ ಅಂಗಗಳಾಗಬೇಕಷ್ಟೆ.

ಆದರೆ ಮುಖ್ಯವಾಗಿ ನೀರಾವರಿ ಸೌಲಭ್ಯವನ್ನು ಕಲ್ಪಿಸುವುದರಿಂದ ಕೃಷಿ ಕ್ಷೇತ್ರದ ಬೆಳವಣಿಗೆಗೆ ತುಂಬಾ ಅನುಕೂಲವಾಗುತ್ತದೆ, ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ವೆಂಕಟರೆಡ್ಡಿಯವರು ಕರ್ನಾಟಕದ ನೀರಾವರಿ ಅಭಿವೃದ್ಧಿ ಬಗ್ಗೆ ಉಂಟಾಗಿರುವ ಮುನ್ನಡೆ ಹಾಗೂ ಸಮಸ್ಯೆಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆ, ನೀರಾವರಿ ಸೌಲಭ್ಯದ ಬಗ್ಗೆ ಸಾಕಷ್ಟು ಅಭಿವೃದ್ಧಿಯನ್ನು ಕಂಡಿದ್ದರೂ ಅದರ ಮಟ್ಟವು ರಾಷ್ಟ್ರದ ಸರಾಸರಗಿಂತ ಕಡಿಮೆ ಎಂಬುದನ್ನು ಅವರು ತೋರಿಸಿ ಕೊಟ್ಟಿದ್ದಾರೆ. ಹಾಗೂ ಅದರಲ್ಲಿ ಪ್ರಾದೇಶಿಕ ಅಸಮಾನತೆಯು ತೀರ ಹೆಚ್ಚು. ಅಂದ ಮೇಲೆ ಹೆಚ್ಚಿನ ಪ್ರಮಾಣದಲ್ಲಿ ಹೂಡಿಕೆಯನ್ನು ಕೈಗೊಂಡು ನೀರಾವರಿ ಶಕ್ಯತೆಯನ್ನು ಹೆಚ್ಚಿಸುವುದಲ್ಲದೆ ಪ್ರಾದೇಶಿಕ ಅಸಮಾನತೆಯನ್ನು ತೊಡೆದು ಹಾಕುವ ಪ್ರಯತ್ನ ಕೈಗೊಳ್ಳಬೇಕೆಂಬ ಅವರ ಸಲಹೆ ತುಂಬಾ ಉಚಿತ. ಅಲ್ಲದೆ ಅವರೇ ಹೇಳುವಂತೆ ನೀರಾವರಿ ಸೌಲಭ್ಯದ ವಿರಳತೆಯ ಸ್ಥಿತಿಯಲ್ಲಿ ನದಿ ಮೂಲ, ನೀರಿನ ಹಂಚಿಕೆ ಮತ್ತು ಉಪಯೋಗದ ಬಗ್ಗೆ ಹಾಗೂ ರೈತರು ನೀರನ್ನು ಜಾಗರೂಕತೆಯನ್ನು ವಹಿಸಿ ಬಳಸುವ ವಿಧಾನಗಳನ್ನು ಅವರಿಗೆ ತಿಳಿಯ ಹೇಳುವ ಕಾರ್ಯಕ್ರಮಗಳನ್ನು ಕೂಡಲೇ ಕೈಗೊಳ್ಳಬೇಕು ಎಂಬ ಸಲಹೆಗಳು ಒಪ್ಪಿಕೊಳ್ಳುವಂತಹವು.

ಅತಿ ಹೆಚ್ಚಿನ ಪ್ರಮಾಣದ ಜನ ಸಂಖ್ಯೆಯು ಇಂದು ಕರ್ನಾಟಕದಲ್ಲಿ ಹಳ್ಳಿ ಪ್ರದೇಶಗಳಲ್ಲಿ ವಾಸಿಸುವ ಕಾರಣ ಅವರ ಕ್ಷೇಮಾಭಿವೃದ್ಧಿಯನ್ನುಂಟು ಮಾಡಬೇಕಾದರೆ ಗ್ರಾಮಾಭಿವೃದ್ಧಿಯನ್ನು ಕೈಗೊಳ್ಳಬೇಕು. ವಿ.ಎಮ್. ರಾವ್ ಅವರ ಪ್ರಕಾರ ಗ್ರಾಮಾಭಿವೃದ್ಧಿಯು ಪ್ರಮುಖವಾಗಿ ಮೂರು ಆಕರಗಳಿಂದ ಪ್ರಭಾವಿತಗೊಳ್ಳುತ್ತದೆ.

ಅವು ಯಾವುವೆಂದರೆ: ಮಾರುಕಟ್ಟೆ ಶಕ್ತಿಗಳು, ಸರ್ಕಾರದ ಧೋರಣೆ ಹಾಗೂ ಕಾರ್ಯಕ್ರಮಗಳು, ಮತ್ತು ರಾಜಕೀಯ. ಆದರೆ ಇವು ಗ್ರಾಮೀಣ ಅಭಿವೃದ್ಧಿಯ ಮೇಲೆ ಒಂದೊಂದು ಬಾರಿ ಕೆಟ್ಟ ಪ್ರಭಾವವನ್ನು ಬೀರುವ ಸಾಧ್ಯತೆ ಉಂಟು. ಆದ ಕಾರಣ ಸರ್ಕಾರವು ಕೆಲವು ಸೂಕ್ತ ನೀತಿಗಳನ್ನು ರೂಪಿಸಿಕೊಳ್ಳಬೇಕು. ಉದಾಹರಣೆಗೆ, ಬೆಂಬಲ ನೀತಿಗಳಿಂದ ಬಡವರು ಸ್ವಾವಲಂಬಿಗಳಾಗುವಂತೆ ಮಾಡಬೇಕು, ಹೂಡಿಕೆ ನೀತಿಯಿಂದ ರಾಜ್ಯದ ನೆಲ-ಜಲ ಸಂಪನ್ಮೂಲದ ಸಂರಕ್ಷಣೆ ಮಾಡಬೇಕು, ಒಣ ಭೂಮಿಯ ಬೇಸಾಯವನ್ನು ಉತ್ತಮಗೊಳಿಸುವ ತಾಂತ್ರಿಕತೆಯನ್ನು ಬೆಳೆಸಬೇಕು. ಹಾಗೂ ರಫ್ತು ಮಾರುಕಟ್ಟೆಗೆ ದೇಣಿಗೆ ನೀಡುವ ತೋಟಗಾರಿಕೆ, ಮೀನುಗಾರಿಕೆ, ಹೂಗಳ ಬೆಳೆಗಳಿಗೆ ಬೇಕಾಗುವ ಸೌಲಭ್ಯಗಳನ್ನು ಒದಗಿಸಬೇಕು. ಮೂರನೆಯದಾಗಿ, ನಿಯಂತ್ರಕ ಧೋರಣೆಗಳ ಮೂಲಕ ಮಾರುಕಟ್ಟೆ ನಿಯಂತ್ರಣೆ. ನಗರ ಉದ್ದಮೆಗಳಿಂದ ಗ್ರಾಮೀಣ ಹಿತಾಸಕ್ತಿಯ ರಕ್ಷಣೆ. ಖಾಸಗಿ ಬಂಡವಾಳ ಹೂಡಿಕೆಯಿಂದ ಉತ್ಪಾದನೆಯಲ್ಲಾಗುವ ವಿಕಾರಗಳ ನಿಯಂತ್ರಣ ಇವುಗಳನ್ನು ಕೈಗೊಳ್ಳಬೇಕು ಎಂಬ ಸಲಹೆಗಳು ಅತಿ ಸೂಕ್ತವಾದುವು.

ಗ್ರಾಮೀಣ ಅಭಿವೃದ್ಧಿಗೆ ಅನುವಾಗುವ ಹಾಗೂ ಗ್ರಾಮೀಣ ಬಡತನ ಮತ್ತು ನಿರುದ್ಯೋಗ ಸಮಸ್ಯೆಗೆ ಪರಿಹಾರವಾಗಿ ಬಂದಿರುವ ಒಂದು ಉಪಾಯ ರೇಷ್ಮೆ ಕೃಷಿ ಎಂದರೆ ತಪ್ಪಾಗಲಾರದು. ಇದರ ಪ್ರಮುಖವಾದ ಪಾತ್ರವನ್ನು ಕುರಿತು ಪ್ರಸ್ತಾವನೆ ಮಾಡಿರುವ ಗೋವಿಂದರಾಜು ಅವರು ರೇಷ್ಮೆ ಕೃಷಿಯ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ಕೈಗೊಂಡಿರುವ ಅನೇಕ ಯೋಜನೆಗಳನ್ನೂ ಕಾರ್ಯಕ್ರಮಗಳನ್ನೂ ಕುರಿತು ತಮ್ಮ ಲೇಖನದಲ್ಲಿ ಬರೆದಿದ್ದಾರೆ. ಉತ್ತರ ಕರ್ನಾಟಕ ಜಿಲ್ಲೆಗಳಲ್ಲೂ ಹಿಪ್ಪುನೇರಳೆ ಬೆಳೆಯುವಂತೆ ಉತ್ತೇಜನ ಕೊಡುವ ಯೋಜನೆ, ರೇಷ್ಮೆ ಇಳುವರಿ ಹೆಚ್ಚಾಗುವಂತೆ ಮಾಡುವ ದೃಷ್ಟಿಯಿಂದ ಬೈವೋಲ್ಟೀನ್ ರೇಷ್ಮೆ ತಳಿಯನ್ನು ವೃದ್ಧಿಸಿ ಪ್ರಚುರ ಪಡಿಸುವುದು, ಮಧ್ಯವರ್ತಿಗಳ ಕಾಟವಿಲ್ಲದಂತೆ ಉತ್ಪಾದಕರು ಮತ್ತು ಗ್ರಾಹಕರು ರೇಷ್ಮೆ ಗೂಡು ಹಾಗೂ ಕಚ್ಚಾರೇಷ್ಮೆಗಳನ್ನು ಮಾರುವ ಮಾರುಕಟ್ಟೆ ಸೌಲಭ್ಯವನ್ನು ಕಲ್ಪಿಸಿಕೊಡುವ ಕ್ರಮಗಳನ್ನು ಸರ್ಕಾರ ಕೈಗೊಂಡಿರುವುದು ಗಮನಾರ್ಹ.

ಇಂದು ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕ ಅಭಿವೃದ್ಧಿಯ ಜೊತೆಗೆ ಸಾಮಾಜಿಕ ಅಭಿವೃದ್ಧಿಯೂ ಆಗಬೇಕಾಗಿದೆ. ಹಿಂದುಳಿದವರ, ಮಹಿಳೆಯರ ಹಾಗೂ ಅಲ್ಪ ಸಂಖ್ಯಾತರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಾದಾಗಲೇ ನಮ್ಮ ಸಮಾಜವು ಒಂದು ಪ್ರಬುದ್ಧವಾದುದಾಗುತ್ತದೆ ಹಾಗೂ ಪ್ರಗತಿಪರವಾದುದು ಎನಿಸಿಕೊಳ್ಳುತ್ತದೆ. ಈ ಹಾದಿಯಲ್ಲಿ ಸರ್ಕಾರ ಸಾಕಷ್ಟು ಶ್ರಮಿಸುತ್ತಿರುವುದರ ಬಗ್ಗೆ ಅನುಮಾನವಿಲ್ಲ. ಇದಲ್ಲದೆ ನಾವು ಗುರುತಿಸಬೇಕಾದುದು ಪಂಚಾಯತ್ ರಾಜ್ ಸಂಸ್ಥೆಗಳ ಹಾಗೂ ಸರ್ಕಾರೇತರ ಸಂಸ್ಥೆಗಳ ಪಾತ್ರ. ಇವುಗಳ ಪಾತ್ರವನ್ನು ಕುರಿತು

ಸಂಖ್ಯೆ ಹಾಗೂ ಕಳೆದುಕೊಳ್ಳಲಾದ ಮಾನವ ದಿನಗಳನ್ನು ಇತರೆ ರಾಜ್ಯಗಳಿಗೆ ಹೋಲಿಸಿದ್ದೇ ಆದರೆ ಕರ್ನಾಟಕವಲ್ಲಿ ಪರಿಸ್ಥಿತಿ ಉತ್ತಮ ಎಂದು ಹೇಳುತ್ತಾರೆ. ಆದರೆ ಕೆಲಸಕ್ಕೆ ಗೈರು ಹಾಜರಾಗುವುದು, ಹಾಜರಾದರೂ ಕೆಲಸ ಮಾಡದಿರುವುದು, ಅಶಿಸ್ತನ್ನು ವ್ಯಕ್ತಪಡಿಸುವುದು - ಇವನ್ನು ಗಮನಿಸಿದರೆ ಕರ್ನಾಟಕದಲ್ಲಿ ಪರಿಸ್ಥಿತಿ ಅಷ್ಟು ಉತ್ತಮವಾಗಿಲ್ಲ. ಅಂದ ಮೇಲೆ ನಮ್ಮಲ್ಲಿ ಈ ಪರಿಸ್ಥಿತಿಯನ್ನು ಉತ್ತಮ ಪಡಿಸುವ ಯತ್ನವನ್ನು ಮಾಡಬೇಕಾಗಿದೆ. ಇದರಲ್ಲಿ ಕಾರ್ಮಿಕರು, ಮಾಲಿಕರು ಹಾಗೂ ಸರ್ಕಾರ ಪರಸ್ಪರ ಸಹಾಯಕವಾದ ಪಾತ್ರವನ್ನು ವಹಿಸಬೇಕು ಎಂಬುದನ್ನು ಅವರು ಒತ್ತಿ ಹೇಳುತ್ತಾರೆ.

ಕೈಗಾರಿಕಾ ಕ್ಷೇತ್ರಕ್ಕೆ ನೇರ ಸಂಬಂಧವುಳ್ಳ ಹಾಗೂ ಹೆಚ್ಚು ಗಮನ ಕೊಡಬೇಕಾದ ಕ್ಷೇತ್ರ ಎಂದರೆ ಸಾರ್ವಜನಿಕ ಉದ್ಯಮಗಳು. ಕರ್ನಾಟಕ ಸರ್ಕಾರವು ಅನೇಕ ಉದ್ಯಮಗಳನ್ನು ಸ್ವಾತಂತ್ರ್ಯ ಪೂರ್ವದಿಂದಲೂ ಪ್ರಾರಂಭಿಸಿ ಅವುಗಳನ್ನು ನಿರ್ವಹಿಸುತ್ತಿರುವುದು ನಿಜವಷ್ಟೆ. ಆದರೆ ಅವುಗಳಿಂದ ಬರುತ್ತಿರುವ ಲಾಭದ ಪ್ರಮಾಣ ಇತ್ತೀಚಿನ ಅಂದಾಜಿನ ಪ್ರಕಾರ ಕೇವಲ ಶೇಕಡಾ ೦.೮೨ ಹಾಗೂ ಅವುಗಳ ಪೈಕಿ ಬಹುತೇಕ ಉದ್ಯಮಗಳು ನಷ್ಟವನ್ನನುಭವಿಸುವಂತಹವು. ಇಂತಹ ಉದ್ಯಮಗಳು ಸರ್ಕಾರಕ್ಕೆ ಹೊರೆಯಾಗಿ ಪರಿಣಮಿಸಿವೆ. ಇವುಗಳ ಬಗ್ಗೆ ಸರ್ಕಾರವು ಅವನ್ನು ತನ್ನೊಂದಿಗಿರಿಸಬೇಕೆ, ಮುಚ್ಚಬೇಕೆ, ಇಲ್ಲವೆ ಖಾಸಗೀ ಬಂಡವಾಳಸ್ಥರಿಗೆ ಮಾರಿಬಿಡಬೇಕೆ ಎಂಬ ಒಂದು ನಿರ್ಣಯಕ್ಕೆ ಬರಬೇಕು. ಆದರೆ ನಮ್ಮ ಮುಂದೆ ಇರುವ ಪ್ರಶ್ನೆ ಯಾವುದನ್ನು ಇರಿಸಿಕೊಳ್ಳಬೇಕು ಯಾವುದನ್ನು ಮಾರಬೇಕು? ಅಂದರೆ ಅವುಗಳ ಪೈಕಿ ನಿಜಕ್ಕೂ ಯಾವುವು ಸರ್ಕಾರಕ್ಕೆ ಹಾಗೂ ಸಮಾಜಕ್ಕೆ ಹೊರೆಯಾಗಿವೆ? ಇದಕ್ಕೆ ಶ್ರೀಕಂಠಾರಾಧ್ಯ ಅವರ ಉತ್ತರ ಬಹಳ ಸೂಕ್ತವಾಗಿದೆ. ಹಣಕಾಸು ಫಲಿತಾಂಶ ಮತ್ತು ಇತರೆ ಮಾನದಂಡಗಳು - ಎಂದರೆ ಸೇವೆಗಳ ಗುಣಮಟ್ಟ, ಮೊದಲೇ ನಿಗದಿಪಡಿಸಿರುವ ಗುರಿಗಳನ್ನು ಎಷ್ಟರ ಮಟ್ಟಿಗೆ ಮುಟ್ಟಲಾಗಿದೆ, ಉತ್ಪಾದಕತೆ, ಉದ್ಯೋಗ ಸೃಷ್ಟಿ-ಇವನ್ನು ಪ್ರಯೋಗಿಸಿ ಮೇಲಿನ ಪ್ರಶ್ನೆಯನ್ನು ಇತ್ಯರ್ಥ ಮಾಡಿಕೊಂಡು ಯಾವುದೇ ಒಂದು ನಿರ್ಧಾರಕ್ಕೆ ಬರಬೇಕು ಎಂಬುದು.

ಕೈಗಾರಿಕೀಕರಣ ನಿಜಕ್ಕೂ ಆರ್ಥಿಕತೆಯನ್ನು ಬಲಯುಕ್ತ ಪಡಿಸುತ್ತದೆ. ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವುದರ ಜೊತೆಗೆ ಜನರಿಗೆ ಬೇಕಾಗುವ ಆಧುನಿಕ ಗ್ರಾಹಕ ಹಾಗೂ ಬಂಡವಾಳ ರೂಪದ ವಸ್ತುಗಳನ್ನು ನೀಡುತ್ತದೆ. ಆದರೆ ಅದರ ಮತ್ತೊಂದು ಮುಖವೆಂದರೆ ಉತ್ಪಾದನಾ ಕಾರ್ಯಗತಿಯಲ್ಲಿ ವಿಷವನ್ನು ಬಿಟ್ಟು ಮನುಷ್ಯನಿಗೆ ಅತ್ಯಾವಶ್ಯಕವಾಗಿ ಬೇಕಿರುವ ಗಾಳಿ ಮತ್ತು ನೀರನ್ನು ಮಲಿನ ಮಾಡಿ ಪರಿಸರವನ್ನು ಕೆಡಿಸುವುದು. ಇದು ಕೈಗಾರಿಕೀಕರಣದ ಋಣಾತ್ಮಕವಾದ ಪಾತ್ರ. ಆದರೆ ನಾಡಕರ್ಣಿ ಮತ್ತು ಶಾಸ್ತ್ರಿ ಅವರ ಪ್ರಕಾರ ಇದಕ್ಕೆ ಪರಿಹಾರ ಕೈಗಾರಿಕೀರಣವೇ ಬೇಡವೆನ್ನುವುದಲ್ಲ, ಕೈಗಾರಿಕೆಗಳು ಬೇಕು ಆದರೆ ಅವುಗಳ

ದುಷ್ಪರಿಣಾಮಗಳನ್ನು ಸಾಮಾನ್ಯ ಜನ ಅನುಭವಿಸುವುದಕ್ಕಿಂತ ಉದ್ಯಮಿಗಳೇ ಅನುಭವಿಸಲಿ ಎನ್ನುವುದು. ಎಂದರೆ ಮಾಲಿನ್ಯ ಮಾಡುವ ಉದ್ಯಮಿಗಳು ಅದನ್ನು ತಡೆಗಟ್ಟುವ ಕ್ರಮಗಳನ್ನು ಕೈಗೊಂಡು ತಮ್ಮ ಕ್ರಿಯೆಗಳಿಗೆ ಬೆಲೆ ತೆರಬೇಕು ಎಂಬುದು. ಇದರ ಬಗ್ಗೆ ಇರುವ ಸರ್ಕಾರದ ಧೋರಣೆಯನ್ನು ವಿವರಿಸುತ್ತಾ ಸರ್ಕಾರವು ಇನ್ನೂ ಪ್ರಾಮಾಣಿಕ ಪ್ರಯತ್ನ ಮಾಡಬೇಕೆಂದು ಹೇಳುವುದರ ಜೊತೆಗೆ, ನಮ್ಮೆಲ್ಲರಲ್ಲೂ ನಮ್ಮ ಮೂಲಕ ಇತರರ ಸೌಖ್ಯ ಕೆಡಬಹುದೋ ಎಂದು ಯೋಚನೆ ಮಾಡುವ ಮನೋಭಾವವನ್ನೂ ಬೆಳೆಸಬೇಕು ಎನ್ನುವುದು ಅವರ ಕಳಕಳಿಯ ಸಲಹೆ.

ಆರ್ಥಿಕ ಅಭಿವೃದ್ಧಿಯಲ್ಲಿ ಸರ್ಕಾರದ ಗಣನೀಯ ಪಾತ್ರವಿರುತ್ತದೆ ಎಂಬುದು ವಿಧಿತ. ಆರ್ಥಿಕತೆಯ ಬೇರೆಬೇರೆ ಕ್ಷೇತ್ರಗಳನ್ನು ಅಭಿವೃದ್ಧಿಗೊಳಿಸುವುದರಲ್ಲಿ ನೇರ ಪಾತ್ರವಹಿಸುವುದಲ್ಲದೆ ಸರ್ಕಾರ ಪರೋಕ್ಷವಾಗಿ ಅವುಗಳಿಗೆ ಸಹಾಯ ಮಾಡಬೇಕಾಗುತ್ತದೆ. ಅಂದ ಮೇಲೆ ಇದು ಸರ್ಕಾರದ ಹಣಕಾಸಿನ ಮೇಲೆ ಸಾಕಷ್ಟು ಪರಿಣಾಮ ಬೀರುತ್ತದೆ. ಗಾಯಿತ್ರಿಯವರು ಈ ಒಂದು ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಹಣಕಾಸಿನ ಸಮೀಕ್ಷೆಯನ್ನು ಕೈಗೊಂಡು ಕೆಲವು ಅಂಶಗಳನ್ನು ನಮ್ಮ ಗಮನಕ್ಕೆ ತಂದಿದ್ದಾರೆ. ಅವರ ಪ್ರಕಾರ ಸರ್ಕಾರಿ ವೆಚ್ಚದಲ್ಲಿ ಇತ್ತೀಚೆಗೆ ಏರುಗತಿ ಪ್ರವೃತ್ತಿ ಕಾಣಿಸುತ್ತಿದೆ. ಅದೃಷ್ಟವಶಾತ್ ರಾಜ್ಯದ ಹಣಕಾಸು ನಿರ್ವಹಣೆಯು ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಪ್ರೋತ್ಸಾಹದಾಯಕವಾಗಿದೆ. ೧೯೮೦-೯೦ರ ದಶಕಕ್ಕೆ ಹೋಲಿಸಿದರೆ ಪ್ರಸ್ತುತ ದಶಕದಲ್ಲಿ ಬಡ್ಜೆಟ್ ಪರಿಸ್ಥಿತಿ ಉತ್ತಮಗೊಂಡು ನಿವ್ವಳ ಬಂಡವಾಳ ರಚನೆಯಲ್ಲಿ ಸ್ವಲ್ಪ ಮಟ್ಟಿನ ಸುಧಾರಣೆ ಕಂಡು ಬರುತ್ತಿದೆ. ಹೀಗೆಯೇ ಮುಂದುವರೆದರೆ, ರಾಜ್ಯದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಮಟ್ಟವು ಉತ್ತಮಗೊಳ್ಳುವುದರಲ್ಲಿ ಸಂದೇಹವಿಲ್ಲ ಎಂಬ ಅವರ ಮಾತು ಉತ್ತೇಜದಾಯಕವಾಗಿದೆ.

ಮೇಲಿನ ಸಮೀಕ್ಷೆಯಿಂದ ನಮಗೆ ಗೊತ್ತಾಗುವುದು ಏನೆಂದರೆ, ಕರ್ನಾಟಕದ ಆರ್ಥಿಕತೆಯು ದೇಶದ ಎಲ್ಲಾ ರಾಜ್ಯಗಳಂತೆ ಹಿಂದುಳಿದುದು. ಆದರೂ ಸಹ ಅದು ಇತ್ತೀಚೆಗೆ ಸುಮಾರು ಶೇಕಡಾ ೫ರಿಂದ ೬ರ ದರದಲ್ಲಿ ಬೆಳೆಯುತ್ತಿದೆ. ಆದರೆ ಕರ್ನಾಟಕದ ಬೆಳವಣಿಗೆ ದರ ರಾಷ್ಟ್ರದಕ್ಕಿಂತ ಕಡಿಮೆ. ಇದಕ್ಕೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದುದು ನಮ್ಮಲ್ಲಿನ ಕಡಿಮೆ ದರದ ಬಂಡವಾಳ ನಿರ್ಮಾಣ ಹಾಗೂ ಬಂಡವಾಳವನ್ನು ಉಪಯೋಗಿಸಿಕೊಂಡು ಉತ್ಪಾದನೆಯನ್ನು ಅಧಿಕಗೊಳಿಸುವ ಶಕ್ತಿ ಹಾಗೂ ಮನೋಧರ್ಮವಿರುವ ಮಾನವ ಸಂಪನ್ಮೂಲದ ಕೊರತೆ.

ಕರ್ನಾಟಕದಲ್ಲಿ ಸಾಕಷ್ಟು ಪ್ರಮಾಣದ ಸ್ವಾಭಾವಿಕ ಸಂಪತ್ತು ಉಂಟು. ಅದನ್ನು ಉಪಯೋಗಿಸಿಕೊಂಡು ಆರ್ಥಿಕ ಬೆಳವಣಿಗೆಯ ದರವನ್ನು ತೀವ್ರಗೊಳಿಸುವಂತೆ ಮಾಡಬಹುದು.

ಇದಕ್ಕಾಗಿ ಮಾಡಬೇಕಾದ ಕಾರ್ಯಕ್ರಮಗಳು ಈ ರೀತಿ ಇವೆ:

೧. ಮೂಲಭೂತ ಸೌಕರ್ಯಗಳಾದ ಸಾರಿಗೆ, ವಿದ್ಯುತ್ ಹಾಗೂ ಸಂಪರ್ಕಗಳನ್ನು ಹೆಚ್ಚಿಸುವುದು.

೨. ಭೌತಿಕ ಮೂಲಭೂತ ಸೌಕರ್ಯಗಳು ಅಲ್ಲದೆ ಆರ್ಥಿಕ ಅಭಿವೃದ್ಧಿಗೆ ವಿದ್ಯಾವಂತ ಹಾಗೂ ಆರೋಗ್ಯಕರವಾದ ಮಾನವ ಸಂಪತ್ತನ್ನು ರಾಜ್ಯದಲ್ಲಿ ಬೆಳೆಸಬೇಕು.

೩. ಕೃಷಿ ಪ್ರಧಾನವಾದ ನಮ್ಮ ಆರ್ಥಿಕತೆಯಲ್ಲಿ ಕೃಷಿ ಕ್ಷೇತ್ರದ ಬೆಳವಣಿಗೆ ದರ ಒಟ್ಟಾರೆ ಆರ್ಥಿಕತೆಯ ಬೆಳವಣಿಗೆಯ ದರವನ್ನು ನಿರ್ಣಯಿಸುವುದರಿಂದ ಯೋಜನೆಗಳಲ್ಲಿ ಈ ಕ್ಷೇತ್ರದ ಅಭಿವೃದ್ಧಿಗೆ ಆದ್ಯತೆ ಕೊಡಬೇಕು.

೪. ಕೃಷಿ ಕ್ಷೇತ್ರವನ್ನು ಅಭಿವೃದ್ಧಿ ಪಡಿಸಬೇಕಾದರೆ ಭೂ ಸುಧಾರಣೆ, ಕೃಷಿ ಸಾಲ ಹಾಗೂ ಕೃಷಿಗೆ ಬೇಕಾಗುವ ಇತರೆ ಸೌಲಭ್ಯಗಳು ಅಂದರೆ ಮುಖ್ಯವಾಗಿ ನೀರಾವರಿ ಸೌಲಭ್ಯಗಳನ್ನು ಕಲ್ಪಿಸಬೇಕು.

೫. ಪ್ರಗತಿಪರ ಆರ್ಥಿಕತೆಯಲ್ಲಿ ಕೈಗಾರಿಕಾ ಕ್ಷೇತ್ರ ದೊಡ್ಡ ಪಾತ್ರವನ್ನು ವಹಿಸುವುದರಿಂದ ಈ ಕ್ಷೇತ್ರದ ಅಭಿವೃದ್ಧಿಗೆ ಬೇಕಾಗುವ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು. ಮುಖ್ಯವಾಗಿ ಕೈಗಾರಿಕಾ ಬೆಳವಣಿಗೆಗೆ ಅನುಕೂಲ ಮಾಡಿಕೊಡುವಂತಹ ವಾತಾವರಣವನ್ನು ಸೃಷ್ಟಿಸಬೇಕು. ಇದರಲ್ಲಿ ಮುಖ್ಯವಾದುದು ಹಿತಕರವಾದ ಕೈಗಾರಿಕಾ ಸಂಬಂಧಗಳು.

೬. ಕೊನೆಯದಾಗಿ ಕರ್ನಾಟಕ ಸರ್ಕಾರದ ಅನೇಕ ಕೈಗಾರಿಕೋದ್ಯಮಗಳು ರೋಗಗ್ರಸ್ತವಾಗಿರುವುದರಿಂದ ಅವುಗಳಿಗೆ ಸಂಬಂಧಪಟ್ಟಂತೆ ಧೋರಣೆಯನ್ನು ರೂಪಿಸಬೇಕು.

ಮೇಲ್ಕಂಡ ವಿಷಯಗಳಿಗೆ ಸಂಬಂಧಪಟ್ಟಂತೆ ಧೋರಣೆಗಳನ್ನು ರೂಪಿಸಿ ಸಮರ್ಪಕವಾದಂತಹ ಕಾರ್ಯಕ್ರಮಗಳನ್ನು ಕೈಗೊಂಡರೆ ನಮ್ಮ ಆರ್ಥಿಕತೆಯು ಭವಿಷ್ಯತ್ತಿನಲ್ಲಿ ಹೆಚ್ಚಿನ ದರದಲ್ಲಿ ಬೆಳೆಯುವ ಸಂಭವವುಂಟು.

**ಅಬ್ದುಲ್ ಅಜೀಜ್**
ಸಂಪಾದಕ

# ಪರಿವಿಡಿ

## ಭಾಗ - ೧

### ಅಭಿವೃದ್ಧಿ - ಸಂಪನ್ಮೂಲಗಳು - ಜನಸಂಖ್ಯೆ - ಬಡತನ



## ಭಾಗ - ೨

### ಕೃಷಿ - ನೀರಾವರಿ - ಗ್ರಾಮೀಣಾಭಿವೃದ್ಧಿ - ರೇಷ್ಮೆ ಮತ್ತು ವಿಕೇಂದ್ರೀಕರಣ

## ಭಾಗ - ೩

## ಕೈಗಾರಿಕೆ - ಕಾರ್ಮಿಕ ಸಂಬಂಧ ಮತ್ತು ಮಾಲಿನ್ಯ



## ಭಾಗ - ೪

# ಕರ್ನಾಟಕದ ಬೆಳವಣಿಗೆಯ ಕೆಲವು ಅಂಶಗಳು

ಪಿ.ಆರ್. ಬ್ರಹ್ಮಾನಂದ

ಈ ಪ್ರಬಂಧದಲ್ಲಿ ಮೊದಲನೆಯದಾಗಿ ನಾವು ಬೆಳವಣಿಗೆಯ ದರಗಳ ರೀತಿಯನ್ನು ರೂಪಿಸುತ್ತೇವೆ. ಅದನ್ನು ನಾವು ವಿವಿಧ ವಲಯಗಳಿಗೆ ಅನ್ವಯವಾಗುವಂತೆ ಸ್ಥಿರ ದರದಲ್ಲಿನ ರಾಜ್ಯದ ಒಟ್ಟು ಆಂತರಿಕ ಉತ್ಪಾದನೆಯನ್ನು ಲೆಕ್ಕ ಹಾಕುತ್ತೇವೆ. ಆ ಬಳಿಕ ನಾವು ಬೆಳವಣಿಗೆಗೆ ವಿವಿಧ ವಲಯಗಳ ತತ್ಸಂಬಂಧಿ ಕೊಡುಗೆಗಳ ಬಗ್ಗೆ ವಿವರಿಸುತ್ತೇವೆ. ಸಾರ್ವಜನಿಕ ಹಣ ಕಾಸಿನ ರೀತಿಯ ಬಗ್ಗೆ, ಸರ್ಕಾರದ ಪಾತ್ರವನ್ನು ಪರೀಕ್ಷಿಸಲಾಗಿದೆ. ಮುಂಗಡ ಪತ್ರಗಳ ಆರ್ಥಿಕ ವಿಂಗಡನೆಗಳ ಫಲಿತಾಂಶಗಳನ್ನು ಗಣನೆಗೆ ತೆಗೆದುಕೊಂಡು, ನಾವು ಎರಡು ಮುಖ್ಯ ನಿರ್ಧಾರಗಳಿಗೆ ಬರುತ್ತೇವೆ. ಆದಾದ ಬಳಿಕ, ಕರ್ನಾಟಕದ ಭವಿಷ್ಯದ ಬೆಳವಣಿಗೆಗೆ ಬರಬಹುದಾದ ಅಡ್ಡಿಗಳ ಸ್ವಭಾವದ ಮೇಲೆ ನಡೆಸಿರುವ ನಮ್ಮ ಪ್ರಯೋಗಗಳ ಪ್ರಭಾವಗಳನ್ನು ಪರೀಕ್ಷಿಸುತ್ತೇವೆ. ನೀತಿ ಧೋರಣೆಗಳ ತಯಾರಕರಿಗೆ ಬರುವ ಪಂಥಾಹ್ವಾನಗಳು ಹಾಗೂ ಅಡ್ಡಿಗಳ ಸ್ವಭಾವಗಳನ್ನು ಸಹ ಇಲ್ಲಿ ಸೂಚಿಸಲಾಗಿದೆ. ಮೂಲ ಪಾಠಕ್ಕೆ ನಾಲ್ಕು ಹೇಳಿಕೆಗಳನ್ನು ಲಗತ್ತೀಕರಿಸಲಾಗಿದೆ.

**ಕೃಷಿ:**

೧೯೮೦-೮೧ರಿಂದ ೧೯೯೩-೯೪ರ ಅವಧಿಯ ರಾಜ್ಯದ ಆಂತರಿಕ ಉತ್ಪಾದನೆ ಮತ್ತು ಅದರ ಇತರ ಅಂಶಗಳ ಬೆಳವಣಿಗೆಯ ರೀತಿಯ ದರದ ಲಘು ಗಣಕವನ್ನು ನಾವು ಪಡೆದುಕೊಂಡಿದ್ದೇವೆ. ಈ ಬೆಳವಣಿಗೆಯ ದರಗಳನ್ನು ಇಳಿತದ ಅಭ್ಯಾಸಗಳ ಮಾಧ್ಯಮ ಮುಖಾಂತರ ಪಡೆಯಲಾಗಿದೆ. ಈ ಅವಧಿಯಲ್ಲಿ ಕರ್ನಾಟಕದ ಜನಸಂಖ್ಯೆಯು ಶೇ. ೧.೮೭ರ ದರದಲ್ಲಿ ಬೆಳೆಯುತ್ತಿತ್ತು. ಒಟ್ಟು ಭಾರತದ ಜನಸಂಖ್ಯೆಯ ಬೆಳವಣಿಗೆಯ ದರಕ್ಕಿಂತ ಇದು ಸ್ವಲ್ಪ ಮಟ್ಟಿಗೆ ಕಡಿಮೆಯಿತ್ತು. ಸ್ಥಿರ ದರಗಳಲ್ಲಿ ರಾಜ್ಯದ ಒಟ್ಟು ಆಂತರಿಕ ಉತ್ಪಾದನೆಯ ದರವು ವಾರ್ಷಿಕ ಶೇ. ೫.೪೭ರಂತೆ ಹೆಚ್ಚುತ್ತಿತ್ತು. ವಾರ್ಷಿಕ ಬೆಳವಣಿಗೆಯ ದರದ ವ್ಯತ್ಯಾಸ ಪ್ರಮಾಣವು ಬಹಳ ಹೆಚ್ಚಿದ್ದು, ಈ ವ್ಯತ್ಯಾಸ ಸಹ ಸಶಕ್ತತೆಯು ೨೦% ಆಗಿರುತ್ತದೆ. ಇದು ವಾರ್ಷಿಕ ಬೆಳವಣಿಗೆಯ ದರದ ಅಸ್ಥಿರತೆಯನ್ನು ಸೂಚಿಸುತ್ತದೆ. ಸ್ಥಿರ ದರಗಳಲ್ಲಿನ ಆಂತರಿಕ ನಿವ್ವಳ ಉತ್ಪಾದನೆಯು ವಾರ್ಷಿಕ ೩.೫೩% ರಂತೆ

ಹೆಚ್ಚುತ್ತಿದೆ. ವ್ಯತ್ಯಾಸದ ಪ್ರಮಾಣವು ಜಾಸ್ತಿಯಿದೆ ಹಾಗೂ ವ್ಯತ್ಯಾಸದ ಸಹಶಕ್ತತೆಯು ೧೫% ಆಗಿರುತ್ತದೆ. ಕೃಷಿ, ಅರಣ್ಯ, ಮೀನುಗಾರಿಕೆ ಮತ್ತು ಗಣಿಯನ್ನು ಒಳಗೊಂಡಿರುವ ಪ್ರಾಥಮಿಕ ವಲಯದ ಬೆಳವಣಿಗೆಯ ದರವು ೩.೦೨%, ಕೃಷಿಯ ಬೆಳವಣಿಗೆಯ ದರವು ೩.೨೦% ಹಾಗೂ ಮೀನುಗಾರಿಕೆಯದು ೩.೪% ಆಗಿದೆ. ಅರಣ್ಯ ಹಾಗೂ ಗಣಿಯ ಬೆಳವಣಿಗೆಯ ದರವು ಋಣಾತ್ಮಕವಾಗಿದ್ದು, ಅನುಕ್ರಮವಾಗಿ -೧.೧೨% ಮತ್ತು -೨.೭೮% ಆಗಿದೆ. ಈ ಎಲ್ಲಾ ವಲಯಗಳು ವಾರ್ಷಿಕ ಬೆಳವಣಿಗೆಯ ದರದಲ್ಲಿ ಅಸ್ಥಿರತೆಯ ಲಕ್ಷಣವನ್ನು ಪಡೆದಿವೆ.

### ದ್ವಿತೀಯ ವಲಯ

ದ್ವಿತೀಯ ವಲಯ ೭.೧೧% ದರದಲ್ಲಿ ಬೆಳೆಯುತ್ತಿದೆ. ತಯಾರಿಕೆಯ ಉತ್ಪಾದನೆಯಲ್ಲಿ ೮.೫೭% ದರದಲ್ಲಿ ಬೆಳೆಯುತ್ತಿದೆ. ಇದರಲ್ಲಿ ನೋಂದಾಯಿತ ತಯಾರಿಕೆಯು ೯.೩೪%ರಲ್ಲಿ ಹಾಗೂ ನೋಂದಣಿ ರಹಿತ ತಯಾರಿಕೆಯು ೭.೦೫%ರಲ್ಲಿ ಬೆಳೆಯುತ್ತಿದೆ. ನಿರ್ಮಾಣಗಳು ೩.೯೧% ದರದಲ್ಲಿ ಹಾಗೂ ವಿದ್ಯುತ್, ಅನಿಲ ಮತ್ತು ನೀರಿನಂತಹ ಸಾರ್ವಜನಿಕ ಉಪಯೋಗಿ ವಸ್ತುಗಳು ೨.೩೬% ದರದಲ್ಲಿ ಬೆಳೆಯುತ್ತಿವೆ. ತಯಾರಿಕ ಉತ್ಪಾದನೆಯು ೮.೫೭%ರಲ್ಲಿ ಬೆಳೆಯುತ್ತಿದ್ದು, ವಿದ್ಯುತ್, ಅನಿಲ ಮತ್ತು ನೀರು ೨.೩೦ರ ದರದಷ್ಟೇ ಯಾಕೆ ಬೆಳೆಯುತ್ತಿದೆ ಎಂಬುದು ಒಂದು ಒಗಟಾಗಿದೆ. ಇದಕ್ಕೆ ಉತ್ತರವನ್ನು ಸ್ವಉತ್ಪಾದಿತ ವಿದ್ಯುತ್ತಿನ ಹೆಚ್ಚಿನ ಉತ್ಪನ್ನ ಮತ್ತು ಬಳಕೆಯಲ್ಲಷ್ಟೆ ಕಾಣಬಹುದಾಗಿದೆ. ಸಾರ್ವಜನಿಕ ಉಪಯುಕ್ತತೆಗಿಂತ, ಬಂಧಿತ ತಯಾರಿಕೆಯ ಉತ್ಪಾದನಾ ಘಟಕ ಬೆಲೆಯು ಹೆಚ್ಚಿರುವುದು. ಆದರ ಪೂರೈಕೆಯು ಹೆಚ್ಚು ನಂಬಲರ್ಹವೆನಿಸುವುದು.

### ತೃತೀಯ ವಲಯ

ಸಾರಿಗೆ ವ್ಯವಸ್ಥೆ, ಉದ್ದಿಮೆ, ಬ್ಯಾಂಕಿಂಗ್ ಮತ್ತು ವಿಮೆ, ಸಾರ್ವಜನಿಕ ಆಡಳಿತ ಮತ್ತು ಇತರ ಸೇವೆಗಳನ್ನು ಒಳಗೊಂಡಿರುವ ತೃತೀಯ ವಲಯ ಶೇಕಡಾ ೭.೨೪% ರಂತೆ ಬೆಳೆಯುತ್ತಿವೆ. ರೈಲ್ವೆಗಳು ಶೇಕಡಾ ೪.೫೮%ರಂತೆ ಹಾಗೂ ಇತರ ಸಾಗಣಿಕೆಯ ಸಾಧನಗಳು ಶೇಕಡಾ ೭.೦೮% ರಂತೆ ಬೆಳೆಯುತ್ತಿದೆ. ಸಂಪರ್ಕ ಸಾಧನವು ಶೇಕಡಾ ೫.೪೫%ರಂತೆ ಬೆಳೆಯುತ್ತಿದೆ. ಉದ್ದಿಮೆ ಮತ್ತು ಹೋಟಲುಗಳು ಶೇಕಡಾ ೭.೦೫% ರಂತೆ, ಬ್ಯಾಂಕಿಂಗ್ ಮತ್ತು ವಿಮೆಯನ್ನು ಒಳಗೊಂಡ ಆರ್ಥಿಕ ರಂಗವು ರಾಜ್ಯದಲ್ಲೆ ಅತ್ಯಧಿಕ ಬೆಳವಣಿಗೆಯ ದರ ೧೧.೫% ರಷ್ಟು ಬೆಳೆಯುತ್ತಿದೆ. ಭೂ ಲೇವಾದೇವಿಯು ಶೇಕಡಾ ೩.೯೧% ಹಾಗೂ ಸಾರ್ವಜನಿಕ ಆಡಳಿತವು ಶೇಕಡಾ ೭.೩೩% ರಂತೆ ಬೆಳೆಯುತ್ತಿದೆ. ಇತರ ಸೇವಾ ಸೌಲಭ್ಯಗಳು ಶೇಕಡಾ ೬.೪೫% ರಂತೆ ಬೆಳೆಯುತ್ತಿದೆ. ಅನುಕ್ರಮಣಿಕೆಯಲ್ಲಿ ಜೋಡಿಸಿದಾಗ ಬ್ಯಾಂಕಿಂಗ್ ಮತ್ತು ವಿಮೆ ಹಾಗೂ ನೋಂದಾಯಿತ ತಯಾರಿಕೆಗಳು ಉನ್ನತ ದರದಲ್ಲಿ ಬೆಳೆಯುತ್ತಿವೆ. ಕೃಷಿ ಮತ್ತು ಸಾರ್ವಜನಿಕ ಉಪಯುಕ್ತತೆಗಳು,

ರಾಜ್ಯದ ನಿವ್ವಳ ಆಂತರಿಕ ಉತ್ಪಾದನಾ ಬೆಳವಣಿಗೆಯ ದರಕ್ಕಿಂತಲೂ ಕಡಿಮೆ ದರದಲ್ಲಿ ಬೆಳೆಯುತ್ತಿದೆ. ಅರಣ್ಯ-ನಿವ್ವಳ ಆಂತರಿಕ ಉತ್ಪಾದನಾ ಬೆಳವಣಿಗೆಯ ದರಕ್ಕಿಂತಲೂ ಕಡಿಮೆ ದರದಲ್ಲಿ ಬೆಳೆಯುತ್ತಿದೆ. ಅರಣ್ಯ ಮತ್ತು ಗಣಿಯಲ್ಲಿ ಈ ಹಿಂದೇನೇ ಗಮನಿಸಿರುವಂತೆ ಬೆಳವಣಿಗೆಯ ದರಗಳು ಋಣಾತ್ಮಕವಾಗಿವೆ. ಬ್ಯಾಂಕಿಂಗ್ ಮತ್ತು ವಿಮಾ ವಲಯ ಹಾಗೆಯೇ ಸಾರ್ವಜನಿಕ ಆಡಳಿತ ಹಾಗೂ ಇನ್ನಿತರ ಸೇವೆಗಳ ಬಗ್ಗೆ ಕರ್ನಾಟಕದಲ್ಲಿ ಹೆಚ್ಚಿನಂಶ ವೇತನ ಮತ್ತು ಕೂಲಿಗೆ ಸಂಬಂಧಿಸಿದ ಸ್ಫೋಟವೇ ಆಗಿದೆ. ಈ ಮೂರು ವಿಭಾಗಗಳಲ್ಲು ಬೆಳವಣಿಗೆಯ ದರವು ನೈಜ ವೇತನ ಹಾಗೂ ಕೂಲಿಗಳ ಏರಿಕೆಯ ಸ್ವಭಾವದ ಪ್ರತಿಫಲನವಾಗಿದೆ. ಕರ್ನಾಟಕವು ಉನ್ನತವಾಗಿ ನಗರೀಕೃತಗೊಂಡಿರುವ ರಾಜ್ಯವಾಗಿದೆ, ಹಾಗೂ ನೈಜ ಕೂಲಿ ಹಾಗೂ ಸಂಬಳದ ಏರಿಕೆಯ ಸ್ವಭಾವವು, ಕಾರ್ಮಿಕ ಸಂಘಗಳ ಒತ್ತಾಯ ಮತ್ತು ಬೇಕಾದ ವಿಧದ ಕಾರ್ಮಿಕ ವರ್ಗದ ಕೊರತೆಯ ಬಲವಾದ ಪ್ರಭಾವದಿಂದಾಗಿರುತ್ತದೆ.

**ಹಣಕಾಸು**

ನೋಂದಾಯಿತ ಹಾಗೂ ನೋಂದಾವಣಿರಹಿತ ತಯಾರಿಕೆಗಳು ಶೇಕಡಾ ೭%ಕ್ಕಿಂತಲು ಹೆಚ್ಚಿನ ದರದಲ್ಲಿ ಬೆಳೆಯುತ್ತಿದ್ದು, ಬೆಳವಣಿಗೆಯ ಉತ್ಪಾದನೆಯಲ್ಲಿ ಕರ್ನಾಟಕದ ಅವಲಂಬನೆಯು ಈ ವಲಯಗಳ ಮೇಲೆ ಖಂಡಿತವಾಗಿದೆ. ಹಣಕಾಸು ಮತ್ತು ಕೈಗಾರಿಕೆ ಕರ್ನಾಟಕದಲ್ಲಿ ಉನ್ನತವಾಗಿ ಬೆಳೆಯುತ್ತಿರುವ ವಲಯಗಳು. ಕೃಷಿಯನ್ನು ತೆಗೆದುಕೊಂಡಾಗ, ಬೆಳವಣಿಗೆ ದರವು ೦.೧೯% ಇದ್ದು ಇದು ನಗಣ್ಯವಾಗಿದೆ. ಉತ್ಪಾದನೆ ಬೆಳವಣಿಗೆ ದರವು ೨.೭೫% ಹಾಗೂ ಪ್ರತಿ ಹೆಕ್ಟೇರ್‌ನ ಇಳುವರಿ ಬೆಳವಣಿಗೆ ದರವು ೦.೬೬% ಇರುವುದೂ ನಗಣ್ಯವಾಗಿದೆ. ಕ್ಷೇತ್ರ ಬೆಳವಣಿಗೆ ದರ ಹಾಗೂ ಇಳುವರಿ ಬೆಳವಣಿಗೆ ದರಗಳಲ್ಲಿ ಉನ್ನತ ಮಟ್ಟದ ಅಸ್ಥಿರತೆಯಿರುವುದು. ಭಾರತೀಯ ಆರ್ಥಿಕತೆಯಲ್ಲಿರುವುದಕ್ಕಿಂತ ಭಿನ್ನವಾಗಿ ಕರ್ನಾಟಕದ ಇಳುವರಿ ಸೂಚಿಯು ಗಮನಾರ್ಹವಾಗಿ ಕೆಳಮಟ್ಟದ ದರದಲ್ಲಿ ಬೆಳೆಯುತ್ತಿದೆ.

**ಬೆಳವಣಿಗೆಯ ದೇಣಿಗೆ ಬಗ್ಗೆ ವಿವರಣೆ**

ಹಿಂಚಲನೆಯ ಕಾರ್ಯಾಭ್ಯಾಸದಂತೆ, ಸ್ಥಿರಬೆಲೆಗಳಲ್ಲಿ ರಾಜ್ಯದ ನಿವ್ವಳ ಆಂತರಿಕ ಉತ್ಪಾದನಾ ಬೆಳವಣಿಗೆಯು ನೈಜವಾಗಿ ಈ ರೀತಿ ವಿವರಿಸಲಾಗಿದೆ. ನೋಂದಾಯಿತ ತಯಾರಿಕೆಗಳು ಮತ್ತು ಕೃಷಿ, ಸಾರಿಗೆ, ವಿದ್ಯುತ್, ನೋಂದಾವಣಿರಹಿತ ತಯಾರಿಕೆಗಳ ದೇಣಿಗೆಗಳು ಅಷ್ಟೇನೂ ಗಂಭೀರವಲ್ಲ. ರಾಜ್ಯದ ಆಂತರಿಕ ನಿವ್ವಳ ಉತ್ಪಾದನೆಯ ಬೆಳವಣಿಗೆಯನ್ನು ನೋಂದಾಯಿತ ತಯಾರಿಕೆಯ ಪ್ರಭಾವವು ಹೆಚ್ಚು ಮಹತ್ವದ್ದು ಎಂಬ ಅಂಶ ಕುತೂಹಲಕಾರಿಯಾದುದು. ಆದರೆ ಕೃಷಿಯ ೭೫% ಬೆಳವಣಿಗೆಯನ್ನು ತಾನಾಗಿ ಬಣ್ಣಿಸುವುದು. ನಾವು ಕೃಷಿ, ನೋಂದಾಯಿತ ತಯಾರಿಕೆ,

ನೋಂದಾವಣೆರಹಿತ ತಯಾರಿಕೆಗಳು, ವಿದ್ಯುತ್ ಮತ್ತು ಸಾರಿಗೆಯನ್ನು ತೆಗೆದುಕೊಂಡಾಗ, ನೋಂದಾಯಿತ ತಯಾರಿಕೆಯ ಸ್ಥಿತಿ ಸ್ಥಾಪಕತೆಯು ೦.೫೩% ಹಾಗೂ ಕೃಷಿಯದ್ದು ೦.೩೦% ಆಗಿರುವುದು. ಅರ್ಥಾತ್, ಒಂದು ಶೇಕಡಾ ನೋಂದಾಯಿತ ತಯಾರಿಕೆಯ ಬೆಳವಣಿಗೆಯು ನಿವ್ವಳ ರಾಜ್ಯ ಆಂತರಿಕ ಉತ್ಪಾದನೆಯ ,೦.೫೪ ಶೇಕಡಾ ಒಂದು ಬೆಳವಣಿಗೆಯ ದರಕ್ಕೆ ಹಾಗೂ ಶೇಕಡಾ ಬೆಳವಣಿಗೆಯ ದರವು ನಿವ್ವಳ ರಾಜ್ಯ ಆಂತರಿಕ ಉತ್ಪಾದನೆಯ ೦.೩ ಶೇಕಡಾ ಬೆಳವಣಿಗೆಯಿಂದೆನಿಸುವುದು.

**ಬೆಳೆಗಳು**

ಬೆಳೆಗಳ ಬೆಳವಣಿಗೆಯ ದರವನ್ನು ವೀಕ್ಷಿಸಿದರೆ, ಮೊದಲು ಬರುವುದು ೭.೧೬% ಶೇಕಡಾದೊಂದಿಗೆ ಎಣ್ಣೆ ಬೀಜಗಳು, ಆ ಬಳಿಕ ಬರುವುದು ೫.೯೬%ದೊಂದಿಗೆ ಕಬ್ಬು. ಹತ್ತಿ, ತೆಂಗು ಮತ್ತು ಅಡಿಕೆಯ ಬೆಳವಣಿಗೆಯ ದರವು ಅನುಕ್ರಮವಾಗಿ ೨.೨೦%, ೩.೦೨% ಹಾಗೂ ೨.೧೬% ಆಗಿರುತ್ತದೆ. ತಂಬಾಕು ೩.೦೯% ದರದಲ್ಲಿ ಹಾಗೂ ಕಾಫಿ ೨.೦೯% ದರದಲ್ಲಿ ಬೆಳೆಯುತ್ತಿದೆ. ಆಹಾರ ಧಾನ್ಯಗಳ ಉತ್ಪಾದನೆಯು ೧.೨೫% ರಲ್ಲಿ ಬೆಳೆಯುತ್ತಿದೆ. ಇದರಲ್ಲಿ ಏಕದಳ ಧಾನ್ಯಗಳು ೧.೩೩% ರಲ್ಲಿ ಹಾಗೂ ದ್ವಿದಳ ಧಾನ್ಯಗಳು ೦.೨೦% ದಲ್ಲಿ ಬೆಳೆಯುತ್ತಿದೆ. ಕಾಳು, ಮೆಣಸು ಮತ್ತು ಏಲಕ್ಕಿಯ ಬೆಳವಣಿಗೆಯ ದರವು ಋಣಾತ್ಮಕವಾಗಿವೆ. ಆಹಾರ ಧಾನ್ಯಗಳ ಉತ್ಪಾದನೆಯು ಜನಸಂಖ್ಯೆಯ ಬೆಳವಣಿಗೆಗಿಂತ ಕಡಿಮೆಯಾಗಿದೆ ಮಾತ್ರವಲ್ಲ ಈ ಉತ್ಪಾದನೆಯು ಅಸ್ಥಿರ ಲಕ್ಷಣವನ್ನು ಹೊಂದಿದೆ. ಈ ಅಸ್ಥಿರತೆಯು ದ್ವಿದಳ ಧಾನ್ಯ, ಹತ್ತಿ, ಮೆಣಸು ಹಾಗೂ ಸಾಂಬಾರ ಪದಾರ್ಥಗಳ ಬಗ್ಗೆ ಜಾಸ್ತಿಯಾಗಿದೆ.

ಕೈಗಾರಿಕಾ ಉತ್ಪಾದನಾ ಸೂಚಿಯು ೬.೫೮% ರಲ್ಲಿ ಬೆಳೆಯುತ್ತಿದೆ. ಶಕ್ತಿಯ ಉತ್ಪಾದನೆಯು ೭.೮೭% ರಲ್ಲಿ ಬೆಳೆಯುತ್ತಿದೆ. ಇವುಗಳನ್ನು ನೋಡಿದಾಗ, ಕೆಲವೇ ಕೆಲವು ಬೆಳೆಗಳನ್ನು ಹೊರತುಪಡಿಸಿದರೆ ಜನಸಂಖ್ಯೆಗಿಂತ ಕೃಷಿ ಉತ್ಪಾದನೆಯ ಬೆಳವಣಿಗೆಯ ದರವು ಕಡಿಮೆಯಿದ್ದು, ಕರ್ನಾಟಕವು ಧಾನ್ಯಗಳನ್ನು ಆಮದುಗೊಳಿಸುತ್ತಿರುವುದು ಹೆಚ್ಚಾಗುತ್ತಿದೆ.

**ಕೃಷಿಯ ಸಮಸ್ಯೆಗಳು**

ಹಿಂದಿನ ಕಾರ್ಯಾಭ್ಯಾಸದಲ್ಲಿ ಕಂಡುಕೊಂಡ ಒಂದು ಕುತೂಹಲಕಾರಿ ಅಂಶವೆಂದರೆ ಕೃಷಿ ಉತ್ಪನ್ನವು ನೀರಾವರಿ, ಗೊಬ್ಬರದ ಬಳಕೆ ಅಥವಾ ಇಳುವರಿ ತಳಿಯ ಆಧಾರದಿಂದ ವಿವರಿಸಲ್ಪಟ್ಟಿಲ್ಲ.

ಅದರಂತೆ ಕರ್ನಾಟಕದಲ್ಲಿ ಕೃಷಿಯಲ್ಲಿ ಮುನ್ನಡೆ ಅಥವಾ ಅದರಲ್ಲಿರುವ

ಕೊರತೆಗಳು ಒಂದು ಒಗಟಾಗಿ ನಿಂತಿದೆ. ನೀರಾವರಿ ಒದಗಿಸುವುದು, ಗೊಬ್ಬರದ ಬಳಕೆ ಮತ್ತು ಹೆಚ್ಚು ಇಳುವರಿ ತಳಿಯ ಬಳಕೆಯು ಹೆಚ್ಚುವ ರೀತಿಯನ್ನು ಗಮನಿಸಲಾಗಿದೆ. ನಿರ್ದಿಷ್ಟವಾಗಿ ಹೆಚ್ಚುವರಿ ದೃಷ್ಟಿಕೋನದಿಂದ ನೋಡಿದಾಗ ಹೆಚ್ಚಿನ ಬೆಳೆಗಳಿಗೆ ಸಂಬಂಧಿಸಿ ಕೃಷಿಗೆ ಹಾಕಲ್ಪಡುವ ಎಲ್ಲಾ ವಸ್ತುಗಳು ಹಾಗೂ ಅದರಿಂದ ಬರುವ ಉತ್ಪನ್ನಗಳ ವಿವರಣೆಯು ಕರ್ನಾಟಕದಲ್ಲಿ ವಿಫಲವಾಗುತ್ತಿದೆ.

ಕರ್ನಾಟಕದಲ್ಲಿ ಕ್ಷೇತ್ರವ್ಯಾಪ್ತಿಯನ್ನು ಹೆಚ್ಚಿಸಲು ಹೆಚ್ಚೇನೂ ಅವಕಾಶವಿಲ್ಲ. ಬೆಳವಣಿಗೆಯ ಅಂಕಿಯನ್ನು ಗಮನಿಸಿದಾಗ ತುಲನಾತ್ಮಕವಾಗಿ ಎಣ್ಣೆ ಬೀಜ ಮತ್ತು ಕಬ್ಬು ಹೆಚ್ಚು ಲಾಭಕಾರಿಯಾಗಿದೆ, ಆಹಾರ ಧಾನ್ಯಗಳಿಗೆ ಹೋಲಿಸಿದಲ್ಲಿ ಹತ್ತಿ ಮತ್ತು ತಂಬಾಕುಗಳಿಗೆ ಹೆಚ್ಚಿನ ಭರವಸೆಯಿರುವಂತೆ ಕಾಣುತ್ತದೆ. ಬಹುಶಃ ಕಾಫಿ ಮತ್ತು ಮೆಣಸಿಗೆ ಉತ್ತಮ ಭವಿಷ್ಯವಿದೆ. ಹಿಂದಿನ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ, ಹೆಚ್ಚಿಸಿದ ಒಳವಸ್ತುಗಳ ಹೊರತಾಗಿಯೂ ಏಕದಳ ಹಾಗೂ ದ್ವಿದಳ ಧಾನ್ಯಗಳು ಹೆಚ್ಚಿದ ಪ್ರತ್ಯುತ್ತರ ನೀಡಲಾಗಲಿಲ್ಲ. ಜನಸಂಖ್ಯೆಯ ಬಹುಭಾಗ ಕೃಷಿಯನ್ನೇ ಅವಲಂಬಿಸಿದ್ದು ಕೃಷಿಕರಲ್ಲಿ ಬಹುಭಾಗ ಜೀವನಕ್ಕೆ ತಕ್ಕಷ್ಟೇ ಕೃಷಿಯಲ್ಲಿ ಅವಲಂಬಿತವಾಗಿರುವುದರಿಂದ, ಏಕದಳ ಹಾಗೂ ದ್ವಿದಳ ಧಾನ್ಯ ಎರಡರಲ್ಲೂ ಆಹಾರಧಾನ್ಯದ ಹೆಚ್ಚಿನ ಇಳುವರಿಯ ಬಗ್ಗೆ ನಾವು ಗಮನ ಕೊಡಬೇಕು. ದ್ವಿದಳ ಧಾನ್ಯಗಳ ಸ್ಥಿತಿಯು ಬಹಳ ಕೆಟ್ಟದಾಗಿದೆ. ತೊಗರಿಯ ಬೆಳವಣಿಗೆಯ ದರವು ಋಣಾತ್ಮಕವಾಗಿದೆ. ಕೃಷಿಯಲ್ಲಿ ಇದೇ ಪರಿಸ್ಥಿತಿ ಮುಂದುವರೆದರೆ ಕರ್ನಾಟಕವು ಆಹಾರ ಧಾನ್ಯಗಳ ಆಮದಿನ ಮೇಲೆ ಹೆಚ್ಚು ಅವಲಂಬಿಸಬೇಕಾಗುತ್ತದೆ. ಹಿಂದಿನ ವರ್ಷಗಳಲ್ಲಿ ಸಾಮಾನ್ಯ ಎರಡು ದಶಕಗಳ ಹಿಂದೆ, ಕರ್ನಾಟಕವು ಆಹಾರಧಾನ್ಯಗಳಲ್ಲಿ ಸ್ವಾವಲಂಬಿಯಾಗಿತ್ತು. ಆದರೆ ಈಗ ಅದರ ತದ್ವಿರುದ್ಧ ಸ್ಥಿತಿಯಾಗಿದೆ. ವಿವಿಧ ಬೆಳೆಗಳ ಮೂಲಕ ಕೃಷಿಯ ನೈಜ ಆದಾಯವನ್ನು ಬಹುಶಃ ಇನ್ನೂ ಉತ್ತಮಗೊಳಿಸಲು ಸಾಧ್ಯವಿದೆ. ಆದರೆ ದೊಡ್ಡ ಪ್ರಮಾಣದ ತೋಟಗಾರಿಕೆಯ ರೀತಿಯ ಅಭಿವೃದ್ಧಿಯು ಹೆಚ್ಚಿನ ಗ್ರಾಮೀಣ ಜನತೆಗೆ ಸಹಾಯಕವಾಗಲಾರದು, ವಿಶೇಷತಃ ಕೃಷಿ ಕೂಲಿಕಾರ್ಮಿಕರಿಗೆ. ಕರ್ನಾಟಕದ ನಿರಾಶಾದಾಯಕ ಸಾಧನೆಯನ್ನು ಕ್ಷಾಮ ಪರಿಸ್ಥಿತಿಯ ಮೇಲೆ ದೂರುವುದು ಸರಿಯಲ್ಲ. ನಾವು ಸಾಕಷ್ಟು ಅವಧಿಯನ್ನು ತೆಗೊಂಡುಕೊಂಡಿದ್ದೇವೆ. ಒಳ್ಳೆಯ ವರ್ಷಗಳು ಮತ್ತು ಕೆಟ್ಟ ವರ್ಷಗಳು ಒಂದಕ್ಕೊಂದು ಪರಿಹಾರ ನೀಡುವುವು.

## ಆಹಾರಧಾನ್ಯಗಳ ಆಮದು

ಕರ್ನಾಟಕವು ಒಂದು ವೇಳೆ ಆಹಾರ ಧಾನ್ಯಗಳ ಆಮದಿನ ಮೇಲೆ ಹೆಚ್ಚೆಚ್ಚು ಅವಲಂಬಿತವಾಗಿರಬೇಕಾದರೆ, ಆಗ ಅಂತರ್‌ಪ್ರಾದೇಶಿಕ ವಾಣಿಜ್ಯ ರಫ್ತಿನ ಅಭಿವೃದ್ಧಿಯೇ ಒಂದು ಸಮಸ್ಯೆಯೆನಿಸುವುದು.

ಕಾಲಾವಧಿಯಲ್ಲಿ ಕಬ್ಬಿನ ಉತ್ಪಾದನೆಯ ಬೆಳವಣಿಗೆಯ ದರವು ಕುಂಠಿತಗೊಳ್ಳುವುದು ಎಂಬುದನ್ನು ನಾವು ನೆನಪಿಡಬೇಕು. ಮಣ್ಣಿನ ಫಲವತ್ತತೆಯು ಹೆಚ್ಚಿನ ರೀತಿಯಲ್ಲಿ ತೊಂದರೆಗೊಳಗಾಗುವುದು. ಮಹಾರಾಷ್ಟ್ರದಲ್ಲಿ ಕಂಡು ಬರುವಂತೆ ಕಬ್ಬಿನ ಬೆಳೆಯಲ್ಲಿ ಹೆಚ್ಚಾದ ನೀರನ್ನು ಉಪಯೋಗಿಸುವರೇ ಎಂಬುದು ಸ್ಪಷ್ಟವಾಗಿಲ್ಲ.

ಬೆಳವಣಿಗೆಯ ದೃಷ್ಟಿಕೋನದಲ್ಲಿ ತಯಾರಿಕೆಯು ಆಶಾದಾಯಕ ಸ್ಥಿತಿಯಲ್ಲಿರುವಂತೆ ಕಾಣುತ್ತದೆ. ಅದರಂತೆ, ಆರ್ಥಿಕ ಸೇವೆಗಳು ಮತ್ತು ಇತರ ಸೇವೆಗಳಿಗೂ ಸಹ ಖಂಡಿತವಾದ ಭರವಸೆಯಿದೆ. ಸ್ಥಿತಿಯಾಧಾರದಲ್ಲಿ ಒಟ್ಟಾರೆ ಶಕ್ತಿಯ ಉತ್ಪಾದನೆಯು ಶೇಕಡಾ ೮ ರಂತೆ ಬೆಳೆಯುತ್ತಿದೆ. ಆದರೆ ಈ ಹಿಂದೆ ತಿಳಿಸಿರುವಂತೆ ಬಂಧಿತ ಉತ್ಪಾದನೆಯಲ್ಲಿ ಹೆಚ್ಚಳದ ಪರಿಸ್ಥಿತಿಯನ್ನು ಕಾಣುತ್ತೇವೆ. ನೈಜ ಬೆಲೆಯನ್ನು ಸೇರಿಸಿ ವಿದ್ಯುತ್ತನ್ನು ಒಂದು ಸ್ವತಂತ್ರ ಉದ್ದಿಮೆಯಾಗಿ ಪರಿಗಣಿಸಿದಾಗ, ಅದು ಇಚ್ಛಿಸಿದ ದರದಲ್ಲಿ ಬೆಳೆಯುತ್ತಿಲ್ಲ ಎನ್ನುವುದು ಸ್ಪಷ್ಟ. ಬಹುಶಃ ವಿದ್ಯುತ್ ದರಗಳಲ್ಲಿನ ನಿಶ್ಚಲತೆ ಇದಕ್ಕೆ ಒಂದು ವಿವರಣೆ ನೀಡಬಹುದು. ಪ್ರಸ್ತುತ ಈ ಆಧಾರದಲ್ಲೇ ಶಕ್ತಿಯ ಬಂಧಿತ ಉತ್ಪಾದನೆಯನ್ನು ಅವಲಂಬಿಸಿ ಕರ್ನಾಟಕವು ಕೈಗಾರಿಕಾ ರಂಗದ ವಿಸ್ತರಣೆ ಮಾಡಬಹುದಾಗಿ ನಾವು ನಿರೀಕ್ಷಿಸಬಹುದು. ಕೈಗಾರಿಕೆಗಳು ಹೆಚ್ಚು ಸ್ಪರ್ಧಾತ್ಮಕವಾಗಬೇಕಾದರೆ ಸಾರ್ವಜನಿಕ ವಿದ್ಯುತ್ ವಿತರಣೆಯು ಬೆಳೆಯಬೇಕು. ಕರ್ನಾಟಕ ಆಗಾಗ್ಗೆ ವಿದ್ಯುತ್ ಕಡಿತಕ್ಕೆ ಒಳಗಾಗಿದೆ. ನಮ್ಮ ಹೆಚ್ಚಿನ ವಿದ್ಯುತ್ ಉತ್ಪಾದನೆಯು ಜಲಮೂಲದಿಂದಾಗಿದ್ದು, ಬರ ಪರಿಸ್ಥಿತಿಯಿಂದಾಗಿ ಇದು ಅನಿಶ್ಚಿತತೆಯಿಂದ ಕೂಡಿದೆ. ಕರ್ನಾಟಕಕ್ಕೆ ಬದಲಿ ಮೂಲಗಳಿಂದ ವಿದ್ಯುತ್ ಉತ್ಪಾದನೆಯಲ್ಲಿ ಬೃಹತ್ ಬಂಡವಾಳ ಹೂಡಿಕೆಯ ಅಗತ್ಯವಿದೆ ಮತ್ತು ಇತರ ರಾಜ್ಯಗಳಲ್ಲಿ ಅಸ್ತಿತ್ವದಲ್ಲಿರುವಂತೆ, ಸ್ಪರ್ಧಾತ್ಮಕ ದರಗಳಲ್ಲಿ ಉದ್ದಿಮೆಗಳಿಗೆ ವಿದ್ಯುತ್ ಒದಗಿಸುವ ಅಗತ್ಯವಿದೆ.

**ರಾಜ್ಯ ಸರ್ಕಾರದ ಪಾತ್ರ**

ರಾಜ್ಯದ ಆರ್ಥಿಕತೆಯ ಯೋಜಿತ ಅಭಿವೃದ್ಧಿಯಲ್ಲಿ ರಾಜ್ಯ ಸರ್ಕಾರವು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಅಂತಹ ಅಭಿವೃದ್ಧಿಯನ್ನು ಪ್ರಭಾವಪೂರ್ಣ ಕಾನೂನು, ಶಾಂತಿ ಮತ್ತು ನ್ಯಾಯ ಪಾಲನೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಸೌಲಭ್ಯ ಒದಗಣೆ ಮೇಲಿನ ಖರ್ಚುಗಳಿಂದ ಸಾಧಿಸಬಹುದು. ಸಾಮಾಜಿಕ ಸೌಲಭ್ಯದ ಮೇಲಿನ ಖರ್ಚುಗಳು, ಶಿಕ್ಷಣ, ವೈದ್ಯಕೀಯ ಮತ್ತು ಆರೋಗ್ಯ ರಕ್ಷಣೆ, ವೃದ್ಧಾಪ್ಯ ಸೌಲಭ್ಯಗಳು, ಶುದ್ಧ ಕುಡಿಯುವ ನೀರಿನ ಪೂರೈಕೆ, ರಸ್ತೆಗಳನ್ನು ಹೆಚ್ಚಿಸುವುದು ಹಾಗೂ ನಿರ್ವಹಣೆ, ಹೆದ್ದಾರಿಗಳು ಮತ್ತು ಸೇತುವೆಗಳು, ಕುಟುಂಬ ಯೋಜನಾ ಸೌಲಭ್ಯಗಳನ್ನು ಪೂರೈಸುವುದು, ಮಕ್ಕಳು ಮತ್ತು ಮಹಿಳೆಯರಿಗಾಗಿ ವಿಶೇಷ ಕಾರ್ಯಕ್ರಮಗಳು ಇತ್ಯಾದಿಗಳ ಮೇಲಿನ ಖರ್ಚುಗಳನ್ನು ಒಳಗೊಂಡಿರುತ್ತದೆ. ಆರ್ಥಿಕ ಸೌಲಭ್ಯಗಳ ಖರ್ಚುಗಳು ಸಾರ್ವಜನಿಕ ಉಪಯುಕ್ತ ಸೇವೆಗಳು ಅಂದರೆ,

ವಿದ್ಯುತ್, ಅನಿಲ ಮತ್ತು ಸಾರ್ವಜನಿಕ ನೀರು ಸರಬರಾಜು, ಸಾರಿಗೆ, ಸಂಪರ್ಕ ಮತ್ತು ಸಂಗ್ರಹಣೆ ಸೌಲಭ್ಯಗಳು-ನೀರಾವರಿ ಕೆಲಸಗಳ ಹೆಚ್ಚಳ, ನದಿಕೊಳ್ಳಗಳ ಯೋಜನೆ, ಅರಣ್ಯೀಕರಣ ಯೋಜನೆಗಳು ಇತ್ಯಾದಿಗಳ ಮೇಲಿನ ಖರ್ಚುಗಳು. ಈ ಎಲ್ಲಾ ಖರ್ಚುಗಳು ವೇತನ, ಕೂಲಿಗಳು ಮತ್ತು ವಸ್ತುಗಳ ಮೇಲಿನ ಖರ್ಚುಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಸಾಕಷ್ಟು ಸೋರಿಕೆಯು ಸಹಾ ಇರುವುದು. ಇತ್ತೀಚಿನ ವರ್ಷಗಳಲ್ಲಿ ಸರ್ಕಾರವು ವಸ್ತುಗಳ ಮಾರಾಟವನ್ನು ಸಾರ್ವಜನಿಕ ವಿತರಣಾ ವ್ಯವಸ್ಥೆಯೊಂದಿಗೆ ಮಾಡುತ್ತಾ ಸಹಾಯಧನ ನೀಡುತ್ತಿದೆ ಹಾಗೂ ಬರ ಮತ್ತು ಪ್ರವಾಹಕ್ಕೆ ಪರಿಹಾರ ಮತ್ತು ಉದ್ಯೋಗ ಭರವಸೆ ಕಾರ್ಯಕ್ರಮಗಳ ಮೇಲೂಖರ್ಚು ಮಾಡುತ್ತಿದೆ. ಕೆಲವೊಮ್ಮೆ ಸೀರೆಗಳನ್ನು ಮತ್ತು ದೋತಿಗಳನ್ನು ಹಂಚುವ, ಶಾಲೆಗಳ ಮಕ್ಕಳಿಗೆ ಮಧ್ಯಾಹ್ನದ ಊಟ ಇತ್ಯಾದಿಗಳು ಸಹ ಈ ಕಾರ್ಯಕ್ರಮಗಳಲ್ಲಿವೆ. ರಾಜ್ಯ ಮಟ್ಟದ ಸರ್ಕಾರಿ ವೆಚ್ಚಗಳಲ್ಲಿ ಒಂದು ಮುಖ್ಯ ಸಂಘರ್ಷವಿದೆ. ಅದು ಸರ್ಕಾರಿ ಆದಾಯ ಮತ್ತು ಪ್ರಮುಖ ವೆಚ್ಚ ಮತ್ತು ಅಭಿವೃದ್ಧಿ ಹಾಗೂ ಅಭಿವೃದ್ಧಿಯೇತರ ಖರ್ಚುಗಳ ನಡುವೆಯಾಗಿರುತ್ತದೆ. ಅಭಿವೃದ್ಧಿ ಖರ್ಚುಗಳಲ್ಲಿ ಆಟದ ನಿರ್ವಹಣೆ ಖರ್ಚುಗಳೂ ಸಹಾ ಸೇರುತ್ತದೆ. ರಾಜ್ಯದ ಖರ್ಚುಗಳು ಭಾಗಶಃ ರಾಜ್ಯದ ಸ್ವಂತ ತೆರಿಗೆ ಸಂಪನ್ಮೂಲಗಳಿಂದಲೂ ಉಳಿದ ಅರ್ಧ ಭಾಗವು ಕೇಂದ್ರದ ತೆರಿಗೆಯ ಪಾಲು ಹಾಗೂ ಸಹಾಯಧನ ಪಾವತಿಯಿಂದಲೂ ಆಗಿರುತ್ತದೆ. ತೆರಿಗೆಯೇತರ ಆದಾಯವೂ ಸಹ ರಾಜ್ಯ ಮಟ್ಟದ ವೆಚ್ಚಗಳಿಗೆ ಕೊಡುಗೆಯಾಗುತ್ತದೆ.

**ಆದಾಯ ಮತ್ತು ವೆಚ್ಚಗಳು**

ಆದಾಯ ಮತ್ತು ವೆಚ್ಚಗಳು ಲಘು ಗಣಕ ಬೆಳವಣಿಗೆ ದರ ರೀತಿಯಲ್ಲಿ ಪಡೆದ ಹಿಂಚಲನೆಯನ್ನು ಈ ಕೆಳಗೆ ನೀಡಲಾಗಿದೆ. ರಾಜ್ಯದ ಸ್ವತಃ ತೆರಿಗೆ ಆದಾಯ ದರದ ಬೆಳವಣಿಗೆಯು ೭.೨೩% ಆಗಿದೆ. ಕೇಂದ್ರದ ತೆರಿಗೆಗಳ ಪಾಲು ೩.೯೯%ರಂತೆ ಬೆಳೆಯುತ್ತಿದೆ. ಒಟ್ಟು ತೆರಿಗೆ ರಸೀತಿಯು ೬.೫೮%ರಲ್ಲಿ ಬೆಳೆಯುತ್ತಿದೆ. ತೆರಿಗೆಯೇತರ ಸ್ವೀಕಾರ ೩.೪೯%ರಲ್ಲಿ ಬೆಳೆಯುತ್ತಿದೆ. ಒಟ್ಟು ಆದಾಯ ಸ್ವೀಕಾರ ೫.೭೪%ರಂತೆ ಏರುತ್ತಿದೆ ಹಾಗೂ ಬಂಡವಾಳ ಸ್ವೀಕಾರ ೫.೦೩%ರಂತೆ ಏರುತ್ತಿದೆ. ರಾಜ್ಯ ಸರ್ಕಾರದ ಒಟ್ಟು ಕೂಡಿದ ಸ್ವೀಕಾರವು ೫.೩೫%ರಲ್ಲಿ ಏರುತ್ತಿದೆ. ಆದರೂ ಒಟ್ಟು ಕೂಡಿದ ವೆಚ್ಚಗಳು ೫.೩೨%ರಲ್ಲಿ ಏರುತ್ತಿವೆ. ಅಭಿವೃದ್ಧಿಯ ಹಾಗೂ ಅಭಿವೃದ್ಧಿಯೇತರ ವೆಚ್ಚಗಳು ಅನುಕ್ರಮವಾಗಿ ೫.೬೩% ಮತ್ತು ೪.೬೩%ರಲ್ಲಿ ಏರುತ್ತಿವೆ.

ರಾಜ್ಯ ಸ್ವಂತ ತೆರಿಗೆಯ ಆದಾಯವು ಕೇಂದ್ರ ತೆರಿಗೆಯ ಪಾಲಿಗಿಂತ ಹೆಚ್ಚಿನ ದರದಲ್ಲಿ ಏರುತ್ತಿದೆ ಎಂಬುದನ್ನು ಗಮನಿಸಬಹುದು. ಹಾಗೂ ಬಂಡವಾಳ ರಸೀದಿಗಳು ಆದಾಯ ರಸೀದಿಗಳಿಗಿಂತ ಕಡಿಮೆ ದರದಲ್ಲಿ ಏರುತ್ತಿವೆ. ತೆರಿಗೆಯೇತರ

ರಶೀದಿಗಳು ನಿಧಾನ ದರದಲ್ಲಿ ಏರುತ್ತಿವೆ. ರಾಜ್ಯದ ಒಟ್ಟು ರಶೀದಿಗಳು ರಾಜ್ಯದ ನಿವ್ವಳ ಆಂತರಿಕ ಉತ್ಪಾದನೆಗಿಂತ ಸ್ವಲ್ಪ ಹೆಚ್ಚಿನ ದರದಲ್ಲಿ ಏರುತ್ತಿವೆ. ಆದರೆ ತೆರಿಗೆಯೇತರ ರಶೀದಿಗಳು ಮೇಲಿನದಕ್ಕಿಂತ ಕಡಿಮೆ ದರದಲ್ಲಿ ಏರುತ್ತಿವೆ.

### ಅಭಿವೃದ್ಧಿಯ ವೆಚ್ಚಗಳು

ಅಭಿವೃದ್ಧಿಯ ವೆಚ್ಚಗಳು ನಿವ್ವಳ ರಾಜ್ಯ ಆಂತರಿಕ ಉತ್ಪಾದನೆಯ ದರಕ್ಕಿಂತ ಸ್ವಲ್ಪ ಮಟ್ಟಿನ ಹೆಚ್ಚಿನ ದರದಲ್ಲಿ ಏರುತ್ತಿದೆ. ತೆರಿಗೇತರ ಪಾವತಿಗೆ ಸಂಬಂಧಿಸಿದ ರಾಜ್ಯದ ನಿರ್ಬಲತೆಯು ಗಮನ ಸೆಳೆಯುವಂತಹುದು. ವಿದ್ಯುತ್, ನೀರು ಮತ್ತು ಸಾರಿಗೆ ಸೇವೆಗಳ ಮಾರಾಟದ ಮೇಲೆ ರಾಜ್ಯ ಸರ್ಕಾರವು ಸರಿಯಾದ ಹಾಗೂ ಪ್ರತಿಫಲ ಬರಬಹುದಾದ ಸುಂಕವನ್ನು ವಿಧಿಸಲಾಗಿಲ್ಲ. ರಾಜ್ಯವು ಕೈಗೊಂಡ ಹಲವಾರು ಉದ್ದಿಮೆಗಳು ನಷ್ಟದಲ್ಲಿ ನಡೆಯುತ್ತಿವೆ. ಉದ್ದಿಮೆಗಳ ಒಡೆತನ ಮತ್ತು ನಿರ್ವಹಣೆಯನ್ನು ಗಮನಾರ್ಹವಾಗಿ ಖಾಸಗಿಗೊಳಿಸಲು ಸಾಧ್ಯವಾಗಿಲ್ಲ.

ರಾಜ್ಯ ಮುಂಗಡ ಪತ್ರದ ಆರ್ಥಿಕ ವಿಂಗಡನೆಯಲ್ಲಿನ ರೀತಿಯ ಬಗ್ಗೆ ಕೈಗೊಂಡ ಅಧ್ಯಯನವು ಕೆಲವು ತೊಂದರೆ ಕೊಡುವ ಸ್ವಭಾವಗಳನ್ನು ತೋರಿಸಿದೆ. ವಾಸ್ತವವಾಗಿ ಬಳಕೆಯ ವೆಚ್ಚವು ೧.೩೩%ರಲ್ಲಿ ಏರುತ್ತಿದ್ದರೆ, ಒಟ್ಟಾರೆ ಬಂಡವಾಳ ಸಂಚಯವು -೦.೪೪%ರಲ್ಲಿ ಕುಸಿಯುತ್ತಿದೆ. ರಾಜ್ಯದ ಸ್ವತ್ತುಗಳ ಒಟ್ಟುಗೂಡಿಸುವಿಕೆಯು ಸಹಾ -೬.೧೪%ರಲ್ಲಿ ಕುಸಿಯುತ್ತಿದೆ. ಸರ್ಕಾರದ ಪರವಾಗಿ ಬಂಡವಾಳದ ಒಟ್ಟು ಸಂಚಯವು ೦.೭೦%ಕ್ಕಿಂತ ಕಡಿಮೆ ದರದಲ್ಲಿ ಏರುತ್ತಿದೆ. ಚಾಲ್ತಿ ವರ್ಗಾವಣೆಗಳು ಹೆದರಿಕೆ ಹುಟ್ಟಿಸುವ ೧೭.೩೭%ರ ಏರಿದ ದರದಲ್ಲಿ ಬೆಳೆಯುತ್ತಿದೆಯಾದರೆ ಬಂಡವಾಳ ವರ್ಗಾವಣೆಯು -೫.೦೩%ರಲ್ಲಿ ಕುಸಿಯುತ್ತಿದೆ. ಉಳಿದ ಆರ್ಥಿಕತೆಗೆ ಹಣಕಾಸಿನ ಸಹಾಯವು ೨.೯%ರಲ್ಲಿ ಏರುತ್ತಿದೆ. ಒಟ್ಟು ಬಂಡವಾಳ ಸಂಚಯವು -೦.೪೧%ರಲ್ಲಿ ಕುಸಿಯುತ್ತಿದೆ.

### ಫಲಿತಾಂಶ

ಮುಂಗಡ ಪತ್ರದ ಗತಿಯ ಬಗ್ಗೆ ಕೆಲವೊಂದು ವಿಸ್ತಾರವಾದ ನಿರ್ಧಾರಗಳು ಸ್ಪಷ್ಟವಾಗುತ್ತವೆ.

೧. ನೈಜ ಬಂಡವಾಳ ಸಂಚಯವೂ ವಾಸ್ತವಿಕವಾಗಿ ಕುಸಿಯುತ್ತಿದೆ. ಆದರೆ ಆದಾಯ ಮತ್ತು ವರ್ಗಾವಣೆಯ ವೆಚ್ಚವು ಅಧಿಕ ದರದಲ್ಲಿ ಏರುತ್ತಿದೆ.
೨. ತೆರಿಗೆರಹಿತ ಆದಾಯದ ಬೆಳವಣಿಗೆಯ ದರವು ರಾಜ್ಯದ ಸ್ವಂತ ತೆರಿಗೆ ಆದಾಯ ಬೆಳವಣಿಗೆ ದರದ ಅರ್ಧಕ್ಕಿಂತಲೂ ಕಡಿಮೆಯಾಗಿರುತ್ತದೆ.

ಈ ಮೇಲಿನ ಅಂಶಗಳಿಂದ ತಿಳಿದುಬರುವುದೇನೆಂದರೆ ರಾಜ್ಯ ಸರ್ಕಾರದ ಮುಂಗಡ ಪತ್ರದ ಕೊಡುಗೆಯು ನಿಜವಾದ ಆಸ್ತಿಯ ಬೆಳವಣಿಗೆಗೆ

ನಕಾರಾತ್ಮವಾಗಿರುತ್ತದೆ. ಆದರೆ ಪ್ರತ್ಯಕ್ಷ ಮತ್ತು ಪರೋಕ್ಷ ಉಪಯೋಗದ ವೆಚ್ಚವು ಕರ್ನಾಟಕ ಸರ್ಕಾರದ ವತಿಯಿಂದ ಬಡ್ತಿ ಪಡೆಯುತ್ತಿವೆ.

**ಭವಿಷ್ಯದ ಬೆಳವಣಿಗೆಯಲ್ಲಿ ಅಡೆ-ತಡೆಗಳು**

ಕರ್ನಾಟಕ ರಾಜ್ಯವು ತರಬೇತಿ ಹೊಂದಿದ ಮತ್ತು ಕುಶಲ ಮಾನವ ಸಂಪನ್ಮೂಲವನ್ನು ಸಾಪೇಕ್ಷವಾಗಿ ಅಗಾಧವಾಗಿ ತಯಾರು ಮಾಡುತ್ತದೆ. ಮುಖ್ಯವಾಗಿ ಇಂಜಿನಿಯರಿಂಗ್, ವೈದ್ಯಕೀಯ, ಕಲೆ ಮತ್ತು ಕಸುಬು ವೃತ್ತಿಗಳಲ್ಲಿ ರಾಜ್ಯದಲ್ಲಿ ಅಗತ್ಯವೆನಿಸುವ ಎಲ್ಲಾ ಪೂರೈಕೆಗಳ ಹರಿವಿನ ಗಮನವಹಿಸುವುದು ಅಸಾಧ್ಯ ಎಂದು ಊಹಿಸಲಾಗಿದೆ. ಸ್ವಾಭಾವಿಕವಾಗಿ ತರಬೇತಿ ಹೊಂದಿದ ಮತ್ತು ಕುಶಲ ಸಿಬ್ಬಂದಿ ರಾಜ್ಯದಿಂದ ನಿರಂತರ ಹೊರ ಹರಿಯುತ್ತಾ ಇರುವುದು. ಆದರೆ, ವಿದ್ಯಾಭ್ಯಾಸ ಮತ್ತು ತರಬೇತಿಯ ಗುಣಮಟ್ಟವು ಕೂಡ ನಿರಂತರವಾಗಿ ಕೆಳಮಟ್ಟಕ್ಕೆ ಇಳಿದುಬರುತ್ತದೆ ಎಂಬ ಭಾವನೆಯಿದೆ. ಆದರೂ ಕರ್ನಾಟಕದ ಅಭಿವೃದ್ಧಿ ಕೆಲಸಗಳಲ್ಲಿ ಅಗತ್ಯ ಬರುವ ಕುಶಲ ಮತ್ತು ತರಬೇತಿ ಹೊಂದಿರತಕ್ಕ ಮಾನವ ಸಂಪನ್ಮೂಲಗಳಿಗೆ ಕೊರತೆ ಇಲ್ಲ. ಹೀಗಿದ್ದರೂ ಬಂಡವಾಳ ಮತ್ತು ಪ್ರಾಯಶಃ ಅವಧಿ ಹಣಕಾಸಿನ ವಿಪರೀತವಾದ ಕೊರತೆ ಇದೆ. ಈ ಹಿಂದೆ ಉಲ್ಲೇಖ ಮಾಡಿದಂತೆ ಎಲ್ಲಿಯವರೆಗೆ ಶಕ್ತಿಯ ಪೂರೈಕೆಯಲ್ಲಿ ಸುಧಾರಣೆ ಮತ್ತು ಬೇಕಾದಷ್ಟು ಹಾಗೂ ಅಗ್ಗದಲ್ಲಿ ಸಾರಿಗೆ ಸವಲತ್ತುಗಳು ದೊರಯಬಹುದೋ ಅಲ್ಲಿಯ ತನಕ ಭವಿಷ್ಯದ ಕೈಗಾರಿಕಾ ಬೆಳವಣಿಗೆಯು ಆಕಾಂಕ್ಷೆಯ ಮಟ್ಟಕ್ಕೆ ತಲುಪಲಾರದು. ಕೈಗಾರಿಕೆಯು ಉನ್ನತ ದರದಲ್ಲಿ ಬೆಳೆಯುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ಆದರೆ ಇದು ಭವಿಷ್ಯದಲ್ಲಿ ಸ್ಥಿರವಾಗಿ ನಿಲ್ಲುವುದೇ ಎಂಬುದನ್ನು ನೋಡಬೇಕಾಗಿದೆ. ಕರ್ನಾಟಕವು ಹಣಕಾಸಿನ ಸೇವೆಗಳಲ್ಲಿ ಮುಖ್ಯವಾಗಿ ಬ್ಯಾಂಕಿಂಗ್ ವಿಷಯದಲ್ಲಿ ಅನ್ವೇಷಣಾಕಾರಿಯಾಗಿದೆ. ನೋಂದಾವಣೆರಹಿತ ತಯಾರಿಕೆಗಳ ಸಂಬಂಧವಾಗಿ ಹೆಚ್ಚಿನ ಬೆಳವಣಿಗೆಯ ದರವು ಸಣ್ಣ ಪ್ರಮಾಣದ ಉದ್ದಿಮೆಗಳು (ಮತ್ತು ಸೇವೆಗಳು) ಕರ್ನಾಟಕ ರಾಜ್ಯದತ್ತ ಆಕರ್ಷಿತಗೊಳ್ಳುತ್ತಿರುವ ಒಂದು ಸೂಚನೆಯಾಗಿದೆ. ಇತರೆ ಸೇವೆಗಳ ಅಧಿಕ ಬೆಳವಣಿಗೆಯ ದರವು ಮೃದು ಸಾಮಗ್ರಿಗಳ (Software) ಪೂರೈಕೆ ಸೇವೆಗಳ ಅಭಿವೃದ್ಧಿಯ ಸೂಚನೆಯಾಗಿದೆ. ಲಘು ಬಂಡವಾಳವುಳ್ಳ ಅಧಿಕ ಕೌಶಲ್ಯವುಳ್ಳ ಉದ್ದಿಮೆಗಳು ಹಾಗೂ ಸೇವೆಗಳು ಕರ್ನಾಟಕದತ್ತ ಬರುತ್ತಿವೆ. ಆದರೆ, ಈ ಹಿಂದಿನ ವರ್ಷಗಳಲ್ಲಿ ಕರ್ನಾಟಕವು ಅಧಿಕ ಬಂಡವಾಳದ ತಾಂತ್ರಿಕ ಮತ್ತು ಸಂಬಂಧಿತ ಸಾಲಿನಲ್ಲಿರುವ ಸಾರ್ವಜನಿಕ ಉದ್ದಿಮೆಗಳನ್ನು ಕೈಗೊಳ್ಳುವಲ್ಲಿ ಹೆಸರುವಾಸಿಯಾಗಿತ್ತು. ಲಘು ಬಂಡವಾಳದ ಹಾಗೂ ಅಧಿಕ ಕೌಶಲ್ಯಭರಿತ ಚಟುವಟಿಕೆಗಳು ವಿಶೇಷತಃ ವಿದ್ಯುತ್ ಉಪಕರಣ ಮತ್ತು ಸಂಬಂಧಿತ ಸಾಲಿನಲ್ಲಿ ಅಭಿವೃದ್ಧಿಯಾಗಲು ಇದು ಒಂದು ಚಾರಿತ್ರಿಕ ಅಡಿಪಾಯವನ್ನು ಒದಗಿಸಿತು. ಎರಡನೆಯ ಭಾಗದಲ್ಲಿ ತೋರಿಸಿರುವ ಉತ್ಪಾದನೆಗೆ

ಜಾಗತಿಕ ಮಾರುಕಟ್ಟೆ ಇದೆ. ಬೆಂಗಳೂರು ಮತ್ತು ಅಲ್ಲಿನ ವಾತಾವರಣವು ಇಂತಹ ಚಟುವಟಿಕೆಗಳಿಗೆ ಆದರ್ಶಪ್ರಾಯ ಮತ್ತು ಯೋಗ್ಯವೆಂದು ಸಾದರಪಡಿಸುತ್ತಿದೆ. ಆದರ ಸಾರಿಗೆ ಪೂರೈಕೆಯು ಬೃಹತ್ ಆದ ರೀತಿಯಲ್ಲಿ ಸುಧಾರಣೆಗೊಳ್ಳದಿದ್ದರೆ ಮುಂದಿನ ಅಭಿವೃದ್ಧಿಯು ಕಷ್ಟವೆನಿಸುವುದು. ಈ ಕ್ಷೇತ್ರದಲ್ಲಿ ಸರ್ಕಾರಕ್ಕೆ ಸರ್ವವ್ಯಾಪ್ತಿ ಸಾರಿಗೆ ಅಭಿವೃದ್ಧಿಯ ಯೋಜನೆ ಇದೆ. ಇದು ಭವಿಷ್ಯದಲ್ಲಿ ಸಹಕಾರಿಯಾಗಬಹುದು. ಲಘು ಬಂಡವಾಳ ಉದ್ದಿಮೆಗಳು ವಿದ್ಯುಚ್ಛಕ್ತಿಯ ಬಹು ಬೇಡಿಕೆದಾರರಲ್ಲ. ಬಂಧಿತ ವಿದ್ಯುತ್ ಶಕ್ತಿ ಉತ್ಪಾದನೆಯು ಈ ಬೇಡಿಕೆಯನ್ನು ಪೂರೈಸಬಹುದು. ವಿಶೇಷತಃ ಬೆಂಗಳೂರಿನಲ್ಲಿ ಬಹಳಷ್ಟು ವಾಹನಗಳಿದ್ದು ಕಡಿಮೆ ರಸ್ತೆಗಳಿವೆ ಹಾಗೂ ಅಪಘಾತಗಳ ಸಂಖ್ಯೆ ಇಲ್ಲಿ ಅಧಿಕವಾಗಿದೆ. ಸರ್ವವ್ಯಾಪಿ ಸಾರಿಗೆ ಯೋಜನೆ ಆದಷ್ಟು ಬೇಗನೇ ಕೊನೆಗೊಳಿಸುವುದು ತುಂಬಾ ಅವಶ್ಯಕವಾಗಿದೆ. ಇದು ಆದ್ಯತೆಗಳಲ್ಲಿ ಮೊದಲ ಸ್ಥಾನವನ್ನು ಪಡೆಯತಕ್ಕದ್ದು.

**ದೃಷ್ಟಿಕೋನವನ್ನು ಬದಲಾಯಿಸುವುದು**

ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಲಘು ಬಂಡವಾಳ ಚಟುವಟಿಕೆಗಳು ಯಾವ ಮಟ್ಟದ ತನಕ ಕಾರ್ಮಿಕರಿಗಾಗಿ ಬೇಡಿಕೆ ತರುವುದೋ ಅಲ್ಲಿಯ ತನಕ ಸಾರಿಗೆ ಹಾಗೂ ವಸತಿಯ ಮೇಲಿನ ಒತ್ತಡ ಬೆಳೆಯುವುದು ಹಾಗೂ ನೀರಿನ ಪೂರೈಕೆ ಮತ್ತು ಇತರ ಸಾರ್ವಜನಿಕ ಉಪಯುಕ್ತ ಸೇವೆಗಳಿಗೂ ಅಡ್ಡಿ ಉಂಟಾಗುವುದು. ಪ್ರಸಕ್ತ ಆಸ್ತಿಯ ಮೌಲ್ಯದ ದರವು ಕೂಡ ಬೊಂಬಾಯಿಗಿಂತಲೂ ಹೆಚ್ಚಿನ ದರದಲ್ಲಿ ಮೇಲೆರುತ್ತಿವೆ ಹಾಗೂ ಬೆಂಗಳೂರು ಹೆಚ್ಚುಹೆಚ್ಚು ಹೊರಕ್ಕೆ ವಿಸ್ತಾರವಾಗಲು ಒತ್ತಡವಿರುವುದು. ನೀರು ಮತ್ತು ಸಾರಿಗೆ ಅವಕಾಶಗಳನ್ನೊಳಗೊಂಡ ಸಾರ್ವಜನಿಕ ಉಪಯೋಗ ಪೂರೈಕೆಗಳ ಅಡ್ಡಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕರ್ನಾಟಕವು ವಿಶೇಷತಃ ಪಶ್ಚಿಮ ಮತ್ತು ಉತ್ತರ ಭಾಗಗಳಲ್ಲಿ ಬೆಂಗಳೂರಿನಂತಹ ಮಹಾನಗರಗಳನ್ನು ಅಭಿವೃದ್ಧಿಗೊಳಿಸಬೇಕು ಎಂದು ಸಲಹೆ ಮಾಡಲಾಗಿದೆ. ಈ ಯೋಜನೆಯನ್ನು ಗಂಭೀರವಾಗಿ ಪರಿಗಣಿಸಬೇಕು. ಕರ್ನಾಟಕ ರಾಜ್ಯದ ಪಶ್ಚಿಮ ಮತ್ತು ನೈರುತ್ಯ ಭಾಗಗಳಲ್ಲಿ ನೀರು ಪೂರೈಕೆಯಲ್ಲಿ ಅಡೆ-ತಡೆಗಳು ಇಲ್ಲ. ಈ ಭಾಗಗಳಲ್ಲಿ ಜಲ ವಿದ್ಯುತ್ ಸಹ ಅಗ್ಗದಲ್ಲಿ ದೊರೆಯುವುದು. ಎಲ್ಲಾ ರೈಲ್ವೇ ಪಟ್ಟಿಗಳನ್ನು ಬ್ರಾಡ್ ಗೇಜ್‌ಗಳಾಗಿ ಮಾರ್ಪಡಿಸುವುದರಿಂದ ಮತ್ತು ಬೊಂಬಾಯಿ ಮತ್ತು ಉತ್ತರದ ಕೇಂದ್ರಗಳಿಗೆ ರೈಲ್ವೇ ಹಾಗೂ ಇನ್ನಿತರ ಸಂಪರ್ಕ ಜೋಡಣೆಯ ಸಾಧ್ಯತೆಗಳೊಂದಿಗೆ ಪಶ್ಚಿಮ ಹಾಗೂ ನೈರುತ್ಯ ಪ್ರದೇಶಗಳ ಬೆಳವಣಿಗೆಗೆ ಅಪಾರವಾದ ಅವಕಾಶವಿದೆ. ಇಂತಹ ಅಭಿವೃದ್ಧಿಯು ನೈರುತ್ಯದ ಒಣಪ್ರದೇಶದ ಜನರಿಗೆ ಉದ್ಯೋಗ ಅವಕಾಶವನ್ನು ನೀಡಲು ಸಾಧ್ಯವಿದೆ. ಪಶ್ಚಿಮ ಕರಾವಳಿಯಲ್ಲಿ ಮಳೆಗಾಲದಿಂದ ಉಂಟಾಗುವ ಅನೇಕ ಜಲಪಾತಗಳಿಂದ ಕೆಲವು ತಿಂಗಳಿಗಾದರೂ ಶಕ್ತಿಯ ಉತ್ಪಾದನೆ ಸಾಧ್ಯವಿದೆ ಹಾಗೂ ಇತರ ಶಕ್ತಿಯ ಮೂಲಗಳಾದ ಇದ್ದಲಿನ ಮೂಲಕ ಪೂರಕ ಶಕ್ತಿಯನ್ನು ಒದಗಿಸಬಹುದು.

## ಉಳಿತಾಯಗಳ ಅವಲಂಬನೆ

ಮುಂದಕ್ಕೆ, ಕರ್ನಾಟಕದಲ್ಲಿ ಉದ್ದಿಮೆ ಮತ್ತು ಅದರ ಪೂರಕ ಸೌಲಭ್ಯಗಳಿಗೆ ಬಂಡವಾಳದ ಬೃಹತ್ ಒಳ ಹರಿವಿನ ಅಗತ್ಯ ಇದೆ. ಕರ್ನಾಟಕದ ಉಳಿತಾಯ ಇದಕ್ಕೆ ಸಾಕಾಗಲಾರದು. ಮುಖ್ಯವಾಗಿ ರಾಜ್ಯ ಸರ್ಕಾರದ ಕೇಂದ್ರಗಳು ಮಿಗತೆ ಹಣ ಉತ್ಪಾದಿಸುತ್ತ ಹೊರಗಿನ ಬಂಡವಾಳ ಮೂಲಗಳು ಹಾಗೂ ಕೆಲವು ವಿಧದ ತರಬೇತಿ ಹೊಂದಿದ ಮತ್ತು ಕೌಶಲ್ಯವಿರುವ ಕಾರ್ಮಿಕರ ಅವಲಂಬನೆ ಇರುವುದು. ಅಂತಹ ಒಳ ಅರಿವುಗಳನ್ನು ತಾಳಿಕೊಳ್ಳುವ ಉದಾರ ವಾತಾವರಣದ ಅಗತ್ಯತೆಯು ಇಂತಹ ಅಭಿವೃದ್ಧಿಗೆ ಖಂಡಿತವಾಗಿಯೂ ಇದೆ.

## ಕೃಷಿ ಕ್ಷೇತ್ರದಲ್ಲಿ ಅಡೆ ತಡೆಗಳು

ಮುಂದಿನ ಅಭಿವೃದ್ಧಿಗಳಿಗೆ ಕರ್ನಾಟಕವು ಪ್ರಾಥಮಿಕವಾಗಿ ಕೈಗಾರಿಕೆಗೆ ಮತ್ತು ತೃತೀಯ ವಲಯಗಳನ್ನು ಚಾಲನೆಯ ಬಂಡಿಯಾಗಿ ಅವಲಂಬಿಸುವುದು ಸರಿಯಲ್ಲ. ಕರ್ನಾಟಕದಲ್ಲಿ ಕೃಷಿಯ ಇಳುವರಿಯನ್ನು ಅಭಿವೃದ್ಧಿಗೊಳಿಸಲು ಹೆಚ್ಚಿನ ಗಮನವನ್ನು ನೀಡಬೇಕು. ನೀರಿನ ಪೂರೈಕೆಯಲ್ಲಿ ಅಡ್ಡಿಗಳನ್ನು ತೊಲಗಿಸುವುದು ಒಂದು ಹೆಜ್ಜೆಯಾಗಿದೆ. ಆದರೆ ಇನ್ನು ಹಲವಾರು ಮುಖ್ಯವಾದ ಪೂರಕ ಹೆಜ್ಜೆಗಳು ಅಗತ್ಯ ಇದೆ. ಮೊದಲೇ ಹೇಳಿದಂತೆ, ದೊಡ್ಡ ಪ್ರಮಾಣದ ತೋಟಗಳ ಮೇಲೆ ಅವಲಂಬಿತವಾಗಿರುವುದು ಸೂಕ್ತವಲ್ಲ. ಏಕೆಂದರೆ ಇದು ಸ್ಥಳೀಯ ಕಾರ್ಮಿಕರನ್ನು ಆಗಾಧ ಪ್ರಮಾಣದಲ್ಲಿ ಸ್ಥಳಾಂತರಗೊಳಿಸುವುದು. ನೈಜವಾದ ಮತ್ತು ಫಲವತ್ತಾದ ಕೃಷಿ ಭೂಮಿಯನ್ನು ಅತೀ ವೇಗವಾಗಿ ನಗರ ನಿವೇಶನಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಪರಿವರ್ತನೆಗೊಳ್ಳುತ್ತಿರುವ ಕೃಷಿ ಯೋಗ್ಯ ಭೂಮಿಗಳು, ಈ ಸೌಲಭ್ಯ ಸ್ಥಳಾವಕಾಶವು ಒಂದು ಆರೋಗ್ಯಕರ ಪರಿಪಾಠವಲ್ಲ. ಮುಂದಕ್ಕೆ ಇದು ಸಣ್ಣ ರೈತರಲ್ಲಿ ಕೃಷಿ ಕೂಲಿ ಕಾರ್ಮಿಕರ ತತ್ಸಂಬಧಿ ಸ್ಥಾನವನ್ನು ಕುಗ್ಗಿಸುವುದು. ಒಂದು ಭಾವನೆಯೇನೆಂದರೆ ಕರ್ನಾಟಕವು ಕೃಷಿಯ ತೀವ್ರವಾದ ಅಭಿವೃದ್ಧಿಗೆ ತಾಂತ್ರಿಕ ಹಾಗೂ ಸಾಂಸ್ಥಿಕ ಅಡಿಪಾಯವನ್ನು ಗಂಭೀರವಾಗಿ ಇಲ್ಲಿಯತನಕ ಹಾಕಿಲ್ಲ. ಇದೊಂದು ಮಾರ್ಗದಿಂದ ಕೃಷಿ ಕ್ಷೇತ್ರದಲ್ಲಿ ಆದಾಯವನ್ನು ಹೆಚ್ಚಿಸಬಹುದು ಮತ್ತು ಮೂರು ಮೂಲಗಳಿಂದ ಉದ್ಯೋಗವನ್ನು ಒದಗಿಸಬಹುದು. ಕೈಗಾರಿಕೆ ಮತ್ತು ಇತರ ಸೇವೆಯನ್ನು ಕಡೆಗಾಣಿಸದೆ ನಿರ್ದಿಷ್ಟವಾದ ಆದ್ಯತೆಯ ಉದ್ದೇಶವನ್ನು ಇಟ್ಟುಕೊಂಡು ಕೃಷಿ ಅಭಿವೃದ್ಧಿಗೆ ಪೂರಕವಾಗಿ ದೀರ್ಘಾವಧಿ ಯೋಜನೆಯನ್ನು ನಿರೂಪಿಸುವ ಅವಶ್ಯಕತೆ ಇದೆ. ನನ್ನ ದೃಷ್ಟಿಯಲ್ಲಿ ಕೈಗಾರಿಕೆ ಮತ್ತು ಸೇವೆಗಳ ಅಭಿವೃದ್ಧಿಯು ಕೃಷಿಯ ಮೇಲೆ ಹಿಂದಕ್ಕೆ ಸೂಚಿಸುವ ಪ್ರಭಾವಗಳು ಹೆಚ್ಚೇನೂ ಇರಲಾರದು, ಬಹುಶಃ ಏನು ಇರಲಾರದು. ಇದರ ಅರ್ಥ ಕರ್ನಾಟಕವು ಸುಧಾರಣೆಯ ಕೃಷಿ, ವಾಣಿಜ್ಯ ಮತ್ತು ಉದ್ದಿಮೆಗಳ ಅಭಿವೃದ್ಧಿಗೆ ಹಾಕಿಕೊಂಡಿರುವ ಯೋಜನೆಗಳಿಗೆ ಸಮಾನಾಂತರವಾಗಿ ಶೀಘ್ರ ಹಾಗೂ ಸ್ಥಿರ ಸುಧಾರಣೆಯ ಕೃಷಿ ಉತ್ಪಾದನೆ ಹಾಗೂ ಉತ್ಪಾದಕತೆಯ

ಯೋಜನೆಯನ್ನು ಮಾಡಬೇಕು. ಇಲ್ಲಿ ಸರ್ಕಾರದ ಮುಖ್ಯವಾದ ಪಾತ್ರ ಇದೆ. ಆದರೆ ಈ ಪರಿಸ್ಥಿತಿಯು ಅವರ ಸಂಪೂರ್ಣ ಹಿಡಿತದೊಳಗೆ ಇನ್ನೂ ಬಂದಿಲ್ಲ.

## ತಾತ್ಕಾಲಿಕ ಅವಲೋಕನ

ಕರ್ನಾಟಕದ ಬೆಳವಣಿಗೆಯ ಬಗ್ಗೆ ಒಂದು ವಿವರವಾದ ಮತ್ತು ಉತ್ತಮವಾದ ವಿಶ್ಲೇಷಣೆಯ ಅಗತ್ಯ ಇದೆ. ನಾನು ಕೇವಲ ಅಂತಹ ಒಂದು ಅಧ್ಯಯನದ ಮಾರ್ಗದರ್ಶನವನ್ನು ಸೂಚಿಸಿದ್ದೇನೆ. ಕರ್ನಾಟಕದ ಆರ್ಥಿಕತೆಯ ಮೇಲೆ ಆಸಕ್ತಿ ಇರುವ ಕರ್ನಾಟಕದ ಆಡಳಿತಗಾರರು ಮತ್ತು ಚಿಂತನಶೀಲರಿಗೆ ಸಂಪೂರ್ಣವಾದ ಒಟ್ಟಾರೆ ಚೌಕಟ್ಟಿನ ಒಳಗೆ ವಿವರವಾದ ವಲಯಗಳಿಗೆ, ಆರ್ಥಿಕಮಾಪನ ಹಾಗೂ ಕಾಲ್ಪನಿಕ ದೃಷ್ಟಿಕೋನದ ಸಂಶೋಧಕರಿಗೆ ಇದು ಸೂಕ್ತ ಸಮಯವಾಗಿದೆ. ಆರ್ಥಿಕ ವಿಶ್ಲೇಷಣೆಯ ರೀತಿಯು ಬದಲಾಗಿದೆ. ಇದರಿಂದ ನಾವು ಲಾಭಗಳಿಸಬೇಕು. ಈ ಹಿಂದಿನ ಸಾಧನೆಯ ರೀತಿಯನ್ನು ನಾವು ಒಟ್ಟಿಗೆ ಎಂದು ತೆಗೆದುಕೊಳ್ಳಲಾರೆವು. ರಾಜ್ಯದ ಆರ್ಥಿಕತೆಗೆ ಹೋಲಿಸಿದಾಗ ಕೈಗಾರಿಕೆ ಮತ್ತು ಹಣಕಾಸಿನ ವಿಷಯದಲ್ಲಿ ಕರ್ನಾಟಕದ ಸಾಧನೆಯು ಉತ್ತಮವಿರುವಂತೆ ಕಾಣುತ್ತದೆ. ಆದರೆ ಕೃಷಿಗೆ ಸಂಬಂಧಿಸಿದಂತೆ ಕರ್ನಾಟಕದ ಸಾಧನೆಯು ಇನ್ನು ಸಾಕಷ್ಟು ಅಳಿಸುವ ಮಟ್ಟದಲ್ಲಿದೆ. ಈ ಹಿಂದಿನ ವಿಷಯಕ್ಕೆ ಸಂಬಂಧಿಸಿದಂತೆ ಮುಂದಕ್ಕೆ ಸಾಕಷ್ಟು ಸಮಸ್ಯೆಗಳಿವೆ. ಏಕೆಂದರೆ, ಈ ಹಿಂದೆಗಿಂತಲೂ ಬಹು ಗಂಭೀರವಾದ ಸ್ಪರ್ಧೆಯನ್ನು ಕರ್ನಾಟಕವು ಇತರ ರಾಜ್ಯಗಳಿಂದ ಎದುರಿಸಬೇಕಾಗಬಹುದು. ಈ ನಿಟ್ಟಿನಲ್ಲಿ ಕರ್ನಾಟಕವು ಹೊರಗಿನ ದೃಷ್ಟಿಕೋನವನ್ನು ಇಡತಕ್ಕದ್ದು, ಸಂಪೂರ್ಣ ಆಂತರಿಕ ದೃಷ್ಟಿಕೋನವು ಸಹಕಾರಿಯಾಗಲಾರದು. ರಾಜ್ಯದಲ್ಲಿ ಅತೀ ತುರ್ತು ರಾಜಕೀಯ ಒಮ್ಮತದ ಅಗತ್ಯತೆ ಇದೆ. ಇದು ಇಲ್ಲದೆ ಹೋದರೆ ರಾಜ್ಯವು ಅಸಂಖ್ಯ ಸಂಘರ್ಷಗಳನ್ನು ಎದುರಿಸಬೇಕಾಗಬಹುದು. ಪಶ್ಚಿಮ ಬಂಗಾಳ, ಮಹಾರಾಷ್ಟ್ರ ಮತ್ತು ಗುಜರಾತಿನ ಅನುಭವದಿಂದ ಅವಲೋಕಿಸಿರುವಂತೆ ಸಂಘಟನೆಯ ವಿಷಯಗಳಲ್ಲಿ ಕೊಡು ಮತ್ತು ಕೊಳ್ಳುವಿಕೆಯ ಒಂದು ಸಮದರ್ಶಿತ್ವ ದೃಷ್ಟಿಕೋನವು ಬಹಳ ಅಗತ್ಯ ಇದೆ. ಆದರೆ ಇದು ರಾಜಕೀಯವಾಗಿ ಪ್ರಸ್ತುತ ಕರ್ನಾಟಕದಲ್ಲಿ ಕಷ್ಟಕರವಾಗಿದೆ.

ಅನು: ಬಿ. ವಿಜಯಕುಮಾರ್

ಸಿ.ಕೆ. ಶ್ಯಾಮಲ

# ಕರ್ನಾಟಕದಲ್ಲಿ ಮಾನವಸಂಪನ್ಮೂಲಾಭಿವೃದ್ಧಿ : ಒಂದು ಸಮೀಕ್ಷೆ

ಉಷಾ ರಾಮ್‌ಕುಮಾರ್

**ಪ್ರಸ್ತಾವನೆ**

ಆದಿಕಾಲದಿಂದಲೂ ಮಾನವ ತನ್ನ ಅಭಿವೃದ್ಧಿಗಾಗಿ ವೃತ್ತಿಯನ್ನು ಅವಲಂಬಿಸುತ್ತಾ ಬಂದಿರುವನು. ಅದನ್ನು ನುರಿತ ರೀತಿಯಲ್ಲಿ ಮಾಡಲು ಶಿಕ್ಷಣ ಮತ್ತು ತರಬೇತಿ ಪಡೆಯುತ್ತಾನೆ. ಇದರಿಂದಾಗಿ ಮಾನವನು ತನ್ನ ಸಾಮರ್ಥ್ಯಗಳನ್ನರಿತು ಅವುಗಳನ್ನು ತನ್ನ ಅಭ್ಯುದಯ ಅಥವಾ ವಿಕಾಸಕ್ಕಾಗಿ ಉಪಯೋಗಿಸುವುದಲ್ಲದೇ ತಾನು ಉದ್ಯೋಗ ಮಾಡುತ್ತಿರುವ ಸಂಸ್ಥೆಯ ಬೆಳವಣಿಗೆಗೆ ಅನುಕೂಲ ಮಾಡುತ್ತಾನೆ. ಪ್ರತಿ ಮಾನವನು ಈ ರೀತಿ ತನ್ನ ಕೆಲಸ/ವೃತ್ತಿ/ಉದ್ದಿಮೆಯನ್ನು ನುರಿತಂತೆ ಮಾಡಲು ಬೇಕಾದ ಸಾಮರ್ಥ್ಯಗಳ ಬೆಳವಣಿಗೆಗೆ "ಮಾನವ ಸಂಪನ್ಮೂಲಾಭಿವೃದ್ಧಿ" ಎನ್ನುತ್ತಾರೆ. ತಾನು ಮಾಡುವ ವೃತ್ತಿ/ಉದ್ದಿಮೆಯನ್ನು ಪರಿಣಿತ ರೀತಿಯಲ್ಲಿ ಮಾಡಲು ಬೇಕಾದ ಶಿಕ್ಷಣ ಮತ್ತು ತರಬೇತಿ ಪಡೆಯುವುದಕ್ಕೆ "ವಿಕಾಸ" ಎನ್ನುತ್ತಾರೆ.

ಮಾನವನಲ್ಲಿನ ಅಪರಿಮಿತ ಅಂತಸ್ಥ ಸಾಮರ್ಥ್ಯಗಳನ್ನು ಸೂಕ್ತ ವಾತಾವರಣ ನಿರ್ಮಿಸುವುದರಿಂದಾಗಿ ಹೊರ ಬರುವಂತೆ ಮಾಡಿ ಇವುಗಳನ್ನು ಪೋಷಿಸಿ, ಉಪಯುಕ್ತವಾಗುವಂತೆ ಮಾಡುವುದೇ ಮಾನವ ಸಂಪನ್ಮೂಲಾಭಿವೃದ್ಧಿಯ ಪದ್ಧತಿ. ನಿಶ್ಚಿತ ಕಾಲದಲ್ಲಿ ವೃತ್ತಿ/ಉದ್ದಿಮೆಯಲ್ಲಿ ಪರಿಣತಿ ಪಡೆದು ಅದರ ಉಪಯೋಗವನ್ನು ಸ್ವಂತ ಬೆಳವಣಿಗೆಗೆ ಮತ್ತು ಸಂಸ್ಥೆಯ ಅಭ್ಯುದಯಕ್ಕೆ ಉಪಯೋಗಪಡಿಸುವುದಕ್ಕೆ ಮಾನವ ಸಂಪನ್ಮೂಲಾಭಿವೃದ್ಧಿ ಎಂದು ಹೆಸರು. (ನಾಡ್ಲೆರ್ ೧೯೮೪).

ಮಾನವ ಸಂಪನ್ಮೂಲಾಭಿವೃದ್ಧಿಯಿಂದಾಗುವ ಪ್ರಯೋಜನಗಳು ಅನೇಕ. ಅವುಗಳಲ್ಲಿ ಪ್ರಮುಖವಾದುದು ಪ್ರತಿ ಮಾನವನೂ ತನ್ನ ಸ್ಥಾನವನ್ನು ಇತರರೊಂದಿಗೆ ಹೋಲಿಸುವುದು ಮತ್ತು ತನ್ನಲ್ಲಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ನೈಪುಣ್ಯತೆಯನ್ನು ಅರಿತು ಅವುಗಳಿಂದಾಗಿ ಸ್ವಂತ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳುವುದು. ರಾಷ್ಟ್ರ ಅಥವಾ ರಾಜ್ಯವು ತನ್ನಲ್ಲಿರುವ ಆಂತರಿಕ ನೈಪುಣ್ಯತೆಯನ್ನು ಗುರುತಿಸಿ

ಅವುಗಳ ಬೆಳವಣಿಗೆಗೆ ಬೇಕಾದಂತಹ ಚಟುವಟಿಕೆಗಳಾಗಲಿ ಕಾರ್ಯಕ್ರಮಗಳನ್ನಾಗಲಿ ಏರ್ಪಡಿಸುವುದರಿಂದ ತನ್ನ ಆರ್ಥಿಕ ಮತ್ತು ಸಾಮಾಜಿಕ ಸ್ಥರವನ್ನು ವೃದ್ಧಿಗೊಳಿಸಬಹುದು.

ಮಾನವ ಸಂಪನ್ಮೂಲಾಭಿವೃದ್ಧಿಯ ಪ್ರಮುಖ ಆಕರಗಳು ಆರ್ಥಿಕ, ಸಾಮಾಜಿಕ ಮತ್ತು ಅಭಿವೃದ್ಧಿಯೇತರ ಕಾರ್ಯಕ್ರಮಗಳು. ಶಿಕ್ಷಣ ಮತ್ತು ಶಿಕ್ಷಣೋತ್ತರ ಕಾರ್ಯಕ್ರಮಗಳಿಗೆ ಆದ್ಯತೆ ನೀಡುವುದರಿಂದಾಗಿ ವ್ಯಕ್ತಿಯ ಬೆಳವಣಿಗೆಗೆ, ಸಂಸ್ಥೆಯ ಬೆಳವಣಿಗೆಗೆ, ರಾಜ್ಯ ಮತ್ತು ರಾಷ್ಟ್ರಗಳ ಬೆಳವಣಿಗೆಗೆ ಅನುಕೂಲವಾಗುತ್ತದೆ. ಈ ರೀತಿ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಗಳ ವಿಸ್ತರಣೆ ಆಗಲು ಶಿಕ್ಷಣವನ್ನೇ ಕೇಂದ್ರವನ್ನಾಗಿಟ್ಟುಕೊಂಡ ಕಾರ್ಯಕ್ರಮಗಳನ್ನು ಏರ್ಪಡಿಸುವುದರಿಂದ ಮಾನವ ಸಂಪನ್ಮೂಲಾಭಿವೃದ್ಧಿ ಯಶಸ್ವಿಯಾಗುತ್ತದೆ ಎನ್ನುವುದು ತಜ್ಞರ ಅಭಿಪ್ರಾಯ.

ಕರ್ನಾಟಕ ರಾಜ್ಯದಲ್ಲಿ ಮಾನವ ಸಂಪನ್ಮೂಲಾಭಿವೃದ್ಧಿಯ ಬಗ್ಗೆ ಸಮೀಕ್ಷೆ ನಡೆಸುವುದೇ ಈ ಲೇಖನದ ಉದ್ದೇಶ. ಕರ್ನಾಟಕದಲ್ಲಿ ಶಿಕ್ಷಣದ ಪ್ರಗತಿಯನ್ನು ಸಹ ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ. ೧೯೫೦ರಲ್ಲಿ ಏಕೀಕರಣದ ನಂತರ ಶಿಕ್ಷಣದಲ್ಲಿ ಗಮನಾರ್ಹವಾದ ಬದಲಾವಣೆಯನ್ನೂ, ಬೆಳವಣಿಗೆ ಮತ್ತು ಪ್ರಗತಿಯನ್ನು ಕಾಣಬಹುದು. ಶಿಕ್ಷಣದ ಪ್ರತಿ ಹಂತದಲ್ಲೂ ಸಾಧನೆಯು ಕಂಡುಬಂದಿತು. ಇದಕ್ಕೆ ಪೂರಕವಾದ ೬ ಕಮೀಷನ್ ಮತ್ತು ೧೨ ಕಮಿಟಿಗಳನ್ನು ರಚಿಸಲಾಗಿತ್ತು. ಅವುಗಳ ಸಲಹೆಗಳ ಮೇರೆಗೆ ಕೆಲವು ಬದಲಾವಣೆಗಳನ್ನು ಜಾರಿಗೆ ತರಲಾಯಿತು. ರಾಷ್ಟ್ರೀಯ ಶಿಕ್ಷಣದ ನಿಯಮಗಳಲ್ಲಿನ ಆದೇಶಗಳಂತೆ (೧೯೪೮, ೧೯೬೪-೬೮, ೧೯೭೭, ೧೯೯೦) ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳನ್ನೂ ಮಾಡಲಾಗಿದ್ದು, ಅವು ಮಾನವ ಸಂಪನ್ಮೂಲಾಭಿವೃದ್ಧಿಯಾಗಲು ಪೂರಕವಾಗಿವೆ. ಪಂಚವಾರ್ಷಿಕ ಯೋಜನೆಗಳಲ್ಲೂ ಶಿಕ್ಷಣಕ್ಕೆ, ಅದರಲ್ಲೂ ಉನ್ನತ ಶಿಕ್ಷಣ ಮತ್ತು ಪ್ರಾಥಮಿಕ ಶಿಕ್ಷಣಕ್ಕೆ, ಕ್ರಮವಾಗಿ ಆದ್ಯತೆ ನೀಡಲಾಗಿದ್ದು ಸಾಕಷ್ಟು ಪ್ರಗತಿಯನ್ನು ಸಾಧಿಸಲಾಗಿದೆ. ಇದರ ವಿವರಣೆಯನ್ನು ಹಂತ ಹಂತವಾಗಿ ವಿವರಿಸಲಾಗಿದೆ.

**ಪೂರ್ವ ಪ್ರಾಥಮಿಕ ಶಿಕ್ಷಣ**

ಶ್ರೀಯುತ ಗೋಪಾಲಸ್ವಾಮಿಯವರಿಂದ ಪ್ರಾರಂಭವಾದ ನರ್ಸರಿ ಶಾಲೆಯು ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ಬುನಾದಿಯಾಗಿದ್ದಿತು. ವಿವಿಧ ರೀತಿಯ ಪೂರ್ವ ಪ್ರಾಥಮಿಕ ಶಿಕ್ಷಣವು ವಿವಿಧ ಕೇಂದ್ರಗಳಿಂದ/ವಿವಿಧ ಸಂಘ ಸಂಸ್ಥೆಗಳಿಂದ ನಡೆಸಲ್ಪಟ್ಟು ಹೆಚ್ಚು ವಿಸ್ತೃತವಾಗಿದೆ.

೧೯೬೭ರಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿರುವ ಸಮಸ್ಯೆಗಳ ಬಗ್ಗೆ ಸಮೀಕ್ಷೆ ನಡೆಸಿ ಶ್ರೀಯುತ ಜೆ.ಬಿ. ಮಲ್ಲಾರಾಧ್ಯ ವರದಿ ಹೆಚ್ಚು ಬೆಳಕು ಚೆಲ್ಲಿ ಸಲಹೆಗಳನ್ನೂ

ನೀಡಿ, ಅದರ ಆದೇಶದಂತೆ ಶಿಕ್ಷಕರ ತರಬೇತಿ, ಪೂರ್ವ ಪ್ರಾಥಮಿಕ ಶಿಕ್ಷಣ ನೀಡುವ ಶಾಲೆಗಳಲ್ಲಿನ ಸೌಲಭ್ಯಗಳನ್ನು ಹೆಚ್ಚಿಸಲಾಯಿತು.

೧೯೫೬-೫೭ರಿಂದ ೧೯೭೧ರವರೆಗೆ ಪೂರ್ವ ಪ್ರಾಥಮಿಕ ಶಿಕ್ಷಣವು ಖಾಸಗಿ ಸಂಸ್ಥೆಗಳಿಂದ ನಡೆಸಲಾಗುತ್ತಿದ್ದು ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಿದ್ದಿತು. ಐದನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಈ ವಿಧದ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಲಾರಂಭವಾಗಿ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ಸಮಾಜ ಕಲ್ಯಾಣ ಇಲಾಖೆ ಮತ್ತು ಶಿಕ್ಷಣ ಇಲಾಖೆಗಳು ಅಂಗನವಾಡಿ, ಬಾಲವಾಡಿ, ನರ್ಸರಿ, ಕಿಂಡರ್‌ಗಾರ್ಟನ್ ಮತ್ತು ಬಾಲವಿಕಾಸ ಕೇಂದ್ರಗಳಾಗಿ ನಡೆಸುತ್ತಿದ್ದವು. ಈಗಲೂ ಸಹ ಪೂರ್ವ ಪ್ರಾಥಮಿಕ ಶಿಕ್ಷಣವು ಭಿನ್ನ ಭಿನ್ನ ಹೆಸರುಗಳಿಂದ ಕರೆಯಲ್ಪಟ್ಟರೂ ಸಹ ಅದರ ಅಡಳಿತ ವ್ಯವಸ್ಥೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯವು ಸಹಶಿಕ್ಷಣದ ನಿರ್ದೇಶನದಡಿಯಲ್ಲಿ ಹೆಚ್ಚು ಗಮನ ನೀಡುತ್ತ ಬಂದಿದೆ. ಖಾಸಗೀಕರಣಕ್ಕೆ ಪುಷ್ಟಿ ಕೊಡಲಾಗಿದ್ದು ಇದು ಪ್ರಾಥಮಿಕ ಶಿಕ್ಷಣವ ಪ್ರಮುಖ ಅಂಗವಾಗಿದೆ. ಪೂರ್ವ ಪ್ರಾಥಮಿಕ ಶಿಕ್ಷಣದ ಪ್ರಯೋಜನಗಳ ಬಗ್ಗೆ ಎನ್.ಸಿ.ಇ.ಆರ್.ಟಿ., ನಿಪ್ಸೆಡ್, ರಾಷ್ಟ್ರೀಯ ಮಟ್ಟದಲ್ಲಿರುವ ಸಂಘ ಸಂಸ್ಥೆಗಳು ಮತ್ತು ಸಂಶೋಧಕರು (ಏಲಿ, ರಾಜಲಕ್ಷ್ಮಿ, ಮುರಲೀಧರನ್, ಮೀನಾ ಸ್ವಾಮಿನಾಥನ್ ಮುಂತಾದವರು) ಸಾಕಷ್ಟು ಬೆಳಕು ಚೆಲ್ಲಿದ್ದಾರೆ. ಈ ಸಂಶೋಧನೆಗಳಿಂದ ಕಂಡುಬಂದ ಅಂಶವೆಂದರೆ ಪೂರ್ವ ಪ್ರಾಥಮಿಕ ಶಿಕ್ಷಣದಿಂದಾಗಿ ಮಕ್ಕಳ ಸರ್ವತೋಮುಖ ಬೆಳವಣಿಗೆ ಮತ್ತು ವಿಕಾಸ ಸಾಧ್ಯ ಮಾತ್ರವಲ್ಲದೇ ಮಕ್ಕಳು ಪ್ರಾಥಮಿಕ ಶಾಲೆಯ ಹಂತದಲ್ಲಿ ಶಾಲೆ ಬಿಡುವುದನ್ನು ತಡೆಯಲು ಸಹಾಯಕವಾಗುತ್ತದೆ ಮತ್ತು ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳು ಸಾಕಷ್ಟು ಹೊಂದಾಣಿಕೆಯುಳ್ಳವರಾಗುತ್ತಾರೆ. ಮಕ್ಕಳ ದೈಹಿಕ, ಮಾನಸಿಕ, ಸಾಮಾಜಿಕ ಬೆಳವಣಿಗೆಗೆ ಪೂರ್ವ ಪ್ರಾಥಮಿಕ ಶಿಕ್ಷಣ ಅವಶ್ಯಕವಾಗಿರುವುದರಿಂದಲೇ ಸಮಗ್ರ ಬಾಲವಿಕಾಸ ಯೋಜನೆ (ICDS) ಕಾರ್ಯಕ್ರಮಗಳನ್ನು ನಗರ, ಗ್ರಾಮ ಮತ್ತು ಬುಡಕಟ್ಟು (Tribal) ಪ್ರದೇಶಗಳಲ್ಲಿ ನಡೆಸಲಾಗುತ್ತಿದೆ.

ಇತ್ತೀಚೆಗೆ ನಡೆದ ಸಮಾವೇಶಗಳಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವು ಮಕ್ಕಳ ಶಿಕ್ಷಣದ ಪ್ರಥಮ ಮೈಲುಗಲ್ಲಾಗಿಯೂ ಮತ್ತು ಶಿಕ್ಷಣದ ಕಡ್ಡಾಯ ಅಂಗವಾಗಬೇಕೆಂದು ಸಲಹೆ ನೀಡಲಾಗಿದೆ. ಪೂರ್ವ ಪ್ರಾಥಮಿಕ ಶಿಕ್ಷಣವು ಭಾರತದಲ್ಲಿ ಕಾನೂನು ರೀತಿಯಲ್ಲಿ ಕಡ್ಡಾಯವಾಗಿಸಬೇಕಾದ ಅಂಶವೆಂದು ಗುರುತಿಸಲಾಗಿದೆ. ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿ ಶಿಕ್ಷಕರ ಪಾತ್ರವನ್ನು ಗುರುತಿಸಿ ಅವರುಗಳ ತರಬೇತಿ ಕಾರ್ಯಕ್ರಮಗಳಿಗೆ ಹೆಚ್ಚು ಗಮನ ನೀಡಲಾಗುತ್ತಿದೆ. ಪೂರ್ವ ಪ್ರಾಥಮಿಕ ಶಿಕ್ಷಣದಿಂದಾಗಿ ಶಾಲೆ ಬಿಟ್ಟು ಹೋಗುವವರ ಸಂಖ್ಯೆ ಅದರಲ್ಲೂ ಹೆಣ್ಣುಮಕ್ಕಳು ಕಡಿಮೆಯಾಗಬಹುದೆಂದು ಜನಾಭಿಪ್ರಾಯ. ಪೋಷಕರು (ಹೆಚ್ಚಿನಾಂಶ ನಗರ

ಪ್ರದೇಶಗಳಲ್ಲಿ) ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡುವುದರಿಂದ, ಪ್ರತಿ ಗಲ್ಲಿಯಲ್ಲೂ, ಅಡ್ಡರಸ್ತೆಗಳಲ್ಲೂ, ಪೂರ್ವ ಪ್ರಾಥಮಿಕ ಶಾಲೆಗಳು ತಲೆಯೆತ್ತುತ್ತಿವೆ. ಅದರಲ್ಲೂ ಆಂಗ್ಲ ಮಾಧ್ಯಮವುಳ್ಳ ಪ್ರಾಥಮಿಕ ಶಾಲೆಗಳೊಂದಿಗೂ ಹೊಂದಿರುವ ಪೂರ್ವ ಪ್ರಾಥಮಿಕ ಶಾಲೆಗಳು ಹೆಚ್ಚಿನ ಸಂಖ್ಯೆಯಲ್ಲಿ ತಲೆ ಎತ್ತುತ್ತಿವೆ. ಇವುಗಳ ಬೆಳವಣಿಗೆಗೆ ಮತ್ತೊಂದು ಕಾರಣ ಪೂರ್ವ ಪ್ರಾಥಮಿಕ ಶಿಕ್ಷಣವು ಶಿಕ್ಷಣಾಧಿಕಾರಿಗಳ ಆಡಳಿತಕ್ಕೆ ಬರದಿರುವುದು. ಯಾವುದೇ ವಿಧವಾದ ಆಡಳಿತ/ಹಣಕಾಸಿನ (ಆರ್ಥಿಕ ವ್ಯವಸ್ಥೆಯ) ಬಗ್ಗೆ ಪರಿಶೀಲನೆ, ತಪಾಸಣೆ ನಡೆಸಲಾಗುವ ವ್ಯವಸ್ಥೆ ಇಲ್ಲದಿರುವುದಕ್ಕೆ ಪೂರ್ವ ಪ್ರಾಥಮಿಕ ಶಿಕ್ಷಣ ಈಗ ಧನ ಸಂಪಾದನೆಯ ಆಗರವಾಗಿದೆ. ಇದನ್ನು ತಡೆಯಲು ಮತ್ತು ಶಿಕ್ಷಣದ ಗುಣಮಟ್ಟವನ್ನು ಹೆಚ್ಚುವಂತೆ ಮಾಡಲು ಪ್ರಾಥಮಿಕ ಶಿಕ್ಷಣದ ನಿರ್ದೇಶನಾಲಯದ ಆಡಳಿತಕ್ಕೆ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ಒಳಪಡಿಸುವುದು ಸೂಕ್ತ. ಇದಲ್ಲದೇ ಖಾಸಗೀಕರಣ ವಾಗಿರುವ ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ಕಡಿವಾಣ ಹಾಕುವಂತಹ ನೀತಿ, ಮಸೂದೆ ಮತ್ತು ತಿದ್ದುಪಡಿ ಅವಶ್ಯಕವೆನಿಸುತ್ತದೆ.

ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿ ನೂತನ ಬದಲಾವಣೆ ಮತ್ತು ಮಾರ್ಪಾಡು ಸಾಕಷ್ಟು ನಡೆದಿದ್ದರೂ ಸಹ ಭೌತಿಕ, ವೈಜ್ಞಾನಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಇನ್ನೂ ಹೆಚ್ಚಿನ ಬದಲಾವಣೆಯಾಗಲು ಸಾಧ್ಯತೆಯನ್ನು ಈ ವರದಿಗಳು ತಿಳಿಸಿವೆ.

## ಪ್ರಾಥಮಿಕ ಶಿಕ್ಷಣ

ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಚರಿತ್ರೆಯನ್ನು ವಿಶ್ಲೇಷಿಸಿದಾಗ ೧೯೫೬ರ ನಂತರ ಕೆಲವು ಗಮನಾರ್ಹವಾದ ಅಂಶಗಳು ಕಂಡುಬರುತ್ತವೆ. ೧೯೬೧ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಮಸೂದೆಯನ್ನು ಜಾರಿಗೆ ತಂದುದು ಬಹು ಮುಖ್ಯ ಸಂಗತಿ. ಇದಾದ ನಂತರ ಸುಮಾರು ಮೂರು ದಶಕಗಳಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಪ್ರಗತಿಯನ್ನು ಕಾಣಬಹುದು.

ಐದನೆಯ ಪಂಚವಾರ್ಷಿಕ ಯೋಜನೆಯ ನಂತರ ಪ್ರಾಥಮಿಕ ಶಿಕ್ಷಣ ವಿಸ್ತೃತಗೊಂಡಿತು ಮತ್ತು ಅದರೊಂದಿಗೆ ಶಾಲಾ ಪದ್ಧತಿಯಲ್ಲಿ ನೂತನ ಕಾರ್ಯಕ್ರಮಗಳನ್ನು ಅಳವಡಿಸಲಾಯಿತು.

ಮಧ್ಯಾಹ್ನದ ಉಪಹಾರದೊಂದಿಗೆ ಸಮವಸ್ತ್ರ ವಿತರಣೆ, ಪುಸ್ತಕ ವಿತರಣೆ, ಹಾಜರಾತಿ ಸ್ಕಾಲರ್‌ಷಿಪ್, ಮೆರಿಟ್ ಸ್ಕಾಲರ್‌ಷಿಪ್, ಪೂರ್ವ ಮೆಟ್ರಿಕ್ ಸ್ಕಾಲರ್‌ಷಿಪ್ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗಾಗಿ (ವಸತಿ ಗೃಹಗಳನ್ನು) ಹಾಸ್ಟೆಲ್‌ಗಳನ್ನು, ಆಶ್ರಮ ಶಾಲೆಗಳನ್ನೂ ತೆರೆಯಲಾಯಿತು.

೧೯೬೧ರ ನಂತರದ ನಾಲ್ಕು ದಶಕಗಳಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಸಾಕಷ್ಟು ಬದಲಾವಣೆ ಯಾಯಿತು. ಶಾಲೆಗಳ ಸಂಖ್ಯೆ ಶೇ. ೮೦ರಷ್ಟು ಹೆಚ್ಚಿತು. ಶಿಕ್ಷಕರ ಸಂಖ್ಯೆ

೨.೪೫ರಷ್ಟು ಹೆಚ್ಚಾಯಿತು. ಪ್ರಾಥಮಿಕ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳ ಸಂಖ್ಯೆ ನಾಲ್ಕು ಪಟ್ಟು ಹೆಚ್ಚಾಯಿತು.

ಸರಾಸರಿ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಪರಿಮಾಣ ೧೯೫೫-೫೬ರಲ್ಲಿ ೩೧.೫ ಇದ್ದಿದ್ದು ೧೯೯೩-೯೪ರಲ್ಲಿ ೫೨ಕ್ಕೆ ಏರಿತು.

ಈ ಶತಮಾನದ ಅಂತ್ಯದ ವೇಳೆಗೆ ಸುಮಾರು ೬ರಿಂದ ೧೧ ವಯೋಮಿತಿಯೊಳಗಿನ ವಿದ್ಯಾರ್ಥಿಗಳ ಸಂಖ್ಯೆ ೬.೧ ದಶಲಕ್ಷ ಮತ್ತು ೧೧ರಿಂದ ೧೩ರ ವಯೋಮಿತಿಯೊಳಗಿನ ವಿದ್ಯಾರ್ಥಿಗಳ ಸಂಖ್ಯೆ ೩.೭ ದಶಲಕ್ಷಕ್ಕೇರುವುದೆಂದು ಗುರುತಿಸಲಾಗಿದೆ.

೧೯೭೦ರಿಂದ ಪ್ರಾಥಮಿಕ ಶಿಕ್ಷಣವನ್ನು ಕುರಿತು ಸಾಕಷ್ಟು ಸಂಶೋಧನೆಗಳನ್ನು ನಡೆಸಲಾಗಿದ್ದು ಅವುಗಳ ಆಧಾರಿತ ಆಯ್ದ ಸಲಹೆಗಳನ್ನು ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ನಿರಂತರ ಪ್ರಯಾಸ ಮಾಡಲಾಯಿತು. ಇವುಗಳಿಂದ ಆಯ್ದ ಕೆಲವು ಅಂಶಗಳು ಹೀಗಿವೆ.

ಪ್ರಾಥಮಿಕ ಶಿಕ್ಷಣದ ವಿಸ್ತರಣೆ ಆದರೂ ಸಹ ಈ ಶಿಕ್ಷಣದಲ್ಲಿ ಹೆಚ್ಚಿನಾಂಶ ೬ರಿಂದ ೧೧ರ ವಯಸ್ಸಿನ ಮಕ್ಕಳ ಶೈಕ್ಷಣಿಕ ವೆಚ್ಚ ಹೆಚ್ಚುತ್ತಿದೆ. ಹೆಚ್ಚಿನ ಸಂಖ್ಯೆ ೧೧ರಿಂದ ೧೪ರ ವಯಸ್ಸಿನ ಮಕ್ಕಳು ಶಾಲೆಗೆ ಭರ್ತಿಯಾಗದೇ ಇರುವುದಕ್ಕೆ ಕಾರಣಗಳು ಅನೇಕ. ಹೆಣ್ಣು ಮತ್ತು ಗಂಡು ಮಕ್ಕಳು ತಮ್ಮ ಪೋಷಕರಿಗೆ ಸಹಾಯ ಮಾಡುವಿಕೆ, ಮಕ್ಕಳಿಗಾಗಿ ಶಾಲೆಗಳು ಅವರುಗಳ ನಿವಾಸವಾಗಿರುವ ಗೃಹಗಳಿಂದ ದೂರವಿರುವಿಕೆ, ಶಾಲಾವರಣದಲ್ಲಿ ಮತ್ತು ಶಾಲೆಯೊಳಗಿನ ಸೌಲಭ್ಯಗಳ ಕೊರತೆ, ಶಿಕ್ಷಕರು ನಡೆಸುವ ಶಿಕ್ಷಣೋತ್ತರ ಕಾರ್ಯಕ್ರಮಗಳಲ್ಲಿ ಗುಣಮಟ್ಟವಿಲ್ಲದಿರುವಿಕೆ, ಶಿಕ್ಷಣದಲ್ಲಿ ನೀಡುವ ವಿವರಗಳಿಗೂ, ಪರಿಸರದಲ್ಲಿ ಮತ್ತು ದೈನಂದಿನ ಜೀವನದಲ್ಲಿರುವ ವಿಷಯಗಳಿಗೂ ವ್ಯತ್ಯಾಸವಿರುವಿಕೆ, ಹೆಣ್ಣು ಮಕ್ಕಳು ತಂದೆ ತಾಯಂದಿರಿಗೆ ಗೃಹ ಕೆಲಸಗಳಲ್ಲೂ ಗೃಹೋದ್ಯೋಗಗಳಲ್ಲಿ ನೆರವಾಗುವಿಕೆ.

ಪ್ರಾಥಮಿಕ ಶಿಕ್ಷಣದಡಿಯಲ್ಲಿ ಬರದೇ ಇರತಕ್ಕಂತಹ ವಿದ್ಯಾರ್ಥಿಗಳಿಗೆ (ವಲಸೆ ಕಾರ್ಮಿಕರ ಮಕ್ಕಳು) ಪ್ರತ್ಯೇಕ ವ್ಯವಸ್ಥೆ ಮಾಡಲು ಅನೌಪಚಾರಿಕ ಶಿಕ್ಷಣ ಜಾರಿಗೆ ತರಲಾಗಿದೆ. ಇವರಲ್ಲದೇ ಶಾಲೆ ಬಿಟ್ಟವರು, ಬಾಲಕಾರ್ಮಿಕರಾಗಿರುವವರಿಗಾಗಿ ಶಾಲೆಯನ್ನು ಪುನಃ ಪ್ರವೇಶಲಿಚ್ಛಿಸುವ ವಿದ್ಯಾರ್ಥಿಗಳಿಗಾಗಿ ಅನೌಪಚಾರಿಕ ಶಿಕ್ಷಣ ಕರ್ನಾಟಕದಲ್ಲಿ ಜಾರಿಗೆ ತರಲಾಗಿದೆ. ಇದು ಅರ್ಧಕಾಲೀನ ಮತ್ತು ಮುಂದುವರೆಯುವಂತಹ ಶಿಕ್ಷಣದ ವ್ಯವಸ್ಥೆ ಆಗಿದೆ. ಇದರಿಂದಾಗಿ ೬ರಿಂದ ೧೪ರ ವಯೋಮಿತಿಯಲ್ಲಿರುವ ವಿದ್ಯಾರ್ಥಿಗಳಿಗೆ ಮತ್ತು ೧೫ ವಯೋಮಿತಿಯ ಮಕ್ಕಳಿಗೆ ಶಿಕ್ಷಣ ನೀಡುವ ವ್ಯವಸ್ಥೆ ಆಗಿದೆ.

ಇವೆಲ್ಲಾ ಕಾರ್ಯಕ್ರಮಗಳು ಜಾರಿಯಲ್ಲಿದ್ದರೂ ಸಹ ಇತ್ತೀಚೆಗೆ ಪ್ರಾಥಮಿಕ ಶಿಕ್ಷಣದಲ್ಲಿ ಗುಣಮಟ್ಟ ಕುಂದುಕೊರತೆಗಳನ್ನು ನಿವಾರಿಸುವ ಸಲುವಾಗಿ ಜಿಲ್ಲಾ ಪ್ರಾಥಮಿಕ ಶಿಕ್ಷಣದ ಯೋಜನೆಯನ್ನು (ವಿಶ್ವಬ್ಯಾಂಕ್ ಮತ್ತಿತರ ಧನಸಹಾಯ ಮಾಡುವ ಸಂಸ್ಥೆಗಳಿಂದ) ಕರ್ನಾಟಕದ ೪ ಜಿಲ್ಲೆಗಳಲ್ಲಿ ತರಲಾಗಿದೆ.

೧೯೮೬ರಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ನವೀನ ಶಿಕ್ಷಣದ ಪದ್ಧತಿಯು ಜಾರಿಗೆ ಬಂದಿತು. ಆಗ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಿ ಶಿಕ್ಷಕರ ತರಬೇತಿಗಾಗಿ ಹೆಚ್ಚು ಹಣವನ್ನು ಕೇಂದ್ರ ಸರ್ಕಾರವು ಖರ್ಚು ಮಾಡಿತು. ಇದಲ್ಲದೇ ಮಕ್ಕಳು ಶಾಲೆಗೆ ಬಾರದೇ ಇರಲು ಕಾರಣವನ್ನು ಗುರುತಿಸಿ ಅದಕ್ಕಾಗಿ ಕ್ರಮಗಳನ್ನು ತೆಗೆದುಕೊಳ್ಳಲು ಯೋಜನೆ ಹಾಕಿತು. ಆಪರೇಷನ್ ಕಪ್ಪು ಹಲಗೆ ಕಾರ್ಯಾಚರಣೆ ಪ್ರಾರಂಭವಾಗಿ ಶಾಲಾ ಕಾರ್ಯ ಚಟುವಟಿಕೆಗಾಗಿ, ಪ್ರಮುಖವಾಗಿ ಏಕೋಪಾಧ್ಯಾಯ ಶಾಲೆಗಳಲ್ಲಿ, ಕನಿಷ್ಟವಾಗಿ ಇಬ್ಬರು ಶಿಕ್ಷಕರಿರಬೇಕು ಎಂಬುದನ್ನು ಸ್ಪಷ್ಟಪಡಿಸಿ ಅದರೊಂದಿಗೆ ಶಿಕ್ಷಣದ ಗುಣಮಟ್ಟ ಹೆಚ್ಚುವಂತಹ ಸೌಕರ್ಯಗಳನ್ನು ಮಾಡಲಾಯಿತು. ಈಗಲೂ ಸಹ ಈ ಕಾರ್ಯಕ್ರಮಕ್ಕಾಗಿ ಕೇಂದ್ರ ಸರ್ಕಾರದ ನೆರವು ಸಿಗುತ್ತಿದೆ.

ಹೆಣ್ಣು ಮಕ್ಕಳು ವಿದ್ಯಾಭ್ಯಾಸದಲ್ಲಿ ಆಸಕ್ತಿ ವಹಿಸಿ ಹೆಣ್ಣುಮಕ್ಕಳು ಪ್ರಾಥಮಿಕ ಶಾಲೆಗೆ ಭರ್ತಿಯಾಗುವಂತೆ ಮಾಡುವಂತಹ ನೂತನ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಇದರಡಿಯಲ್ಲಿ ಹೆಣ್ಣು ಮಕ್ಕಳಿಗಾಗಿ ಸಮವಸ್ತ್ರ, ಅಟೆಂಡೆನ್ಸ್ ಸ್ಕಾಲರ್‌ಷಿಪ್, ವಸತಿ ಗೃಹಗಳು ಮತ್ತು ಹೆಣ್ಣು ಮಕ್ಕಳು ಶಾಲೆ ಬಿಟ್ಟು ಬಿಡುವುದನ್ನು ತಪ್ಪಿಸುವಂತೆ ಶಿಕ್ಷಕಿಯರ ನೇಮಕಾತಿ ಮಾಡುವಿಕೆ, ಪೋಷಕರಲ್ಲಿರುವ ಮೂಢನಂಬಿಕೆಗಳನ್ನು ಹೋಗಲಾಡಿಸಲು ಪೋಷಕರ ಶಿಕ್ಷಣವನ್ನು ತೀವ್ರಗೊಳಿಸುವಂತಹ ಸಮೂಹ ಮಾಧ್ಯಮಗಳ ಮೂಲಕ ಪ್ರಚಾರ ಮಾಡಲಾರಂಭಿಸಲಾಯಿತು. ಹೆಣ್ಣು ಮತ್ತು ಗಂಡು ಮಕ್ಕಳು ಸಮಾನಾವಕಾಶ ಪಡೆದಿರುವುದರಿಂದ ಅವರುಗಳ ಶಿಕ್ಷಣದಲ್ಲಿ ಕಂಡುಬರುವ ತಾರತಮ್ಯವನ್ನು ತೋರಿಸುವ ಪಠ್ಯಕ್ರಮ, ಪುಸ್ತಕದಲ್ಲಿರುವ ಪಾಠಗಳಲ್ಲಿರುವ ಕುಂದು ಕೊರತೆಗಳನ್ನು ಹೋಗಲಾಡಿಸುವುದು, ಶಿಕ್ಷಣದಲ್ಲಿ ಸೇವಾ ನಿರತರಾದ ಶಿಕ್ಷಕರಲ್ಲಿ ಹೆಣ್ಣು ಮಕ್ಕಳ ಶಿಕ್ಷಣದ ಕುರಿತು ಭೇದಭಾವ ಇರಬಾರದೆಂಬುದನ್ನು ತಿಳಿಸುವಿಕೆ ಮತ್ತು ಪೋಷಕರಲ್ಲಿ ಹೆಣ್ಣು ಗಂಡೆಂಬ ಭೇದಭಾವ ತೋರಬಾರದೆಂದು ಮತ್ತು ಅವರುಗಳ ಶಿಕ್ಷಣಕ್ಕೆ ಸಮಾನಾವಕಾಶ ಒದಗಿಸಬೇಕೆಂದು ಪ್ರಚಾರ ನಡೆಸಲಾಯಿತು.

ಅದೇ ರೀತಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಶಿಕ್ಷಣದ ವ್ಯವಸ್ಥೆಯಲ್ಲೂ ಸಹ ಸಾಕಷ್ಟು ಬದಲಾವಣೆ ತರಲಾಯಿತು. ಅವರುಗಳು ಪ್ರಾಥಮಿಕ ಶಿಕ್ಷಣ ಪಡೆಯುವಂತಾಗಲು ಗ್ರಾಮೀಣ ಪ್ರದೇಶಗಳಲ್ಲಿ, ನಗರದಲ್ಲಿನ ಕೊಳಚೆ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು

ಪರಿಶಿಷ್ಟ ಪಂಗಡದವರು ಹೆಚ್ಚಾಗಿ ವಾಸಿಸುವ ಪ್ರದೇಶಗಳಲ್ಲಿ ಹೆಚ್ಚು ಸೌಲಭ್ಯ, ಸೌಕರ್ಯಗಳನ್ನೊಳಗೊಂಡ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಯಿತು. ಅವರಿಗಾಗಿಯೇ ಕೇಂದ್ರ ಸರ್ಕಾರವು ನವೋದಯ ಶಾಲೆಗಳನ್ನು ತೆರೆದು ಅವುಗಳಲ್ಲಿ ನವೀನ ರೀತಿಯ ಉಪಕರಣಗಳಿಂದ ಟಿ.ವಿ., ರೇಡಿಯೋ ಮುಂತಾದವುಗಳನ್ನು ಅಳವಡಿಸಿ ಶಿಕ್ಷಣದಲ್ಲಿ ಪರಿಣಿತಿ ಪಡೆದ ಶಿಕ್ಷಕರನ್ನೊಳಗೊಳ್ಳುವಂತೆ ಮಾಡಲಾಯಿತು. ಇದಲ್ಲದೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಬಾಲಕ ಮತ್ತು ಬಾಲಕಿಯರಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವಂತಹ ಚಟುವಟಿಕೆಗಳನ್ನು ಜಾರಿಗೆ ತರಲಾಯಿತು. ಅವರುಗಳಲ್ಲಿರುವ ಪ್ರತಿಭೆಯನ್ನು ಪೋಷಿಸಲು ಬೇಕಾದ ಪುಸ್ತಕಗಳು, ಉಪಕರಣಗಳು, ಸಲಕರಣೆ, ಸೌಲಭ್ಯಗಳನ್ನು ವಿತರಣೆ ಮಾಡಲಾಯಿತು. ಸಮಾಜ ಕಲ್ಯಾಣ ಇಲಾಖೆಯ ವತಿಯಿಂದಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು, ಪರಿಶಿಷ್ಟ ಬುಡಕಟ್ಟು, ಅಧಿಸೂಚನೆಯಲ್ಲಿಲ್ಲದ ಬುಡಕಟ್ಟು ಮತ್ತು ಅಲೆಮಾರಿ ಹಾಗೂ ಅರೆ ಅಲೆಮಾರಿ ಜನಾಂಗದ ವಿದ್ಯಾರ್ಥಿಗಳಿಗೆ ಬಟ್ಟೆ, ಸ್ಲೇಟು, ಪುಸ್ತಕ ಮತ್ತಿತರ ಶಾಲಾ ಉಪಕರಣಗಳನ್ನು ಒದಗಿಸುವಂತಹ ಯೋಜನೆಯನ್ನು ಜಾರಿಗೆ ತಂದುದು ಕರ್ನಾಟಕದ ಶಿಕ್ಷಣದಲ್ಲಿ ಒಂದು ಮೈಲಿಗಲ್ಲು.

ಗುಡ್ಡಗಾಡು ಜನಾಂಗ ಹೆಚ್ಚಾಗಿರುವ ಕಡೆಗಳಲ್ಲಿ ಆ ಜನಾಂಗದ ಮಕ್ಕಳಿಗಾಗಿ ಆಶ್ರಮ ಶಾಲೆಗಳನ್ನು ಹಾಗೂ ವಸತಿ ಶಾಲೆಗಳನ್ನು ಪ್ರಾರಂಭಿಸಿ ಅದರ ಉಪಯೋಗವನ್ನು ಹೆಣ್ಣು ಮತ್ತು ಗಂಡು ಮಕ್ಕಳು ಪಡೆಯುವಂತೆ ಮಾಡಲಾಯಿತು. ಇವುಗಳು ಮಾತ್ರವಲ್ಲದೇ ಅವರುಗಳಿಗೆ ಪ್ರತ್ಯೇಕವಾಗಿ ವಿದ್ಯಾರ್ಥಿ ವೇತನ ನೀಡುವ ಕಾರ್ಯಕ್ರಮ ಜಾರಿಗೆ ತರಲಾಯಿತು. ಇವಲ್ಲದೇ ಮಕ್ಕಳು ವಿವಿಧ ಶಿಕ್ಷಣ ಕ್ಷೇತ್ರದಲ್ಲಿ/ಹಂತದಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆಯಾಗುವಂತೆ ಉತ್ತೇಜನ ನೀಡುವ ಸಲುವಾಗಿ ಅರ್ಹತಾ ವಿದ್ಯಾರ್ಥಿ ವೇತನ ಯೋಜನೆ ಜಾರಿಯಲ್ಲಿದೆ. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರೊಂದಿಗೆ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೂ ಸಹ ಈ ಸೌಲಭ್ಯಗಳನ್ನು ಪ್ರಾಥಮಿಕ ಶಿಕ್ಷಣದಲ್ಲಿ ನೀಡಲಾಗುತ್ತಿದೆ. ಇದರಿಂದ ಶಿಕ್ಷಣ ಇಲಾಖೆಯೊಂದಿಗೆ ಸಮಾಜ ಕಲ್ಯಾಣ ಇಲಾಖೆ, ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗದವರ ಅಭಿವೃದ್ಧಿ ನಿಗಮ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಅಭಿವೃದ್ಧಿ ನಿಗಮದಲ್ಲಿ ಕೂಡ ಶಿಕ್ಷಣಕ್ಕೆ ವಿಶೇಷ ಯೋಜನೆಗಳನ್ನು ಜಾರಿಗೆ ತರುತ್ತಿದೆ ಮತ್ತು ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದೆ ಮತ್ತು ಶಿಕ್ಷಣಕ್ಕೆ ಪೂರಕವಾಗಿರುವಂತಹ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.

ಈ ಕಾರ್ಯಕ್ರಮಗಳು ಜಾರಿಯಲ್ಲಿದ್ದರೂ ಸಹ ಶಿಕ್ಷಣ ಸೌಲಭ್ಯ ಹಾಗೂ ಶಿಕ್ಷಣ ಪ್ರಗತಿಯಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳು ಸಮವಾಗಿದೆ ಎಂದು ಹೇಳುವಂತಿಲ್ಲ. ಇದನ್ನು ಗುರುತಿಸಿ ಅಭಿವೃದ್ಧಿ ಕಾರ್ಯಕ್ರಮಗಳಡಿಯಲ್ಲಿ ಶಿಕ್ಷಣಕ್ಕೆ ಹೆಚ್ಚು ಗಮನ ನೀಡಲಾಗುತ್ತಿದೆ. ಅದರ ಮೂಲಕ ಶೈಕ್ಷಣಿಕವಾಗಿ ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸುವಲ್ಲಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ನೆರವಾಗುತ್ತಿವೆ.

ಹಾವನೂರ್ ಕಮೀಷನ್, ಮಂಡಲ್ ಕಮೀಷನ್ ಮತ್ತು ಚಿನ್ನಪ್ಪರೆಡ್ಡಿ ಕಮೀಷನ್ ಮುಂತಾದವುಗಳು ಶಿಕ್ಷಣಕ್ಕೆ ಒತ್ತು ಕೊಟ್ಟು ಶಿಕ್ಷಣೋತ್ತರ ಯೋಜನೆಗಳಲ್ಲಿ ಅವುಗಳು ಹಾಕಿದ ಗುರಿಯನ್ನು ತಲುಪುವಂತೆ ಮಾಡಲಾಗುತ್ತಿದೆ.

ಮಾನವ ಸಂಪನ್ಮೂಲ ಅಭಿವೃದ್ಧಿ ಅಂಕಗಳಲ್ಲಿ (ಸೂಚ್ಯಾಂಕ) ಪ್ರಾಥಮಿಕ ಶಿಕ್ಷಣಕ್ಕೆ ಪ್ರಾಮುಖ್ಯತೆ ದೊರೆತಿದೆ. ಇದರಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಪಾಲ್ಗೊಳ್ಳುತ್ತಿರುವ ಬಾಲಕ ಬಾಲಕಿಯರ ಸಂಖ್ಯೆ (೬ರಿಂದ ೧೧ ಮತ್ತು ೧೧ರಿಂದ ೧೪ರೊಳಗಿನ ವಿದ್ಯಾರ್ಥಿಗಳ ಶೇಕಡಾವಾರು ಸಂಖ್ಯೆ) ಮತ್ತು ಪ್ರತ್ಯೇಕವಾಗಿ ಹೆಣ್ಣು ಮಕ್ಕಳು ಶಿಕ್ಷಣದಲ್ಲಿ ಪಾಲ್ಗೊಳ್ಳುವಿಕೆಯ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಿರುವ ಕಾರ್ಯಕ್ರಮಗಳ ವಿವರಗಳನ್ನು, ಶಾಲೆಗೆ ಅರ್ಹವಾದ (ವಯೋಮಿತಿಯಲ್ಲಿ)ವರ ಸಂಖ್ಯೆ ಮತ್ತು ಅವರುಗಳು ಪಾಲ್ಗೊಳ್ಳುವ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯ ಬಗ್ಗೆ ವಿವರ ನೀಡುತ್ತಿದೆ. ಇದರಿಂದಾಗಿ ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣವಾಗುವಂತಹ ಕಾರ್ಯಕ್ರಮಗಳಿಗೆ ಹೆಚ್ಚು ಬೆಂಬಲ ನೀಡುವಿಕೆಯಿಂದ ಮಾನವ ಸಂಪನ್ಮೂಲಾಭಿವೃದ್ಧಿ ವರದಿ ತಿಳಿಸಿದೆ.

ಶಾಲಾ ಕಾರ್ಯಕ್ರಮಗಳು ವಿದ್ಯಾರ್ಥಿಗಳ ಗುಣಮಟ್ಟವನ್ನು ಹೆಚ್ಚು ಮಾಡುತ್ತಿರುವುದರಲ್ಲಿ ಸಂದೇಹವೇ ಇಲ್ಲ. ಅದರೂ ಕನಿಷ್ಠ ಕಲಿಕಾಮಟ್ಟ (MLL) ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಕಲಿಕಾ ಮಟ್ಟವನ್ನು ಜಾರಿಗೆ ತಂದು ಇದನ್ನು ಕರ್ನಾಟಕದಲ್ಲೂ ಜಾರಿಗೆ ತರಲಾಗಿದೆ. ಇದರಡಿಯಲ್ಲಿ ಶಿಕ್ಷಕರ ಕೈಪಿಡಿ ತಯಾರಿಕೆ, ಶಿಕ್ಷಕರ ತರಬೇತಿ ಕಾರ್ಯಕ್ರಮಗಳನ್ನು ಅಳವಡಿಸಲಾಗಿದೆ. ಸಾಕಷ್ಟು ಕಾರ್ಯಗಳು ಈ ದಿಶೆಯಲ್ಲಿ ನಡೆದಿದೆ. ಈಗಾಗಲೇ ಪಠ್ಯಪುಸ್ತಕಗಳ ತಯಾರಿಸಿ ಪಾಠಶಾಲೆಗಳಿಗೆ ವಿತರಿಸಲಾಗುತ್ತಿದೆ.

ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣವಾಗುವಂತೆ ಮಾಡುವ ಆಡಳಿತ ಮತ್ತು ಯೋಜನೆ, ಮಾಹಿತಿ ವ್ಯವಸ್ಥೆ ಮತ್ತು ಶಾಲಾ ಸೌಲಭ್ಯಗಳ ವಿತರಣೆಯಲ್ಲಿರುವ ಲೋಪದೋಷಗಳ ನಿವಾರಣೆ ಮತ್ತು ಪ್ರಾದೇಶಿಕ ಯೋಜನೆ, ಸ್ಥಳೀಯ ಯೋಜನೆ ಮತ್ತು ಶಾಲಾ ನಕ್ಷೆಗಳನ್ನು ತಯಾರಿಸುವಿಕೆ, ಲಿಂಗಭೇದವಿಲ್ಲದಿರುವಿಕೆ ಮತ್ತು ಶಿಕ್ಷಕರ ತರಬೇತಿ ಮತ್ತು ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ಒತ್ತಡ, ವಯಸ್ಕರ ಶಿಕ್ಷಣ ಮತ್ತು ಸಾಕ್ಷರತಾ ಕಾರ್ಯಕ್ರಮಗಳು, ಮಹಿಳೆ ಮತ್ತು ಪೋಷಕರ ಶಿಕ್ಷಣ ಮುಂತಾದವುಗಳು ಪ್ರಾಥಮಿಕ ಶಿಕ್ಷಣಕ್ಕೆ ಪೂರಕವಾಗಿಯೂ ಸಹಾಯಕವಾಗಿಯೂ ಇರುವಂತಹ ಕಾರ್ಯಕ್ರಮಗಳಿಗೆ ಉತ್ತೇಜನ ನೀಡಲಾಗುತ್ತಿದೆ.

ಸೇವಾನಿರತ ಸಂಘ ಸಂಸ್ಥೆಗಳು ನಡೆಸುವಂತಹ ಶಿಕ್ಷಣ ಕಾರ್ಯಕ್ರಮಗಳಿಗೆ ಉತ್ತೇಜನ ನೀಡಲಾಗಿದ್ದು ಅದರಿಂದಲೂ ಸಹ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಅನುವಾಗುವಂತಹ ಕಾರ್ಯಕ್ರಮಗಳಿಗೆ ಸರ್ಕಾರವು ಧನಸಹಾಯ ಒದಗಿಸುತ್ತಿದೆ.

ಇವೆಲ್ಲಾ ಕಾರ್ಯಕ್ರಮಗಳಿದ್ದರೂ ಸಹ ಪ್ರಾಥಮಿಕ ಶಿಕ್ಷಣದ ಪ್ರಗತಿಯಲ್ಲಿ ಅಡಚಣೆಗಳನ್ನು ಗುರುತಿಸುವಂತಹ ಸಂಶೋಧನೆಗಳಿಗೂ ಪ್ರೋತ್ಸಾಹ ನೀಡಲಾಗುತ್ತಿದೆ. ಅವುಗಳಿಂದ ಕಂಡು ಬಂದಂತಹ ವಿಶೇಷ ಕುಂದುಕೊರತೆಗಳಿಗೆ ಅನುವಾಗುವಂತಹ ನಿವಾರಣೋಪಾಯಗಳನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ. ಪ್ರಮುಖವಾಗಿ ಹೆಣ್ಣು ಮಕ್ಕಳು ಶಾಲೆಗೆ ಭರ್ತಿಯಾಗುವಿಕೆ, ಹೆಣ್ಣು ಮಕ್ಕಳು ಶಾಲೆಯನ್ನು (ಅಪೂರ್ಣವಾಗಿ) ಬಿಟ್ಟು ಬಿಡುವಿಕೆ, ಬಾಲಕ ಬಾಲಕಿಯರಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಪಾಲ್ಗೊಳ್ಳುವಿಕೆಯಲ್ಲಿರುವ ತಾರತಮ್ಯವನ್ನು ಗುರುತಿಸುವಿಕೆ ಮತ್ತು ಅದಕ್ಕೆ ಪರಿಹಾರ ಸೂಚಿಸುವ ಮತ್ತು ಕಲಿಕೆಯಲ್ಲಿ ಶಾಲೆಯ ಗುಣಮಟ್ಟವನ್ನು ಏರಿಸುವಂತಹ ಸಂಶೋಧನೆಗಳಿಗೆ ಉತ್ತೇಜನ ನೀಡಲಾಗುತ್ತಿದೆ. ರಾಷ್ಟ್ರೀಯ ಮಟ್ಟದಲ್ಲಿ ರಾಜ್ಯ ಮಟ್ಟದಲ್ಲಿ ೫ ಶಿಕ್ಷಣ ಸಮೀಕ್ಷೆಗಳು ನಡೆಸಲಾಗಿದ್ದು ಕರ್ನಾಟಕದಲ್ಲಿ ನಡೆಸಬೇಕಾದ ಮುಂದಿನ ಚಟುವಟಿಕೆಗಳ ಬಗ್ಗೆ ವಿವರ ನೀಡಲಾಗುತ್ತಿದೆ. ರಾಷ್ಟ್ರೀಯ ಮಟ್ಟದಲ್ಲಿ ಪ್ರಾಥಮಿಕ ಶಿಕ್ಷಣದ ಬಗ್ಗೆ ನುರಿತ ಸಂಶೋಧನೆಗಳಿಂದ ಕರ್ನಾಟಕಕ್ಕೆ ಅಳವಡಿಸಿಕೊಳ್ಳಲು ಸಾಧ್ಯವಾದಂತಹ ಕ್ರಮಗಳ ಬಗ್ಗೆ ಆಸಕ್ತಿ ತೋರಿ ಸರ್ಕಾರವು ಪ್ರಾಥಮಿಕ ಶಿಕ್ಷಣದ ಪ್ರಗತಿಯಾಗುವಂತೆ ಮಾಡುತ್ತಿದೆ.

**ಪ್ರೌಢ ಶಿಕ್ಷಣ**

ರಾಜ್ಯ ಏಕೀಕರಣದ ಸಂದರ್ಭದಲ್ಲಿ ಪ್ರೌಢಶಿಕ್ಷಣದ ಆಡಳಿತ ವ್ಯವಸ್ಥೆಯಲ್ಲಿರುವ ತಾರತಮ್ಯಗಳನ್ನು ಗುರುತಿಸಿ ೧೯೬೨-೬೩ರಲ್ಲಿ ರಾಜ್ಯದೆಲ್ಲೆಡೆಯೂ ಸಮವಾದ ಪ್ರೌಢಶಿಕ್ಷಣವನ್ನು ಜಾರಿಗೆ ತರಲಾಯಿತು. ಇದಾದ ನಂತರ ತರಗತಿ ಒಂದರಿಂದ ಹತ್ತರವರೆಗಿನ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರಲಾಯಿತು. (ಪ್ರಥಮ ೭ ವರ್ಷಗಳು ಪ್ರಾಥಮಿಕ ಶಿಕ್ಷಣವಾಯಿತು, ನಂತರದ ೩ ವರ್ಷಗಳು ಪ್ರೌಢಶಿಕ್ಷಣವೆನಿಸಿಕೊಂಡಿತು).

ಇಷ್ಟೇ ಅಲ್ಲದೇ ೧೯೬೩ರಲ್ಲಿ ಮೊಟ್ಟಮೊದಲ ಬಾರಿಗೆ ಮೈಸೂರು ರಾಜ್ಯದ ಪ್ರೌಢಶಿಕ್ಷಣದ ಒಂದು ಅಂಗವಾದ ಸೆಕೆಂಡರಿ ಪರೀಕ್ಷಾ ಮಂಡಳಿ (MSEEB)ಯು ರಾಜ್ಯಮಟ್ಟದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ರಾಜ್ಯದೆಲ್ಲೆಡೆ ಏಕತ್ರವಾಗಿ ನಡೆಸಿತು. ೧೯೫೬-೫೭ರಲ್ಲಿ ರಾಜ್ಯದಲ್ಲಿ ಸುಮಾರು ೫೩೫ ಪ್ರೌಢಶಾಲೆಗಳಿದ್ದವು. ಅವುಗಳಲ್ಲಿ ೧.೨೫ ದಶ ಲಕ್ಷ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ಪ್ರೌಢಶಿಕ್ಷಣಕ್ಕೆ ತಗುಲುತ್ತಿದ್ದ ವೆಚ್ಚ ರೂ. ೧೪.೪೩ ಲಕ್ಷಗಳು. ೧೯೭೦-೭೧ರ ವೇಳೆಗೆ ಪ್ರೌಢಶಿಕ್ಷಣ ಪಡೆಯುತ್ತಿದ್ದವರ ಸಂಖ್ಯೆ ೪.೫೪ ದಶ ಲಕ್ಷಕ್ಕೆ ಹೆಚ್ಚಿತು. ಪ್ರೌಢಶಿಕ್ಷಣಕ್ಕಾಗಿ ರೂ. ೨೦೨.೩೮ ದಶಲಕ್ಷದಷ್ಟು ವೆಚ್ಚವಾಯಿತು.

೧೯೮೧ರ ವೇಳೆಗೆ ೧೬೮೮ ಶಾಲೆಗಳಿದ್ದು ಅವುಗಳಲ್ಲಿ ೭.೩೨ ವಿದ್ಯಾರ್ಥಿಗಳಿದ್ದರು. ಶಿಕ್ಷಣಕ್ಕಾಗಿ ಆಗುತ್ತಿದ್ದ ಖರ್ಚು ರೂ. ೨೪೫.೭ ದಶಲಕ್ಷಕ್ಕೆ

ಏರಿತು. ಕರ್ನಾಟಕ ಪ್ರೌಢಶಾಲಾ ಶಿಕ್ಷಣ ಪರೀಕ್ಷಾ ಮಂಡಳಿಯು ಕಾಯಿದೆ ೧೯೬೬ರ ನಿಯಮದಲ್ಲಿ ಸೂಚಿಸಿರುವ ನಿಬಂಧನೆಗಳಿಗನುಸಾರವಾಗಿ ರಚಿತವಾಗಿರುವ ಸ್ವಾಯತ್ತ ಸಂಸ್ಥೆ ಇದು. ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ನಡೆಸುತ್ತಾ ಬಂದಿದೆ. ೧೯೮೧ರಲ್ಲಿ ಪರೀಕ್ಷೆಗೆ ಕುಳಿತವರ ಸಂಖ್ಯೆ ೧೨೩೬೦೩ಗೆ ಏರಿತು. ಇದೇ ರೀತಿ ಶೇಕಡಾವಾರು ಪಾಸಾದವರ ಸಂಖ್ಯೆ ೩೫.೯ಗೆ ಏರಿತು. ೧೯೮೮-೮೯ರಲ್ಲಿ ವಿದ್ಯಾರ್ಥಿಗಳ ಸಂಖ್ಯೆ ೧೩೪೬೬೦ಕ್ಕೆ ಏರಿತು ಮತ್ತು ಫಲಿತಾಂಶ ಶೇಕಡಾವಾರು ೧೩.೬೦ಕ್ಕೆ ಇಳಿಯಿತು. ಇದಕ್ಕೆ ಕಾರಣ ಹೊಸ ಪಠ್ಯಕ್ರಮ ಜಾರಿಗೆ ಬಂದಿತೆಂದು ವರದಿ ನೀಡಲಾಯಿತು. ೧೯೯೩-೯೪ರ ಸಾಲಿನಲ್ಲಿ ನೂತನ ಪಠ್ಯಕ್ರಮವನ್ನು ಅಳವಡಿಸಲಾಯಿತು.

ಒಂದು ಕಡೆ ಪ್ರೌಢಶಿಕ್ಷಣದ ಪ್ರಗತಿಯಾದರೆ ಮತ್ತೊಂದೆಡೆ ಪ್ರೌಢಶಿಕ್ಷಣ ಪಡೆದು ಎಸ್.ಎಸ್.ಎಲ್.ಸಿ. ಪರೀಕ್ಷೆ ಪೂರ್ಣಗೊಳಿಸದೇ ವಿದ್ಯಾರ್ಥಿಗಳು ಪ್ರೌಢಶಾಲೆಗಳನ್ನು ಬಿಡುವುದರಿಂದ ಶಿಕ್ಷಣದ ಕ್ಷೇತ್ರದಲ್ಲಿ ಹೆಚ್ಚು ವ್ಯರ್ಥವಾಗತೊಡಗಿತು. ಇದನ್ನು ಶೈಕ್ಷಣಿಕ ನಷ್ಟ (wastage)ವೆನ್ನಬಹುದಾಗಿದೆ. ೧೯೭೮ರಿಂದ ೧೯೮೧ರವರೆಗಿನ ಶೈಕ್ಷಣಿಕ ನಷ್ಟ ಶೇಕಡ ೭೩.೭೭ (ಮತ್ತು ಅದರಲ್ಲೂ ಬಾಲಕರ ಶೈಕ್ಷಣಿಕ ನಷ್ಟ ಶೇಕಡ ೭೩.೮೪ರಷ್ಟು ಮತ್ತು ಬಾಲಕಿಯರ ಶೈಕ್ಷಣಿಕ ನಷ್ಟ ಶೇಕಡ ೭೩.೬೫) ಎಂದು ಕಂಡುಹಿಡಿಯಲಾಯಿತು. ಇದೇ ರೀತಿ ೧೯೭೮-೭೯ ರಿಂದ ೧೯೮೧ರವರೆಗಿನ ಶೈಕ್ಷಣಿಕ ನಷ್ಟ ಶೇಕಡ ೭೩.೭೭ (ಮತ್ತು ಅದರಲ್ಲೂ ಬಾಲಕರ ಶೈಕ್ಷಣಿಕ ನಷ್ಟ ಶೇಕಡ ೭೩.೮೪ರಷ್ಟು ಮತ್ತು ಬಾಲಕಿಯರ ಶೈಕ್ಷಣಿಕ ನಷ್ಟ ಶೇಕಡ ೭೩.೬೫) ಎಂದು ಕಂಡುಹಿಡಿಯಲಾಯಿತು. ಇದೇ ರೀತಿ ೧೯೭೮-೭೯ರಿಂದ ೧೯೮೧ರವರೆಗಿನ ಶೈಕ್ಷಣಿಕ ನಷ್ಟ ಸುಮಾರು ೭೩.೭೭ ಇದ್ದಿತು. (ಬಾಲಕರು ಶೇಕಡ ೭೩.೮೪ ಬಾಲಕಿಯರು ಶೇಕಡ ೭೩.೬೫). ಇದೇ ರೀತಿ ೧೯೮೬ರಿಂದ ೧೯೯೨-೯೩ರವರೆಗಿನ ಶೈಕ್ಷಣಿಕ ನಷ್ಟ ಶೇಕಡ ೬೪.೪೯ರಷ್ಟಾಗಿದ್ದು (ಬಾಲಕರ ಶೈಕ್ಷಣಿಕ ನಷ್ಟ ಶೇಕಡ ೫೦.೫೨ರಷ್ಟು ಮತ್ತು ಬಾಲಕಿಯರ ಶೈಕ್ಷಣಿಕ ನಷ್ಟ ಶೇಕಡ ೫೭.೫೨) ಎಂದು ಕಂಡುಹಿಡಿಯಲಾಯಿತು.

ಐದನೇ ಪಂಚವಾರ್ಷಿಕ ಯೋಜನೆಯಿಂದಾಗಿ ಪ್ರೌಢಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ಸಿಗುತ್ತಿದೆ. ಶೈಕ್ಷಣಿಕ ಗುಣಮಟ್ಟವನ್ನೇರಿಸುವ ಕಾರ್ಯಕ್ರಮಗಳಿಂದಾಗಿ ಹೆಚ್ಚು ಹಣ ವ್ಯವಸ್ಥೆಯಾಗುತ್ತಿದ್ದರೂ ಸಹ ಪ್ರೌಢಶಿಕ್ಷಣದ ಮಹತ್ವವನ್ನು ಅರಿಯದೆ ಮಕ್ಕಳನ್ನು ಬಾಲಕಾರ್ಮಿಕರಾಗಿ ಅಥವ ಗೃಹೋದ್ಯೋಗಿಗಳಾಗಿಯೂ ಪರಿವರ್ತಿಸುವ ಚಟುವಟಿಕೆಗಳು ಒಂದು ಕಡೆಯಾದರೆ ಮತ್ತೊಂದು ಕಡೆ ವೃತ್ತಿ ಶಿಕ್ಷಣಕ್ಕೆ ಆದ್ಯತೆ ಕೊಡುವ ಪೋಷಕರು ಮಕ್ಕಳು ಶಾಲೆಗಳನ್ನು ಬಿಡುವಂತೆ ಉತ್ತೇಜನ ನೀಡುವುದನ್ನು ಈ ಸನ್ನಿವೇಶದಲ್ಲಿ ನೋಡಬಹುದಾಗಿದೆ. ಪೋಷಕರು, ವಿದ್ಯಾರ್ಥಿಗಳು, ಉದ್ಯೋಗದಾರರು ಪ್ರೌಢ ಶಿಕ್ಷಣಕ್ಕೆ ಕೊಡುತ್ತಿರುವ ಮಹತ್ವವನ್ನು ಗುರುತಿಸುವುದು

ಬಹುಮುಖ್ಯವಾದ ಅಂಶ. ಇದನ್ನು ಅರಿಯಬೇಕಾದರೆ ಉದ್ಯೋಗದಲ್ಲಿ ನಿರತರಾದವರ ಸಂಖ್ಯೆಯನ್ನು ನೋಡಬೇಕಾಗುವುದು. ಇದಕ್ಕೆ ಮಾಹಿತಿ ಒದಗಿಸುವ ವರದಿಗಳಲ್ಲಿ ಕಂಡು ಬರುವ ಅಂಶವೆಂದರೆ, ೧೯೫೫-೫೬ರಲ್ಲಿ ಶೇಕಡಾವಾರು ೭೬.೧ ಮಂದಿ ಉದ್ದಿಮೆಶೀಲರಾಗಿರುವವರಲ್ಲಿ ಎಸ್.ಎಸ್.ಎಲ್.ಸಿ ಉತ್ತೀರ್ಣರಾದವರು ಇದ್ದರು. ೧೯೭೧ರ ವೇಳೆಗೆ ಕಂಡು ಬರುವ ಅಂಶವೇನೆಂದರೆ ಮೆಟ್ರಿಕ್ಯುಲೇಷನ್ ಅಥವಾ ಪ್ರೌಢಶಿಕ್ಷಣ ಮುಗಿಸಿದವರು ಉದ್ಯೋಗಸ್ಥರಾಗುವ ಸಂಭವ ಹೆಚ್ಚು.

ಇದೇ ರೀತಿ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ಪ್ರೌಢಶಿಕ್ಷಣ ಪಡೆದವರು ತಮ್ಮ ಹೆಸರನ್ನು ನೊಂದಾಯಿಸುವುದೂ ಸಹ ಕಂಡು ಬಂದಿದೆ.

ಪ್ರೌಢಶಿಕ್ಷಣವು ಕರ್ನಾಟಕದಲ್ಲಿ ಪ್ರಗತಿಪಥದಲ್ಲಿದ್ದರೂ ಸಹ ಕೆಲವು ಅಂಶಗಳನ್ನು ಗಮನಿಸಬೇಕಾಗಿದೆ. ಪ್ರೌಢಶಾಲೆಗಳಲ್ಲಿ ಸಂಖ್ಯೆ ಹೆಚ್ಚುತ್ತಿದೆ. ಅದರಂತೆಯೇ ಶಾಲೆಗಳಲ್ಲಿ ನೊಂದಾಯಿಸಿ ಕೊಳ್ಳುವವರ ಸಂಖ್ಯೆ ಹೆಚ್ಚುತ್ತಿದೆ. ಆದರೆ ಹೆಚ್ಚಿನಾಂಶ ಹೆಣ್ಣುಮಕ್ಕಳು ಭರ್ತಿಯಾಗದಿರುವುದು, ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳು ಪ್ರೌಢಶಿಕ್ಷಣ ಪಡೆಯುವುದರಲ್ಲಿ ಹೆಚ್ಚು ತಾರತಮ್ಯ ಕಂಡುಬರುತ್ತಿದೆ. ಇದಲ್ಲದೇ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಬಾಲಕ ಬಾಲಕಿಯರು ಸಾಕಷ್ಟು ಸಂಖ್ಯೆಯಲ್ಲಿ (ಮೊದಲಿಗಿಂತ) ಪ್ರೌಢಶಿಕ್ಷಣದಲ್ಲಿ ಭಾಗವಹಿಸುತ್ತಿರುವುದು ಗಮನಾರ್ಹ.

ಸರ್ಕಾರದ ವತಿಯಿಂದ ನೀಡಲಾಗುತ್ತಿರುವ ಸೌಲಭ್ಯಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಉಪಯೋಗಿಸದೇ ಇರುವುದೂ ಸಹ ಕಂಡು ಬಂದಿದೆ. (ಡಾ. ಪ್ರಮೀಳಾ, ಡಾ. ಚಂದ್ರಶೇಖರ್) ಸಂವಿಧಾನದ ಕಾನೂನಿನಂತೆ ಎಲ್ಲರಿಗೂ ಸಮಾನ ಶಿಕ್ಷಣ. ಶಿಕ್ಷಣದ ಹಕ್ಕು ಇದ್ದರೂ ಸಹ ಪ್ರೌಢಶಿಕ್ಷಣದಲ್ಲಿ ಈ ವಿಷಯವನ್ನು ವಿಮರ್ಶಿಸಿ ನೋಡಿದಾಗ ಇನ್ನೂ ಹೆಚ್ಚು ಕಾರ್ಯಕ್ರಮಗಳು ಕೂಡಿ ಬರಬೇಕೆನಿಸುವುದು. ಇದಕ್ಕೆ ಕಾರಣ ಲಿಂಗ ಭೇದ, ಜಾತಿ ತಾರತಮ್ಯ, ವಿದ್ಯಾರ್ಥಿಗಳು ಶಿಕ್ಷಣ ಸವಲತ್ತುಗಳನ್ನು ಸಂಪೂರ್ಣವಾಗಿ ಪಡಯದೇ ಇರುವುದು, ಶಾಲೆಗಳಲ್ಲಿ ಹಾಜರಾತಿ ಕಡಿಮೆ ಇರುವುದು, ಶಾಲೆ ಬಿಟ್ಟುಬಿಡುವಿಕೆ ಮತ್ತು ಶಾಲೆಗೆ ಭರ್ತಿಯಾಗದಿರುವಿಕೆ ಮತ್ತು ಪೂರ್ಣ ಶಿಕ್ಷಣ ಪಡೆದನಂತರ ಪರೀಕ್ಷೆಗೆ ಕುಳಿತುಕೊಳ್ಳದಿರುವಿಕೆ ಅಥವಾ ಪರೀಕ್ಷೆಗೆ ಕುಳಿತರೂ ಸಹ ತೇರ್ಗಡೆ ಆಗದಿರುವಿಕೆ. ಪ್ರೌಢಶಾಲಾ ಶಿಕ್ಷಣದಲ್ಲಿ ಪ್ರಗತಿ ಕುಂಠಿತವಾಗುತ್ತಿರಲು ಪ್ರೌಢಶಾಲೆಗಳಲ್ಲಿ ಉಪಾಧ್ಯಾಯರ ಕೊರತೆ, ಕಲಿಕೆಯಲ್ಲಿ ಅನುವಾಗುವಂತಹ ಸಲಕರಣೆ, ಪಠ್ಯಪುಸ್ತಕಗಳ ಕೊರತೆ, ಪಠ್ಯಕ್ರಮಗಳಲ್ಲಿ ಉಪಯೋಗಿಸುವ ಭಾಷೆಯಲ್ಲಿನ ತೊಡಕುಗಳು, ಶಾಲೆಗಳ ಕೊರತೆ ಮತ್ತು ಶಾಲೆಗಾಗಿ ಹೆಚ್ಚು ದೂರ ಹೋಗುವ ಸಮಸ್ಯೆಗಳು ಇವೇ ಮುಖ್ಯ ಕಾರಣಗಳು.

ಪ್ರೌಢಶಿಕ್ಷಣದಲ್ಲಿ ಖಾಸಗೀಶಾಲೆಗಳನ್ನೂ ನಡೆಸಲು ಸರ್ಕಾರ ಪ್ರೋತ್ಸಾಹಿಸುತ್ತಾ ಬಂದಿರುವುದರಿಂದ ಪ್ರೌಢಶಿಕ್ಷಣಕ್ಕಾಗಿ ಸರ್ಕಾರ ಅನುದಾನ ಕೊಡುತ್ತಿದೆ. ಇದಕ್ಕಾಗಿ ಗ್ರಾಂಟ್- ಇನ್-ಏಡ್ ಕೋಡ್ ತಯಾರಿಸಲಾಗಿದೆ. ಇದರಲ್ಲಿ ಹೆಚ್ಚು ಬದಲಾವಣೆ ಮಾಡಲಾಗಿದ್ದು ಇದರಿಂದಾಗಿ ಹೆಚ್ಚು ಉಪಯೋಗವಾಗುತ್ತಿದೆ. ಖಾಸಗೀ ಶಿಕ್ಷಣ ಸಂಸ್ಥೆಗಳಿಗೆ ಶಿಕ್ಷಕರ ತರಬೇತಿ ಕಾರ್ಯಕ್ರಮಗಳೂ ಸಹ ಹೊಂದಿದ್ದು ಹೆಚ್ಚಿನ ಶಾಲೆಗಳಲ್ಲಿ ಶಿಕ್ಷಕರು ತರಬೇತಿ ಪಡೆದಿದ್ದಾರೆ. ಆದರೂ ಸಹ ಕೆಲವು ಶಾಲೆಗಳಲ್ಲಿ (ಅನುದಾನ ಪಡೆಯದ) ಶಿಕ್ಷಕರು ತರಬೇತಿ ಶಿಕ್ಷಣ ಪದವಿ (B.Ed.) ಪಡೆಯದವರಿದ್ದಾರೆ. ಪ್ರೌಢಶಿಕ್ಷಣದಲ್ಲಿ ಶಿಕ್ಷಕರ ಗುಣಮಟ್ಟದಲ್ಲಿ ವ್ಯತ್ಯಾಸ ಕಂಡು ಬಂದಲ್ಲಿ ಶಿಕ್ಷಕರ ತರಬೇತಿಯೇ ಎಂದು ಗುರುತಿಸಿ ಸೇವಾನಿರತ ಶಿಕ್ಷಕರಿಗೆ ತರಬೇತಿ ನೀಡಲು ವ್ಯವಸ್ಥೆ ಮಾಡಲಾಗಿದೆ.

ಪ್ರೌಢಶಿಕ್ಷಣದಲ್ಲೂ ಸಹ ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಕ್ಕಳಿಗೆ ವಸತಿ ಗೃಹಗಳನ್ನು, ಮೆಟ್ರಿಕ್ ಪೂರ್ವ ಸ್ಕಾಲರ್‌ಷಿಪ್, ಪೋಸ್ಟ್ ಮೆಟ್ರಿಕ್ ಸ್ಕಾಲರ್‌ಷಿಪ್ ಮತ್ತು ಮೆರಿಟ್ ಸ್ಕಾಲರ್‌ಷಿಪ್, ಆಶ್ರಮ ಶಾಲೆಗಳು ಮತ್ತು ಪುಸ್ತಕ ವಿತರಣಾ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ. ಇದರಿಂದ ಹೆಚ್ಚು ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ. ಇವೆಲ್ಲ ಇದ್ದರೂ ಸಹ ಶಾಲೆಗಳ ಗುಣಮಟ್ಟ ಏರಿಸಲು ಸಕಲ ಪ್ರಯತ್ನಗಳೂ ನಡೆಯುತ್ತಿವೆ.

ಎಂಟನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ವಿಜ್ಞಾನ ಶಿಕ್ಷಣಕ್ಕೆ ಮತ್ತು ವೃತ್ತಿಪರ ಶಿಕ್ಷಣಕ್ಕೆ ಹೆಚ್ಚು ಗಮನ ನೀಡುತ್ತಿರುವ ವಿಷಯ ಗಮನಾರ್ಹ. ವಿದ್ಯಾರ್ಥಿಗಳ ಕಲಿಕೆಯ ಮಟ್ಟದಲ್ಲೂ ಸಹ ಹೆಚ್ಚಿನ ಬದಲಾವಣೆಯನ್ನು ನಡೆಸಲಾಗುವಂತಹ ಕಾರ್ಯಕ್ರಮಗಳು ರೂಪುಗೊಳ್ಳುತ್ತಿವೆ.

## ಪದವೀಪೂರ್ವ ಶಿಕ್ಷಣ

೧೯೫೬-೫೭ರಲ್ಲಿ ಎರಡು ವರ್ಷದ ಇಂಟರ್ ಮೀಡಿಯಟ್ ಶಿಕ್ಷಣವನ್ನು ರದ್ದುಗೊಳಿಸಿ ಒಂದು ವರ್ಷದ ಪದವೀಪೂರ್ವ ಶಿಕ್ಷಣವನ್ನಾರಂಭಿಸಲಾಯಿತು. ಕೆಲವು ಪ್ರೌಢಶಾಲೆಗಳಲ್ಲಿ ೧೧ನೇ ತರಗತಿಯನ್ನು ತೆರೆಯಲಾಯಿತು.

೧೯೬೦ರಲ್ಲಿ ಪ್ರಿ ಯೂನಿವರ್ಸಿಟಿ ಬೋರ್ಡನ್ನು ಪ್ರಾರಂಭಿಸಲಾಯಿತು. ಪ್ರಿ ಯೂನಿವರ್ಸಿಟಿಯಲ್ಲಿನ ಕೋರ್ಸ್‌ಗಳನ್ನು ವಿಸ್ತರಿಸಿ ಅದರೊಂದಿಗೆ ಸಾಧ್ಯವಾದಷ್ಟು ಸಮಾನತೆಯನ್ನೂ ತರುವ ಪ್ರಯತ್ನ ನಡೆಯಿತು. ೧೯೬೦ರ ದಶಕದಲ್ಲಿ ಪ್ರಿ ಯೂನಿವರ್ಸಿಟಿಯನ್ನು ಪದವೀಪೂರ್ವ ಕಾಲೇಜುಗಳೆಂದು ಕರೆಯಲಾಯಿತು.

೧೯೮೬ರಲ್ಲಿ ಒಟ್ಟು ೬೫೧ ಪದವೀಪೂರ್ವ ಕಾಲೇಜುಗಳಿದ್ದವು. ಅವುಗಳಲ್ಲಿ ಸುಮಾರು ೧,೧೧,೮೦೦ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ೧೯೮೦

ದಶಕದಲ್ಲಿ ತರಗತಿಗಳಲ್ಲಿ ಹೆಚ್ಚಿನಾಂಶ ತೇರ್ಗಡೆಯಾದವರು ಸೇರಿದ್ದು ವೃತ್ತಿ ಶಾಲೆಗೆ ಸೇರಿದ್ದ ಶಿಕ್ಷಣ. ಅವರುಗಳಲ್ಲಿ ಹೆಚ್ಚಿನಾಂಶ ವೈದ್ಯರೂ, ತಾಂತ್ರಿಕ ವಿಜ್ಞಾನಿಗಳೂ ಮತ್ತು ವೃತ್ತಿ ಶಿಕ್ಷಣ ಪಡೆದವರಾದರು.

೧೯೯೦ರ ದಶಕದಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ಪದವಿ ಮುಗಿಸಿ ವೃತ್ತಿ ಆಧರಿತ ಶಿಕ್ಷಣ ಪಡೆಯುವ ಇಚ್ಛೆ ತೋರಿದುದರಿಂದ, ಡಿಗ್ರಿ ಕೋರ್ಸುಗಳಲ್ಲಿ ಭರ್ತಿಯಾಗುವವರ ಸಂಖ್ಯೆ ಕಡಿಮೆಯಾಗತೊಡಗಿತು.

ಪದವೀಪೂರ್ವ ಶಿಕ್ಷಣ ವಿದ್ಯಾರ್ಥಿ ಜೀವನದಲ್ಲಿ ಒಂದು ತಿರುವನ್ನು ತರುವಂತಹ ಶಿಕ್ಷಣವಾದುದರಿಂದ ಅದಕ್ಕೆ ಹೆಚ್ಚು ಗಮನ ಕೊಡಲಾಯಿತು. ಇದಲ್ಲದೇ ಪದವೀಪೂರ್ವ (ಪ್ರಿ ಯೂನಿವರ್ಸಿಟಿ) ವಿದ್ಯಾಭ್ಯಾಸ ಪಡೆದ ವಿದ್ಯಾರ್ಥಿಗಳ ಗುಣಮಟ್ಟವನ್ನು ಗುರುತಿಸುವ ಸಾಮಾನ್ಯ ಭರ್ತಿ ಮಾಡುವ ಪ್ರವೇಶ ಪರೀಕ್ಷೆಗಳನ್ನು ನಡೆಸಲಾಗುತ್ತಿದ್ದು ಅವರಲ್ಲಿ ಹೆಚ್ಚು ಮಂದಿ ಇಂಜಿನಿಯರಿಂಗ್ ಮತ್ತು ವೈದ್ಯಕೀಯ, ಡೆಂಟಲ್ ಕೋರ್ಸ್‌ಗಳಿಗೆ ಆಯ್ಕೆ ಆಗುತ್ತಾರೆ. ಇದರಿಂದಲೇ ಈ ವಿಧದ ಶಿಕ್ಷಣಕ್ಕೆ ಬಹಳ ಮಹತ್ವ ಕೊಡಲಾಗುತ್ತಿದೆ. ಕೊಳಂದೆ ಸ್ವಾಮೀ ವರದಿಯ ಮೇರೆಗೆ ೧೯೭೭ರ ನಂತರ ಪದವೀ ಪೂರ್ವ ಶಿಕ್ಷಣದ ಜೊತೆಯಲ್ಲಿ ಶಾಲೆಗಳಲ್ಲಿ, ಡಿಗ್ರಿ ಕಾಲೇಜುಗಳಲ್ಲಿ ವೃತ್ತಿ ಶಿಕ್ಷಣವನ್ನು ಆರಂಭಿಸಿ ವಿದ್ಯಾರ್ಥಿಗಳು ಶೇಕಡ ೫೦ರಷ್ಟು ವೃತ್ತಿ ಶಿಕ್ಷಣಕ್ಕೆ ಭರ್ತಿಯಾಗುವಂತೆ ಉತ್ತೇಜನ ನೀಡಲಾಗುತ್ತಿದೆ.

## ವೃತ್ತಿ ಶಿಕ್ಷಣ

೧೯೭೭ರಲ್ಲಿ ವೃತ್ತಿ ಶಿಕ್ಷಣ ನಿರ್ದೇಶನಾಲಯವನ್ನು ಅಸ್ತಿತ್ವಕ್ಕೆ ತರಲಾಯಿತು. ಮೊದಲು ಇದು ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿದ್ದು ನಂತರ ೧೯೭೯ರಲ್ಲಿ ಈ ಯೋಜನೆಯನ್ನು ರಾಜ್ಯಕ್ಕೆ ವರ್ಗಾಯಿಸಲಾಯಿತು. ಈಗ ಈ ನಿರ್ದೇಶನಾಲಯದಡಿಯಲ್ಲಿ ಒಟ್ಟು ಐದು ವಿಭಾಗಗಳು ಅಂದರೆ ಬೆಂಗಳೂರು, ಮಂಗಳೂರು, ಶಿವಮೊಗ್ಗ, ರಾಯಚೂರು ಮತ್ತು ಧಾರವಾಡಗಳಲ್ಲಿ ಉಪ ನಿರ್ದೇಶಕರ ಉಸ್ತುವಾರಿಯಲ್ಲಿ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡಿದೆ. ರಾಜ್ಯ ಮಟ್ಟದಲ್ಲಿ ಮಾನ್ಯ ವಿದ್ಯಾ ಮಂತ್ರಿಗಳ ಅಧ್ಯಕ್ಷತೆಯಲ್ಲಿ ವೃತ್ತಿ ಶಿಕ್ಷಣವನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಹಿನ್ನೆಲೆಯಲ್ಲಿ ವಿವಿಧ ಸರ್ಕಾರೇತರ ಮುಖ್ಯಸ್ಥರನ್ನೊಳಗೊಂಡ ರಾಜ್ಯ ಶಿಕ್ಷಣ ಮಂಡಳಿಯು ಪರೀಕ್ಷಾ ಸಂಬಂಧ ಮತ್ತಿತರ ವಿಷಯಗಳಲ್ಲಿ ಸಲಹೆ ನೀಡುತ್ತಾ ಬಂದಿದೆ.

೧೯೫೭, ೧೯೮೮, ೧೯೯೫-೯೬ರಲ್ಲಿ ಮೂರು ಬಾರಿ ವೃತ್ತಿ ಶಿಕ್ಷಣ ಸಮೀಕ್ಷೆಗಳನ್ನೂ ವಿವಿಧ ಜಿಲ್ಲೆಗಳಲ್ಲಿ ತಯಾರಿಸಿ, ವೃತ್ತಿ ಶಿಕ್ಷಣದ ಕೋರ್ಸಗಳನ್ನು ಅವುಗಳಿಗೆ ಸರಿಹೊಂದುವಂತಹ ಪಠ್ಯಕ್ರಮಗಳನ್ನೂ ತಯಾರಿಸಿ ಮತ್ತು ವೃತ್ತಿ ಶಿಕ್ಷಣಕ್ಕೆ

ಸೌಲಭ್ಯ ಮತ್ತು ಸಲಕರಣೆಗಳನ್ನು ಹೊಂದಿರುವ ಶಿಕ್ಷಣ ಸಂಸ್ಥೆಗಳನ್ನು ಗುರುತಿಸಿ ವೃತ್ತಿ ಶಿಕ್ಷಣವನ್ನು ಆರಂಭಿಸಲಾಗಿದೆ.

ಡಾ॥ ರಾಮೇಗೌಡ ಕಮಿಟಿಯ ವರದಿಯ ಮೇರೆಗೆ ತಾಂತ್ರಿಕ ವಿದ್ಯೆಗೆ ಸೇರಿದಂತಹ ವೃತ್ತಿ ಶಿಕ್ಷಣವನ್ನು ಇಂಜನಿಯರಿಂಗ್ ಮತ್ತು ತಾಂತ್ರಿಕ ವಿದ್ಯಾಲಯ/ಪಾಲಿಟೆಕ್ನಿಕ್ ಸಂಸ್ಥೆಗಳಿಗೆ ಬದಲಾಯಿಸಲಾಯಿತು.

ಎಂಟನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು ವೃತ್ತಿ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ನೀಡಿದ್ದು, ಶೇಕಡ ೨೫ ಭಾಗ ಸಾಮಾನ್ಯ ಶಿಕ್ಷಣದಿಂದ ವೃತ್ತಿ ಶಿಕ್ಷಣಕ್ಕೆ ಅಳವಡಿಸುವ ಭೌತಿಕ ಗುರಿಯನ್ನು ಹಾಕಿಕೊಳ್ಳಲಾಗಿದ್ದು, ಅಂತೆಯೇ ೧೯೯೩-೯೪ನೇ ಸಾಲಿನಲ್ಲಿ ಇಂಜನಿಯರಿಂಗ್ ಮತ್ತು ಪಾಲಿಟೆಕ್ನಿಕ್ ಕಾಲೇಜುಗಳು ಸೇರಿದಂತೆ ೨೦೫ ಹೊಸ ವೃತ್ತಿ ಶಿಕ್ಷಣ ಕೋರ್ಸ್‌ಗಳನ್ನು ಪ್ರಾರಂಭಿಸಿ ಒಟ್ಟು ೫೯೧ ವಿದ್ಯಾಲಯಗಳಲ್ಲಿ ೧೦೧೫ ಕೋರ್ಸ್‌ಗಳನ್ನು (ಆಯ್ದ ೫೯ ಕಸಬುಗಳಲ್ಲಿ) ಒಟ್ಟು ೧೧೧೨ ವಿದ್ಯಾರ್ಥಿಗಳನ್ನು ದಾಖಲು ಮಾಡಿಕೊಳ್ಳಲಾಗಿದೆ.

ಪ್ರೌಢಶಾಲಾ ಹಂತದಲ್ಲಿ ವೃತ್ತಿ ಪೂರ್ವ (ಕೇಂದ್ರ ಸರ್ಕಾರದ ಯೋಜನೆಯಡಿಯಲ್ಲಿ) ಶಿಕ್ಷಣ ಕೋರ್ಸ್‌ಗಳನ್ನು ಸಂಯುಕ್ತ ಪದವಿ ಪೂರ್ವ ವಿದ್ಯಾಲಯಗಳಲ್ಲಿ ಆಯ್ದ (ವಿವಿಧ) ೨೦ ಕಸಬುಗಳಲ್ಲಿ ೧೦೦ ಕೋರ್ಸ್‌ಗಳನ್ನು ೧೯೯೪-೯೫ನೇ ಸಾಲಿನಿಂದ ಜಾರಿಗೊಳಿಸಲು ನಿರ್ಧರಿಸಲಾಯಿತು.

ಇದಲ್ಲದೇ ವೃತ್ತಿ ಶಿಕ್ಷಣ ಪಡೆದ ಪದವೀಧರ ವಿದ್ಯಾರ್ಥಿಗಳಿಗೆ ಹೆಚ್ಚಿನ ಉದ್ಯೋಗಾವಕಾಶ ಕೊಡುವುದರ ಸಲುವಾಗಿ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಪ್ರತ್ಯೇಕ ನೋಂದಣಿ ಅವಕಾಶ ಕಲ್ಪಿಸಲಾಗಿದೆ. ರಾಜ್ಯ ಸರ್ಕಾರವು ಸರ್ಕಾರೀ ಇಲಾಖೆಗಳಲ್ಲಿ ಉದ್ಯೋಗಾವಕಾಶ ನೀಡುವ ಉದ್ದೇಶದಿಂದ ಸರ್ಕಾರೀ ಇಲಾಖೆಗಳಿಗೆ ಮತ್ತು ಕೋರ್ಸಿಗೆ ಸಂಬಂಧಿಸಿದಂತೆ ಇಲಾಖೆಗಳು ಸಿ ಮತ್ತು ಆರ್ ನಿಯಮಗಳನ್ನೂ ತಿದ್ದುಪಡಿ ಮಾಡಲಾಗಿದೆ. ಇವುಗಳಿಂದಾಗಿ ವಿದ್ಯಾರ್ಥಿಗಳು ಉದ್ಯೋಗಾವಕಾಶ ಪಡೆಯುತ್ತಿದ್ದಾರೆ. ಇವುಗಳಲ್ಲದೇ, ಎರಡು ವರ್ಷ ತರಬೇತಿಯಾದ ನಂತರ ವಿದ್ಯಾರ್ಥಿಗಳಿಗೆ ಅಪ್ರೆಂಟಿಸ್‌ಶಿಪ್ ತರಬೇತಿ ಕಾರ್ಯಕ್ರಮಗಳನ್ನು ಜಾರಿಗೆ ತರಲು ತಿದ್ದುಪಡಿ ಮಾಡಲಾಗಿದ್ದು ೧೦೦೦ ವಿದ್ಯಾರ್ಥಿಗಳು ಇದರಿಂದಾಗಿ ಪ್ರಯೋಜನ ಪಡೆಯಲು ಅವಕಾಶ ಮಾಡಿಕೊಡಲಾಗಿದೆ. ಇದರಿಂದಾಗಿ ವಿದ್ಯಾರ್ಥಿಗಳು ಇನ್ನೂ ಹೆಚ್ಚಿನ ಪ್ರಾಯೋಗಿಕ ತರಬೇತಿ ಪಡೆದು ಕೆಲಸ/ಉದ್ದಿಮೆಗಳಲ್ಲಿ ಉನ್ನತ ಸ್ಥಾನ ಪಡೆಯಲು ಸಹಾಯಕವಾಗಿದೆ. ಇಲ್ಲವಾದಲ್ಲಿ ಸ್ವಯಂ ಉದ್ಯೋಗಿಗಳಾಗಲು ಸಾಧ್ಯವಿದೆ.

ವೃತ್ತಿ ಶಿಕ್ಷಣ ಇಲಾಖೆಯು ೧೯೯೩-೧೯೯೪ನೇ ಸಾಲಿನಲ್ಲಿ ಸುಮಾರು

೧೯೪.೦೭೫ ಲಕ್ಷ ರೂಪಾಯಿಗಳನ್ನು (ರಾಜ್ಯದ ಪಾಲು) ಮತ್ತು ೬೪೫.೩೩೫ ಲಕ್ಷ ರೂಪಾಯಿಗಳನ್ನು (ಕೇಂದ್ರದ ಪಾಲು) ವೃತ್ತಿ ಶಿಕ್ಷಣಕ್ಕಾಗಿ ಖರ್ಚು ಮಾಡಿದೆ.

ವೃತ್ತಿ ಶಿಕ್ಷಣವು ಪ್ರಗತಿಯಾಗಲು ರಾಜ್ಯ ಮತ್ತು ಕೇಂದ್ರ ಸರ್ಕಾರದ ನೆರವಿನಿಂದ ಸಾಧ್ಯವಾಗಿದ್ದರೂ ಸಹಾ ನಿರೀಕ್ಷಿಸಿದಷ್ಟು ಫಲಕಾರಿಯಾಗಿಲ್ಲ. ಇದಕ್ಕೆ ಕಾರಣವನ್ನು ವಿವಿಧ ಸಂಶೋಧನೆಗಳಿಂದ (ಎನ್.ಸಿ.ಇ.ಆರ್.ಟಿ., ಐ.ಐ.ಎಮ್., ಐ.ಎಸ್.ಇ.ಸಿ. ಶಿವರುದ್ರಪ್ಪ) ಕಂಡುಹಿಡಿಯಲಾಗಿದೆ. ಇವುಗಳಿಂದ ಹೊರಬಂದಿರುವ ಅಂಶಗಳು ಹೀಗಿವೆ:

ಆಡಳಿತ ಮತ್ತು ನಿರ್ವಹಣೆಯಲ್ಲಿರುವ ಕುಂದುಕೊರತೆಗಳು.

ವಿದ್ಯಾರ್ಥಿಗಳು ಮತ್ತು ಪೋಷಕರು ತೋರುವ ಭಾವನೆಗಳು (ಕೋರ್ಸುಗಳಿಗೆ ಹೆಚ್ಚು ಮಹತ್ವ ಕೊಡದಿರುವಿಕೆ, ಕೆಲವು ಕೋರ್ಸ್‌ಗಳ ಬಗ್ಗೆ ಹೆಚ್ಚು ಮಾಹಿತಿ ಇಲ್ಲದಿರುವಿಕೆ ಮತ್ತು ಪದವೀ ಮಟ್ಟದಲ್ಲಿ ಕೋರ್ಸ್‌ಗಳನ್ನು ಮುಂದುವರೆಸುವಂತಹ ಕಾರ್ಯಕ್ರಮಗಳಿಲ್ಲದಿರುವಿಕೆ, ಉದ್ಯೋಗಾವಕಾಶ ಕಡಿಮೆ ಇರುವಿಕೆ).

ವೃತ್ತಿ ತರಬೇತಿ ಕೊಡುವ ಕೇಂದ್ರಗಳನ್ನು ಪದವೀಪೂರ್ವ ಕಾಲೇಜುಗಳಿಗೆ ಸೇರಿಸುವುದರಿಂದ ಆಡಳಿತ ವರ್ಗದ ತಾರತಮ್ಯತೆಗೆ ತುತ್ತಾಗಿ ವೃತ್ತಿ ಶಿಕ್ಷಣದ ಗುಣಮಟ್ಟ ಕಡಿಮೆಯಾಗುತ್ತಾ ಬಂದಿದೆ.

ವೃತ್ತಿ ಶಿಕ್ಷಣದಲ್ಲಿ ಹೆಚ್ಚು ಶಿಕ್ಷಕರನ್ನು ನೇಮಿಸಲಾಗಿದ್ದು, ಅವರಿಗೆ (ಶಿಕ್ಷಕರಿಗೆ) ತರಬೇತಿ ನೀಡಲಾಗಿದೆ. ಅದರಡಿಯಲ್ಲಿ ಶ್ರಮಿಕ ಶಿಕ್ಷಕರಿಗೆ ಮತ್ತು ಉಪನ್ಯಾಸಕರಿಗೆ, ವೃತ್ತಿ ಶಿಕ್ಷಣ ವಿದ್ಯಾರ್ಥಿಗಳಿಗೆ ಪರಿಣಾಮಕಾರಿಯಾಗಿ ತರಬೇತಿ ನೀಡಲು ಅನುಕೂಲವಾಗುವಂತಹ ಜನರಲ್ ಫೌಂಡೇಷನ್ ಕೋರ್ಸ್ ತರಬೇತಿ ಕೊಡಲಾಗುತ್ತಿದೆ.

ವೃತ್ತಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ನಡೆಸಲಾಗುತ್ತಿರುವ ಪಾಲಿಟೆಕ್ನಿಕ್ ಮತ್ತು ಐ.ಟಿ.ಐ. ಕೋರ್ಸ್‌ಗಳೂ ಸಹ ಸಾಕಷ್ಟು ಪ್ರಗತಿ/ವಿಸ್ತರಣೆ ಹೊಂದಿವೆ. ಇವುಗಳೂ ಸಹ ಇತ್ತೀಚೆಗೆ ಗುಣಮಟ್ಟವನ್ನು ಕಳೆದುಕೊಂಡಿದ್ದು ಆ ಕಾರಣಕ್ಕಾಗಿ ಒಂದು ಕಮಿಟಿಯನ್ನೂ ರಚಿಸಿ ಅವರ ಸಲಹೆಯ ಮೇರೆಗೆ ಹೆಚ್ಚು ಕಾರ್ಯಕ್ರಮಗಳನ್ನು ನಿಯೋಜಿಸಲಾಗುತ್ತಿದೆ. ಈ ಕಾರಣದಿಂದಾಗಿ ಪಾಲಿಟೆಕ್ನಿಕ್ ಮತ್ತು ಐ.ಟಿ.ಐ. ಉತ್ತಮ ಪ್ರಗತಿ ಸಾಧಿಸುತ್ತಿವೆ. ಇವುಗಳನ್ನು ವಿಸ್ತರಿಸುವ ಯೋಜನೆ ಕರ್ನಾಟಕಕ್ಕೆ ಇದೆ. ಅವುಗಳಲ್ಲದೇ ಡ್ಯಾನಿಡ, ನಿಟ್ಟೂರು ಮುಂತಾದ ಖಾಸಗೀ ಸಂಸ್ಥೆಗಳೂ ವಿವಿಧ ವೃತ್ತಿ ಶಿಕ್ಷಣ ಕೊಡುವಂತಹ ಖಾಸಗೀ ಸಂಸ್ಥೆಗಳನ್ನೂ ನಗರ ವಲಯಗಳಲ್ಲಿ ಕಾಣಬಹುದು.

ಸಂಕ್ಷಿಪ್ತ ಮಟ್ಟದಲ್ಲಿ ಶಿಕ್ಷಣದ ವ್ಯಾಪ್ತಿಯಾಗದಿರುವಿಕೆ ಅಂದರೆ ಸುಮಾರು ಶೇಕಡ ೧೦೦ರಷ್ಟು (ಎಸ್.ಎಸ್.ಎಲ್.ಸಿ. ಪರೀಕ್ಷೆಯವರು) ವಿದ್ಯಾರ್ಥಿಗಳು ಮತ್ತು ಶಿಕ್ಷಣಕ್ಕೆ ಬರದೇ ಇರುವುದು ಕಂಡುಬಂದಿದೆ. ಇದಕ್ಕೆ ಕಾರಣ ವೃತ್ತಿ ಶಿಕ್ಷಣದ ಬಗ್ಗೆ ಅಭಿಪ್ರಾಯ ಭಿನ್ನವಾಗಿರುವುದು ಮತ್ತು ವೃತ್ತಿ ಶಿಕ್ಷಣದ ಮಹತ್ವವನ್ನು ಕುರಿತು ಪ್ರಚಾರ ನಡೆಸಲಾಗದಿರುವುದು.

ಶಿಕ್ಷಕರಿಗೆ ಖಾಯಂ ಕೆಲಸವಿಲ್ಲದಿರುವಿಕೆಯಿಂದಾಗಿ ಮತ್ತು ಶಿಕ್ಷಕರಿಗೆ ಸೂಕ್ತ ಸಂಭಾವನೆ ಮತ್ತು ಇತರ ಕಾಲೇಜುಗಳಲ್ಲಿರುವ ಶಿಕ್ಷಕರಿಗೆ ಸಿಗುವಂತಹ ಸೌಲಭ್ಯಗಳು ಸಿಗದಿರುವಿಕೆಯಿಂದಾಗಿ ಶಿಕ್ಷಕರು ವೃತ್ತಿ ಶಿಕ್ಷಣದಲ್ಲಿ ಮುಂದುವರೆಸದೇ ಇರುವುದು ಮತ್ತೊಂದು ಪ್ರಬಲ ಕಾರಣ.

## ಉನ್ನತ ಶಿಕ್ಷಣ

ಕರ್ನಾಟಕದ ಶಿಕ್ಷಣದ ಚರಿತ್ರೆಯನ್ನು ನೋಡಿದಾಗ ಕಂಡುಬರುವ ಅಂಶವೆಂದರೆ ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಗುತ್ತಿದ್ದು ಅದರ ವಿಸ್ತರಣೆ, ಪ್ರಾದೇಶಿಕ ವ್ಯಾಪ್ತಿಗೆ ಅನುವಾಗುವಂತಹ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರಲಾಗುತ್ತಿದೆ. ೧೯೫೬-೫೭ರಲ್ಲಿ ೫೧ ಕಾಲೇಜುಗಳು ಅವುಗಳಲ್ಲಿ ೩೦೪೦೦ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು ಮತ್ತು ಅಧ್ಯಾಪಕರ ಸಂಖ್ಯೆ ೧೩೨೦ ಇದ್ದಿತು.

೧೯೮೧ರಲ್ಲಿ ೨೬೫ ಕಾಲೇಜುಗಳು ಅವುಗಳಲ್ಲಿ ೨೨೩೪೫೭ ವಿದ್ಯಾರ್ಥಿಗಳೂ, ೬೧೬೨ ಶಿಕ್ಷಕರೂ ಇದ್ದರು. ೧೯೮೯ರ ವೇಳೆಗೆ ಸಾಮಾನ್ಯ ಶಿಕ್ಷಣ ನೀಡುವ ಕಾಲೇಜುಗಳ ಸಂಖ್ಯೆ ೪೬೫೫ ಇದ್ದು, ವೃತ್ತಿ ಶಿಕ್ಷಣ ನೀಡುವ ಕಾಲೇಜುಗಳ ಸಂಖ್ಯೆ ೮೯೧ ಇದ್ದಿತು. ಇವುಗಳಲ್ಲಿ ಸುಮಾರು ೪೨೫೭೨೯೯ ವಿದ್ಯಾರ್ಥಿಗಳಿದ್ದರು.

೧೯೯೨-೯೩ರಲ್ಲಿ ೫೩೨ ಕಾಲೇಜುಗಳೂ, ಸ್ನಾತಕೋತ್ತರ ವಿಭಾಗಗಳನ್ನು ಹೊಂದಿರುವ ೧೭೫ ಕಾಲೇಜುಗಳೂ, ಅವುಗಳಲ್ಲಿ ಸುಮಾರು ೩೪೪೦೧೦ ಮತ್ತು ೮೯೦೪ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಪ್ರಮಾಣ ೬೩ ಇದ್ದಿತು. ಇವುಗಳನ್ನು ವಿಶ್ವವಿದ್ಯಾಲಯಗಳ ಅಡಿಯಲ್ಲಿ ಹಮ್ಮಿಕೊಳ್ಳಲಾಗಿದೆ. ಉನ್ನತ ಶಿಕ್ಷಣದ ಮಹತ್ವವನ್ನು ಏಳನೇ ಮತ್ತು ಎಂಟನೇ ಪಂಚವಾರ್ಷಿಕ ಯೋಜನೆಗಳಲ್ಲಿ ತಿಳಿದು ಉನ್ನತ ಶಿಕ್ಷಣಕ್ಕೆ ಹೆಚ್ಚು ಹಣ ವ್ಯವಸ್ಥೆ ಮಾಡಲಾಗಿದೆ.

ಏಳನೇ ಪಂಚವಾರ್ಷಿಕ ಯೋಜನೆಯಲ್ಲಿ ಉನ್ನತ ಶಿಕ್ಷಣದಲ್ಲಿ ಪ್ರಗತಿಯನ್ನು ಗುರುತಿಸಿ ಎಂಟನೇ ವಾರ್ಷಿಕ ಯೋಜನೆಯಲ್ಲಿ ಅದನ್ನು ಹೆಚ್ಚು ಪರಿಣಾಮಕಾರಿಯಾಗಲು ಮತ್ತು ಶಿಕ್ಷಣದ ಗುಣಮಟ್ಟ ಹೆಚ್ಚುವಂತೆ ಮಾಡಲು ಕಾರ್ಯಕ್ರಮಗಳನ್ನು

ರೂಪಿಸಲಾಯಿತು. ಕರ್ನಾಟಕದಲ್ಲಿ ಪರ್ಸ್‌ಪೆಕ್ಟಿವ್ಸ್ ಫಾರ್ ಎಜುಕೇಶನ್ ಸೆಕ್ಟರ್ ಫಾರ್ ಪಾಲಿಸಿ ಪೇಪರ್ ಫಾರ್ ಎಯ್ತ್ ಫೈವ್ ಇಯರ್ ಪ್ಲಾನ್ (Perspectives for Education Sector Policy Paper for VIII Five Year Plan, August 1989) ಎಂಬ ವರದಿಯನ್ನು ಬಿಡುಗಡೆ ಮಾಡಲಾಯಿತು. ಇದರಡಿಯಲ್ಲಿ ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಲಾಯಿತು.

ಸರ್ ರಾಧಾಕೃಷ್ಣನ್ ಕಮೀಷನ್ (೧೯೪೮), ಮೊದಲಿಯಾರ್ ಕಮೀಷನ್ (೧೯೪೮), ಕೊಠಾರಿ ಕಮೀಷನ್ (೧೯೬೪-೬೬). ನೂತನ ಶಿಕ್ಷಣ ಪದ್ಧತಿ (೧೯೮೬) ಮತ್ತು ಆಚಾರ್ಯ ರಾಮಮೂರ್ತಿ ಕಮಿಟಿ ವರದಿಗಳು ಉನ್ನತ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ನೀಡಿ ಸಲಹೆಗಳನ್ನು ಮಾಡಿದ್ದವು. ಇವುಗಳನ್ನು ಕರ್ನಾಟಕದ ಉನ್ನತ ಶಿಕ್ಷಣದ ವಿವಿಧ ಅಂಗಗಳಲ್ಲಿ ಅಳವಡಿಸಲಾಗಿದ್ದು ಅದರಂತೆ ಶಿಕ್ಷಣದ ಪ್ರಗತಿ ಮತ್ತು ವಿಸ್ತರಣೆಯಾಗುವಂತೆ ಪಂಚವಾರ್ಷಿಕ ಯೋಜನೆಗಳಲ್ಲಿ ಹಣ ವಿನಿಮಯ ಮಾಡಲಾಗಿತ್ತು ಆದರೆ ಉನ್ನತ ಶಿಕ್ಷಣದಲ್ಲಿ ತಲೆದೋರಿದ ಸಮಸ್ಯೆಗಳು ಅನೇಕ. ಅವುಗಳನ್ನು ಗುರುತಿಸಿ ಎಂಟನೇ ಪಂಚವಾರ್ಷಿಕ ಯೋಜನೆಯಲ್ಲಿ ಉನ್ನತ ಶಿಕ್ಷಣದ ಗುಣಮಟ್ಟವೇರಿಸಲು ಸಾಧ್ಯವಾದಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಈ ವಿವರಗಳನ್ನು ಹೊತ್ತ ಮೇಲೆ ಹೇಳಿದ ವರದಿಯಲ್ಲಿ ಉನ್ನತ ಶಿಕ್ಷಣದ ಬಗ್ಗೆ ಕೆಲವು ಅನಿಸಿಕೆಗಳನ್ನು ನೋಡಿದಾಗ ಕಂಡು ಬರುವ ಅಂಶಗಳು ಹೀಗಿವೆ. "ಕರ್ನಾಟಕದಲ್ಲಿ ಮಾನವ ಸಂಪನ್ಮೂಲಾಭಿವೃದ್ಧಿ ಆಗಬೇಕಾದರೆ, ಔದ್ಯೋಗೀಕರಣ ಮತ್ತು ವಿಧಾನಗಳನ್ನು ನವೀಕರಿಸಿ ಅನುಸರಿಸಬೇಕಾದರೆ ಉನ್ನತ ಶಿಕ್ಷಣ ಪಡೆದ ಜನಶಕ್ತಿ ಅವಶ್ಯಕ." ಉನ್ನತ ಶಿಕ್ಷಣ ಪಡೆದ ಜನಶಕ್ತಿಯೇ ಕರ್ನಾಟಕದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗೆ ಅನುಕೂಲವಾಗುವಂತಹ ಜನಸಂಖ್ಯೆ. ಇವರಿಂದಲೇ ಕಾರ್ಖಾನೆಗಳಲ್ಲಿ, ಉದ್ದಿಮೆಗಳಲ್ಲಿ, ಸೇವಾ ಕ್ಷೇತ್ರಗಳಲ್ಲಿ ನುರಿತ ಜನಶಕ್ತಿ ಇರಲು ಸಾಧ್ಯವಾಗುತ್ತದೆ. ಇವುಗಳಿಂದಲೇ ರಾಜ್ಯದ ಆರ್ಥಿಕ ಮಟ್ಟ ಸುಧಾರಿಸಲು ಕಲೆ ವಿಭಾಗದಲ್ಲಿದ್ದಾರೆ. ವಿಜ್ಞಾನ ಶಿಕ್ಷಣ ಪಡೆಯುತ್ತಿರುವವರು ಶೇಕಡ ೨೦ರಷ್ಟು ಮಾತ್ರ. ಇದಕ್ಕೆ ಕಾರಣ ಅನೇಕ. ಇವುಗಳಲ್ಲಿ ಪ್ರಮುಖವಾದುದು ಪ್ರಯೋಗಶಾಲೆಗಳ ಗುಣಮಟ್ಟ (ಶೋಚನೀಯವಾಗಿದೆ) ಕಡಿಮೆ, ವಿಜ್ಞಾನ ಶಿಕ್ಷಣ ಪಡೆಯಲು ಸೌಲಭ್ಯ, ಸೌಕರ್ಯಗಳಿಲ್ಲದಿರುವಿಕೆ, ಮುಂದುವರೆದ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗಾಗಿ ಸೌಲಭ್ಯ ಸಲಕರಣೆಗಳು ಮತ್ತು ವಿಜ್ಞಾನ ಶಿಕ್ಷಣಕ್ಕೆ ಅನುಕೂಲವಾಗುವಂತಹ ಪ್ರಯೋಗ ಶಾಲೆಗಳು ಮತ್ತು ಅದಕ್ಕೆ ಸೂಕ್ತವಾದ ಶಿಕ್ಷಕರ ವ್ಯವಸ್ಥೆ ಮಾಡುವುದರಿಂದಲೇ ಮುಂದಿನ ಪೀಳಿಗೆಯಲ್ಲಿ ವಿಜ್ಞಾನಿಗಳನ್ನು ಮತ್ತು ವಿಜ್ಞಾನಕ್ಕೆ ಹೊಂದುವಂತಹ ಜನಶಕ್ತಿಯನ್ನು ತಯಾರಿಸಲು ಸಾಧ್ಯವಾಗುವುದು. ಇಲ್ಲದಿದ್ದಲ್ಲಿ ನಮ್ಮ ದೇಶವು ವೈಜ್ಞಾನಿಕವಾಗಿ ಪ್ರಗತಿ ಪಡೆಯಲು ಅಸಾಧ್ಯ ಎಂದು ತಿಳಿಸಿದ್ದಾರೆ. ಅದಲ್ಲದೇ ಉನ್ನತ ಶಿಕ್ಷಣದಲ್ಲಿನ ಅನೇಕ ಸಮಸ್ಯೆಗಳನ್ನು ವಿಶ್ಲೇಷಿಸಿ ಎಂಟನೇ

ಪಂಚವಾರ್ಷಿಕ ಯೋಜನೆಯಲ್ಲಿ ಶಿಕ್ಷಣದ ಗುಣಮಟ್ಟವನ್ನು ಏರಿಸುವಂತಹ ಸೌಲಭ್ಯಗಳನ್ನು ಕರ್ನಾಟಕ ಸರ್ಕಾರ (ಕೇಂದ್ರ ಸರ್ಕಾರ ಮತ್ತು ಯು.ಜಿ.ಸಿ. ನೆರವಿನಿಂದ) ಒದಗಿಸುತ್ತಿದೆ.

ಅಲ್ಲದೇ ೧೯೯೨ರಲ್ಲಿ ನವನೀತರಾವ್‌ರವರ ನೇತೃತ್ವದಲ್ಲಿ ಒಂದು ಕಮಿಟಿಯನ್ನು ರಚಿಸಲಾಗಿದ್ದು ಕರ್ನಾಟಕದ ವಿಶ್ವವಿದ್ಯಾಲಯಗಳ ಶೈಕ್ಷಣಿಕ, ಆಡಳಿತ ಮತ್ತು ನಿರ್ವಹಣೆಯನ್ನು ಕುರಿತಂತೆ ಇರುವ ಪ್ರಮುಖ ಸಮಸ್ಯೆಗಳನ್ನು ಅಧ್ಯಯಿಸಿ ಅವುಗಳ ನಿವಾರಣೋಪಾಯಕ್ಕೆ ಕೆಲವಾರು ಸಲಹೆಗಳನ್ನು ನೀಡಿದೆ. ಅವುಗಳಲ್ಲಿ ಪ್ರಮುಖವಾದವುಗಳು:

ಶಿಕ್ಷಣದ ಗುಣಮಟ್ಟವನ್ನು ಹೆಚ್ಚುವಂತೆ ಮಾಡಲು ಶಿಕ್ಷಕರ ತರಬೇತಿ, ಶಿಕ್ಷಕರಿಗೆ ವೇತನ ಹೆಚ್ಚಿಸುವಿಕೆ, ಕಾಲೇಜುಗಳನ್ನೂ ಮತ್ತು ವಿಶ್ವವಿದ್ಯಾಲಯಗಳನ್ನು ಸ್ವಯಂ ಶಾಸನ ಪದ್ಧತಿಗೆ ಅಳವಡಿಸುವುದು, ಉನ್ನತ ಶಿಕ್ಷಣದಲ್ಲಿ ವೃತ್ತಿ ಶಿಕ್ಷಣವನ್ನು ಜಾರಿಗೆ ತರುವುದು, ಅಂತರ್ ವಿಶ್ವವಿದ್ಯಾಲಯಗಳ ಸಮಾವೇಶ ಅಡಿಗಡಿಗೆ ಮಾಡಿ ಉನ್ನತ ಶಿಕ್ಷಣದಲ್ಲಿರುವ ಸಮಸ್ಯೆಗಳನ್ನು ನಿವಾರಿಸುವುದು, ಕುಲಪತಿಗಳ ಸ್ಥಾನಕ್ಕೆ ಶಿಕ್ಷಣ ವೃಂದದವರಿಂದಲೇ ಒಬ್ಬರನ್ನು ನೇಮಕಾತಿ ಮಾಡುವುದು, ಸಹಭಾಗಿತ್ವವುಳ್ಳ ಆಡಳಿತ ವ್ಯವಸ್ಥೆಯನ್ನು ವಿಶ್ವವಿದ್ಯಾಲಯಗಳಲ್ಲಿ ಮತ್ತು ಕಾಲೇಜುಗಳಲ್ಲಿ ಅಳವಡಿಸಿಕೊಳ್ಳುವುದು.

### ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣ

ಕರ್ನಾಟಕದ ತಾಂತ್ರಿಕ ಶಿಕ್ಷಣವು ೧೯ನೇ ಶತಮಾನದಲ್ಲಿ ಪ್ರಾರಂಭವಾಗಿದ್ದು ೧೯೫೧-೫೬ರ ವೇಳೆಗೆ ಸುಮಾರು ಆರು ಇಂಜಿನಿಯರಿಂಗ್ ಕಾಲೇಜುಗಳಿದ್ದವು. ೧೯೫೬-೬೧ರಲ್ಲಿ ಅವುಗಳ ಸಂಖ್ಯೆ ೧೧ಕ್ಕೆ ಏರಿತು. ೧೯೬೧ರಿಂದ ೧೯೭೫ರವರೆಗೆ ಅವುಗಳ ಸಂಖ್ಯೆ ೪೧ ಆಯಿತು ಮತ್ತು ೧೯೯೨-೯೩ರ ವೇಳೆಗೆ ೫೫ಕ್ಕೆ ಏರಿತು.

ಅದೇ ರೀತಿ ವೈದ್ಯಕೀಯ ಕಾಲೇಜುಗಳ ಸಂಖ್ಯೆ ೧೯೫೬ಕ್ಕೆ ಮುನ್ನ ಒಂದಾಗಿದ್ದು ೧೯೬೦-೬೧ರ ವೇಳೆಗೆ ೪ಕ್ಕೆ ಏರಿತು. ೧೯೭೧ರಿಂದ ೧೯೯೧ರವರೆಗೆ ಸುಮಾರು ೧೯ ಕಾಲೇಜುಗಳು ಪ್ರಾರಂಭವಾದವು.

ಕರ್ನಾಟಕದ ತಾಂತ್ರಿಕ ಶಿಕ್ಷಣ ಮತ್ತು ವೈದ್ಯಕೀಯ ಶಿಕ್ಷಣ ದೇಶದಲ್ಲಿ ಬಹು ಮಹತ್ವವನ್ನು ಪಡೆದಿದ್ದು ಈ ಶಿಕ್ಷಣ ಪಡೆಯಲು ಭಾರತಾದ್ಯಂತ (ಮತ್ತು ವಿದೇಶೀಯ) ವಿದ್ಯಾರ್ಥಿಗಳು ಇಚ್ಛಿಸುವ ಕಾರಣ ಕಾಲೇಜುಗಳಲ್ಲಿನ ಒತ್ತಡ ಹೆಚ್ಚುತ್ತಾ ಇದೆ. ಈ ಕಾರಣದಿಂದಲೇ ವಿದ್ಯಾರ್ಥಿಗಳ ಸಂಖ್ಯೆ ಅಧಿಕವಾಗಿ ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾಗಿರಿಸುವಂತಹ

ಸುಪ್ರೀಂ ಕೋರ್ಟ್ ಸುಗ್ರೀವಾಜ್ಞೆ ಹೊರಡಿಸಿತು. ಇದಕ್ಕಾಗಿ ಇಲ್ಲಿನ ಆಡಳಿತ ವ್ಯವಸ್ಥೆಯನ್ನು ಮಾಡಲು ಸರ್ಕಾರವು ಹೆಚ್ಚು ಸ್ವಯಂ ಸೇವಾ ಸಂಸ್ಥೆಗಳಿಗೆ ಉತ್ತೇಜನ ನೀಡಲಾರಂಭಿಸಿತು. ಈ ವರ್ಷದಲ್ಲಿ ಕನ್ನಡಿಗರಿಗಾಗಿಯೇ ಮೀಸಲಾತಿ ಇರಬೇಕೆಂಬ ನಿರ್ಧಾರವನ್ನು ಸರ್ಕಾರ ತೆಗೆದುಕೊಂಡಿದೆ.

೧೯೬೧ರಿಂದ ೭೦ರವರೆಗೆ ಈ ಕೋರ್ಸ್‌ಗಳಲ್ಲಿ ಶೈಕ್ಷಣಿಕ ನಷ್ಟ ಹೆಚ್ಚಾಗಿತ್ತು ಈಗ ಶೈಕ್ಷಣಿಕ ನಷ್ಟವು ಕಡಿಮೆಯಾಗುತ್ತಾ ಬರುವುದು ಕಂಡು ಬಂದಿದೆ (ಡಿ.ಎಮ್. ನಂಜುಂಡಪ್ಪ ಮತ್ತು ಗೌರಿಶಂಕರ) ಇದಲ್ಲದೇ ಹೆಚ್ಚಿನ ಸಂಖ್ಯೆಯಲ್ಲಿ ಈ ಎರಡು ಶಿಕ್ಷಣಗಳನ್ನು ಪಡೆದ ವಿದ್ಯಾರ್ಥಿಗಳು ತೇರ್ಗಡೆ ಹೊಂದಿ ವಿವಿಧ ಉದ್ಯೋಗ ಕೇಂದ್ರಗಳಲ್ಲಿ ಭರ್ತಿಯಾಗಿರುವುದನ್ನು ಗುರುತಿಸಬಹುದಾಗಿದೆ. ಉದ್ಯೋಗ ವಿನಿಮಯ ಕೇಂದ್ರಗಳಲ್ಲೂ ಸಹ ಹೆಸರನ್ನು ನೊಂದಾಯಿಸಿದವರ ಸಂಖ್ಯೆ ಹೆಚ್ಚಿರುವುದು ಕಂಡು ಬರುತ್ತದೆ.

ವಿಜ್ಞಾನ ಶಿಕ್ಷಣ, ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣವನ್ನು ಪಡೆದ ವಿದ್ಯಾರ್ಥಿಗಳು ಹೆಚ್ಚಿನಾಂಶ ಇರುವುದರಿಂದಲೇ ಮಾನವ ಸಂಪನ್ಮೂಲಾಭಿವೃದ್ಧಿ ಸಾಧ್ಯವಾಗುತ್ತದೆ ಎಂಬುದನ್ನು ಗುರುತಿಸಿ ಎಂಟನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಹೆಚ್ಚಿನ ಬೆಂಬಲ ನೀಡಲಾಗುತ್ತಿದೆ.

ಅಲ್ಲದೇ ಇಂದಿರಾ ಗಾಂಧಿ ಮುಕ್ತ ವಿಶ್ವವಿದ್ಯಾನಿಲಯ, ಐ.ಐ.ಎಮ್, ಐಸೆಕ್, ಇಸ್ರೋ, ಐ.ಐ.ಎಸ್.ಸಿ., ಮುಂತಾದ ಸಂಶೋಧನಾ ಕೇಂದ್ರಗಳು ಉನ್ನತ ಶಿಕ್ಷಣಕ್ಕೆ ಹೆಚ್ಚು ಒತ್ತುಕೊಡುತ್ತಿವೆ.

ಕರ್ನಾಟಕ ಸರ್ಕಾರವು ವಿವಿಧ ಯೋಜನೆಗಳಡಿಯಲ್ಲಿ ನಡೆಸುತ್ತಿರುವ ಕಾರ್ಯಕ್ರಮದಲ್ಲಿ ಪದವೀಧರ ಮತ್ತು ಸ್ನಾತಕೋತ್ತರ ಸಂಖ್ಯೆ ಹೆಚ್ಚುತ್ತಿರುವುದು ಗಮನಾರ್ಹವಾದ ಅಂಶ.

**ವಯಸ್ಕರ ಶಿಕ್ಷಣ**

ವಯಸ್ಕರ ಶಿಕ್ಷಣವು ಕರ್ನಾಟಕದಲ್ಲಿ ಮೊಟ್ಟಮೊದಲು ೧೯ನೇ ಶತಮಾನದಲ್ಲಿ ಪ್ರಾರಂಭವಾಗಿ ಅದಕ್ಕೆ ಪ್ರತೀ ಪಂಚವಾರ್ಷಿಕ ಯೋಜನೆಗಳಲ್ಲೂ ಒತ್ತು ಕೊಡಲಾಗುತ್ತಿದೆ. ೧೯೮೯-೯೦ನೇ ಸಾಲಿನಲ್ಲಿ ರಾಜ್ಯದಲ್ಲಿ ಪ್ರಾಯೋಗಿಕವಾಗಿ ಸಾಕ್ಷರತಾ ಆಂದೋಲನವನ್ನು ಘೋಷಿಸಲಾಯಿತು. ಸಾಮೂಹಿಕ ಸಾಕ್ಷರತಾ ಆಂದೋಲನವನ್ನು ೨೦ ತಾಲ್ಲೂಕುಗಳಲ್ಲಿ ವಿವಿಧ ಸ್ವಯಂ ಸೇವಾ ಸಂಸ್ಥೆಗಳು, ಸ್ವಯಂ ಸೇವಕರು, ಸಾಮೂಹಿಕ ಕ್ರಿಯಾ ಕಾರ್ಯಕ್ರಮದ ಅಂಗವಾಗಿ ಒಟ್ಟು ೨.೩೨ ಲಕ್ಷ ಅಕ್ಷರಸ್ಥರನ್ನು ದಾಖಲಾತಿ ಮಾಡಿಕೊಂಡು ೧.೯೪ ಲಕ್ಷ ಅನಕ್ಷರಸ್ಥರನ್ನು ಸಾಕ್ಷರರನ್ನಾಗಿ ಮಾಡಲಾಗಿದೆ.

ರಾಷ್ಟ್ರೀಯ ಸಾಕ್ಷರತಾ ನಿಯೋಗ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಜಿಲ್ಲಾ ಪರಿಷತ್, ಮಂಡಲ್ ಪಂಚಾಯತ್ ಮತ್ತು ಇತರ ಅಭಿವೃದ್ಧಿ ಇಲಾಖೆಗಳ ಸಹಕಾರದೊಂದಿಗೆ ಸಾಕ್ಷರತಾ ಕಾರ್ಯಾಚರಣೆಗೊಳಿಸಲಾಗಿದೆ.

೧೯೯೧-೯೨ರ ವೇಳೆಗೆ ಸುಮಾರು ೭೨೦೦ ಕೇಂದ್ರಗಳು ಅವುಗಳಲ್ಲಿ ೨೧೬೦೦೦ ದಾಖಲಾತಿ ಸಂಖ್ಯೆಯನ್ನು ಹೊಂದಿ ಸಂಪೂರ್ಣವಾಗಿ ಸಾಮೂಹಿಕ ಸಾಕ್ಷರತಾ ಆಂದೋಲನದ ದಾಖಲಾತಿ ೧೩.೯೧ ಲಕ್ಷ ದಾಖಲಾತಿಯಾಗುವಂತೆ ಕಾರ್ಯಾಚರಣೆ ನಡೆಸಲಾಗಿದೆ.

ಕಾರ್ಯಕ್ರಮದಿಂದಾಗಿ ರಾಜ್ಯದ ಅನಕ್ಷರಸ್ಥರ ಸಂಖ್ಯೆ ಕಡಿಮೆಯಾಗುವ ಸಂಭವವಿದೆ. ಇದು ಜನರಿಗಾಗಿ ಜನರಿಂದಲೇ ನಡೆಸಲ್ಪಡುವ ಕಾರ್ಯಕ್ರಮವಾಗಿ ಹೆಚ್ಚು ಫಲಕಾರಿಯಾಗಿಯೂ ಮತ್ತು ಕರ್ನಾಟಕವು ದೇಶದಲ್ಲಿ ಒಂದು ಮಾದರಿ ರಾಜ್ಯವಾಗಲಿದೆಯೆಂದರೆ ಅತಿಶಯೋಕ್ತಿಯಲ್ಲ.

**ಉಪಸಂಹಾರ**

ಕರ್ನಾಟಕ ರಾಜ್ಯದ ಮಾನವ ಸಂಪನ್ಮೂಲಾಭಿವೃದ್ಧಿ ಮತ್ತು ವಿಸ್ತರಣೆಯಾಗಲು ಒಂದು ಕಡೆ ಶಿಕ್ಷಣದ ಪ್ರಗತಿಯಾಗಬೇಕು ಮತ್ತೊಂದು ಕಡೆ ಉದ್ಯೋಗದಲ್ಲಿ ನಿರತರಾಗಿರುವ ಜನಶಕ್ತಿಯ ಬೆಳವಣಿಗೆಯಾಗಬೇಕು. ಶಿಕ್ಷಣದಿಂದಲೇ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ಸಾಧ್ಯ. ಆದರೆ ಶಿಕ್ಷಣ ಪಡೆದ ನುರಿತ ಪರಿಣಿತರಾದ ಜನಶಕ್ತಿಯನ್ನೇ ಅವಲಂಬಿಸಿ ನಡೆಸಿರುವ ಆರ್ಥಿಕ ಯೋಜನೆಗಳು ಫಲಕಾರಿಯಾಗಿಯೂ ಮತ್ತು ಪರಿಣಾಮಕಾರಿಯಾಗುವಂತಹ ಕಾರ್ಯಕ್ರಮಗಳನ್ನು ಕೊಟ್ಟಿವೆ. ಆದರೆ ಈ ದಿಸೆಯಲ್ಲಿ ಕರ್ನಾಟಕದ ಮಾನವ ಸಂಪನ್ಮೂಲಾಭಿವೃದ್ಧಿಯಲ್ಲಿನ ಯೋಜನೆಗಳಲ್ಲಿ ನಿರೀಕ್ಷಿಸಿದ ಪ್ರಗತಿ ಸಾಧಿಸಲು ಪ್ರಯತ್ನಗಳನ್ನು ನಡೆಸಲಾಗುತ್ತಿದೆ. ಆದರೆ ಸಾಕಷ್ಟು ಜನಶಕ್ತಿ ನಿರ್ದಿಷ್ಟ ದಿಸೆಯಲ್ಲಿ ಶಿಕ್ಷಣ ಮತ್ತು ತರಬೇತಿ ಪಡೆಯದಿರುವಿಕೆ, ಶಿಕ್ಷಣದ ಸಮಸ್ಯೆಗಳು, ಉದ್ಯಮ ಮತ್ತು ಶಿಕ್ಷಣ, ನೇರ ಸಂಬಂಧವಿಲ್ಲದಿರುವಿಕೆ. ಪದವೀಧರರು ನಿರುದ್ಯೋಗಿಗಳಾಗಿರುವಿಕೆ, ಶಿಕ್ಷಣ ಪಡೆದ ವ್ಯಕ್ತಿಗಳಿಗೆ ಹೊಂದುವಂತಹ ಉದ್ಯೋಗದ ಕೊರತೆ, ಶಿಕ್ಷಣ ಪಡೆದವರು ಹೊರದೇಶಗಳಿಗೆ ವಲಸೆ ಹೋಗುವಿಕೆ, ಉನ್ನತ ಶೈಕ್ಷಣಿಕ ನಷ್ಟ, ವಿಶ್ವವಿದ್ಯಾಲಯಗಳಿಂದ ಹೊರಬರುವಂತಹ ವಿದ್ಯಾರ್ಥಿಗಳ ಗುಣಮಟ್ಟ ಕಡಿಮೆ ಇರುವುದು. ಕರ್ನಾಟಕ ಸರ್ಕಾರವು ಯುವ ಜನರಿಗಾಗಿ ಮತ್ತು ಬಡತನ ರೇಖೆಯಡಿಯಲ್ಲಿರುವ ಜನರಿಗೆ ಒದಗಿಸುತ್ತಿರುವ ಕಾರ್ಯಕ್ರಮಗಳಲ್ಲಿ ಹೆಚ್ಚು ಫಲಾನುಭವಿಗಳಿಲ್ಲದಿರುವಿಕೆ, ಈ ಕಾರ್ಯಕ್ರಮಗಳಲ್ಲಿನ ಆಡಳಿತ ವ್ಯವಸ್ಥೆಯಲ್ಲಿರುವ ಲೋಪ ದೋಷಗಳು, ಶಿಕ್ಷಣದಲ್ಲಿ ರಾಜಕೀಯತೆ ಮತ್ತು ರಾಜಕಾರಣಿಗಳ ಅಕ್ರಮ ಪ್ರವೇಶ, ಯುವಜನಾಂಗಗಳಲ್ಲಿನ ಅಸಮಾಧಾನ, ಶಿಕ್ಷಕರು ಮತ್ತು ಶಿಕ್ಷಣ ಪಡೆಯುವವರಲ್ಲಿನ

ಸಂಬಂಧದಲ್ಲಿ ಬಿರುಕು, ಜಾತ್ಯತೀತ ಘರ್ಷಣೆಗಳು, ಶಿಕ್ಷಕರ ಸಂಘಗಳ ಪ್ರತಿಭಟನೆ, ವಿದ್ಯಾರ್ಥಿಗಳ ಮೌಲ್ಯ/ನೈತಿಕ ಮಟ್ಟದಲ್ಲಿನ ಬದಲಾವಣೆಗಳು, ಪೋಷಕರ ಅನಕ್ಷರತೆ, ಗ್ರಾಮೀಣ ಮತ್ತು ನಗರವಾಸಿಗಳಲ್ಲಿರುವ ತಾರತಮ್ಯ ಮುಂತಾದವುಗಳೇ ಈಗಿನ ಸಮಸ್ಯೆಗಳು.

ಶಿಕ್ಷಣದ ಪ್ರಗತಿಯಾದಂತೆ ಮಾನವ ಸಂಪನ್ಮೂಲಾಭಿವೃದ್ಧಿಯು ನಡೆಯುತ್ತಿರುವುದು ಕರ್ನಾಟಕದಲ್ಲಿ ಕಂಡು ಬರುತ್ತಿದೆ. ಕರ್ನಾಟಕದ ಶಿಕ್ಷಣವು ದೇಶದಲ್ಲಿ ಹೆಚ್ಚಿನಾಂಶ ಮಾನವ ಸಂಪನ್ಮೂಲಾಭಿವೃದ್ಧಿಗೆ ಬೇಕಾದ ಜನಶಕ್ತಿಯನ್ನು ಉತ್ಪನ್ನ ಮಾಡುತ್ತಿದೆ ಎಂದರೆ ಅತಿಶಯೋಕ್ತಿಯಲ್ಲ. ಇದಕ್ಕೆ ಕಾರಣಗಳು ಅನೇಕ. ಅವುಗಳಲ್ಲಿ ಶಿಕ್ಷಣ ಸಂಸ್ಥೆಗಳ ಬೆಳವಣಿಗೆ, ಸ್ವಯಂಶಾಸಕ ಸಂಘ ಸಂಸ್ಥೆಗಳ ಮುತುವರ್ಜಿ ಮತ್ತು ಶಿಕ್ಷಣದಲ್ಲಿ ಮೀಸಲಾತಿ ನಿಯಮಗಳನ್ನು ಪಾಲಿಸುವಿಕೆ ಮತ್ತು ಪಂಚವಾರ್ಷಿಕ ಯೋಜನೆಗಳಲ್ಲಿ ಸೌಲಭ್ಯ ಮತ್ತು ಸೌಕರ್ಯಗಳನ್ನು ಒದಗಿಸುವಿಕೆ ಮುಂತಾದವುಗಳು ಪ್ರಮುಖವಾಗಿದೆ. ಇದಲ್ಲದೇ ಶೈಕ್ಷಣಿಕ ನಷ್ಟವಾಗುವುದನ್ನು ಕಡಿಮೆ ಮಾಡುವಂತಹ ಕಾರ್ಯಕ್ರಮಗಳಿಗೆ ವಿದೇಶೀ ವಿನಿಮಯದೊಂದಿಗೆ ವಿಶ್ವಸಂಸ್ಥೆಗಳಿಂದ ಧನ ಸಹಾಯ ಪಡೆದು ನಡೆಸುವ ವಿವಿಧ ಕಾರ್ಯಕ್ರಮಗಳಿಂದ ದೇಶದ ಮಾನವ ಸಂಪನ್ಮೂಲಾಭಿವೃದ್ಧಿಯಾಗುವುದರಲ್ಲಿ ಕರ್ನಾಟಕದ ಪಾತ್ರ ಹಿರಿದು ಎಂಬುದರಲ್ಲಿ ಸಂದೇಹವಿಲ್ಲ.

## ಗ್ರಂಥ ಋಣ

### ಲೇಖನಗಳು

ಸೀತಾ ಪ್ರಭು, ದಿ ಬಡ್ಜೆಟ್ ಆ್ಯಂಡ್ ಸ್ಟ್ರಕ್ಚರಲ್ ಅಡ್ಜಸ್ಟ್‌ಮೆಂಟ್ ವಿತ್ ಎ ಹ್ಯೂಮನ್ ಫೇಸ್, ಈ.ಪಿ.ಡಬ್ಲ್ಯೂ, ಏಪ್ರಿಲ್ ೧೬-೨೩, ೧೯೯೪.

ಎಸ್.ಪಿ. ಗುಪ್ತ ಆ್ಯಂಡ್ ಎ.ಕೆ. ಸರ್ಕಾರ್, ಫಿಸ್ಕಲ್ ಕರೆಕ್ಷನ್ ಆ್ಯಂಡ್ ಹ್ಯೂಮನ್ ರಿಸೋರ್ಸ್ ಡಿಪಾರ್ಟಮೆಂಟ್, ಎಕ್ಸಪೆಂಡಿಚರ್ ಅಟ್ ಸೆಂಟ್ರಲ್ ಆ್ಯಂಡ್ ಸ್ಟೇಟ್ ಲೆವಲ್ಸ್, ಈ.ಪಿ.ಡಬ್ಲ್ಯೂ, ಮಾರ್ಚ್ ೨೬, ೧೯೯೪.

ಯುನಿವರ್ಸಿಟಿ ನ್ಯೂಸ್, ಜುಲೈ ೩, ೧೯೯೫ ಪಿ.ಪಿ. ೧೮-೧೯.

ಯುನಿವರ್ಸಿಟಿ ನ್ಯೂಸ್, ಜೂನ್ ೧೯, ೧೯೯೫.

ಯು.ಎನ್.ಡಿ.ಪಿ. ಹ್ಯೂಮನ್ ಡೆವಲಪಮೆಂಟ್ ರಿಪೋರ್ಟ್, ೧೯೯೪.

ಗವರ್ನಮೆಂಟ್ ಆಫ್ ಇಂಡಿಯಾ (ಪ್ಲಾನಿಂಗ್ ಕಮೀಷನ್) ಸೆವೆನ್ತ್ ಫೈವ್ ಇಯರ್ ಪ್ಲಾನ್ ೧೯೮೫-೯೦, ಸೆಂಟರ್ ಫಾರ್ ರಿಸರ್ಚ್ ಇನ್ ರೂರಲ್ ಆ್ಯಂಡ್ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್.

ಎಜುಕೇಷನ್ ಇನ್ ಇಂಡಿಯನ್ ಪಾಲಿಸೀಸ್ ಪ್ಲಾನಿಂಗ್ ಅ್ಯಂಡ್ ಇಂಪ್ಲೀಮೆಂಟೇಷನ್ ೧೯೮೧-೮೫, ೧೯೯೫.

ಗವರ್ನಮೆಂಟ್ ಆಫ್ ಇಂಡಿಯಾ: (ಮಿನಿಸ್ಟ್ರಿ ಆಫ್ ಎಜುಕೇಷನ್), ರಿಪೋರ್ಟ್ ಆಫ್ ಎಜುಕೇಷನ್ ಕಮೀಷನ್ ೧೯೬೪-೬೬.

ನ್ಯಾಷನಲ್ ಲಿಟ್ರಸಿ ಮಿಷನ್ ದಿ ಕರ್ನಾಟಕಾ ಲಿಟ್ರಸಿ ಕ್ಯಾಂಪೇನ್

ಕರ್ನಾಟಕ ಪ್ರಗತಿಪಥ, ನಂಜುಂಡಪ್ಪ ಡಿ.ಎಂ.

## ಪುಸ್ತಕಗಳು

ಸೀತಾರಾಮು ಎ.ಎಸ್ (೧೯೮೦): ಎಜುಕೇಷನ್ ಅಂಡ್ ರೂರಲ್ ಡೆವೆಲಪ್‌ಮೆಂಟ್, ನ್ಯೂಡೆಲ್ಲಿ, ಆಷೀಷ ಪಬ್ಲಿಷರ್ಸ್

ಸೀತಾರಾಮು ಎ.ಎಸ್ (೧೯೮೫): ಎಜುಕೇಷನ್ ಇನ್ ಸ್ಲಮ್ಸ್, ನ್ಯೂಡೆಲ್ಲಿ, ಆಷೀಷ ಪಬ್ಲಿಷರ್ಸ್.

ಸೀತಾರಾಮು ಎ.ಎಸ್ ಮತ್ತು ಎಂ.ಡಿ. ಉಷಾದೇವಿ (೧೯೮೫): ಎಜುಕೇಷನ್ ಇನ್ ರೂರಲ್ ಏರಿಯಾಸ್: ಕನ್‌ಸ್ಟ್ರೇನ್ಸ್ ಅಂಡ್ ಪ್ರಾಸ್ಪೆಕ್ಟ್ಸ್, ನ್ಯೂಡೆಲ್ಲಿ, ಆಷೀಷ ಪಬ್ಲಿಷರ್ಸ್.

ದೇವೇಗೌಡ ಎ.ಸಿ. ಮತ್ತು ಪರಮೇಶ್ವರನ್ ಟಿ.ಆರ್ (೧೯೮೫): ಹಿಸ್ಟರಿ ಆಫ್ ಎಜುಕೇಷನ್ ಇನ್ ಮೈಸೂರು, ಬೆಂಗಳೂರು, ಗವರ್ನಮೆಂಟ್ ಆಫ್ ಕರ್ನಾಟಕ, ಡಿಪಾರ್ಟಮೆಂಟ್ ಆಫ್ ಎಜುಕೇಷನ್ ಅಂಡ್ ಯೂತ್ ಸರ್ವಿಸಸ್

ದೇವೇಗೌಡ ಎ.ಸಿ. (೧೯೭೪) ಪರಸೂಟ್ ಆಫ್ ಕ್ವಾಲಿಟಿ ಇನ್ ಎಜುಕೇಷನ್ ಬೆಂಗಳೂರು ಗವರ್ನಮೆಂಟ್ ಆಫ್ ಕರ್ನಾಟಕ, ಡಿಪಾರ್ಟಮೆಂಟ್ ಆಫ್ ಎಜುಕೇಷನ್ ಅಂಡ್ ಯೂತ್ ಸರ್ವಿಸಸ್

## ವರದಿಗಳು

ಗವರ್ನಮೆರಿಟ್

ಕರ್ನಾಟಕ

## ಪಿ.ಎಚ್.ಡಿ. ಥೀಸಿಸ್

೧. ಚಂದ್ರಶೇಖರ್, ಸ್ಟಡಿ ಆಫ್ ದಿ ಯುಟಿಲೈಸೇಷನ್ ಆಫ್ ವೇರಿಯಸ್

ಮೆಜರ್ಸ್ ಪ್ರೊವೈಡೆಡ್ ಈಕ್ವಾಲಿಟಿ ಆಫ್ ಎಡುಕೇಷನಲ್ ಆಪರ್ಚುನಿಟಿ ಇನ್ ದಿ ಕೇಸ್ ಆಫ್ ಅದರ್ ಬ್ಯಾಕವರ್ಡ್ ಕ್ಲಾಸಸ್ ಇನ್ ಎ ಡಿಸ್ಟ್ರಿಕ್ಟ್ ಆಫ್ ಕರ್ನಾಟಕ.

೨. ಗೌರೀಶಂಕರ, ಸ್ಟಡಿ ಆಫ್ ದಿ ರಿಲೇಷನ್‌ಷಿಪ್ ಬಿಟ್ವೀನ್ ಸೋಷಿಯಲ್ ಕ್ಲಾಸ್, ಎಜುಕೇಷನಲ್ ಅಚೀವ್‌ಮೆಂಟ್ ಅಂಡ್ ಇಂಜಿನಿಯರಿಂಗ್ ಎಜುಕೇಷನ್ ಇನ್ ಕರ್ನಾಟಕ ಸ್ಟೇಟ್ (೧೯೯೪).

೩. ಗಣೇಶ ಭಟ್ಟ, ಪರ್ಫಾರಮೆನ್ಸ್ ಆಫ್ ಸೆಕೆಂಡರಿ ಸ್ಕೂಲ್ ಸಿಸ್ಟಮ್ ಇನ್ ರೂರಲ್ ಕರ್ನಾಟಕ (೧೯೮೮).

೪. ಚಂದ್ರಶೇಖರ್, ಕ್ರಿಟಿಕಲ್ ಸ್ಟಡಿ ಇನ್ ಡೆಪ್ತ ಆಫ್ ದಿ ಗವರ್ನಮೆಂಟ್ ಆಫ್ ಕರ್ನಾಟಕ ದಿ ಫಿಲ್ಡ ಆಫ್ ಎಜುಕೇಷನ್ ಡ್ಯೂರಿಂಗ್ ದಿ ಪೀರಿಯಡ್ ೧೯೪೭-೭೨ (೧೯೭೮).

೫. ಮಾನವೀಕರ್ ಶಾರದಾ, ಕ್ರಿಟಿಕಲ್ ಸ್ಟಡಿ ಆಫ್ ದಿ ರಿಲೇಷನ್‌ಷಿಪ್ ಬಿಟ್ವೀನ್ ಎಕ್ಸಪೆಂಡಿಚರ್ ಪ್ಯಾಟ್ರನ್ ಆಂಡ್ ಎಫಿಷಿಯನ್ಸಿ ಆಫ್ ಲೆವಲ್ಸ್ ಆಫ್ ದಿ ಸೆಕೆಂಡರಿ ಸ್ಕೂಲ್ಸ ಆಫ್ ಬೆಂಗಳೂರು ಡಿಸ್ಟ್ರಿಕ್ಟ್ (೧೯೮೨).

೬. ಶಕುಂತಲಾ, ಕ್ರಿಟಿಕಲ್ ಸ್ಟಡಿ ಆಫ್ ನಾನ್-ಫಾರ್ಮಲ್ ಎಜುಕೇಷನ್ ಫಾರ್ ಡ್ರಾಫ್ ಔಟ್ಸ್ ಆಂಡ್ ನಾನ್-ಎನರೋಲ್ಡ್ ಚಿಲ್ಡ್ರನ್ ಇನ್ ದಿ ಏಜ್ ಗ್ರೂಪ್ ೯-೧೪ ಇನ್ ಕರ್ನಾಟಕ ಸ್ಟೇಟ್ (೧೯೮೭)

# ಕರ್ನಾಟಕದಲ್ಲಿ ಆರ್ಥಿಕ ಸಾಧನ ಸಂಪತ್ತುಗಳು: ಸಮಸ್ಯೆಗಳು ಹಾಗೂ ನಿರೀಕ್ಷೆಗಳು

---

ಎಂ. ಜಾನ್ಸನ್ ಸಾಮ್ಯುಯಲ್, ಎಂ. ಲಿಂಗರಾಜು

ರಾಷ್ಟ್ರದ ಸಂಪನ್ಮೂಲಗಳನ್ನು ಸಮರ್ಪಕ ರೀತಿಯಲ್ಲಿ ಬಳಸಿಕೊಂಡು ಉತ್ಪಾದನೆ ಹೆಚ್ಚಿಸಿ ಜನರ ಜೀವನಮಟ್ಟವನ್ನು ಸುಧಾರಿಸುವುದು ಆರ್ಥಿಕ ಯೋಜನೆಗಳ ಉದ್ದೇಶ. ಈ ಉದ್ದೇಶ ಸಾಧನೆಗಾಗಿ ಕೈಗೊಳ್ಳುವ ನಾನಾ ಅಭಿವೃದ್ಧಿ ಕಾರ್ಯಕ್ರಮಗಳು ಫಲಕಾರಿಯಾಗಬೇಕಾದರೆ ಕೆಲವು ಮೂಲಾಧಾರ ಪೂರ್ವ ಅಗತ್ಯಗಳಿವೆ. ಅಂತಹ ಅಗತ್ಯಗಳಲ್ಲಿ ಸಾರಿಗೆ, ಸಂಪರ್ಕ ಮತ್ತು ವಿದ್ಯುತ್ ವಿಭಾಗಗಳು ಬಹು ಮುಖ್ಯವಾಗಿವೆ (ಕರ್ನಾಟಕ ಪ್ರಗತಿ ಪಥ-೧೯೭೪). ಯಾವುದೇ ಒಂದು ದೇಶ ಅಥವಾ ರಾಜ್ಯ ತನ್ನ ಜನತೆಗೆ ಬೇಕಾದಂತಹ ಫಲಕಾರಿ ಸಾಧನ ಸಂಪತ್ತುಗಳನ್ನು ಒದಗಿಸುವುದರಿಂದ ಅಲ್ಲಿ ಉತ್ಪಾದಕತೆ ಹೆಚ್ಚುವುದಲ್ಲದೆ ಉತ್ಪಾದನಾ ವೆಚ್ಚಗಳಲ್ಲಿ ಹೆಚ್ಚಿನ ಕಡಿತವನ್ನು ಕಾಣಬಹುದು. ಆಧುನಿಕತೆಯ ಮತ್ತು ವೈವಿಧ್ಯಮಯ ಉತ್ಪಾದನೆಯನ್ನು ಕಂಡುಕೊಂಡು ತೀವ್ರಗತಿಯ ಕೈಗಾರೀಕರಣಕ್ಕೆ ಬೇಕಾಗುವ ಸುಗಮ ಹಾದಿಯನ್ನು ನಿರ್ಮಿಸಬಹುದು. ಸರಿಯಾದ ರೀತಿಯಲ್ಲಿ ರಚನೆಗೊಂಡ, ಸುವ್ಯವಸ್ಥಿತವಾಗಿ ಉತ್ತಮ ಸ್ಥಳದಲ್ಲಿ ರೂಪುಗೊಂಡ ಸಾಧನ ಸಂಪತ್ತುಗಳಿಂದ ಸುರಕ್ಷಿತ ಪರಿಸರವನ್ನು ಸೃಷ್ಟಿಸುವುದರಲ್ಲಿ ಸಂದೇಹವಿಲ್ಲ. ಆರ್ಥಿಕ ಸಾಧನ ಸಂಪತ್ತುಗಳಾದ ರೈಲು ಮಾರ್ಗಗಳು, ರಸ್ತೆ ಮಾರ್ಗಗಳು ಮತ್ತು ವಿದ್ಯುತ್ ವಿಭಾಗಗಳು ಇವುಗಳ ನಿರ್ಮಾಣ ಮತ್ತು ದುರಸ್ತೀ ಕಾರ್ಯಗಳಿಂದ ದುಡಿಯುವ ಜನತೆಗೆ ಹೆಚ್ಚಿನ ರೀತಿಯಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸಿ, ಬಡತನದ ನಿರ್ಮೂಲನಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುತ್ತವೆ. ಸಾಧನ ಸಂಪತ್ತುಗಳು ಆರ್ಥಿಕ ಚಟುವಟಿಕೆಯಲ್ಲಿ ಯಂತ್ರದಂತೆ ಅಲ್ಲದಿದ್ದರೂ ಚಕ್ರಗಳಂತೆ ಇರುತ್ತವೆ. (ವಿಶ್ವಬ್ಯಾಂಕ್-೧೯೯೪, ಪುಟ ಸಂಖ್ಯೆ ೧೪). ಈ ಹಿನ್ನೆಲೆಯಲ್ಲಿ ಕರ್ನಾಟಕದ ಮೂರು ಮಹತ್ತರ ಸಾಧನ ಸಂಪತ್ತುಗಳಾದ ಸಾರಿಗೆ, ಸಂಪರ್ಕ ಹಾಗೂ ವಿದ್ಯುತ್ ವಿಭಾಗಕ್ಕೆ ಸಂಬಂಧಪಟ್ಟಂತೆ ಅವುಗಳ ಬೆಳವಣಿಗೆಯ ಮಟ್ಟಗಳನ್ನು ಕುರಿತು ವಿಮರ್ಶಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

## ೧. ಸಾರಿಗೆ ವಿಭಾಗ

ಸಾರಿಗೆಯು ಒಂದು ಮುಖ್ಯ ಸಾಧನ ಸಂಪತ್ತಾಗಿದ್ದು ಇದು ಕಾಲದ ಮತ್ತು ಸ್ಥಳದ ಉಪಯೋಗವನ್ನು ಸೃಷ್ಟಿಸುತ್ತಾ ಕಾಲಾನುಕ್ರಮದಲ್ಲಿ ಒಂದು ಉತ್ಪಾದನಾ ಚಟುವಟಿಕೆಯ ಅಂಗವಾಗಿ ಪರಿಣಮಿಸಿದೆ. ಸಾರಿಗೆಯ ರಂಗದಲ್ಲಿ ತ್ವರಿತ ಬೆಳವಣಿಗೆ ಕಂಡು ಬಂದರೆ ಆರ್ಥಿಕಾಭಿವೃದ್ಧಿ ಹೆಚ್ಚುವುದರಲ್ಲಿ ಸಂಶಯವಿಲ್ಲ. ಸಾರಿಗೆಯ ವಿಭಾಗದಲ್ಲಿ ರೈಲು, ರಸ್ತೆ, ಬಂದರು ಮತ್ತು ವಿಮಾನ ನಿಲ್ದಾಣಗಳನ್ನು ಕುರಿತು ಚರ್ಚಿಸಲಾಗಿದೆ.

## ೧. ಅ. ರೈಲು ಸಾರಿಗೆ

ಆರ್ಥಿಕ ಹಾಗೂ ಸಾಮಾಜಿಕ ಕ್ಷೇಮದ ಉತ್ತೇಜನಕ್ಕೆ ರೈಲು ಮಾರ್ಗಗಳು ಅತ್ಯಂತ ಸಮರ್ಥ ಸಾಧನ ಸಂಪತ್ತಾಗಿ ಸೇವೆ ಸಲ್ಲಿಸುತ್ತಿವೆ. ದೂರದ ಸ್ಥಳದಿಂದ ಬೃಹತ್ ಪ್ರಮಾಣದ ಸರಕು- ಸಾಮಗ್ರಿಗಳನ್ನು ಬಹಳ ಕಡಿಮೆ ಖರ್ಚಿನಲ್ಲಿ ಒಮ್ಮೆಲೇ ಸಾಗಿಸುವ ಸಾಮರ್ಥ್ಯ ಹೊಂದಿರುತ್ತವೆ. ಭಾರತದ ವಿಭಿನ್ನ ಜನತೆಯ ಚಲನೆಯನ್ನು ವೃದ್ಧಿಸುವುದಲ್ಲದೆ ವಿವಿಧ ಭಾಷೆ ಮತ್ತು ಸಂಸ್ಕೃತಿಗಳ ತಾರತಮ್ಯಗಳನ್ನು ಹೋಗಲಾಡಿಸಿ ಜನರಲ್ಲಿ ಪರಸ್ಪರ ಹೊಂದಾಣಿಕೆ-ಒಡಂಬಡಿಕೆಯನ್ನು ಸಾರುವ ಏಕೈಕ ಮಾಧ್ಯಮ ರೈಲು ಸಾರಿಗೆಯಾಗಿದೆ. ಇದು ಕೇಂದ್ರಾಭಿಗಮನ ಬಲವನ್ನು ಹೆಚ್ಚು ಮಾಡುವುದರ ಮೂಲಕ ಭಾರತದ ಒಗ್ಗಟ್ಟನ್ನು ಪ್ರತಿಬಿಂಬಿಸುತ್ತದೆ.

ಕರ್ನಾಟಕದ ರೈಲು ಸಾರಿಗೆಯ ಪುಟಗಳನ್ನು ತಿರುವಿ ಹಾಕಿದಾಗ ರಾಷ್ಟ್ರದ ಆರ್ಥಿಕಾಭಿವೃದ್ಧಿಯಲ್ಲಿ ತನ್ನ ಪಾತ್ರವನ್ನು ಎಷ್ಟರಮಟ್ಟಿಗೆ ಪ್ರತಿನಿಧಿಸಿದೆ ಎಂಬುದು ತಿಳಿಯುತ್ತದೆ. ೧೯೯೧-೯೨ರ ಪ್ರಕಾರ ರಾಜ್ಯದಲ್ಲಿ ೩೯೫ ರೈಲ್ವೆ ನಿಲ್ದಾಣಗಳಿದ್ದು, (ಪ್ರತಿ ಸಾವಿರ ಚದರ ಕಿಲೋ ಮೀಟರ್‌ಗೆ ಎರಡು ರೈಲ್ವೆ ನಿಲ್ದಾಣಗಳು) ಸುಮಾರು ೩೦೮೯ ಕಿಲೋ ಮೀಟರ್ ಉದ್ದದ ರೈಲು ಮಾರ್ಗಗಳನ್ನು ಹೊಂದಿದೆ. ಇದರಲ್ಲಿ ೮೩೪ ಕಿಲೋ ಮೀಟರ್ ಉದ್ದದ ಬ್ರಾಡ್ಗೇಜ್ ಮಾರ್ಗವೂ ಸಹ ಸೇರಿದೆ. ರಾಜ್ಯದ ರೈಲು ಮಾರ್ಗಗಳನ್ನು ಸಮಸ್ತ ಭಾರತಕ್ಕೆ ಹೋಲಿಸಿದಾಗ, ರಾಜ್ಯದಲ್ಲಿ ಪ್ರತಿ ಸಾವಿರ ಚದರ ಕಿಲೋ ಮೀಟರಿಗೆ ೧೬ ಕಿಲೋ ಮೀಟರ್ ಉದ್ದದ ರೈಲು ಮಾರ್ಗ ಇರುವುದಾದರೆ ಇಡೀ ಭಾರತದಲ್ಲಿ ಅದು ೧೯ ಕಿಲೋ ಮೀಟರ್ ಎಂದು ಅಂದಾಜು ಮಾಡಲಾಗಿದೆ. ಅದೇ ರೀತಿ ಶೇಕಡಾ ೨೭ರಷ್ಟು ಬ್ರಾಡ್ಗೇಜ್ ಮಾರ್ಗವು ಇರುವುದು ಕಂಡು ಬರುತ್ತದೆ. ರೈಲು ಸಾರಿಗೆಯ ಪ್ರಗತಿಯನ್ನು ಗಣನೆಗೆ ತೆಗೆದುಕೊಂಡು ತಾಳೆ ನೋಡಿದಾಗ ರಾಜ್ಯದ ರೈಲು ಸಾರಿಗೆಯ ಅಭಿವೃದ್ಧಿಯು ದೇಶದಲ್ಲಿಯೇ ಅತಿ ಹಿಂದುಳಿದ ರಾಜ್ಯಗಳ ಪೈಕಿ ಎರಡನೇ ಸ್ಥಾನದಲ್ಲಿದೆ.

ಏನೇ ಆದರೂ, ರೈಲು ಮಾರ್ಗಗಳ ಅಭಿವೃದ್ಧಿಗೆ ನೆರವಾಗುವಂತಹ ಒಂದು ಮಹತ್ವಾಕಾಂಕ್ಷೆಯ ಮಾರ್ಗ ವಿಸ್ತರಣಾ ಕಾರ್ಯಕ್ರಮ ಮತ್ತು ಒಂದೇ ತೆರನಾದ

ಮಾರ್ಗ ರಚನೆಯ ಯೋಜನೆಯ ಕೃಪೆಯಿಂದ ರಾಜ್ಯವು ಈಗ ಎಲ್ಲ ರೀತಿಯ ಅಭಿವೃದ್ಧಿಪರ ರೈಲು ಮಾರ್ಗಗಳನ್ನು ಹೊಂದುವಂತಾಗಿದೆ. ಹೊಸ ಹೊಸ ಬ್ರಾಡ್‌ಗೇಜ್ ಮಾರ್ಗಗಳನ್ನು ರಾಜ್ಯದ ಹಲವೆಡೆ ತೆರೆಯಲಾಗಿದೆ. ಉದಾಹರಣೆಗೆ ಚಿತ್ರದುರ್ಗ ಮತ್ತು ರಾಯದುರ್ಗದ ನಡುವೆ ೧೦೦ಕಿಲೋ ಮೀಟರ್ ಮಾರ್ಗವನ್ನು, ಕೊಟ್ಟೂರು ಮತ್ತು ಹರಿಹರ ನಡುವಿನ ೬೫ ಕಿಲೋ ಮೀಟರ್ ಮಾರ್ಗವನ್ನು ಅಲ್ಲದೆ ಕೊಂಕಣ ರೈಲು ಯೋಜನೆಯ ಅಡಿಯಲ್ಲಿ ಕಾರವಾರ ಮತ್ತು ಮಂಗಳೂರು ನಡುವಿನ ೨೬೭ ಕಿ.ಮೀ. ದೂರದ ಮಾರ್ಗವನ್ನು ನೇರ ಹಾಗೂ ವಿಸ್ತಾರ ಮಾಡಲಾಗಿದೆ. ಅಲ್ಲದೆ, ಹೊಸ ಸಂಬಂಧಕ ಮಾರ್ಗಗಳನ್ನು ಸ್ಥಾಪಿಸುವುದರಿಂದ ಮನುಷ್ಯರ ಮತ್ತು ಸರಕು-ಸಾಮಾಗ್ರಿಗಳ ಸಾಗಾಣಿಕೆಯಲ್ಲಿ ತೊಡಗುವ ವೆಚ್ಚ ಕಡಿಮೆಯಾಗುವುದಲ್ಲದೆ ದೊಡ್ಡ ದೊಡ್ಡ ನಗರಗಳಿಗೆ ಸಂಪರ್ಕ ಕಲ್ಪಿಸುವ ಬದಲಿ ಮಾರ್ಗಗಳನ್ನು ಸೃಷ್ಟಿಸಿದಂತಾಗುತ್ತದೆ. ಅದೇ ರೀತಿ ಹೊಸ ಸಂಬಂಧಕ ಮಾರ್ಗಗಳು ಕೈಗಾರಿಕಾ ನಗರಗಳಲ್ಲಿರುವ ಕಾರ್ಖಾನೆಗಳಿಗೆ ಬೇಕಾಗುವ ಅವಶ್ಯಕ ಕಚ್ಚಾ ಸಾಮಾಗ್ರಿಗಳನ್ನು ಆಮದು ಮಾಡಿಕೊಳ್ಳಲು ಮತ್ತು ಉತ್ಪಾದಿಸಿದ ಸಾಮಾಗ್ರಿಗಳನ್ನು ರಫ್ತು ಮಾಡಲು ನೆರವಾಗುತ್ತವೆ. ಉದಾಹರಣೆಗೆ, ಹರಿಹರ ಮತ್ತು ಭದ್ರಾವತಿಯ ಕಾರ್ಖಾನೆಗಳು ದೇಶದ ದಕ್ಷಿಣ ಮಧ್ಯಭಾಗ ಹಾಗೂ ಆಗ್ನೇಯ ಭಾಗಗಳಿಗೆ ಸಂಪರ್ಕ ಕಲ್ಪಿಸುತ್ತವೆ. ಸಮುದ್ರ ತೀರಪ್ರದೇಶಕ್ಕೆ ಹಿಂಭಾಗದಲ್ಲಿರುವ ರಾಜ್ಯದ ಹಲವಾರು ಗ್ರಾಮಾಂತರ ಪ್ರದೇಶಗಳು ಸಮುದ್ರದಲ್ಲಿಯೇ ಮಂಗಳೂರು, ಬೇಲೆಕೇರಿ ಮತ್ತು ಬೆಟ್ಟು ಮುಂತಾದ ಸ್ಥಳಗಳಲ್ಲಿ ಇರುವಂತೆ ಸುಲಭಸಾಧ್ಯ ಬಂದರು (ರೇವು) ಸ್ಥಳಗಳನ್ನು ಪಡೆಯಲಿವೆ. ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ಕೊಂಕಣ ರೈಲು ಯೋಜನೆಯ ಪ್ರಾರಂಭದಿಂದಾಗಿ ಕರಾವಳಿ ಪ್ರದೇಶಗಳ ಮತ್ತು ರಾಜ್ಯದ ಆರ್ಥಿಕ ಬೆಳವಣಿಗೆಯು ಒಂದು ಹೊಸ ಯುಗ ಪ್ರವೇಶಿಸಿದಂತಾಗುತ್ತದೆ.

ರೈಲು ಸಾರಿಗೆಯ ಮತ್ತೊಂದು ಮುಖ್ಯ ಅಂಶವೆಂದರೆ ರೈಲು ಮಾರ್ಗಗಳ ಪರಿವರ್ತನೆ. ಇದರಿಂದಾಗಿ ಒಂದೇ ತೆರನಾದ ಮಾರ್ಗಗಳು ನಿರ್ಮಾಣಗೊಂಡು ಸಾರಿಗೆ-ಸಂಪರ್ಕದ ಹಾದಿ ಸುಗಮವಾಗಿ ಸಾಗುತ್ತದೆ. ಆ ನಿಟ್ಟಿನಲ್ಲಿ ಈಗಾಗಲೇ ಬೆಂಗಳೂರು-ಮೈಸೂರು, ಬೆಂಗಳೂರು-ಹುಬ್ಬಳ್ಳಿ -ಮೀರಜ್, ಬೀರೂರು-ಶಿವಮೊಗ್ಗ ಮತ್ತು ಬಳ್ಳಾರಿ-ಚಿಕ್ಕಜಾಜೂರು ವಿಭಾಗಗಳ ರೈಲು ಮಾರ್ಗಗಳು ಪ್ರಚಲಿತವಿದ್ದ ಮೀಟರ್ ಗೇಜ್ ಮಾರ್ಗವನ್ನು ಬ್ರಾಡ್‌ಗೇಜ್ ಆಗಿ ಪರಿವರ್ತಿಸಿವೆ. ಅದೇ ರೀತಿ ಮಂಗಳೂರು-ಹಾಸನ-ಅರಸೀಕೆರೆ ವಿಭಾಗ, ಮೈಸೂರು-ಹಾಸನ, ಗೋವಾ-ಹೊಸಪೇಟೆ ವಿಭಾಗ ಮತ್ತು ಯಶವಂತಪುರ-ಸೇಲಂ ವಿಭಾಗಗಳ ರೈಲು ಮಾರ್ಗಗಳ ಪರಿವರ್ತನೆಯ ಯೋಜನೆಯು ಕಾರ್ಯಸಾಧನೆಯಲ್ಲಿದೆ. ಈ ಯೋಜನೆಗಳು ಪೂರ್ಣಗೊಂಡರೆ ರಾಜ್ಯದ ಮೈಸೂರು-ಚಾಮರಾಜನಗರ ನಡುವಿನ ಸುಮಾರು ೬೧ ಕಿ.ಮೀ. ಉದ್ದದ ರೈಲು ಮಾರ್ಗವನ್ನು ಹೊರತುಪಡಿಸಿ ಉಳಿದೆಲ್ಲ

ರೈಲು ಮಾರ್ಗಗಳು ಬ್ರಾಡ್ಗೇಜ್ ಮಾರ್ಗಗಳಾಗಿ ಪರಿವರ್ತನೆ ಗೊಂಡಂತಾಗುತ್ತವೆ. ಈ ರೀತಿಯ ಮಾರ್ಗ ಪರಿವರ್ತನೆಯಿಂದ ಸರಾಗವಾಗಿ ರೈಲು ಬಂಡಿಗಳು ಸಾಗುವುದಲ್ಲದೆ ಒಂದು ಗೇಜ್ ಮಾರ್ಗದಿಂದ ಮತ್ತೊಂದು ಗೇಜ್ ಮಾರ್ಗಕ್ಕೆ ಜನರನ್ನು ಮತ್ತು ಸರಕು-ಸಾಮಾಗ್ರಿಗಳನ್ನು ಸಾಗಿಸುವುದರಲ್ಲಿ ಅವಲಂಬಿಸಿದ್ದ ಕಾಲ ಮತ್ತು ತಗಲುತ್ತಿದ್ದ ವೆಚ್ಚವನ್ನು ಸಂಪೂರ್ಣವಾಗಿ ತೆಗೆದುಹಾಕಿದಂತಾಗುವುದು. ಇದರಿಂದ ಆರ್ಥಿಕ ಚಟುವಟಿಕೆಗೆ ಒಂದು ಪ್ರಮುಖ ಸಾಧನೆ ಸೇರ್ಪಡೆಯಾದಂತಾಗಿ ಸರಕು ರೈಲುಬಂಡಿಯ ಸಾಗಾಣಿಕೆಯ ಸಾಮರ್ಥ್ಯತೆ ಎರಡೂವರೆ ಗಂಟೆಗಳಷ್ಟು ಮತ್ತು ಪ್ರಯಾಣಿಕ ರೈಲುಬಂಡಿಯ ಸಾಗಾಣಿಕೆಯ ಸಾಮರ್ಥ್ಯತೆ ಎರಡು ಗಂಟೆಗಳಷ್ಟು ಹೆಚ್ಚಾದಂತಾಯಿತು.

ಜೊತೆಗೆ, ಕರ್ನಾಟಕ ರಾಜ್ಯ ತನ್ನ ಮುಂದಿನ ವರ್ಷಗಳಲ್ಲಿ ಅಂದರೆ ೧೯೯೬-೯೭ರ ಹೊತ್ತಿಗೆ ಒಟ್ಟು ಸುಮಾರು ೩೫೦೦ ಕಿ.ಮೀ.ಗಳಿಗೂ ಮೇಲ್ಪಟ್ಟ ಉದ್ದಳತೆಯ ರೈಲು ಮಾರ್ಗವನ್ನು ಹೊಂದಲಿದೆ, ಅದರಲ್ಲಿ ೨೮೦೦ ಕಿ.ಮೀ. ಉದ್ದಳತೆಯ ಬ್ರಾಡ್ಗೇಜ್ ಮಾರ್ಗಗಳು ಸಹ ಕಂಡುಬರುತ್ತವೆ. ಸುಮಾರು ೨೦೦೦ ಕೋಟಿ ರೂಪಾಯಿಗಳ ಅಧಿಕ ಮೊತ್ತದ ಬಂಡವಾಳವನ್ನು ತೊಡಗಿಸಿ ಈ ಯೋಜನೆಗಳನ್ನು ಪೂರ್ಣಗೊಳಿಸಲು ವ್ಯವಸ್ಥೆ ಮಾಡುತ್ತಿದೆ. ಇವುಗಳೆಲ್ಲದಕ್ಕೂ ಮುಖ್ಯವಾಗಿ ಕರ್ನಾಟಕ ರಾಜ್ಯವು ಈಗ ತನ್ನದೇ ಆದ ಒಂದು ಪ್ರತ್ಯೇಕ ರೈಲ್ವೆ ವಲಯವನ್ನು ಪಡೆಯುವಂತಾಗಿದೆ. ಬೆಂಗಳೂರು ನಗರ ಈ ವಲಯದ ಕೇಂದ್ರಸ್ಥಾನವಾಗಿದ್ದು, ಈ ಹೊಸ ವಲಯವನ್ನು 'ನೈರುತ್ಯ ರೈಲ್ವೆ ವಲಯ' (South-West Railway Zone) ಎಂದು ಕರೆಯಲಾಗುತ್ತದೆ.

### ೧. ಬ. ರಸ್ತೆ ಸಾರಿಗೆ

ಸಾರಿಗೆಯ ರಂಗದಲ್ಲಿ ರಸ್ತೆ ಮಾರ್ಗಗಳು ರೈಲು ಮಾರ್ಗಗಳಿಗೆ ಪರಸ್ಪರ ವ್ಯತಿರಿಕ್ತವಾಗಿರುತ್ತವೆ. ಪ್ರಯಾಣಿಕರು ಮತ್ತು ಸರಕು-ಸಾಮಾಗ್ರಿಗಳ ಸಾಗಾಣಿಕೆಯಲ್ಲಿ ರೈಲು ಮಾರ್ಗದ ಪ್ರಾಮುಖ್ಯತೆ ಎಷ್ಟೇ ಇದ್ದರೂ ಅದು ದೇಶದ ಎಲ್ಲಾ ಭಾಗಗಳಿಗೂ ಸೇವೆ ಸಲ್ಲಿಸಲು ಸಾಧ್ಯವಿಲ್ಲ. ರೈಲು ಸಂಚಾರವಿಲ್ಲದ ಕಡೆ ಮತ್ತು ರೈಲು ಸಂಚಾರಕ್ಕೆ ಯೋಗ್ಯವಲ್ಲದ ಕಡೆ ಬೇರೆ ಮಾರ್ಗದ ವ್ಯವಸ್ಥೆ ಬಹಳ ಮುಖ್ಯ. ಅಂತಹ ಮಾರ್ಗಗಳನ್ನು ರಸ್ತೆ ಸಾರಿಗೆ ಆಕ್ರಮಿಸಿಕೊಂಡಿದೆ (ಕರ್ನಾಟಕ ಪ್ರಗತಿ ಪಥ - ೧೯೭೪). ಈ ಮೇಲೆ ತಿಳಿಸಿದಂತೆ ರಸ್ತೆ ಮಾರ್ಗಗಳು ಬಹಳ ಸುಲಭ ಸಾಧ್ಯವಾದ ಮಾರ್ಗಗಳಾಗಿದ್ದು, ಬೇಕಾದ ಕಡೆಗಳಲ್ಲಿ ವೈಯಕ್ತಿಕ ಅವಶ್ಯಕತೆಗಳಿಗೆ ತಕ್ಕಂತೆ ಮಾರ್ಪಡಿಸಬಹುದಾದ ಮಾರ್ಗಗಳಾಗಿವೆ. ಇವು ಮನೆ ಮನೆ ಬಾಗಿಲುಗಳಿಗೆ ಪ್ರಯಾಣಿಕರನ್ನು, ಸರಕು-ಸಾಮಾಗ್ರಿಗಳನ್ನು ಸಾಗಿಸುತ್ತಾ ಸೇವೆ ಸಲ್ಲಿಸುತ್ತಿವೆ. ಬಹು ಬೇಗನೆ ಹಾಳಾಗುವಂತಹ ವ್ಯವಸಾಯೋತ್ಪನ್ನ ಸರಕು-ಸಾಮಾಗ್ರಿಗಳಾದ ಆಹಾರ ಪದಾರ್ಥಗಳು, ತರಕಾರಿ, ಹಣ್ಣು-ಹಂಪಲು ಮುಂತಾದ ಪದಾರ್ಥಗಳನ್ನು ಬಹಳ

ಹತ್ತಿರದ ಮಾರ್ಗವಾಗಿ ಸೇರಬೇಕಾದ ಸ್ಥಳಕ್ಕೆ ಸಾಗಿಸಲು ರಸ್ತೆ ಸಾರಿಗೆ ಬಹಳ ಮುಖ್ಯವಾಗಿದೆ. ವ್ಯಾಪಾರಸ್ಥರು, ಕೆಲಸಗಾರರು ಮತ್ತು ವಿದ್ಯಾರ್ಥಿಗಳು ಪ್ರತಿದಿನ ತಮ್ಮ ಹಳ್ಳಿಯಿಂದ ಗ್ರಾಮಾಂತರ ಪ್ರದೇಶದ ಪಟ್ಟಣಗಳಿಗೆ ಬರುವುದಕ್ಕೆ ಈ ರಸ್ತೆ ಮಾರ್ಗಗಳು ಅನುಕೂಲ ಕಲ್ಪಿಸುತ್ತವೆ. ಅಲ್ಲದೆ ಹಳ್ಳಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ಸಹ ಕಾಪಾಡುತ್ತವೆ.

ರಾಜ್ಯದ ರಸ್ತೆ ಮಾರ್ಗಗಳು ಹಂತ-ಹಂತವಾಗಿ ಅಭಿವೃದ್ಧಿ ಹೊಂದುತ್ತಾ ದೇಶದ ಪ್ರಗತಿಯಲ್ಲಿ ಮುಂದೆ ಸಾಗಿವೆ. ಈ ನಿಟ್ಟಿನಲ್ಲಿ ಹೇಳುವುದಾದರೆ, ಕರ್ನಾಟಕದಲ್ಲಿ ಪ್ರತಿ ಸಾವಿರ ಚದರ ಕಿ.ಮೀ. ವಿಸ್ತೀರ್ಣಕ್ಕೆ ಸುಮಾರು ೭೯೮ ಕಿ.ಮೀ. ಉದ್ದದ ರಸ್ತೆ ಮಾರ್ಗಗಳು ಕಂಡು ಬಂದರೆ, ಭಾರತದಲ್ಲಿ ಅದು ಕೇವಲ ೬೦೮ ಕಿ.ಮೀ. ಉದ್ದದ ರಸ್ತೆ ಮಾರ್ಗಗಳು ಅಚರಣೆಯಲ್ಲಿವೆ. ೧೯೮೯ರ ಮಾರ್ಚ್ ವೇಳೆಗೆ ರಾಜ್ಯದಲ್ಲಿ ಒಟ್ಟು ೧೫೩ ಸಾವಿರ ಕಿ.ಮೀ. ಮತ್ತು ಭಾರತದಲ್ಲಿ ೧೯೯೮ ಸಾವಿರ ಕಿ.ಮೀ. ಉದ್ದದ ರಸ್ತೆ ಮಾರ್ಗಗಳು ಕಂಡು ಬರುತ್ತವೆ. ಅಲ್ಲದೆ ಎಲ್ಲ ರಸ್ತೆ ಮಾರ್ಗಗಳಲ್ಲಿ ರಾಷ್ಟ್ರೀಯ ಹಾಗೂ ರಾಜ್ಯ ಹೆದ್ದಾರಿ ಮಾರ್ಗಗಳ ಶೇಕಡಾವಾರು ಪಾಲುದಾರಿಕೆಯನ್ನು ದೇಶಕ್ಕೆ ಹೋಲಿಸಿ ನೋಡಿದಾಗ ಕರ್ನಾಟಕದಲ್ಲಿ ತುಸು ಹೆಚ್ಚಾಗಿರುವುದನ್ನು (ಕರ್ನಾಟಕ ೯%, ಭಾರತ ೮%) ಗಮನಿಸಬಹುದು. ರಾಜ್ಯದ ಹೆದ್ದಾರಿ ಮಾರ್ಗಗಳ ಪ್ರಸರಣಾ ಹಾದಿಯನ್ನು ಅಧ್ಯಯನ ಮಾಡಿದಾಗ ರಾಷ್ಟ್ರೀಯ ಹೆದ್ದಾರಿ ಮಾರ್ಗಗಳು ೧೯೬೨-೬೩ನೇ ಸಾಲಿನಲ್ಲಿ ೧೨೬೮ ಕಿ.ಮೀ.ಗಳ ಉದ್ದವಿದ್ದು, ೧೯೯೨-೯೩ರ ಹೊತ್ತಿಗೆ ಇದು ೧೯೯೭ ಕಿ.ಮೀ.ಗಳಿಗೆ ಏರಿತು. ಅಂದರೆ ಈ ೩೦ ವರ್ಷಗಳ ಅವಧಿಯಲ್ಲಿ ೧.೫ ರಷ್ಟು ಹೆಚ್ಚಾದಂತಾಯಿತು. ಅದೇ ರೀತಿ ರಾಜ್ಯ ಹೆದ್ದಾರಿ ಮಾರ್ಗಗಳ ಬೆಳವಣಿಗೆಯಲ್ಲೂ ಅಧಿಕ ಹೆಚ್ಚಳ ಕಂಡು ಬಂದಿದೆ. ರಾಜ್ಯ ಹೆದ್ದಾರಿ ಮಾರ್ಗಗಳ ಉದ್ದ ಮೇಲ್ಕಂಡ ಸಾಲಿನಂತೆಯೇ ಸುಮಾರು ೬೦೧೯ ಕಿ.ಮೀ. ಗಳಿಂದ ೧೧,೨೮೮ ಕಿ.ಮೀ. ವರೆಗೆ ವಿಸ್ತರಿಸಿತು. ಕಳೆದ ಈ ೩೦ ವರ್ಷಗಳ ಅವಧಿಯಲ್ಲಿ ಹೆಚ್ಚು ಕಡಿಮೆ ೨ ಪಟ್ಟು ರಾಜ್ಯ ಹೆದ್ದಾರಿ ಮಾರ್ಗಗಳು ಹೆಚ್ಚಾಗಿರುವುದನ್ನು ನೋಡಬಹುದು.

ಜಡ ರಹಿತ ಹಾಗೂ ಮಿತ ಇಂಧನ ಬಳಕೆಯ ಉತ್ತಮ ರಸ್ತೆಗಳು ಒಟ್ಟು ರಸ್ತೆಯ ಶೇ. ೫೭ರಷ್ಟು ಭಾಗ ರಾಜ್ಯದ ರಸ್ತೆ ಸಾರಿಗೆಯಲ್ಲಿದೆ. ೧೯೬೨-೬೩ರಿಂದ ೧೯೯೨-೯೩ರವರೆಗಿನ ಈ ಮೂರು ದಶಕಗಳ ಅವಧಿಯಲ್ಲಿ ಸುಮಾರು ೨೮,೭೧೯ ಕಿಲೋ ಮೀಟರುಗಳಿಂದ ೮೭,೩೮೯ ಕಿಲೋ ಮೀಟರಗಳ ಉದ್ದಳತೆಯ ಉತ್ತಮ ರಸ್ತೆಗಳು ಕರ್ನಾಟಕದಲ್ಲಿ ಮೂರು ಪಟ್ಟು ಹೆಚ್ಚಾಗಿರುವುದನ್ನು ಗಮನಿಸಬಹುದು.

ಕರ್ನಾಟಕದಲ್ಲಿರುವ ಬಹಳಷ್ಟು ರಸ್ತೆಗಳು ತುಂಬಾ ಕಿರಿದಾಗಿದ್ದು ಪ್ರದರ್ಶನಾತ್ಮಕವಾಗಿ

ಬೆಳೆಯುತ್ತಿರುವ ವಾಹನ ಸಂಚಾರಕ್ಕೆ ಅನುಕೂಲ ರೀತಿಯಲ್ಲಿ ರಸ್ತೆಗಳನ್ನು ನಿರೂಪಿಸಿ ವಿಶಾಲ ಗೊಳಿಸಬೇಕು ಮತ್ತು ಉನ್ನತ ಮಟ್ಟದಲ್ಲಿ ವ್ಯವಸ್ಥೆಗೊಳಿಸಬೇಕು. ಉದಾಹರಣೆಗೆ ರಾಷ್ಟ್ರೀಯ ಹೆದ್ದಾರಿ ನಂ. ೭. ಇದು ಕರ್ನಾಟಕ ಮತ್ತು ಬೆಂಗಳೂರು ನಗರಕ್ಕೆ ಹೆಬ್ಬಾಗಿಲಾಗಿದ್ದು, ಈ ಮಾರ್ಗವಾಗಿ ತಮಿಳುನಾಡು ಮತ್ತು ಕೇರಳಗಳಿಂದ ವಾಹನಗಳು ಬರುತ್ತಿರುವುದನ್ನು ಗಮನಿಸಬಹುದು. ರಾಜ್ಯದ ಗಡಿಯಲ್ಲಿರುವ ಬೆಂಗಳೂರು ಮತ್ತು ಅತ್ತಿಬೆಲೆ ನಡುವಿನ ರಾಷ್ಟ್ರೀಯ ಹೆದ್ದಾರಿ ತೀರಾ ಇಕ್ಕಟ್ಟಾಗಿದ್ದು ಭಾರಿ ವಾಹನಗಳು ಈ ಹೆದ್ದಾರಿಯ ಮೂಲಕವೇ ಸಾಗಬೇಕಾಗಿದೆ. ಇದನ್ನು ವಿಶಾಲಗೊಳಿಸುವುದರ ಜೊತೆಗೆ ೪ ರಸ್ತೆಗಳ ಹೆದ್ದಾರಿಯಾಗಿ ಬದಲಿಸಲಾಗುತ್ತಿದೆ. ಲಾರ್ಸೆನ್ ಮತ್ತು ಟಾಬ್ರೊ ಲಿಮಿಟೆಡ್‌ನವರು ರಸ್ತೆ ನಿರ್ಮಾಣ ಕಾರ್ಯಕ್ಕೆ ಅಗತ್ಯವಾದ ಅತ್ಯಂತ ಮುಂದುವರಿದ ತಾಂತ್ರಿಕತೆಗಳನ್ನು ತಂದಿದ್ದಾರೆ. ಈ ರಸ್ತೆ ನಿರ್ಮಾಣದ ಕೆಲಸ ೧೯೯೬ರ ಅಂತ್ಯದ ಒಳಗಡೆ ಪೂರ್ಣಗೊಳ್ಳುವುದರಲ್ಲಿ ಸಂದೇಹವಿಲ್ಲ. ಅದೇ ರೀತಿ ಬೆಂಗಳೂರು-ಮೈಸೂರು ಹೆದ್ದಾರಿಯನ್ನು ಅಂತರರಾಷ್ಟ್ರೀಯ ಸಹಕಾರದೊಂದಿಗೆ ತಡೆರಹಿತ ವೇಗದ ಮಾರ್ಗವಾಗಿ ಪರಿವರ್ತಿಸುವ ಕಾರ್ಯ ಪ್ರಸ್ತಾವನೆಯಲ್ಲಿತ್ತು, ಈಗ ಸುಮಾರು ೧೫೫೬.೫೦ ಕೋಟಿ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಈ ತಡೆರಹಿತ ಹೆದ್ದಾರಿ (Express Highway) ನಿರ್ಮಿಸಲು ಸರ್ಕಾರ (ಸಚಿವ ಸಂಪುಟ) ಅನುಮತಿ ನೀಡಿದೆ. ಪುಣೆಯ ಕಲ್ಯಾಣಿ ಗ್ರೂಪ್ ಕಂಪನಿ ಈ ಕೆಲಸವನ್ನು ನಿರ್ಮಿಸಲಿದ್ದು, ನಾಲ್ಕು ರಸ್ತೆಗಳಿರುವ ಈ ಹೆದ್ದಾರಿಯ ಮೊದಲ ಹಂತದ ಕಾರ್ಯ ಮೂರು ವರ್ಷದಲ್ಲಿ ಪೂರ್ಣಗೊಳ್ಳಲಿದೆ. ಇದರಿಂದಾಗಿ ಐದು ಹೊಸ ಪಟ್ಟಣಗಳು ಅಸ್ತಿತ್ವಕ್ಕೆ ಬರಲಿವೆ. ಬಿಡದಿ, ರಾಮನಗರ, ಚನ್ನಪಟ್ಟಣ ಮತ್ತು ಶ್ರೀರಂಗಪಟ್ಟಣಗಳ ಬಳಿ ನಿರ್ಮಾಣವಾಗುವ ಈ ಪ್ರತಿಯೊಂದು ಪಟ್ಟಣವನ್ನೂ ಉದ್ಯಮ, ಕೃಷಿ ಸಂಶೋಧನೆ, ಆಹಾರ ಸಂಸ್ಕರಣ, ಗೃಹ ಕೈಗಾರಿಕೆ, ವಾಣಿಜ್ಯ ವ್ಯವಹಾರ, ಪ್ರವಾಸೋದ್ಯಮ ಮತ್ತಿತರ ಕ್ಷೇತ್ರಗಳಿಗೆ ಪ್ರಾಮುಖ್ಯತೆ ಇರುವಂತೆ ರೂಪಿಸಲಾಗುತ್ತಿದೆ. ಈಗಿರುವ ಎರಡು ರಸ್ತೆಗಳ ನಡುವೆ ಈ ಹೆದ್ದಾರಿ ಹಾದುಹೋಗುತ್ತದೆ. ಈ ಹೆದ್ದಾರಿಯು ಬೆಂಗಳೂರಿನ ಬಳಿ ರಾಷ್ಟ್ರೀಯ ಹೆದ್ದಾರಿಗಳಾದ ೪ ಮತ್ತು ೭ಕ್ಕೆ ಸಂಪರ್ಕ ಹೊಂದಲಿದೆ. ಈ ಹೆದ್ದಾರಿಗಾಗಿ ೫೦೦೦ ಹಾಗೂ ಪಟ್ಟಣಗಳ ನಿರ್ಮಾಣಕ್ಕಾಗಿ ೧೩,೧೯೪ ಎಕರೆ ಭೂಮಿ ಅಗತ್ಯವಾಗಿದೆ. ಇದನ್ನು ಕಾರ್ಯಗತಗೊಳಿಸಲು ಸರ್ಕಾರ ವ್ಯವಸ್ಥೆ ಮಾಡುತ್ತಿದೆ.

ರಸ್ತೆ ಸಾರಿಗೆಯಲ್ಲಿ 'ಮೋಟಾರು ವಾಹನ ಕಾಯಿದೆ' ಒಂದು ಮುಖ್ಯ ಆಧಾರವಾಗಿದ್ದು, ಸರ್ಕಾರದ ಕಾರ್ಯ ನೀತಿಯ ಅನುಸಾರವಾಗಿ ಸಾರಿಗೆ ವ್ಯವಸ್ಥೆಯನ್ನು ಸ್ಪಷ್ಟವಾಗಿ ನಿರೂಪಿಸುತ್ತಿದೆ. ಉದಾಹರಣೆಗೆ ವಾಹನ ನಡೆಸುವ ಲೈಸನ್ಸುಗಳನ್ನು ನೀಡುವುದು, ವಾಹನ ಸಂಚಾರವನ್ನು ನಿಯಂತ್ರಿಸುವುದು ಮತ್ತು ಮೋಟಾರು ವಾಸನಗಳನ್ನು ನೋಂದಾಯಿಸುವುದು ಇತ್ಯಾದಿ. ಇತ್ತೀಚಿನ ದಿನಗಳಲ್ಲಿ

ಅತ್ಯಧಿಕ ಸಂಖ್ಯೆಯಲ್ಲಿ ಅದರಲ್ಲೂ ದ್ವಿಚಕ್ರ ವಾಹನಗಳ ನೋಂದಾವಣೆ ಕಾರ್ಯ ಅಸಾಧಾರಣವಾಗಿ ಬೆಳೆದಿರುವುದು ಕಂಡುಬಂದಿದೆ. ಒಟ್ಟು ನೋಂದಾಯಿಸಲ್ಪಟ್ಟ ಮೋಟಾರು ವಾಹನಗಳ ಸಂಖ್ಯೆಯು ೧೯೬೨-೬೩ರಲ್ಲಿ ಕೇವಲ ೫೬ ಸಾವಿರವಿದ್ದದ್ದು ೧೯೯೨-೯೩ರ ವೇಳೆಗೆ ಅದು ೧೭೧೮ ಸಾವಿರಕ್ಕೆ ಏರಿತು. ಅಂದರೆ ಈ ವಾಹನ ಸಂಖ್ಯೆಯು ೩೦ರಷ್ಟು ಬೆಳೆದಿದೆ. ರಾಜ್ಯದಲ್ಲಿ ಕಳೆದ ೩೦ ವರ್ಷಗಳ ಅವಧಿಯಲ್ಲಿ ಬಸ್ಸುಗಳ ಸಂಖ್ಯೆಯೂ ಸಹ ಎಡೆಬಿಡದೆ ಒಂದೇ ಸಮನೆ ಬೆಳೆಯುತ್ತಿದೆ. ಅಂದರೆ ೧೯೬೨-೬೩ರ ಸಾಲಿನಲ್ಲಿ ೧೯೬೨ ಬಸ್ಸುಗಳಿದ್ದದ್ದು ಈಗ ೨೫,೧೦೦ ಬಸ್ಸುಗಳಿಗೆ (೧೩ ಪಟ್ಟು) ಏರಿದೆ. ಅದೇ ರೀತಿ ಲಾರಿಗಳ ಸಂಖ್ಯೆಯೂ ಸಹ ೧೪,೪೮೪ರಿಂದ ೭೪,೮೨೬ಕ್ಕೆ (೫ ಪಟ್ಟು) ಹೆಚ್ಚಿರುವುದನ್ನು ಗಮನಿಸಬಹುದು.

ಇತರೆ ಹಲವಾರು ರಾಜ್ಯಗಳಿಗೆ ಹೋಲಿಸಿದರೆ, ವಾಹನಗಳ ದೊರೆಯುವಿಕೆಯು ಕರ್ನಾಟಕದಲ್ಲಿ ಉತ್ತಮವಾಗಿದೆ. ಪ್ರತಿ ಲಕ್ಷ ಜನಸಂಖ್ಯೆಗೆ ಕರ್ನಾಟಕ ೪೫ ಬಸ್ಸುಗಳು, ೧೨೯ ಲಾರಿಗಳು ಮತ್ತು ೨೫೫೦ ನೋಂದಾಯಿಸಲ್ಪಟ್ಟ (ದ್ವಿಚಕ್ರ ವಾಹನಗಳು ಸೇರಿದಂತೆ) ಮೋಟಾರು ವಾಹನಗಳನ್ನು ಹೊಂದಿದೆ. ಭಾರತದಲ್ಲಿ ಪ್ರತಿ ಲಕ್ಷ ಜನಸಂಖ್ಯೆಗೆ ೩೫ ಬಸ್ಸುಗಳು, ೧೫೪ ಲಾರಿಗಳು ಮತ್ತು ೧೯೭೨ ನೋಂದಾಯಿಸಲ್ಪಟ್ಟ ಮೋಟಾರು ವಾಹನಗಳು ಕಂಡು ಬರುತ್ತವೆ.

ರಾಜ್ಯದಲ್ಲಿ ಜನರ ಸಾಗಾಣಿಕೆಯ ಕಾರ್ಯವನ್ನು ಸಾರ್ವಜನಿಕ ಮತ್ತು ಖಾಸಗಿ ವಲಯದ ಸಂಸ್ಥೆಗಳೆರಡು ನೋಡಿಕೊಳ್ಳುತ್ತಿವೆ. ಆದರೆ ಸರಕು-ಸಾಮಾಗ್ರಿಗಳನ್ನು ಸಾಗಿಸುವ ಕಾರ್ಯವನ್ನು ಹೆಚ್ಚುಕಡಿಮೆ ಖಾಸಗಿ ವಲಯದ ಸಂಸ್ಥೆಗಳು ಪೂರ್ಣವಾಗಿ ವಹಿಸಿಕೊಂಡಿವೆ. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ (K.S.R.T.C.)ಯು ಒಂದು ಸಾರ್ವಜನಿಕ ವಲಯದ ಸಂಸ್ಥೆಯಾಗಿದ್ದು, ಜನರ ಸಾಗಾಣಿಕೆಯ ಕಾರ್ಯವನ್ನು ರಾಜ್ಯದಲ್ಲಿ ನಿರ್ವಹಿಸುತ್ತಿದೆ. ಸದ್ಯದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಸುಮಾರು ೯೭೦೦ ಬಸ್ಸುಗಳನ್ನು ಓಡಿಸುತ್ತಿದೆ.

## ಗ್ರಾಮಾಂತರ ರಸ್ತೆಗಳು

ಕೇಂದ್ರ ಸರ್ಕಾರ ಹೊರತಂದ 'ಕನಿಷ್ಠ ಜೀವನಾವಶ್ಯಕ ಕಾರ್ಯಕ್ರಮದ ಯೋಜನೆ'ಯ ಅಡಿಯಲ್ಲಿ ೧೫೦೦ಕ್ಕಿಂತ ಮೇಲ್ಪಟ್ಟ ಜನಸಂಖ್ಯೆ ಹೊಂದಿರುವ ಎಲ್ಲಾ ಹಳ್ಳಿಗಳಿಗೂ ರಸ್ತೆ ಸೌಕರ್ಯ ಕಲ್ಪಿಸುವ ಉದ್ದೇಶದಿಂದ ಈ ಯೋಜನೆಯನ್ನು ಜಾರಿಗೆ ತಂದಿತು. ಆ ಪ್ರಕಾರ ರಾಜ್ಯದಲ್ಲಿ ೧೦೦೦-೧೫೦೦ ಜನಸಂಖ್ಯೆ ಹೊಂದಿರುವ ಅರ್ಧದಷ್ಟು ಹಳ್ಳಿಗಳು ೧೯೯೦ರ ವೇಳೆಗೆ ಅನುಕೂಲಕರ ರಸ್ತೆಗಳನ್ನು ಹೊಂದುವಂತಾದವು. ಸರ್ಕಾರದ ದಾಖಲೆಗಳ ಪ್ರಕಾರ ರಾಜ್ಯದಲ್ಲಿ ಕಂದಾಯ ನೀಡುತ್ತಿರುವ ಬಹಳಷ್ಟು ಹಳ್ಳಿಗಳು ಉತ್ತಮ ರಸ್ತೆಗಳ ಸಂಬಂಧ ಹೊಂದಲು

ಸಾಧ್ಯವಾಗದಿದ್ದರೂ ಕಡೇ ಪಕ್ಷ ಒಂದು ರೀತಿಯ ಕಚ್ಚಾ ರಸ್ತೆಗಳನ್ನಾದರೂ ಪಡೆದಿವೆ. ಅಂಕಿ-ಅಂಶಗಳ ಗಣನೆಗೆ ಸಿಲುಕದ ಪ್ರಾದೇಶಿಕವಾಗಿ ಎಲ್ಲಂದರಲ್ಲಿ ಚದುರಿರುವ ಬಹಳಷ್ಟು ಸಣ್ಣ ಹಳ್ಳಿಗಳು, ಹರಿಜನ ಕೇರಿ ಮತ್ತು ಗಿರಿಜನ ತಾಂಡಗಳನ್ನು ಆಡಳಿತ ದೃಷ್ಟಿಯ ಅನುಕೂಲಕ್ಕಾಗಿ ಇವುಗಳ ಹತ್ತಿರದ ಯಾವುದಾದರೂ ಒಂದು ಗ್ರಾಮದ ಜೊತೆ ಹೊಂದಿಸಿ ಅದನ್ನು ಒಂದೇ ಗ್ರಾಮವಾಗಿ ಪರಿಗಣಿಸಲಾಗುತ್ತದೆ. ಇಂತಹ ಕಡೆಯಲ್ಲಿ ವಾಸಿಸುವ ಜನಾಂಗಗಳು ರಸ್ತೆ ಸೌಕರ್ಯದಿಂದ ವಂಚಿತರಾಗಿದ್ದಾರೆ. ಅವರು ಯಾವಾಗಲೂ ಕಾಲುದಾರಿಗಳ ಮೂಲಕ ಅಥವಾ ಪೂರ್ವದಲ್ಲಿ ಎತ್ತಿನಗಾಡಿ ನಿರ್ಮಿಸಿದ ನೀರು ತುಂಬಿ ಸಣ್ಣ ತೊರೆಯಾಗಿ ಮಾರ್ಪಾಡಾದ ಕೆಟ್ಟದಾರಿಯ ಮೂಲಕ ನಡೆದು ಬಂದು, ಹತ್ತಿರದ ರಸ್ತೆಯಲ್ಲಿನ ಒಂದು ನಿರ್ದಿಷ್ಟವಾದ ಸ್ಥಳಕ್ಕೆ ಬಂದು ಸೇರಬೇಕಾಗುತ್ತದೆ. ಇಂತಹ ವಾಸಸ್ಥಳಗಳನ್ನು ಸರಿಯಾದ ರೀತಿಯಲ್ಲಿ ಗುರುತಿಸಿರುವುದಿಲ್ಲ. ರಸ್ತೆಗಳ ಹಂಚಿಕೆಯನ್ನು ನೋಡಿದಾಗ ರಾಜ್ಯದಲ್ಲಿ ಶೇ. ೪೩ರಷ್ಟು ಹಳ್ಳಿಗಳು ಎಲ್ಲ ರೀತಿಯ ಮೋಟಾರು ವಾಹನಗಳಿಗೂ ಅನುಕೂಲಕರವಾದ ರಸ್ತೆಗಳನ್ನು ಮತ್ತು ಶೇ. ೨೫ರಷ್ಟು ತಕ್ಕಮಟ್ಟಿನ ಮೋಟಾರು ಚಲನೆಗೆ ಯೋಗ್ಯವಾದ ರಸ್ತೆಗಳನ್ನು ಹೊಂದಿವೆ. ಅದೇ ರೀತಿ ಹೆಚ್ಚುಕಡಿಮೆ ಶೇ. ೩೧ರಷ್ಟು ಹಳ್ಳಿಗಳು ಮಾತ್ರ ಕಚ್ಚಾ ರಸ್ತೆಗಳನ್ನು ಹೊಂದಿವೆ ಮತ್ತು ಯಾವುದೇ ರೀತಿಯ ರಸ್ತೆಗಳನ್ನು ಹೊಂದದೆ ಇರುವ ಹಳ್ಳಿಗಳ ಶೇಕಡಾವಾರು ಸಂಖ್ಯೆ ಕೇವಲ ೧. ಸಣ್ಣ ಸಣ್ಣ ಹಳ್ಳಿಗಳನ್ನು ದೊಡ್ಡ ಕೇಂದ್ರೀಯ ಸ್ಥಳಗಳಾದ ಹೋಬಳಿ ಕೇಂದ್ರ ಸ್ಥಾನಗಳು, ವಾರದ ಸಂತೆಗಳು, ಮಾರುಕಟ್ಟೆಗಳು ಮತ್ತು ಕೈಗಾರಿಕಾ ಪಟ್ಟಣಗಳಿಗೆ ಮಾರ್ಗ ಸಂಪರ್ಕ ಒದಗಿಸುವಲ್ಲಿ ಹೆಚ್ಚಿನ ಗಮನ ಹರಿಸುವುದು ಗ್ರಾಮೀಣ ಸಾರಿಗೆ ವ್ಯವಸ್ಥೆಯ ಆದ್ಯ ಕರ್ತವ್ಯವಾಗಿರುತ್ತದೆ.

### ಮುಖ್ಯ ಪಟ್ಟಣದ ಸಾರಿಗೆ ವ್ಯವಸ್ಥೆ

ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರು ನಗರ ದೇಶದಲ್ಲಿ ಮಿತಿಮೀರಿ ಬೆಳೆಯುತ್ತಿರುವ ನಗರಗಳಲ್ಲಿ ಒಂದು. ಇಲ್ಲಿ ಬೆಳೆಯುತ್ತಿರುವ ಜನಸಂಖ್ಯೆಗೆ ಸಾಕಾಗುವಷ್ಟು ಸಾರ್ವಜನಿಕ ಸಾರಿಗೆ ವ್ಯವಸ್ಥೆ ಕಂಡುಬರದೆ, ಖಾಸಗಿ ವಾಹನಗಳ ಸಂಖ್ಯೆ ನಗರದ ಜನಸಂಖ್ಯಾ ಬೆಳವಣಿಗೆಯ ದರಕ್ಕಿಂತಲೂ ಅಧಿಕ ದರದಲ್ಲಿ ಬೆಳೆಯುತ್ತಿದೆ. ಇದರಿಂದ ಅವ್ಯವಸ್ಥೆ ಮತ್ತು ವಾಯುಮಾಲಿನ್ಯಕ್ಕೆ ಎಡೆ ಮಾಡಿಕೊಟ್ಟಂತಾಗುತ್ತದೆ. ನಗರದ ಸಾರಿಗೆಯ ಸಾಧನ-ಸವಲತ್ತುಗಳನ್ನು ದಶಕಗಳ ಹಿಂದೆಯೇ ನಿರ್ಮಿಸಿದ್ದು, ಅವುಗಳ ಶಕ್ತಿ ಕುಂದಿರುವುದರ ಜೊತೆಗೆ ಮಿತಿ ಮೀರಿದ ವಾಹನ ಸಂಚಾರದಿಂದಾಗಿ ಬಹಳಷ್ಟು ರಸ್ತೆ ಅಪಘಾತಗಳು ಅದರಲ್ಲೂ ಮುಗ್ಧ ಪಾದಚಾರಿಗಳು ಮತ್ತು ದ್ವಿಚಕ್ರ ವಾಹನಚಾರಿಗಳಿಗೆ ಸಂಭವಿಸುತ್ತಿರುವುದು ಕಂಡುಬಂದಿದೆ. ನಗರದಲ್ಲಿ ೧೯೮೮ನೇ ಇಸವಿಯೊಂದರಲ್ಲೇ ೪೭೨೯ ರಸ್ತೆ ಅಪಘಾತಗಳು ಸಂಭವಿಸಿದ್ದು, ೩೭೬ ಜನರು ಸಾವನ್ನಪ್ಪಿದ್ದಾರೆ, ೩೫೮ ಜನರು

ಕ್ಕೆ ಕಾಲು ಇತರೆ ಮೂಳೆ ಮುರಿದುಕೊಂಡಿದ್ದಾರೆ. ಭಾರತದ ಇತರ ನಗರಗಳಿಗಿಂತ ಬೆಂಗಳೂರು ನಗರದಲ್ಲಿ ನಂಬಲು ಅಸಾಧ್ಯವಾದ ವಾಹನ ಅಪಘಾತಗಳು ಸಂಭವಿಸುತ್ತಿದ್ದು ಪ್ರಥಮ ಸ್ಥಾನದಲ್ಲಿರುವುದು ನಿಜವಾಗಲೂ ಶೋಚನೀಯ ಸಂಗತಿಯಾಗಿದೆ. ಈ ಮಹಾನಗರದಲ್ಲಿ ಬೆಳಗಿನಜಾವ ಮತ್ತು ಸಂಜೆಯ ವೇಳೆಯಲ್ಲಿ ಕಿಕ್ಕಿರಿದ ಜನಸಂದಣಿಯು ಸಾಮಾನ್ಯವಾಗಿ ಮೆಜೆಸ್ಟಿಕ್, ವಿಧಾನಸೌಧ ಹಾಗೂ ಮಾರುಕಟ್ಟೆ ಸ್ಥಳಗಳಲ್ಲಿ ಕಂಡುಬರುವುದು. ಜನ-ವಾಹನ ಸಂಚಾರದ ಕಿಕ್ಕಿರದ ಆ ಸಮಯದಲ್ಲಿ ವಾಹನಗಳು ಮುಖ್ಯ ರಸ್ತೆಗಳಲ್ಲಿ ಜನರ ಮೈಮೇಲೆಯೇ ಬರುತ್ತಿರುವುದನ್ನು ಪ್ರತಿದಿನ ಗಮನಿಸಬಹುದು.

ಮಹಾ ನಗರದ ಸಾರಿಗೆ ವ್ಯವಸ್ಥೆಯ ತೊಂದರೆಗಳನ್ನು ಸರಿಹೊಂದಿಸಲು 'ಮಾಸ್ ರ್‍ಯಾಪಿಡ್ ಟ್ರಾನ್ ಸಿಟ್' ನ್ನು ನಗರದಲ್ಲಿ ಸುಮಾರು ೪೨೦೦ ಕೋಟಿ ರೂಪಾಯಿಗಳ ಬಂಡವಾಳ ತೊಡಗಿಸಿ ಕಾರ್ಯರೂಪಕ್ಕೆ ತರುತ್ತಿದೆ. ನಗರದಲ್ಲಿ ಮುಖ್ಯ ರಸ್ತೆಗಳಲ್ಲಿನ ಮಧ್ಯ ಮಾರ್ಗಗಳ ನಡುವೆ ಎತ್ತರಿಸಿದ ಸಿಮೆಂಟು ರೈಲು ಮಾರ್ಗಗಳ ಮೂಲಕ ಹಾಯುವಂತಹ ಹವಾನಿಯಂತ್ರಣ ಲಘು ರೈಲು ಸಾರಿಗೆಯನ್ನು ಈ ಯೋಜನೆಯ ಅಡಿಯಲ್ಲಿ ಪರಿಚಯಿಸಲು ಆಲೋಚಿಸಲಾಗಿದೆ. ಈ ಯೋಜನೆಯು ೪ ಹಂತಗಳಲ್ಲಿ ಪೂರ್ಣಗೊಳ್ಳಲಿದ್ದು, ಒಟ್ಟು ೬೦ ಕಿ.ಮೀ. ದೂರದ ೬ ಮಾರ್ಗಗಳನ್ನು ಸುತ್ತುವರಿಯುತ್ತದೆ. ಬೆಂಗಳೂರು ಮಾಸ್ ರ್‍ಯಾಪಿಡ್ ಟ್ರಾನ್ಸ್ ಸಿಟ್ ಸಿಸ್ಟಂ ಲಿಮಿಟೆಡ್ (B.M.R.T.S.L.) ಸಂಸ್ಥೆ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ವಿಶ್ವಮಟ್ಟದ ಟೆಂಡರ್ ಕರೆದು 'ನಿರ್ಮಾಣ, ನಿರ್ವಹಣೆ ಮತ್ತು ಸರ್ಕಾರಕ್ಕೆ ವರ್ಗಾವಣೆ' - ಬೂಟ್ (Build Own Operate Transfer) ಮಾದರಿಯಲ್ಲಿ ಕಾರ್ಯನಿರ್ವಹಿಸಲು ವ್ಯವಸ್ಥೆ ಮಾಡುತ್ತಿದೆ. ಹಲವಾರು ಭಾರತೀಯ ಮತ್ತು ಬಹುರಾಷ್ಟ್ರೀಯ ಪರಿಣಿತರು (Consortiums) ಜೊತೆಗೂಡಿ ಈ ಮಹತ್ವ ಪೂರ್ಣಯೋಜನೆಯನ್ನು ಸ್ವಾಧೀನಪಡಿಸಿಕೊಳ್ಳಲು ಹೋರಾಡುತ್ತಿದ್ದಾರೆ. ಈ ವಾಹನದ ಸೌಲಭ್ಯದಿಂದ ಸ್ವಂತ ವಾಹನಗಳ ಶೇ. ೬೦ರಷ್ಟು ವಾಹನಗಳನ್ನು ಕಿತ್ತೊಗೆಯುವುದಲ್ಲದೆ, ನಗರದ ರಸ್ತೆಗಳಲ್ಲಿನ ಜನಸಂದಣಿಯನ್ನು ಉಪಶಮನಗೊಳಿಸಬಹುದು.

## ೧. ಕ) ಬಂದರುಗಳು

ಭಾರತದ ಬಂದರು ಸಾರಿಗೆಯಲ್ಲಿ ಒಟ್ಟು ೧೧ ಬೃಹತ್ ಬಂದರುಗಳಿವೆ. ಅವುಗಳಲ್ಲಿ ಹೊಸ ಮಂಗಳೂರು ಬಂದರು ಒಂದಾಗಿದ್ದು, ಇದು ಕರ್ನಾಟಕದ ಪಶ್ಚಿಮ ಕರಾವಳಿ ತೀರ ಪ್ರದೇಶದಲ್ಲಿ ಕಂಡುಬರುತ್ತದೆ. ರಾಜ್ಯದಲ್ಲಿ ಸಂಪೂರ್ಣವಾಗಿ ಬಂದರು ಸೌಲಭ್ಯಗಳನ್ನು ನೋಡಿಕೊಳ್ಳಲು ಖಾಸಗಿ ವಲಯಗಳ ಸ್ವಾಮ್ಯಕ್ಕೆ ನೀಡಲಾಗಿದೆ. ಸಲಕರಣೆಗಳ ಗುತ್ತಿಗೆ, ಸರಹದ್ದುಗಳ ಗುತ್ತಿಗೆ ಮತ್ತು ನಿರ್ವಹಣೆಯನ್ನು ಸಹ ಖಾಸಗಿ ವಲಯವೇ ನೋಡಿಕೊಳ್ಳುತ್ತಿದೆ. ಹಾಗೂ ಹಡಗು

ನಿಲ್ದಾಣ ಮತ್ತು ಅದಕ್ಕೆ ಸಂಬಂಧಪಟ್ಟ ಸೌಲಭ್ಯಗಳನ್ನೂ ಸಹ ಖಾಸಗಿ ವಲಯವೇ ನೋಡಿಕೊಳ್ಳುತ್ತಿದೆ. ೧೯೬೩ರ ಬಂದರು ಟ್ರಸ್ಟ್ ಕಾಯಿದೆಯ ಅನ್ವಯ ಬಂದರು ಸಂಸ್ಥೆಯ ಟ್ರಸ್ಟಿಗಳು ಬಂದರುಗಳ ಆಡಳಿತ, ಬಂದರುಗಳ ನಿಯಂತ್ರಣ ಮತ್ತು ನಿರ್ವಹಣೆಯನ್ನು ಮಾತ್ರ ನೋಡಿಕೊಳ್ಳುತ್ತಿದ್ದಾರೆ.

ರಾಜ್ಯದಲ್ಲಿ ಕೆಲವು ಸಣ್ಣ ಬಂದರುಗಳಿವೆ. ಅವುಗಳಲ್ಲಿ ಕಾರವಾರ, ಬೆಳಕೇರಿ, ಮಂಗಳೂರು (ಹಳೆಯದು) ಮತ್ತು ಮಲ್ಪೆ. ೧೯೯೨-೯೩ರ ಹೊತ್ತಿಗೆ ಈ ಸಣ್ಣ ಬಂದರುಗಳು ಸುಮಾರು ೫ ಲಕ್ಷ ಟನ್ನುಗಳಷ್ಟು ಸರಕು-ಸಾಮಾಗ್ರಿಗಳ ವ್ಯವಹಾರ ಮಾಡಿರುತ್ತವೆ.

## ೧. ಡ) ವಿಮಾನ ನಿಲ್ದಾಣ

ಪ್ರಸ್ತುತ ಬೆಂಗಳೂರು ನಗರದಲ್ಲಿರುವ ಹೆಚ್.ಎ.ಎಲ್. ವಿಮಾನ ನಿಲ್ದಾಣವು ಹಲವಾರು ದೇಶೀಯ ವಿಮಾನಗಳನ್ನು ಹೊಂದಿದ್ದು, ಪ್ರತಿದಿನ ನಗರದಿಂದ ದೇಶದ ಇತರ ಬೃಹತ್ ನಗರಗಳ ಜೊತೆ ಸಂಪರ್ಕ ಕಲ್ಪಿಸಿದೆ. ಉದಾಹರಣೆಗೆ ದೆಹಲಿ, ಮುಂಬಾಯಿ, ಕಲ್ಕತ್ತ, ಚೆನ್ನೈ ಮತ್ತು ಹೈದರಾಬಾದ್. ಅದೇ ರೀತಿ ಸಣ್ಣ ನಗರಗಳಾದ ಮಂಗಳೂರು, ಹುಬ್ಬಳ್ಳಿ, ಗೋವಾ, ಪುಣೆ, ಅಹಮದಾಬಾದ್, ಕೊಯಂಬತ್ತೂರು, ಕೊಚ್ಚಿನ್, ತ್ರಿವೇಂಡ್ರಂ ಮತ್ತು ಕ್ಯಾಲಿಕಟ್ ನಗರಗಳ ನಡುವೆ ವಾರದಲ್ಲಿ ಒಂದು ಅಥವಾ ಎರಡು ಪ್ರಯಾಣವನ್ನು ಹೊಂದಿರುತ್ತವೆ.

ಬೆಂಗಳೂರು ವಿಮಾನ ನಿಲ್ದಾಣವನ್ನು 'ಅಂತರರಾಷ್ಟ್ರೀಯ ವಿಮಾನ ನಿಲ್ದಾಣ'ವೆಂದು ಕರೆಯುತ್ತಾರೆ. ನಗರದಿಂದ ನೇರವಾಗಿ ಸಿಂಗಾಪುರಕ್ಕೆ ವಿಮಾನ ಸೌಕರ್ಯವಿದ್ದು, ವಾರದಲ್ಲಿ ೨ ದಿನ ಮಾತ್ರ ಹಾರಾಡುತ್ತದೆ. ಹಾಗೂ ನ್ಯೂಯಾರ್ಕಿಗೆ ವಾರದಲ್ಲಿ ಒಂದು ದಿನ ಇಂತಹ ಸೌಲಭ್ಯವಿದೆ. ಆದರೆ ಅಂತರರಾಷ್ಟ್ರೀಯ ವಿಮಾನಗಳ ಕೊರತೆ ಜಾಸ್ತಿ ಇದ್ದು, ಅವುಗಳ ಬಗ್ಗೆ ಆಪಾದನೆಗಳು ಬರುತ್ತಿವೆ. ಕರ್ನಾಟಕದಲ್ಲಿನ ಹಲವಾರು ಕಾರ್ಖಾನೆಗಳನ್ನು ಹೊರದೇಶದಲ್ಲಿ ನೆಲಸಿರುವ ಭಾರತೀಯರು ಮತ್ತು ವಿದೇಶಿಯರು ಸ್ಥಾಪಿಸಿದ್ದು ಅವುಗಳು ಅವನತಿಯ ಹಾದಿ ಹಿಡಿದಿವೆ. ತಮಗೆ ಬೇಕಾದ ಸರಕು-ಸಾಮಾಗ್ರಿಗಳನ್ನು ಹೊರದೇಶಗಳಿಂದ ನೇರವಾಗಿ ಕರ್ನಾಟಕಕ್ಕೆ ಆಮದು ಮಾಡಿಕೊಳ್ಳಲಾಗದೆ ಸಂಪೂರ್ಣವಾಗಿ ಮುಚ್ಚಿವೆ. ಈ ಕಾರಣದಿಂದಾಗಿ ನಗರದ ಹೊರ ವಲಯದಲ್ಲಿರುವ ದೇವನಹಳ್ಳಿ ಸ್ಥಳದಲ್ಲಿ ಒಂದು ವಿಶಾಲವಾದ, ಆಧುನಿಕ ತಾಂತ್ರಿಕತೆಯನ್ನೊಳ ಗೊಂಡ ವಿಮಾನ ನಿಲ್ದಾಣವನ್ನು ನಿರ್ಮಿಸುವುದರಿಂದಾಗಿ ದೇಶೀಯ ಹಾಗೂ ಅಂತರರಾಷ್ಟ್ರೀಯ ವಿಮಾನಗಳ ಸಂಪರ್ಕವನ್ನು ಸುಲಭವಾಗಿ ಇನ್ನೂ ಹಲವಾರು ದೇಶಗಳ ನಡುವೆ ಹಾಗೂ ರಾಜ್ಯದ ನಗರಗಳ ನಡುವೆ ವೃದ್ಧಿಸಬಹುದು. ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನನಿಲ್ದಾಣ ಅಧಿಕಾರಕ್ಕೆ ಬಂದು ಕಾರ್ಯ ನಿರ್ವಹಿಸುವಂತಾದರೆ

ಈಗ ಪ್ರಚಲಿತವಿರುವ ಹೆಚ್.ಎ.ಎಲ್. ವಿಮಾನ ನಿಲ್ದಾಣವು ಕೇವಲ ಪರೀಕ್ಷಾ ಕಾರ್ಯಗಳಿಗೆ ಮತ್ತು ತುರ್ತು ಸಮಯದ ಉಪಯೋಗಕ್ಕೆ ಬಳಸಲಾಗುವುದು. ಈ ವಿಮಾನ ನಿಲ್ದಾಣವನ್ನು ಪ್ರತಿಷ್ಠಿತ ಟಾಟಾ ಕಂಪನಿಯವರು ನಿರ್ಮಿಸುತ್ತಿದ್ದು, ನಿಗದಿಪಡಿಸಿದಂತೆ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಹಸ್ತಾಂತರಿಸಿದ ೩೬ ತಿಂಗಳುಗಳ ಅವಧಿಯಲ್ಲಿ 'ಕಾರ್ಗೋ' (ಸರಕು-ಸಾಮಾಗ್ರಿ) ವಿಮಾನ ಸಂಚಾರ ಪ್ರಾರಂಭಿಸ ಬಹುದೆಂದು ಹಾಗೂ ೪೮ ತಿಂಗಳುಗಳ ಅವಧಿಯಲ್ಲಿ ಜನರ ವಿಮಾನ ಸಂಚಾರ ಪ್ರಾರಂಭಿಸ ಬಹುದೆಂದು ಟಾಟಾ ಕಂಪನಿ ತಿಳಿಸುತ್ತದೆ.

## ೨. ಸಂಪರ್ಕ ವ್ಯವಸ್ಥೆ

ಸುದ್ದಿ-ಸಮಾಚಾರಗಳನ್ನು ಪ್ರಸಾರ ಮಾಡುವ ಮತ್ತು ವ್ಯಾಪಾರವನ್ನು ಸಮರ್ಪಕವಾಗಿ ಮತ್ತು ತ್ವರಿತವಾಗಿ ವ್ಯವಹರಿಸುವ ಅತ್ಯಾವಶ್ಯಕ ಮಾಧ್ಯಮ ಈ ಸಂಪರ್ಕ ವ್ಯವಸ್ಥೆಯಾಗಿದೆ, ಅದೇ ಅಂಚೆ ಮತ್ತು ತಂತಿ ವ್ಯವಸ್ಥೆ. ಕರ್ನಾಟಕದಲ್ಲಿ ಪ್ರಚಲಿತವಿರುವ ಅಂಚೆ ಕಛೇರಿಗಳು ಕಳೆದ ಮೂರು ದಶಕಗಳ ಅವಧಿಯಲ್ಲಿ ಗಣನೀಯವಾಗಿ ೩ ಪಟ್ಟು ವೃದ್ಧಿಯಾಗಿರುವುದು, ಅಂದರೆ ೧೯೬೨-೬೩ರಲ್ಲಿ ೩,೨೨೧ ಅಂಚೆ ಕಛೇರಿಗಳಿದ್ದು ೧೯೯೨-೯೩ರ ವೇಳೆಗೆ ಇವು ೯೭೬೨ಕ್ಕೆ ಬೆಳೆದಿರುವುದನ್ನು ಗಮನಿಸಬಹುದು. ಈ ನಿಟ್ಟಿನಲ್ಲಿ ನೋಡಿದಾಗ ರಾಜ್ಯದಲ್ಲಿ ಪ್ರತಿ ಲಕ್ಷ ಜನಸಂಖ್ಯೆಗೆ ೨೨ ಅಂಚೆ ಕಛೇರಿಗಳನ್ನು ಹೊಂದಿದ್ದು ಇದು ಭಾರತದಲ್ಲಿ ಅಷ್ಟೇ ಜನಸಂಖ್ಯೆಗೆ ಕೇವಲ ೧೮ ಅಂಚೆ ಕಛೇರಿಗಳಿವೆ ಎಂದು ಹೇಳಬಹುದು. ಇದರಿಂದ ಸ್ಪಷ್ಟವಾಗುವುದೇನೆಂದರೆ ಕರ್ನಾಟಕದ ಸ್ಥಿತಿ ದೇಶಕ್ಕೆ ಹೋಲಿಸಿ ನೋಡಿದಾಗ ಉತ್ತಮ ಮಟ್ಟದಲ್ಲಿದೆ ಎಂದೆನ್ನಬಹುದು. ಇತ್ತೀಚೆಗೆ ಖಾಸಗಿ ಕೊರಿಯರ್ ಸೇವೆಗಳೂ ಸಹ ಬಂದಿದ್ದು ಅಂಚೆ ಕಛೇರಿಗಳ ಜೊತೆ ಸ್ಪರ್ಧೆ ಕಲ್ಪಿಸುತ್ತಿರುವುದನ್ನು ರಾಜ್ಯದಲ್ಲಿ ಕಾಣಬಹುದು.

ಅದೇ ರೀತಿ ತಂತಿ ಕಛೇರಿಯ ಪ್ರಗತಿಯಲ್ಲೂ ರಾಜ್ಯ ಮುಂದೆ ಬಂದಿದೆ. ಸುಮಾರು ೩೬೫೯ ತಂತಿ ಕಛೇರಿಗಳು, ೧೭೯೯ ದೂರವಾಣಿ ವಿನಿಮಯ ಕೇಂದ್ರಗಳು ಮತ್ತು ೪,೩೪,೪೦೦ ದೂರವಾಣಿಗಳು ರಾಜ್ಯದಲ್ಲಿವೆ. ಪ್ರತಿ ಲಕ್ಷ ಜನಸಂಖ್ಯೆಗೆ ೯ ತಂತಿ ಕಛೇರಿಗಳು ಮತ್ತು ೯೫೦ ದೂರವಾಣಿಗಳು ಕರ್ನಾಟಕದಲ್ಲಿದ್ದರೆ ಅದಕ್ಕೆ ವಿರುದ್ಧವಾಗಿ ೫ ತಂತಿ ಕಛೇರಿಗಳು ಮತ್ತು ೭೦೦ ದೂರವಾಣಿಗಳು ಸಮಸ್ತ ಭಾರತದಲ್ಲಿ ಕಂಡು ಬರುತ್ತವೆ. ದೂರಸಂಪರ್ಕ ಇಲಾಖೆಯ ಮತ್ತೊಂದು ಸಾಧನೆ ಎಂದರೆ ರಾಜ್ಯದ ಜನಸಂದಣಿಯ ಸ್ಥಳಗಳಲ್ಲಿ ಖಾಸಗಿ ದೂರವಾಣಿ ಬೂತ್‌ಗಳು ತೆರೆದಿರುವುದು. ಬೆಂಗಳೂರು ನಗರ ಮತ್ತು ರಾಜ್ಯದ ಇತರ ಮುಖ್ಯ ಪಟ್ಟಣಗಳಲ್ಲಿ ಫ್ಯಾಕ್ಸ್, ವೈದ್ಯುತಿಕ ಟಪಾಲು, ಪೇಜರ್ (ಸಮಾಚಾರ ಕೊಂಡೊಯ್ಯುವ) ಸೇವೆಗಳು ಬಳಕೆಗ ಬಂದಿದೆ. ಹೊಸ ತಾಂತ್ರಿಕತೆಯ ಫಲದಿಂದಾಗಿ ಹಳೆಯ ಮಾದರಿಯ ಸಂಪರ್ಕ ವ್ಯವಸ್ಥೆಯನ್ನು

ಬದಲಿಸಿದರಿಂದ ವ್ಯಾಪಾರ-ವ್ಯವಹಾರದಲ್ಲಿ ಒಂದು ರೀತಿಯ ಕ್ರಾಂತಿ ಉಂಟಾದಂತಾಯಿತು.

**೩. ವಿದ್ಯುಚ್ಛಕ್ತಿ**

ಯಾವುದೇ ರಾಷ್ಟ್ರದಲ್ಲಾದರೂ ಜನತೆಯ ಸರ್ವತೋಮುಖ ಅಭಿವೃದ್ಧಿಯಲ್ಲಿ ಪ್ರಧಾನ ಪಾತ್ರವಹಿಸುವ ಎರಡು ಕ್ಷೇತ್ರಗಳೆಂದರೆ ಕೃಷಿ ಮತ್ತು ಕೈಗಾರಿಕೆಗಳು. ಈ ಎರಡು ಕ್ಷೇತ್ರಗಳ ಪ್ರಗತಿಗೆ ವಿದ್ಯುಚ್ಛಕ್ತಿ ಒಂದು ಜೀವನಾಡಿ. ಆ ಕಾರಣದಿಂದ ರಾಷ್ಟ್ರದ ಆರ್ಥಿಕ ಯೋಜನೆಗಳಲ್ಲಿ ವಿದ್ಯುತ್ ಉತ್ಪಾದನೆಯು ಒಂದಾಗಿದೆ. ಮೇಲೆ ತಿಳಿಸಿದಂತೆ ವಿದ್ಯುಚ್ಛಕ್ತಿಯು ಕೇವಲ ಕೈಗಾರಿಕಾ ವಲಯವನ್ನು ವಿಸ್ತರಿಸುವುದಕ್ಕೆ ಮಾತ್ರವಲ್ಲದೆ ಕೃಷಿಕ್ಷೇತ್ರದ ಅದರಲ್ಲೂ ಏತ ನೀರಾವರಿ ಮತ್ತು ಬಾವಿ ನೀರಾವರಿಯ ಪ್ರಗತಿಗೂ ಮೂಲಧಾರವಾಗಿದೆ. ಕೈಗಾರಿಕೆಗಳಲ್ಲಿ ಉತ್ಪಾದನೆಯ ಅವಧಿಯನ್ನು ಹಗಲು ಹೊತ್ತಿನಲ್ಲಿ ಹೆಚ್ಚಿಸುವುದು ಮತ್ತು ಗೃಹ ಕೃತ್ಯದ ಆರ್ಥಿಕ ಚಟುವಟಿಕೆಗಳಿಗೆ ಹೆಚ್ಚಿನ ಆದ್ಯತೆ ನೀಡಿ ಉತ್ಪಾದನಾ ವಸ್ತುಗಳನ್ನು ಹಾಗೂ ಅವುಗಳ ಸೇವೆಗಳನ್ನು ಆರ್ಥಿಕ ರಂಗದಲ್ಲಿ ಗಣನೀಯವಾಗಿ ಹೆಚ್ಚುಮಾಡುವಲ್ಲಿ ವಿದ್ಯುಚ್ಛಕ್ತಿಯ ಪಾತ್ರ ಅಪಾರವಾದುದು.

ಆದರೆ ವಿದ್ಯುಚ್ಛಕ್ತಿಯ ಕೊರತೆಯನ್ನು ಎದುರಿಸುತ್ತಿರುವ ರಾಜ್ಯಗಳಲ್ಲಿ ಕರ್ನಾಟಕ ರಾಜ್ಯವು ಸಹ ಒಂದಾಗಿದ್ದು, ಆರ್ಥಿಕ ಅಭಿವೃದ್ಧಿಗೆ ವಿದ್ಯುಚ್ಛಕ್ತಿಯು ಒಂದು ರೀತಿಯ ಸವಾಲಾಗಿ ನಿಂತಿದೆ. ೧೯೮೫-೮೬ರ ತರುವಾಯ ರಾಜ್ಯದಲ್ಲಿ ಶೇಕಡಾ ೨೦ಕ್ಕಿಂತಲೂ ಹೆಚ್ಚಾಗಿ ವಿದ್ಯುಚ್ಛಕ್ತಿಯ ಕೊರತೆ ಎದ್ದುಕಾಣುತ್ತಿದೆ. ಸುಮಾರು ೨೨,೦೭೦ ಮಿಲಿಯನ್ ಕಿಲೋ ವಾಟ್ ಗಂಟೆಗಳಷ್ಟು ವಿದ್ಯುಚ್ಛಕ್ತಿ ರಾಜ್ಯಕ್ಕೆ ಬೇಕಾಗುತ್ತದೆ ಎಂದು ೧೯೯೩-೯೪ರಲ್ಲಿ ಅಂದಾಜು ಮಾಡಲಾಗಿತ್ತು. ಆದರೆ ರಾಜ್ಯದಲ್ಲಿ ಪ್ರಸ್ತುತ ಉಪಯೋಗಿಸಿಕೊಳ್ಳಬಹುದಾದ ವಿದ್ಯುಚ್ಛಕ್ತಿ ಕೇವಲ ೧೭,೨೩೫ ಮಿಲಿಯನ್ ಕಿಲೋ ವಾಟ್ ಗಂಟೆಗಳಷ್ಟಿದ್ದು ಶೇ. ೨೧.೯ರಷ್ಟು ಕೊರತೆ ಕಂಡುಬರುತ್ತದೆ. ರಾಜ್ಯದ ಒಟ್ಟು ಕೊರತೆಯು ಇಡೀ ರಾಷ್ಟ್ರಕ್ಕೆ (೭.೩%) ಹೋಲಿಸಿದಾಗ ಮೂರುಪಟ್ಟು ಜಾಸ್ತಿ ಇದೆ ಎಂದು ತಿಳಿದುಬಂದಿದೆ. ತಲೆದೋರಿದ ವಿದ್ಯುತ್ ಕೊರತೆಯನ್ನು ನೀಗಿಸಲು ನಮ್ಮ ರಾಜ್ಯ ಇತರ ರಾಜ್ಯಗಳಿಂದ ವಿದ್ಯುಚ್ಛಕ್ತಿಯನ್ನು ಆಮದು ಮಾಡಿಕೊಳ್ಳುತ್ತಿದೆ. ಅದಲ್ಲದೆ ಕರ್ನಾಟಕವು ದಕ್ಷಿಣದ 'ಪ್ರಾದೇಶಿಕ ವಿದ್ಯುತ್ ಜಾಲ'ದ ಸದಸ್ಯ ರಾಜ್ಯವಾಗಿದ್ದು ಇದರ ನಿಯಮಾನುಸಾರ ವ್ಯಯಕ್ಕಿಂತ ಅಧಿಕವಿರುವ ಪ್ರದೇಶದಿಂದ ವಿದ್ಯುತ್ತನ್ನು ಕೊರತೆ ಇರುವ ಪ್ರದೇಶಕ್ಕೆ ದಕ್ಷಿಣದ ನಾಲ್ಕು ರಾಜ್ಯಗಳಲ್ಲಿ ಯಾವ ರಾಜ್ಯದಿಂದಾದರೂ ಒದಗಿಸಿ ಸಹಕರಿಸಲಾಗುತ್ತಿದೆ.

ರಾಜ್ಯದ ಒಟ್ಟು ಸ್ಥಾಪಿತ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ಸುಮಾರು

೩೧೬೬ ಮೆಗಾ ವಾಟ್‌ರಷ್ಟಿದೆ. ಈ ಒಟ್ಟು ಸ್ಥಾಪಿತ ವಿದ್ಯುತ್ ಉತ್ಪಾದನಾ ಸಾಮರ್ಥ್ಯದಲ್ಲಿ ಪರಮಾಣು ವಿದ್ಯುತ್ತನ್ನು ಹೊರತುಪಡಿಸಿ ಉಳಿದ ಶೇಕಡಾ ೫೪.೯ರಷ್ಟು ಜಲ ಮತ್ತು ಶೇಕಡ ೪೫.೧ರಷ್ಟು ಶಾಖೋತ್ಪನ್ನ ವಿದ್ಯುತ್ ರಾಜ್ಯದಲ್ಲಿ ಕಂಡು ಬರುತ್ತದೆ. ಅದೇ ರೀತಿ ರಾಷ್ಟ್ರದ ಒಟ್ಟು ಸ್ಥಾಪಿತ ಸಾಮರ್ಥ್ಯದಲ್ಲಿ ಶೇ. ೨೬.೬ರಷ್ಟು ಜಲ ವಿದ್ಯುತ್ ಮೂಲದಿಂದಲೂ, ಶೇ. ೨.೬ರಷ್ಟು ಪರಮಾಣು ವಿದ್ಯುತ್ ಮೂಲದಿಂದಲೂ ಮತ್ತು ಶೇ. ೭೦.೮ರಷ್ಟು ಶಾಖೋತ್ಪನ್ನ ವಿದ್ಯುತ್ ಮೂಲದಿಂದಲೂ ದೊರೆಯುತ್ತದೆ. ಸಾಮಾನ್ಯವಾಗಿ, ದೇಶದ ಅರ್ಥ ವ್ಯವಸ್ಥೆಗೆ ಸಾಕಾಗುವಷ್ಟು ವಿದ್ಯುತ್ತನ್ನು ಜಲ ಹಾಗೂ ಶಾಖೋತ್ಪನ್ನ ವಿದ್ಯುತ್ತಿನಿಂದ ಕ್ರಮವಾಗಿ ಶೇ. ೪೦ ಮತ್ತು ಶೇ. ೬೦ರಷ್ಟು ವಿದ್ಯುಚ್ಛಕ್ತಿಯನ್ನು ಕ್ರೋಢೀಕರಿಸಿ ಬಳಸಲಾಗುತ್ತಿದೆ ಎಂದು ಅಭಿಪ್ರಾಯ ಪಡಲಾಗಿದೆ. ಕರ್ನಾಟಕದ ಜಲ ವಿದ್ಯುತ್ ಉತ್ಪಾದನೆಯಲ್ಲಿ ಅತಿಯಾದ ಅವಲಂಬನೆ ಉಂಟಾಗಲು ಅಲ್ಲಿ ಬೀಳುತ್ತಿರುವ ಮಳೆಯ ಸ್ಥಿತಿಯು ಮುಖ್ಯ ಕಾರಣವಾಗಿದೆ. ಇದರಿಂದ ರಾಜ್ಯದ ವಿದ್ಯುತ್ ಉತ್ಪಾದನೆಯಲ್ಲಿ ಗಣನೀಯ ರೀತಿಯ ಅಸ್ಥಿರತೆ ಉಂಟಾಗಿದೆ. ಈ ಹಿನ್ನೆಲೆಯಲ್ಲಿ ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರವನ್ನು ಸ್ಥಾಪಿಸುವುದರಿಂದ ರಾಜ್ಯದಲ್ಲಿ ಕೆಲವು ಮಟ್ಟಿಗಾದರೂ ವಿದ್ಯುತ್ ಉತ್ಪಾದನೆಯಲ್ಲಿ ವೈವಿಧ್ಯತೆ ಕಾಣಬಹುದು. ಅದೇ ರೀತಿ ಪರಮಾಣು ವಿದ್ಯುತ್ ಕೇಂದ್ರವನ್ನು ಕೈಗಾ ಎಂಬಲ್ಲಿ ಸ್ಥಾಪಿಸಬೇಕೆಂದು ಉದ್ದೇಶಿಸಿರುವ ರಾಜ್ಯದ ಕನಸು ಪರಿಸರವಾದಿಗಳ ಪ್ರತಿಭಟನೆಯಿಂದಾಗಿ ಕನಸಾಗಿಯೇ ಉಳಿದಿದೆ. ನಮ್ಮ ವಿದ್ಯುತ್ತಿನ ಅವಶ್ಯಕತೆಯು ವಿದ್ಯುತ್ತಿನ ಸ್ಥಾಪಿತ ಸಾಮರ್ಥ್ಯ ಹಾಗೂ ಅದರ ನೀಡಿಕೆಯ ಪ್ರಮಾಣಕ್ಕೂ ಮೀರಿದಂತಿಹುದು. ಕರ್ನಾಟಕ ರಾಜ್ಯದಲ್ಲಿ ವಿದ್ಯುತ್ ಯೋಜನೆಗಳನ್ನು ರಚಿಸುವ ಮತ್ತು ಅವುಗಳನ್ನು ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು 'ಕರ್ನಾಟಕ ವಿದ್ಯುತ್ ನಿಗಮ'ಕ್ಕೆ ವಹಿಸಲಾಗಿದೆ. ರಾಜ್ಯದ ಕೆಲವು ಮುಖ್ಯ ವಿದ್ಯುತ್ ಸ್ಥಾವರಗಳನ್ನು ಅವುಗಳ ಸ್ಥಾಪಿತ ಸಾಮರ್ಥ್ಯದ ಮೇರೆಗೆ ಗುರುತಿಸಿ ಈ ಕೆಳಗೆ ಕೊಡಲಾಗಿದೆ.

**ಜಲ ಹಾಗೂ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳು**

| ಜಲವಿದ್ಯುತ್ ಕೇಂದ್ರಗಳು | ಸ್ಥಾಪಿತ ಸಾಮರ್ಥ್ಯ ಮೆಗಾವಾಟ್‌ಗಳಲ್ಲಿ |
|---|---|
| ಶರಾವತಿ | ೮೯೧ |
| ಕಾಳಿನದಿ | ೮೧೦ |
| ವರಾಹಿ | ೨೩೦ |
| ಜೋಗ್ | ೧೨೦ |
| ಕಾಳಿನದಿ (ಸೂಪ) | ೧೦೦ |
| ಲಿಂಗನಮಕ್ಕಿ | ೫೫ |

| | |
|---|---|
| ಶಿವನಸಮುದ್ರ | ४೨ |
| ಭದ್ರಾ | ३३ |
| ಘಟಪ್ರಭಾ | ३೨ |
| ಮುನಿರಾಬಾದ್ | ೧೮ |
| ಶಿಂಷಾಪುರ | ೧೭ |

**ಶಾಖೋತ್ಪನ್ನ ವಿದ್ಯುತ್ ಕೇಂದ್ರ**

| | |
|---|---|
| ರಾಯಚೂರು | ೬३೦ |
| ಒಟ್ಟು | ೨೯೭೮ |

(ಕೆಲವು ಸಣ್ಣ ವಿದ್ಯುತ್ ಕೇಂದ್ರಗಳನ್ನು ಗಣನೆಗೆ ತೆಗೆದುಕೊಳ್ಳದಿರುವ ಕಾರಣ ಇಲ್ಲಿ ಕೊಟ್ಟಿರುವ ಅಂಕಿ-ಅಂಶಗಳು ಪ್ರಸ್ತುತ ವಿದ್ಯುತ್ ಸಾಮರ್ಥ್ಯತೆಯ ಅಂಕಿ-ಅಂಶಗಳಿಗೆ ಸರಿಸಮನಾಗಿಲ್ಲ.)

ರಾಜ್ಯದ ಆರ್ಥಿಕ ಬೆಳವಣಿಗೆಗೆ ಉಪಯೋಗಿಸಬಹುದಾದಂತಹ ಜಲ ವಿದ್ಯುತ್ ಸಾಮರ್ಥ್ಯತೆ ४३४೭ ಮೆ.ವಾ. ಎಂದು ಅಂದಾಜು ಮಾಡಲಾಗಿತ್ತು. ೧೯೯३ರವರೆಗೆ, ಒಟ್ಟು ಅಂದಾಜು ಮಾಡಿದ ವಿದ್ಯುಚ್ಛಕ್ತಿಯಲ್ಲಿ ೨४೦೮ ಮೆ.ವಾ.ನ್ನು ಅಥವಾ ಶೇ. ೫೫ರಷ್ಟನ್ನು ಮಾತ್ರ ಅಭಿವೃದ್ಧಿ ಪಡಿಸಲಾಯಿತು. ಭಾರತದಲ್ಲಿ ಇಲ್ಲಿಯವರೆಗೆ ಕೇವಲ ಶೇ. ೨४ರಷ್ಟು ಸಾಮರ್ಥ್ಯದ ಜಲ ವಿದ್ಯುತ್ತನ್ನು ಅಭಿವೃದ್ಧಿಪಡಿಸಲಾಗಿದೆ. ಜಲ ವಿದ್ಯುತ್ ಪ್ರಗತಿಯಲ್ಲಿ ನಮ್ಮ ರಾಜ್ಯ ಸಜ್ಜಾಗುತ್ತಿರುವುದು ನಿಜವಾಗಲೂ ಪರಿಣಾಮಕಾರಿಯಾಗಿದೆ.

ಯಾವುದೇ ಒಂದು ವಿದ್ಯುತ್ ಉತ್ಪಾದನಾ ವ್ಯವಸ್ಥೆಯ ಕಾರ್ಯ ಸಮರ್ಥತೆಯ ಸೂಚಿಯನ್ನು 'ಯಂತ್ರ ಸ್ಥಾವರ ಭರಣ ಅಂಶ' (ಪ್ಲ್ಯಾಂಟ್ ಲೋಡ್ ಫ್ಯಾಕ್ಟರ್) ಎಂದು ಕರೆಯಲಾಗಿದೆ. ಯಂತ್ರ ಸ್ಥಾವರ ಭರಣ ಅಂಶ ಎಂದರೆ ವಾಸ್ತವಿಕವಾಗಿ ಉತ್ಪಾದಿಸುವಂತಹ ವಿದ್ಯುತ್ತಿನ ಪ್ರಮಾಣವು ವಿದ್ಯುತ್ ವ್ಯವಸ್ಥೆಯ ಪೂರ್ಣ ಸಾಮರ್ಥ್ಯದಲ್ಲಿ ಕೆಲಸಮಾಡಿ ಗರಿಷ್ಠ ಪ್ರಮಾಣದ ವಿದ್ಯುತ್ತನ್ನು ಉತ್ಪಾದಿಸುವ ಮಟ್ಟದ ಶೇಕಡಾವಾರು ಅಂಶ. ಯಂತ್ರ ಸ್ಥಾವರ ಭರಣ ಅಂಶ ಅನೇಕ ಅಂಶಗಳ ಮೇಲೆ ಅವಲಂಬಿಸಿದೆ. ಅವುಗಳಲ್ಲಿ ಮುಖ್ಯವಾದವು ವ್ಯವಸ್ಥೆಯ ಹೊರಗೆ ಸಂಬಂಧಿಸಿದ ಅಂಶಗಳು ಮತ್ತು ಸಾಕಷ್ಟು ಪ್ರಮಾಣದ ಒಳ್ಳೆಯ ಗುಣಮಟ್ಟದ ಕಲ್ಲಿದ್ದಲು ನೀಡಿಕೆಯ ಮೇಲೆ ಅವಲಂಬಿಸಿದೆ. ನಮ್ಮ ದೇಶದ ಶಾಖೋತ್ಪನ್ನ ಸ್ಥಾವರಕ್ಕೆ ಶೇ. ೫೮ರಷ್ಟು ಯಂತ್ರ ಸ್ಥಾವರ ಭರಣ ಅಂಶ ಇದ್ದರೆ ಸಾಕು ಎಂಬ ಒಂದು ಭಾವನೆ ಇದೆ. ಭಾರತದಲ್ಲಿ ಇದರ ಪ್ರಮಾಣ ಶೇ. ೬೧, ಕರ್ನಾಟಕದಲ್ಲಿ

ಇದು ಶೇ. ೭೭ರಷ್ಟಿದ್ದು ಭಾರತದಲ್ಲಿರುವ ಯಂತ್ರ ಸ್ಥಾವರ ಭರಣ ಅಂಶಕ್ಕಿಂತ ಮೇಲ್ಮಟ್ಟದಲ್ಲಿದೆ.

ಕರ್ನಾಟಕದಲ್ಲಿ ಎಲ್ಲ ಮಾದರಿಯ ರವಾನೆ ಮತ್ತು ಹಂಚಿಕೆಯ ಸಾಲುಗಳ ಉದ್ದಳತೆ ಒಟ್ಟು ೩೭೭ ಸಾವಿರ ಸರ್ಕ್ಯೂಟ್ ಕಿ.ಮೀ. ಎಂದು ತಿಳಿದು ಬಂದಿದೆ. ಅದರಂತೆ ಪ್ರತಿ ಸಾವಿರ ಚದರ ಕಿ.ಮೀ. ವಿಸ್ತೀರ್ಣಕ್ಕೆ ಕರ್ನಾಟಕದಲ್ಲಿ ೧೯೦೯ ಕಿ.ಮೀ. ಉದ್ದಳತೆಯ ಸಾಲುಗಳು ಕಂಡುಬಂದರೆ, ಭಾರತದಲ್ಲಿ ೧೩೪೧ ಕಿ.ಮೀ. ಉದ್ದಳತೆಯ ಸಾಲುಗಳು ಕಂಡುಬರುತ್ತವೆ. ಕರ್ನಾಟಕ ರಾಜ್ಯ ರವಾನೆ ಮತ್ತು ಹಂಚಿಕೆಯ ಸಾಲುಗಳ ಪ್ರಗತಿಯಲ್ಲಿ ತೀವ್ರ ಸ್ವರೂಪದ ಬೆಳವಣಿಗೆಯನ್ನು ಸಾಧಿಸಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

ಅಂತರರಾಷ್ಟ್ರೀಯ ಮಟ್ಟದಲ್ಲಿ ಅವಲೋಕಿಸುವುದಾದರೆ, ರವಾನೆ ಮತ್ತು ಹಂಚಿಕೆಯಲ್ಲಿ ತೊಡಗುವ ವಿದ್ಯುತ್ ನಷ್ಟ ಇತರ ರಾಷ್ಟ್ರಗಳಲ್ಲಿ ಶೇ. ೧೦ರಷ್ಟಾದರೂ ಅದು ಹೆಚ್ಚೇನು ಅಲ್ಲ. ಹಾಗೆಯೇ ಭಾರತದಲ್ಲಿನ ಪರಿಸ್ಥಿತಿಗೆ ರವಾನೆ ಮತ್ತು ಹಂಚಿಕೆಯಲ್ಲಿನ ವಿದ್ಯುತ್ ನಷ್ಟ ಶೇ. ೧೨-೧೫ ಇದ್ದರೂ ಅದು ಹೊರೆಯಾಗಲಾರದು ಎಂದು ಅಭಿಪ್ರಾಯವಿದೆ. ಕರ್ನಾಟಕದಲ್ಲಿನ ರವಾನೆ ಮತ್ತು ಹಂಚಿಕೆಯಲ್ಲಾಗುತ್ತಿರುವ ವಿದ್ಯುತ್ ನಷ್ಟದ ಪ್ರಮಾಣವು ಶೇ. ೧೯ರಷ್ಟಿದ್ದು, ಭಾರತದಲ್ಲಿ ಅದು ಶೇ. ೨೨ರಷ್ಟಿದೆ. ಆದಾಗ್ಯೂ, ಕರ್ನಾಟಕದ ರವಾನೆ ಮತ್ತು ಹಂಚಿಕೆಯಲ್ಲಿನ ನಷ್ಟವು ಭಾರತದಲ್ಲಿನ ನಷ್ಟಕ್ಕಿಂತ ಕಡಿಮೆಯಿದೆ. ಇವನ್ನು ಇತರ ರಾಷ್ಟ್ರಗಳಿಗೆ ಹೋಲಿಸಿದರೆ ಭಾರತ ಹಾಗೂ ಕರ್ನಾಟಕಗಳ ರವಾನೆ ಮತ್ತು ಹಂಚಿಕೆಯ ಮೇಲಿನ ವಿದ್ಯುತ್ ನಷ್ಟ ಎರಡು ಪಟ್ಟು ಮುಂದಿದೆ. ಈ ರೀತಿಯ ಅಧಿಕ ನಷ್ಟಕ್ಕೆ ರಾಷ್ಟ್ರ ಹಾಗೂ ರಾಜ್ಯದಲ್ಲಿ ನಡೆಯುತ್ತಿರುವ ವಿದ್ಯುಚ್ಛಕ್ತಿಯ ಕಳ್ಳತನವೇ ಮುಖ್ಯ ಕಾರಣವಾಗಿದೆ. ಗೃಹಕೃತ್ಯ ಬಳಕೆದಾರರು, ಅಂಗಡಿಗಳ, ತೋಟಗಳ ಮತ್ತು ಕೈಗಾರಿಕಾ ವಲಯಗಳ ಸಾವಿರಾರು ವಿದ್ಯುತ್ ಬಳಕೆದಾರರು ಸಂಬಂಧಪಟ್ಟ ಇಲಾಖೆಯ ಸಿಬ್ಬಂದಿಗಳು ಕಣ್ಣು ತಪ್ಪಿಸಿ ಹಗಲು ಹೊತ್ತಿನಲ್ಲಿಯೇ ಆಗಿಂದಾಗ್ಗೆ ವಿದ್ಯುಚ್ಛಕ್ತಿಯನ್ನು ಕಳವು ಮಾಡುತ್ತಿರುವುದು ಕಂಡುಬಂದಿದೆ.

ತಲಾವಾರು ವಿದ್ಯುತ್ ಬಳಕೆ ಹಾಗೂ ಆರ್ಥಿಕಾಭಿವೃದ್ಧಿ ಇವೆರಡರ ನಡುವೆ ನಿಕಟ ಸಂಬಂಧವಿದೆ ಎಂದು ಬಹಳಷ್ಟು ಜನ ವಿಶ್ಲೇಷಕರು ದೇಶದಾದ್ಯಂತ ಅಭಿಪ್ರಾಯಪಟ್ಟಿದ್ದಾರೆ. ಕರ್ನಾಟಕದ ತಲಾವಾರು ವಿದ್ಯುತ್ ಬಳಕೆ ೨೫೨ ಕಿ.ವಾ. ಗಂಟೆಗಳಾದರೆ ಇದಕ್ಕೆ ಪ್ರತಿಯಾಗಿ ಭಾರತದಲ್ಲಿ ಸರಾಸರಿ ೨೦೭ ಕಿ.ವಾ. ಗಂಟೆಗಳೆಂದು ತಿಳಿದು ಬಂದಿದೆ.

ಭಾರತ ಮತ್ತು ಕರ್ನಾಟಕದಲ್ಲಿ ಕ್ರಮವಾಗಿ ಶೇ. ೧೭ ಮತ್ತು ಶೇ. ೧೫ರಷ್ಟು ವಿದ್ಯುತ್ತನ್ನು ಗೃಹಕೃತ್ಯಕ್ಕಾಗಿ ಬಳಸಲಾಗುತ್ತಿದೆ. ಭಾರತದ ಶೇ. ೮೪ರಷ್ಟು ಗ್ರಾಮೀಣ

ಪ್ರದೇಶಗಳು ವಿದ್ಯುದ್ದೀಕರಣ ಗೊಂಡಿರುವುದಾದರೆ, ಕರ್ನಾಟಕದ ಬಹುತೇಕ ಎಲ್ಲಾ ಗ್ರಾಮೀಣ ಪ್ರದೇಶಗಳು ವಿದ್ಯುದ್ದೀಕರಣ ಗೊಂಡಿರುವುದು ಪ್ರಶಂಸನೀಯವಾಗಿದೆ. ಕಂದಾಯ ನೀಡುವ ಯಾವುದೇ ಗ್ರಾಮವಾಗಲೀ ಅಥವಾ ಅಲ್ಲಿ ಕೇವಲ ಒಂದು ಮನೆಗೆ ವಿದ್ಯುತ್ ಸಂಪರ್ಕ ಒದಗಿಸಿದ್ದರೂ ಸಹ ಆ ಗ್ರಾಮವು ವಿದ್ಯುದ್ದೀಕರಣಗೊಂಡಿದೆ ಎಂದು ಅಧಿಕೃತ ಅಂಕಿ-ಅಂಶಗಳ ಆಧಾರದ ಮೇಲೆ ಸಾರ್ವತ್ರಿಕವಾಗಿ ಘೋಷಿಸಲಾಗುತ್ತದೆ. ಇಲ್ಲಿನ ಗಂಭೀರವಾದ ಸಂಗತಿಯೆಂದರೆ ರಾಜ್ಯದ ಬಹಳಷ್ಟು ಸಣ್ಣ-ಪುಟ್ಟ ಹಳ್ಳಿಗಳಿಗೆ, ಹರಿಜನ ಕೇರಿಗಳಿಗೆ ಮತ್ತು ಗಿರಿಜನ ತಾಂಡಗಳಿಗೆ ವಿದ್ಯುತ್ ಸೌಲಭ್ಯವಿಲ್ಲದಿರುವುದು ಮನಗಾಣಬೇಕಾಗಿದೆ. ಆದರೆ ಅಂಕಿ-ಅಂಶಗಳ ಕ್ರೋಢೀಕರಣ ದೃಷ್ಟಿಯಿಂದ ಕಂದಾಯ ಗ್ರಾಮಗಳ ಜೊತೆ ಸೇರಿಸುವುದರಿಂದ ಇಂತಹ ಪ್ರದೇಶಗಳ ವಿದ್ಯುತ್ ಸ್ಥಿತಿಯನ್ನು ನಿರ್ದಿಷ್ಟವಾಗಿ ಹೇಳಲಾಗದು.

ರಾಜ್ಯದ ಒಟ್ಟು ವಿದ್ಯುಚ್ಛಕ್ತಿ ಬಳಕೆಯಲ್ಲಿನ ಶೇ. ೪೯ರಷ್ಟನ್ನು ಕೈಗಾರಿಕೆಗಳು ಬಳಸುತ್ತಿದ್ದರೆ. ಭಾರತದಲ್ಲಿ ಈ ಪ್ರಮಾಣವು ಶೇ. ೪೬ರಷ್ಟು. ಕರ್ನಾಟಕದ ವಿದ್ಯುಚ್ಛಕ್ತಿ ಮಂಡಳಿಯು ವಿದ್ಯುತ್ ಒದಗಿಸುವ ಜವಾಬ್ದಾರಿಯನ್ನು ಹೊಂದಿದೆಯಾದರೂ ಅತಿಯಾಗಿ ವಿದ್ಯುತ್ ಬಳಸುವ ಕೈಗಾರಿಕಾ ಕೇಂದ್ರಗಳಿಗೆ ವಿದ್ಯುತ್ ಸೌಲಭ್ಯ ಒದಗಿಸುವ ಪರಿಸ್ಥಿತಿಯಲ್ಲಿ ಇಲ್ಲ. ಹೆಚ್ಚಾಗಿ ವಿದ್ಯುತ್ ಬಳಸುವಂತಹ ಕಾರ್ಖಾನೆಗಳನ್ನು ಬೆಂಗಳೂರು ನಗರ ಮತ್ತು ಸುತ್ತ-ಮುತ್ತ ತೆರೆಯುವುದನ್ನು ನಿಷೇಧಿಸಲಾಗಿದೆ. ನಮ್ಮ ರಾಜ್ಯದ ಕೈಗಾರಿಕಾ ರಂಗ ತನ್ನ ಶಕ್ತಿಯ ಅಗತ್ಯತೆಗೆ ಹಿಡಿದಿಟ್ಟ ವಿದ್ಯುಚ್ಛಕ್ತಿ ಸ್ಥಾವರಗಳನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ಈ ಹಿಡಿದಿಟ್ಟ ವಿದ್ಯುಚ್ಛಕ್ತಿ ಸ್ಥಾವರಗಳ ಒಟ್ಟು ಸ್ಥಾಪಿತ ಸಾಮರ್ಥ್ಯತೆ ಕರ್ನಾಟಕದಲ್ಲಿ ಸುಮಾರು ೪೪೭ ಮೆ.ವಾ.ನಷ್ಟಿದೆ ಎಂದು ತಿಳಿಯಲಾಗಿದೆ. ಬೃಹತ್ ಘಟಕಗಳಾದ ಸಿಮೆಂಟ್, ರಾಸಾಯನಿಕ ವಸ್ತುಗಳು, ಪೇಪರ್, ಸಕ್ಕರೆ ಮತ್ತು ಬಟ್ಟೆಗಿರಣಿ ಕೈಗಾರಿಕೆಗಳು ಕರ್ನಾಟಕ ರಾಜ್ಯ ವಿದ್ಯುಚ್ಛಕ್ತಿ ಮಂಡಳಿಯಿಂದ ಖರೀದಿಸಿದ ವಿದ್ಯುಚ್ಛಕ್ತಿಯನ್ನು ತಮ್ಮಲ್ಲಿಯೇ ಹಿಡಿದಿಡುವ ಶಕ್ತಿ ಸ್ಥಾವರಗಳನ್ನು ಹೊಂದಿರುವುದರಿಂದ ವಿದ್ಯುತ್ ಕಡಿತದ ಸಂದರ್ಭದಲ್ಲಿ ತುರ್ತಾಗಿ ಬಳಸಬಹುದಾಗಿದೆ.

ಕೃಷಿ ಕ್ಷೇತ್ರದ ವಿದ್ಯುತ್ ಬಳಕೆಯ ಬಗ್ಗೆ ಹೇಳುವುದಾದರೆ, ರಾಜ್ಯದ ಒಟ್ಟು ವಿದ್ಯುತ್ ಬಳಕೆಯಲ್ಲಿ ಶೇ. ೩೨ರಷ್ಟು ವಿದ್ಯುಚ್ಛಕ್ತಿಯನ್ನು ಕೃಷಿಗೆ ಬಳಸಲಾಗುತ್ತದೆ. ಅದೇ ರೀತಿ ಭಾರತದ ಒಟ್ಟು ವಿದ್ಯುತ್ ಬಳಕೆಯಲ್ಲಿ ಶೇ. ೨೫ರಷ್ಟು ಮಾತ್ರ ಕೃಷಿಗೆ ಉಪಯೋಗವಾಗುತ್ತಿದೆ. ಕರ್ನಾಟಕದಲ್ಲಿ ಕೃಷಿ ಕ್ಷೇತ್ರಕ್ಕೆ ಗರಿಷ್ಟ ಪ್ರಮಾಣದ ವಿದ್ಯುತ್ ಬಳಕೆಯಾಗಲು ರಾಜ್ಯದಲ್ಲಿ ಕೃಷಿಗೆ ನೀಡುತ್ತಿರುವ ವಿಪರೀತ ರಿಯಾಯಿತಿಯೇ ಬಹುಮಟ್ಟಿಗೆ ಕಾರಣವೆನ್ನಬಹುದು. ರಾಜ್ಯದಲ್ಲಿ ಸುಮಾರು ೮.೮೦ ಲಕ್ಷ ಕೃಷಿ ಪಂಪುಸೆಟ್ಟುಗಳಿಗೆ ವಿದ್ಯುತ್ ಒದಗಿಸಲಾಗಿದೆ. ಆ ಪ್ರಕಾರ ಒಟ್ಟು

ಫಸಲು ಭೂಮಿಯ ಪ್ರತಿ ಸಾವಿರ ಹೆಕ್ಟೇರ್ ವಿಸ್ತೀರ್ಣಕ್ಕೆ ಕರ್ನಾಟಕದಲ್ಲಿ ೬೫ ಪಂಪುಸೆಟ್ಟುಗಳಿಗೆ ವಿದ್ಯುತ್ ಸರಬರಾಜು ನೀಡಿರುವುದಾದರೆ, ಇಡೀ ಭಾರತದಲ್ಲಿ ಕೇವಲ ೫೬ ಪಂಪುಸೆಟ್ಟುಗಳು ಮಾತ್ರ ವಿದ್ಯುತ್ ಸೌಲಭ್ಯವನ್ನು ಪಡೆದಿವೆ. ನೀರಾವರಿ ಪಂಪುಸೆಟ್ಟುಗಳಿಗೆ ರಾಜ್ಯದಲ್ಲಿ ತೀರ ರಿಯಾಯಿತಿ ದರಗಳಲ್ಲಿ ಅಂದರೆ ೧ ಯೂನಿಟ್ಟಿಗೆ ೪ ಪೈಸೆಗಳಂತೆ ವಿದ್ಯುತ್ ಒದಗಿಸಲಾಗುತ್ತಿದೆ. ದೇಶದಲ್ಲಿ ಕೃಷಿಗೆ ಅತ್ಯಂತ ಕಡಿಮೆ ರಿಯಾಯಿತಿ ದರದಲ್ಲಿ ವಿದ್ಯುತ್ ಒದಗಿಸುವ ರಾಜ್ಯವೆಂದರೆ ತಮಿಳುನಾಡು. ಇಲ್ಲಿ ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದು, ಬಹುಮಟ್ಟಿಗೆ ಪುಕ್ಕಟೆಯಾಗಿಯೇ ವಿದ್ಯುತ್ ಸರಬರಾಜು ಮಾಡುತ್ತಿದೆ.

ಮತ್ತೊಂದು ವಿಪರ್ಯಾಸವೆಂದರೆ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯು ತನ್ನ ನೌಕರರಿಗೆ ಪುಕ್ಕಟೆಯಾಗಿ ವಿದ್ಯುತ್ ಸೌಲಭ್ಯ ಒದಗಿಸಿರುವುದು. ಅಂತೆಯೇ ರೈತರಿಗೆ ಬಹುಮಟ್ಟಿಗೆ ಪುಕ್ಕಟೆಯಾಗಿ ನೀಡುವ ವಿದ್ಯುತ್ ಪ್ರಮಾಣ ಶೇ. ೩೨ರಷ್ಟಾದರೆ, ರವಾನೆ ಮತ್ತು ಹಂಚಿಕೆ ಸಮಯದಲ್ಲಿ ಶೇ. ೧೯ರಷ್ಟು ವಿದ್ಯುಚ್ಛಕ್ತಿ ಪೋಲಾಗುತ್ತಿದೆ ಎಂದು ತಿಳಿದುಬಂದಿದೆ. ಇನ್ನುಳಿದ ವಿದ್ಯುಚ್ಛಕ್ತಿಯಲ್ಲಿ ಶೇ. ೨೦ರಿಂದ ೨೫ರಷ್ಟನ್ನು ವಿದ್ಯುಚ್ಛಕ್ತಿ ಮಂಡಳಿಯ ಒಟ್ಟು ಆದಾಯದ ಶೇ. ೬೫ರಷ್ಟು ಆದಾಯವನ್ನು ಒದಗಿಸುತ್ತಿರುವ ಹೆಚ್.ಟಿ. ಬಳಕೆದಾರರಿಗೆ ಕೊಡಲಾಗುತ್ತಿದೆ. ಈಗ ಜಾಲ್ತಿಯಲ್ಲಿರುವ ಸುಂಕದ ದರವು ಉತ್ಪಾದನಾ ವೆಚ್ಚವನ್ನು ಸಹ ತುಂಬುವುದಿಲ್ಲ.

ರಾಜ್ಯ ವಿದ್ಯುತ್ ಸರಬರಾಜು ವ್ಯವಸ್ಥೆಯ ಮುಖ್ಯ ಅಂಶಗಳು:

೧. ವಿದ್ಯುತ್ ಬೇಡಿಕೆ ನೀಡಿಕೆಗಿಂತ ಮೀರಿ ವಿದ್ಯುತ್ ಕಡಿತ ಉಂಟಾಗಿರುವುದು.

೨. ಜಲ ವಿದ್ಯುತ್ ಮೇಲಿನ ಅತಿಯಾದ ನಂಬಿಕೆ.

೩. ಶಾಖೋತ್ಪನ್ನ ಸ್ಥಾವರದ ಕೆಳ ಯಂತ್ರ ಸ್ಥಾವರ ಭರಣ ಅಂಶ.

೪. ಬಹುಮಟ್ಟದ ರವಾನೆ ಮತ್ತು ಹಂಚಿಕೆಯಲ್ಲಿನ ನಷ್ಟಗಳು ಮತ್ತು

೫. ಆರ್ಥಿಕವಲ್ಲದ ಸುಂಕದ ದರಗಳು.

ವಿದ್ಯುತ್ ಉತ್ಪಾದನೆಯನ್ನು ವಿಸ್ತರಿಸಲು ಮತ್ತು ಅದರ ವೈವಿಧ್ಯತೆ ಕಾಣಲು ಬೇಕಾದಂತಹ ಪ್ರಯತ್ನಗಳಿಂದ ಯಂತ್ರ ಸ್ಥಾವರ ಭರಣ ಅಂಶವನ್ನು ಉತ್ತಮಗೊಳಿಸುವುದು ಮತ್ತು ರವಾನೆ ಹಾಗೂ ಹಂಚಿಕೆಯಲ್ಲಿನ ಖರ್ಚುಗಳನ್ನು ಕಡಿಮೆಗೊಳಿಸುವುದು. ಜೊತೆಗೆ ರಾಜ್ಯದಲ್ಲಿ ವಿದ್ಯುತ್ ನೀಡಿಕೆ ದರಗಳ ಏರಿಕೆಯ ಬಗ್ಗೆ ಯೋಚಿಸುವುದು.

ಭಾರತದ ಅರ್ಥವ್ಯವಸ್ಥೆಯ ಮುನ್ನೆಚ್ಚರಿಕಾ ಕೇಂದ್ರ ಕೈಗೊಂಡ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯವು ಸುಮಾರು ೧೫,೧೧೪ ಕೋಟಿ ರೂಪಾಯಿಗಳ

ಭಾರಿ ಪ್ರಮಾಣದ ಬಂಡವಾಳವನ್ನು ವಿದ್ಯುತ್ ಉತ್ಪಾದನಾ ಯೋಜನೆಗಳಿಗೆ ತೊಡಗಿಸಲಾಗಿದೆ. ಅದರಲ್ಲಿ ಸುಮಾರು ೩೭೨೦ ಕೋಟಿ ರೂಪಾಯಿಗಳನ್ನು ಜಲ ವಿದ್ಯುತ್ ಉದ್ದಿಮೆಗೆ ತೊಡಗಿಸಿ, ೧೮ ಯೋಜನೆಗಳ ಮೂಲಕ ಒಟ್ಟು ಸುಮಾರು ೨೧೮೩ ಮೆಗಾವ್ಯಾಟ್‌ಗಳ ಸ್ಥಾಪಿತ ಸಾಮರ್ಥ್ಯತೆಯನ್ನು ಹೊಂದಿದೆ. ಅದೇ ರೀತಿ ಇನ್ನುಳಿದ ಸುಮಾರು ೧೧,೪೯೪ ಕೋಟಿ ರೂಪಾಯಿಗಳನ್ನು ಶಾಖೋತ್ಪನ್ನ ವಿದ್ಯುತ್ ಉದ್ದಿಮೆಗೆ ತೊಡಗಿಸಿ, ೧೩ ಯೋಜನೆಗಳಲ್ಲಿ ಒಟ್ಟು ಸುಮಾರು ೩೫೭೩ ಮೆ.ವಾ.ಗಳ ಸ್ಥಾಪಿತ ಸಾಮರ್ಥ್ಯತೆಯನ್ನು ರಾಜ್ಯ ಹೊಂದುವಂತಾಗಿದೆ. ಈ ಯೋಜನೆಗಳು ವಿವಿಧ ಹಂತಗಳಲ್ಲಿವೆ. ರಾಜ್ಯದ ಜಲ ವಿದ್ಯುತ್ ಉದ್ದಿಮೆ ಅಭಿವೃದ್ಧಿಯತ್ತ ಸಾಗುತ್ತಿದ್ದರೂ ಪದೇ ಪದೇ ಅಂತರ ರಾಜ್ಯಗಳ ನದಿ ನೀರು ಹಂಚಿಕೊಳ್ಳುವ ವಿಷಯದಲ್ಲಿ ಉಂಟಾಗುತ್ತಿರುವ ಕಲಹದಿಂದ ಸಮರ್ಪಕ ರೀತಿಯಲ್ಲಿ ಕಾರ್ಯನಿರ್ವಹಿಸದೆ ಕುಂಠಿತಗೊಳ್ಳುತ್ತಿದೆ. ಇದಲ್ಲದೆ, ಈ ಯೋಜನೆಯ ಅಡಿಯಲ್ಲಿ ಸಿಲುಕಿದವರಿಗೆ ಪುನರ್ವಸತಿಗಾಗಿ ಮತ್ತು ಜಲಾಶಯದ ನಿರ್ಮಾಣದಲ್ಲಿ ನಾಶವಾದ ಕಾಡನ್ನು ಪುನಃ ಬೆಳಸುವುದಕ್ಕಾಗಿ ಹೆಚ್ಚಿನ ವೆಚ್ಚವನ್ನು ಮಾಡಬೇಕಾಗುತ್ತದೆ. ಅದೇ ರೀತಿ ಶಾಖೋತ್ಪನ್ನ ಸ್ಥಾವರಗಳ ಬಗ್ಗೆ ಹೇಳುವುದಾದರೆ, ಶಾಖೋತ್ಪನ್ನ ಸ್ಥಾವರಗಳನ್ನು ಸ್ಥಾಪಿಸುವುದರಿಂದ ವಿದ್ಯುತ್ ಉತ್ಪಾದನಾ ವೆಚ್ಚವು ಹೆಚ್ಚಾಗುತ್ತದೆ.

ಪ್ರಸ್ತುತದಲ್ಲಿರುವ ವಿಪರೀತ ಉತ್ಪಾದನಾ ವೆಚ್ಚ ಮತ್ತು ಆರ್ಥಿಕ ಮುಗ್ಗಟ್ಟನ್ನು ಗಮನಿಸಿ ನಮ್ಮ ಸರ್ಕಾರವು ವಿದ್ಯುತ್ ಉದ್ದಿಮೆಯನ್ನು ವಿದೇಶಿ ಬಂಡವಾಳಗಾರರು ಮತ್ತು ವಿದೇಶಿ ಕಂಪನಿಗಳನ್ನೊಳಗೊಂಡ ಖಾಸಗೀ ಕ್ಷೇತ್ರದ ವಶಕ್ಕೆ ಒಪ್ಪಿಸಲು ತಯಾರಿದೆ. ಈ ದಿಕ್ಕಿನಲ್ಲಿ ಖಾಸಗಿ ವಲಯದ ಭಾಗವಹಿಸುವಿಕೆಯನ್ನು ಮತ್ತು ಹೊರ ರಾಷ್ಟ್ರದ ಬಂಡವಾಳದಾರರನ್ನು ಆಕರ್ಷಿಸಲು ಹಲವಾರು ರಿಯಾಯಿತಿಗಳನ್ನು ನೀಡಲಾಗಿದೆ.

೧. ೫ರಿಂದ ೮ ವರ್ಷಗಳ ತೆರಿಗೆ ರಜೆ (Tax holiday)

೨. ಹೊರದೇಶದ ಬಂಡವಾಳದ ಸಂಪೂರ್ಣ ಪಾಲುಗೊಳ್ಳುವಿಕೆ.

೩. ಹೂಡಿದ ಬಂಡವಾಳದ ಮೇಲೆ ೧೬ರಷ್ಟು ಲಾಭಗಳಿಕೆಯ ಭರವಸೆ.

೪. ವಿದೇಶಿ ವಿನಿಮಯ ದರದ ಏರಿಳಿತವಿದ್ದಾಗ್ಯೂ ಹೂಡಿದ ಬಂಡವಾಳ ಮತ್ತು ಲಾಭದ ಹಣವನ್ನು ಪುನಃ ಸ್ವದೇಶಕ್ಕೆ ಮರಳಿಸುವ ಭರವಸೆ.

ಹೊಸ ಆರ್ಥಿಕ ನೀತಿಯನ್ನು ೧೯೯೧ರಲ್ಲಿ ಆರಂಭಿಸಿದ ಪರಿಣಾಮವಾಗಿ ಖಾಸಗಿ ವ್ಯವಹಾರ ಸಂಸ್ಥೆಗಳು ಕರ್ನಾಟಕದಲ್ಲಿ ವಿದ್ಯುತ್ ಉದ್ದಿಮೆಗಳನ್ನು ತೆರೆಯಲು ಆಸಕ್ತಿ ತೋರುತ್ತಿವೆ.

ಕರ್ನಾಟಕ ಸರ್ಕಾರ ಸುಮಾರು ೫೦೦ ಮೆ.ವಾ. ಸ್ಥಾಪಿತ ಸಾಮರ್ಥ್ಯತೆಯ ಶಾಖೋತ್ಪನ್ನ ವಿದ್ಯುತ್ ಠಾಣೆಯನ್ನು ಹೊಸಪೇಟೆಯಲ್ಲಿ ತೆರೆಯಲು ಹೆಚ್.ಓ.ಕೆ.

ಅಂತರರಾಷ್ಟ್ರೀಯ ಕಂಪನಿ (H.O.K. International Company)ಯ ಜೊತೆ ಒಂದು ಒಪ್ಪಂದ ಮಾಡಿಕೊಂಡು ಜ್ಞಾಪಕ ಪತ್ರಕ್ಕೆ ಸಹಿ ಹಾಕಿದೆ.

ಸರ್ಕಾರ ಕೊಜೆಂಟ್ರಿಕ್ಸ್ ಅಂತರರಾಷ್ಟ್ರೀಯ ಕಂಪನಿ (Cogentrix International Company) ಸಹಯೋಗದಿಂದ ಮಂಗಳೂರಿನಲ್ಲಿ ೧೦೦೦ ಮೆ.ವಾ. ಶಾಖೋತ್ಪನ್ನ ವಿದ್ಯುತ್ ಯೋಜನೆಯನ್ನು ಪೂರ್ಣಗೊಳಿಸಲು ಒಪ್ಪಿಗೆ ನೀಡಿದೆ. ಇದಕ್ಕೆ ತಗಲುವ ವೆಚ್ಚ ಪ್ರತಿ ಮೆಗಾವಾಟ್‌ಗೆ ಸುಮಾರು ೫೦೮೮ ಕೋಟಿ ರೂಪಾಯಿಗಳ ಬೃಹತ್ ಯೋಜನೆಯಾಗಿದೆ. ಲೆಕ್ಕಾಚಾರ ಮಾಡಿದರೆ ಪ್ರತಿ ಮೆ.ವಾ.ಗೆ ಐದು ಕೋಟಿ ರೂಪಾಯಿಗಳಿಗೂ ಮೇಲಾಗಿದ್ದು, ಸದ್ಯದಲ್ಲಿ ಪ್ರಸ್ತಾಪಗೊಂಡ ಯಾವುದೇ ಖಾಸಗಿ ವಲಯದ ಯೋಜನೆಗಿಂತಲೂ ಅಧಿಕವಾಗಿದೆ. ಈ ಯೋಜನೆಯು ದೇಶದ ಒಳಗಡೆಯೇ ಯಥೇಚ್ಛವಾಗಿ ದೊರೆಯುವ ಜಲ ಹಾಗೂ ಶಾಖೋತ್ಪನ್ನ ಸಾಮರ್ಥ್ಯತೆಗಳನ್ನು ಉಪಯೋಗಿಸದೇ ಹೊರಗಿನಿಂದ ಆಮದು ಮಾಡಿಕೊಂಡ ಅನಿಲವನ್ನು ಕಚ್ಚಾ ವಸ್ತುವಾಗಿ ಉಪಯೋಗಿಸಿಕೊಂಡಿರುವುದು ವಿಮರ್ಶೆಗೆ ಒಳಗಾಗಿದೆ. ಅಲ್ಲದೆ ಮಂಗಳೂರು ಕರಾವಳಿಯ ಸುತ್ತ-ಮುತ್ತಲಿನ ಪರಿಸರಕ್ಕೆ ಸಂಬಂಧಿಸಿದಂತೆ (Eco System) ಆಗಬಹುದಾದ ಅಪಾಯವು ಕಳವಳಕ್ಕೆ ಕಾರಣವಾಗಿದೆ.

ಪ್ರಪಂಚದಾದ್ಯಂತ ವಿದ್ಯುಚ್ಛಕ್ತಿ ಸಲಕರಣೆಗಳ ಕಾರ್ಖಾನೆಗೆ ವಿರೋಧವಿದ್ದರೂ ಮತ್ತು ಭಾರತದಲ್ಲಿ ಆಮದು-ರಫ್ತುಗಳಿಗೆ ವಿಧಿಸುವ ಸುಂಕವನ್ನು ಕಡಿಮೆ ಮಾಡಿದ್ದರೂ ಸಹ ವಿದೇಶಿ ಕಂಪನಿಗಳು ಯೋಜನಾ ವೆಚ್ಚವನ್ನು ಮಿತಿಮೀರಿ ಹೆಚ್ಚು ಮಾಡಬಹುದೆಂದು ಶಂಕಿಸಲಾಗಿದೆ. ಕಡೆ ಪಕ್ಷ ಶೇ. ೧೬ರಷ್ಟು ತೆರಿಗೆಯ ನಂತರದ ವಾರ್ಷಿಕ ಆದಾಯ ಬರುವಂತೆ ಮಾಡುವೆವು ಎಂಬ ಸರ್ಕಾರದ ಭರವಸೆಯನ್ನು ಆಧಾರವಾಗಿಟ್ಟುಕೊಂಡು ವಿದೇಶಿ ಕಂಪನಿಗಳು ವಿದ್ಯುಚ್ಛಕ್ತಿ ಬೆಲೆಯನ್ನು ಹೆಚ್ಚಿಸಿ ಅದರಿಂದ ಅತಿಯಾದ ಲಾಭವನ್ನು ಪಡೆಯಬಹುದೆಂದು ವಿಮರ್ಶಕರು ಟೀಕಿಸುತ್ತಿದ್ದಾರೆ. ಸದ್ಯದಲ್ಲಿ ಕೊಜೆಂಟ್ರಿಕ್ಸ್ (Cogentrix) ಕಂಪನಿಯು ವಿದ್ಯುಚ್ಛಕ್ತಿಯನ್ನು ಖರೀದಿಸುವ ಒಂದು ಒಪ್ಪಂದದ ಬಗ್ಗೆ ಕರ್ನಾಟಕ ರಾಜ್ಯ ವಿದ್ಯುಚ್ಛಕ್ತಿ ಮಂಡಳಿಯ ಜೊತೆಗೆ ಸಂಧಾನ ನಡೆಸುತ್ತಿದೆ. ಮುಂದಿನ ಯೋಜನಾಭಿವೃದ್ಧಿಯನ್ನು ಕಾದುನೋಡಬೇಕಾಗಿದೆ.

## ೪. ಉಪ-ಸಂಹಾರ

ಕರ್ನಾಟಕ ರಾಜ್ಯ ರೈಲು ಅಭಿವೃದ್ಧಿಯಲ್ಲಿ ಬಹಳಷ್ಟು ಹಿಂದೆಬಿದ್ದಿದ್ದು, ಈಗ ಕಾರ್ಯವ್ಯಾಪ್ತಿಯಲ್ಲಿರುವ ಯೋಜನೆಗಳು ಉದ್ದೇಶಿತ ಕಾಲಾವಧಿಯೊಳಗೆ ಪೂರ್ಣಗೊಂಡರೆ ಇನ್ನು ಕೇವಲ ನಾಲ್ಕೈದು ವರ್ಷಗಳಲ್ಲಿ ದೇಶದ ಇತರ ರಾಜ್ಯಗಳಂತೆಯೇ ಮುಂದೆ ಬರುವುದರಲ್ಲಿ ಸಂಶಯವಿಲ್ಲ. ರಸ್ತೆ ಮಾರ್ಗಗಳ ಜಾಲ

ಮತ್ತು ಸಂಪರ್ಕ ಮಾಧ್ಯಮದ ಪ್ರಗತಿಯಲ್ಲೂ ಕರ್ನಾಟಕ ಮುಂದೆ ಸಾಗಿದ್ದು ದೇಶದ ಇತರ ರಾಜ್ಯಗಳನ್ನು ಮೀರಿಸುವ ಮಟ್ಟವಲ್ಲಿದೆ. ದೇಶದ ಇತರ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕ ರಾಜ್ಯ ತೀವ್ರ ಸ್ವರೂಪದ ವಿದ್ಯುಚ್ಛಕ್ತಿಯ ಕೊರತೆಯಿಂದ ನರಳುವುದನ್ನು ಗಮನಿಸಬಹುದು. ದೊಡ್ಡ ಪ್ರಯತ್ನದ ಮೂಲಕ ವಿದ್ಯುತ್ ಕಾರ್ಯ ಯೋಜನೆಗಳನ್ನು ಕೈಗೆತ್ತಿಕೊಂಡು ಯುದ್ಧೋಪಾದಿಯಲ್ಲಿ ಪೂರ್ಣಗೊಳಿಸದ ಹೊರತು ರಾಜ್ಯದ ಮುಂದಿನ ಕೈಗಾರೀಕರಣ ಮತ್ತು ಕೃಷಿ ಅಭಿವೃದ್ಧಿ ಕುಂಠಿತಗೊಳ್ಳುವುದರಲ್ಲಿ ಸಂದೇಹವಿಲ್ಲ.

ರಾಜ್ಯದ ಸಾಧನ-ಸಂಪತ್ತುಗಳನ್ನು ಸವಿಸ್ತಾರವಾಗಿ ಪ್ರಗತಿಯ ಹಾದಿಯತ್ತ ಕೊಂಡೊಯ್ಯಲು ಖಾಸಗಿವಲಯ ಹಾಗೂ ಬಹುರಾಷ್ಟ್ರೀಯನ್ನರು ಮುಂದೆ ಬಂದಿದ್ದಾರೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಂದ ರಾಜ್ಯಕ್ಕೆ ಬೇಕಾದ ಅಧಿಕ ಬಂಡವಾಳ ಹಾಗೂ ಆಧುನಿಕ ತಾಂತ್ರಿಕತೆಗಳನ್ನು ತರುವುದರಲ್ಲಿದ್ದಾರೆ. ಜಾಗತೀಕರಣ ಹಾಗೂ ಖಾಸಗೀಕರಣದ ಕಾರ್ಯಗತಿ ನಿಧಾನವಾಗಿಯೂ ಹಾಗೂ ನಿಶ್ಚಿತವಾಗಿಯೂ ರಾಜ್ಯದಲ್ಲಿ ಕಾಲಿಡುತ್ತಿದೆ. ಬಹುಶಃ ಖಾಸಗಿ ಕ್ಷೇತ್ರದ ಬೆಲೆ ನೀತಿ ಅಥವಾ ಕಾರ್ಮಿಕ ಮತ್ತು ವೇತನ ದರದ ನೀತಿಗಳು ಯಾವ ರೀತಿಯಲ್ಲಿ ರೂಪಗೊಳ್ಳುತ್ತವೆ ಎನ್ನುವುದನ್ನು ಈಗಲೇ ಹೇಳುವುದು ಕಷ್ಟಸಾಧ್ಯ. ಖಾಸಗಿ ವಲಯದ ಪಾಲುಗೊಳ್ಳುವಿಕೆಯಿಂದ ಸಾಧನ ಸಂಪತ್ತುಗಳ ವ್ಯವಸ್ಥೆಯನ್ನು ಸ್ವಲ್ಪಮಟ್ಟಿಗೆ ಉತ್ತಮಗೊಳಿಸಬಹುದು. ಆದರೆ ಇದು ನಮ್ಮ ಜನತೆಯ ಶ್ರೇಯೋಭಿವೃದ್ಧಿಯನ್ನು ಉತ್ತಮಗೊಳಿಸುತ್ತದೆಯೇ? ಎಂಬುದನ್ನು ಕಾದು ನೋಡಬೇಕಾಗುತ್ತದೆ.

**ಆಧಾರ ಗ್ರಂಥಗಳು**

೧. ಕರ್ನಾಟಕ ಸರ್ಕಾರ, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ - (೧೯೭೪), 'ಕರ್ನಾಟಕ ಪ್ರಗತಿ ಪಥ' ಬೆಂಗಳೂರು.

೨. ಸೆಂಟರ್ ಫಾರ್ ಮಾನಿಟೋರಿಂಗ್ ಇಂಡಿಯನ್ ಎಕಾನಮಿ (೧೯೯೪), 'ಕರೆಂಟ್ ಎನರ್ಜಿ ಇನ್ ಇಂಡಿಯಾ', ಜೂನ್, ಬೊಂಬಾಯಿ.

೩. ಗೌರ್ನಮೆಂಟ್ ಆಫ್ ಕರ್ನಾಟಕ ಪ್ಲಾನಿಂಗ್ ಡಿಪಾರ್ಟಮೆಂಟ್ (೧೯೯೪), 'ಎಕನಾಮಿಕ್ ಸರ್ವೆ ೧೯೯೩-೯೪', ಗೌರ್ನಮೆಂಟ್ ಪ್ರೆಸ್, ಮೈಸೂರು.

೪. ಇನ್‌ಸ್ಟಿಟ್ಯೂಟ್ ಫಾರ್ ಸೋಸಿಯಲ್ ಅಂಡ್ ಎಕನಾಮಿಕ್ ಚೇಂಜ್ (೧೯೮೯), ಪೇಪರ್ಸ್ ಪ್ರೆಸೆಂಟೆಡ್ ಇನ್ ಎ ಸೆಮಿನಾರ್ ಆನ್ 'ಕರ್ನಾಟಕಾಸ್ ಯಯ್ಥ್ ಫೈವ್ ಇಯರ್ ಪ್ಲಾನ್ ಪರ್‌ಸ್ಪೆಕ್ಟಿವ್' ೧೬-೧೭ ನವೆಂಬರ್ (ಮಿಮಿಯೋಗ್ರಾಫಡ್).

೫. ವರ್ಲ್ಡ್ ಬ್ಯಾಂಕ್ (೧೯೯೪), 'ವರ್ಲ್ಡ್ ಡೆವೆಲಪ್‌ಮೆಂಟ್ ರಿಪೋರ್ಟ್'

- ೧೯೯೪ 'ಇನ್‌ಫ್ರಾಸ್ಟ್ರಕ್ಚರ್ ಫಾರ್ ಡೆವೆಲಪ್‌ಮೆಂಟ್', ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ.

೬. 'ಪ್ರಜಾವಾಣಿ', ದಿನಪತ್ರಿಕೆ, ನವೆಂಬರ್ ೯, ೧೯೯೫, ಮಹಾತ್ಮಗಾಂಧಿ ರಸ್ತೆ, ಬೆಂಗಳೂರು.

**ಕೋಷ್ಟಕ - ೧**

ಕರ್ನಾಟಕ ಮತ್ತು ಭಾರತದಲ್ಲಿನ ಸಾರಿಗೆ ಮತ್ತು ಸಂಪರ್ಕ ಮಾಧ್ಯಮಗಳ ಬೆಳವಣಿಗೆಯ ಮಟ್ಟಗಳು

| ಕ್ರ.ಸಂ. | ವಿವರಗಳು | ಕರ್ನಾಟಕ | ಭಾರತ |
|---|---|---|---|
| ೧. | ಎಲ್ಲಾ ಗೇಜುಗಳನ್ನೊಳಗೊಂಡ ಒಟ್ಟು ರೈಲು ಮಾರ್ಗಗಳು ಪ್ರತಿ ೧೦೦೦ ಚ.ಕಿ.ಮೀ.ಗಳಂತೆ (ಉದ್ದಳತೆ-ಕಿ.ಮಿ.ಗಳಲ್ಲಿ) - (೧೯೯೧-೯೨) | ೧೬ | ೧೯ |
| ೨. | ಒಟ್ಟು ರೈಲು ಮಾರ್ಗಗಳಲ್ಲಿ ಬ್ರಾಡ್ ಗೇಜ್ ಮಾರ್ಗದ ಶೇಕಡಾವಾರು ಪಾಲುದಾರಿಕೆ - (೧೯೯೧-೯೨) | ೨೭ | ೫೬ |
| ೩. | ಎಲ್ಲಾ ರಸ್ತೆ ಮಾರ್ಗಗಳು ಪ್ರತಿ ೧೦೦೦ ಚ.ಕಿ.ಮೀ. ಗಳಂತೆ (ಉದ್ದಳತೆ-ಕಿ.ಮೀ.ಗಳಲ್ಲಿ) - (೧೯೮೯) | ೭೯೮ | ೬೦೮ |
| ೪. | ಎಲ್ಲಾ ರಸ್ತೆ ಮಾರ್ಗಗಳಲ್ಲಿ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿ ಮಾರ್ಗಗಳ ಶೇಕಡಾವಾರು ಪಾಲುದಾರಿಕೆ - (೧೯೮೯) | ೯ | ೮ |
| ೫. | ಬಸ್ಸುಗಳ ಸಂಖ್ಯೆ ಪ್ರತಿ ಲಕ್ಷ ಜನಸಂಖ್ಯೆಗೆ ಅನುಗುಣವಾಗಿ - (೧೯೮೯) | ೪೫ | ೩೫ |
| ೬. | ಸರಕು-ಸಾಮಗ್ರಿಗಳನ್ನು ಸಾಗಿಸುವ ವಾಹನಗಳ ಪ್ರಮಾಣ ಪ್ರತಿ ಲಕ್ಷ ಜನಸಂಖ್ಯೆಗೆ ಅನುಗುಣವಾಗಿ - (೧೯೮೯) | ೧೨೯ | ೧೫೪ |
| ೭. | ನೋಂದಾಯಿಸಲ್ಪಟ್ಟ ಒಟ್ಟು ಮೋಟಾರು ವಾಹನಗಳ ಪ್ರಮಾಣ (ದ್ವಿಚಕ್ರವಾಹನಗಳು, ಟ್ರಾಕ್ಟರುಗಳು ಇತ್ಯಾದಿ ಸೇರಿದಂತೆ) ಪ್ರತಿ ಲಕ್ಷ ಜನಸಂಖ್ಯೆಗೆ ಅನುಗುಣವಾಗಿ - (೧೯೮೯) | ೨೫೫೦ | ೧೯೭೨ |
| ೮. | ಅಂಚೆ ಕಛೇರಿಗಳು ಪ್ರತಿ ಲಕ್ಷ ಜನಸಂಖ್ಯೆಗೆ ಅನುಗುಣವಾಗಿ - (೧೯೯೨-೯೩) | ೨೨ | ೧೮ |
| ೯. | ತಂತಿ (ಟೆಲಿಗ್ರಾಫ್) ಕಛೇರಿಗಳು ಪ್ರತಿ ಲಕ್ಷ ಜನಸಂಖ್ಯೆಗೆ ಅನುಗುಣವಾಗಿ - (೧೯೯೨-೯೩) | ೯ | ೫ |
| ೧೦. | ದೂರವಾಣಿಗಳು ಪ್ರತಿ ಲಕ್ಷ ಜನಸಂಖ್ಯೆಗೆ ಅನುಗುಣವಾಗಿ - (೧೯೯೨-೯೩) | ೯೫೦ | ೮೦೦ |

**ಆಧಾರ:**

೧. ಸೆನ್ಸಸ್ ಆಫ್ ಇಂಡಿಯಾ ೧೯೯೧,'ಫೈನಲ್ ಪಾಪ್ಯುಲೇಷನ್ ಟೋಟಲ್ಸ್' ನ್ಯೂಡೆಲ್ಲಿ.

೨. ಸೆಂಟರ್ ಫಾರ್ ಮಾನಿಟೋರಿಂಗ್ ಇಂಡಿಯನ್ ಎಕನಾಮಿ, ನವೆಂಬರ್ ೧೯೯೩, 'ಪ್ರೊಫೈಲ್ಸ್ ಆಫ್ ಡಿಸ್ಟ್ರಿಕ್ಟ್ಸ್', ಬಾಂಬೆ.

೩. ಕನ್ಫೆಡೆರೇಷನ್ ಆಫ್ ಇಂಡಿಯನ್ ಇಂಡಸ್ಟ್ರಿ ೧೯೯೪, 'ಹ್ಯಾಂಡ್ ಬುಕ್ ಆಫ್ ಸ್ಟ್ಯಾಟಿಸ್ಟಿಕ್ಸ್', ನ್ಯೂಡೆಲ್ಲಿ.

೪. ಗೌರ್ನಮೆಂಟ್ ಆಫ್ ಇಂಡಿಯಾ, ಸೆಂಟ್ರಲ್ ಸ್ಟ್ಯಾಟಿಸ್ಟಿಕಲ್ ಆರ್ಗನೈಸೇಷನ್, 'ಸ್ಟ್ಯಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ೧೯೯೦, ಇಂಡಿಯಾ, ನ್ಯೂಡೆಲ್ಲಿ.

೫. ಗೌರ್ನಮೆಂಟ್ ಆಫ್ ಇಂಡಿಯಾ, ಸೆಂಟ್ರಲ್ ಸ್ಟ್ಯಾಟಿಸ್ಟಿಕಲ್ ಆರ್ಗನೈಸೇಷನ್, 'ಸ್ಟ್ಯಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ದಿ ಇಂಡಿಯನ್ ಯೂನಿಯನ್-೧೯೬೫', ನ್ಯೂಡೆಲ್ಲಿ.

೬. ಗೌರ್ನಮೆಂಟ್ ಆಫ್ ಕರ್ನಾಟಕ, ಡೈರೆಕ್ಟೊರೇಟ್ ಆಫ್ ಎಕನಾಮಿಕ್ಸ್ ಅಂಡ್ ಸ್ಟ್ಯಾಟಿಸ್ಟಿಕ್ಸ್- ೧೯೯೪, 'ಕರ್ನಾಟಕ ಅಟ್ ಎ ಗ್ಲಾನ್ಸ್', ಬೆಂಗಳೂರು.

**ಕೋಷ್ಟಕ – ೨**

ಕರ್ನಾಟಕ ಮತ್ತು ಭಾರತದಲ್ಲಿನ ವಿದ್ಯುಚ್ಛಕ್ತಿ ವಿಭಾಗದ ಬೆಳವಣಿಗೆಯ ಮಟ್ಟಗಳು

| ಕ್ರ.ಸಂ. | ವಿವರಗಳು | ಕರ್ನಾಟಕ | ಭಾರತ |
|---|---|---|---|
| ೧. | ಅ. ಅಂದಾಜು ಮಾಡಲ್ಪಟ್ಟ ಅಗತ್ಯ ವಿದ್ಯುಚ್ಛಕ್ತಿಯ ಪ್ರಾಮಾಣ (ಮಿಲಿಯನ್ ಕಿಲೋವಾಟ್)-೧೯೯೩-೯೪ | ೨೨,೦೭೦ | ೩೨೩,೨೫೨ |
| | ಬ. ಪ್ರಸ್ತುತ ಲಭ್ಯವಿರುವ ವಿದ್ಯುಚ್ಛಕ್ತಿಯ ಪ್ರಮಾಣ (ಮಿ.ಕಿ.ವಾ.) - ೧೯೯೩-೯೪ | ೧೭,೨೩೫ | ೨೯೯,೪೯೪ |
| | ಕ. ಪ್ರಸಕ್ತ ವಿದ್ಯುಚ್ಛಕ್ತಿಯ ಕೊರತೆ (ಮಿ.ಕಿ.ವಾ)-೧೯೯೩-೯೪ | ೪,೮೩೫ | ೨೩,೭೫೮ |
| | ಡ. ಅಂದಾಜು ಮಾಡಲ್ಪಟ್ಟ ಅಗತ್ಯ ವಿದ್ಯುಚ್ಛಕ್ತಿಯಲ್ಲಿ ಶೇಕಡಾವಾರು ಕೊರತೆಯ ಪ್ರಮಾಣ-೧೯೯೩-೯೪ | ೨೧.೯ | ೭.೩ |
| ೨. | ಅ. ಸ್ಥಾಪಿತ ವಿದ್ಯುಚ್ಛಕ್ತಿಯ ಒಟ್ಟು ಉತ್ಪಾದನಾ ಸಾಮರ್ಥ್ಯತೆಯ ಪ್ರಮಾಣ (ಮೆ.ವಾ)-೧೯೯೩-೯೪ | ೩,೧೬೬ | ೭೬,೭೧೮ |
| | ಬ. ಜಲವಿದ್ಯುಚ್ಛಕ್ತಿಯ (ಹೈಡಲ್) ಶೇಕಡಾವಾರು ಪಾಲುದಾರಿಕೆ - ೧೯೯೩-೯೪ | ೫೪.೯ | ೨೬.೬ |

| | | |
|---|---|---|
| ಕ. ಶಾಖೋತ್ಪನ್ನ ವಿದ್ಯುಚ್ಛಕ್ತಿಯ (ಥರ್ಮಲ್) ಶೇಕಡವಾರು ಪಾಲುದಾರಿಕೆ - ೧೯೯೩-೯೪ | ೪೫.೧ | ೭೦.೮ |
| ಡ. ಪರಮಾಣು ಶಕ್ತಿ (ನ್ಯೂಕ್ಲಿಯರ್ ವಿದ್ಯುಚ್ಛಕ್ತಿ)ಯ ಶೇಕಡಾವಾರು ಪಾಲುದಾರಿಕೆ - ೧೯೯೩-೯೪ | ೦ | ೨.೬ |
| ೩. ಅ. ಜಲ ವಿದ್ಯುತ್ ಸಾಮರ್ಥ್ಯತೆಯ ಪ್ರಮಾಣ (ಮೆ.ವಾ.) | ೪,೩೪೭ | ೮೪,೦೪೪ |
| ಬ. ಜಲ ವಿದ್ಯುಚ್ಛಕ್ತಿಯಲ್ಲಿನ ಸ್ಥಾಪಿತ ಸಾಮರ್ಥ್ಯತೆಯ ಪ್ರಮಾಣ (ಮೆ.ವಾ) - ೧೯೯೩-೯೪ | ೨,೪೦೮ | ೨೦,೩೬೬ |
| ಕ. ಜಲ ವಿದ್ಯುತ್ ಸಾಮರ್ಥ್ಯತೆಗೆ ಅನುಗುಣವಾದಂತೆ ಸ್ಥಾಪಿತ ಸಾಮರ್ಥ್ಯತೆಯ ಶೇಕಡಾವಾರು ಪ್ರಮಾಣ - ೧೯೯೩-೯೪ | ೫೫.೪ | ೨೪.೨ |
| ೪. ಅ. ಶಾಖೋತ್ಪನ್ನ ವಿದ್ಯುಚ್ಛಕ್ತಿಯಲ್ಲಿನ ಸ್ಥಾಪಿತ ಸಾಮರ್ಥ್ಯತೆಯ ಪ್ರಮಾಣ (ಮಿ.ವಾ) - ೧೯೯೩-೯೪ | ೭೫೮ | ೫೪,೯೪೭ |
| ಬ. ಬಳಸುವ ಸಾಮರ್ಥ್ಯತೆಯ ಪ್ರಮಾಣ (ಪ್ಲಾಂಟ್ ಲೋಡ್ ಫ್ಯಾಕ್ಟರ್ ಆಫ್ ಥರ್ಮಲ್ ಪ್ಲಾಂಟ್ಸ್)-೧೯೯೩-೯೪ | ೬೬.೯ | ೬೧.೦ |
| ೫. ಅ. ರವಾನೆ ಮತ್ತು ಹಂಚಿಕೆಯ ಲೈನುಗಳು (ಸರ್ಕ್ಯೂಟ್ ಕಿ.ಮಿ.) - ೧೯೯೦ | ೩೬೬,೦೫೮ | ೪೪೦೭,೫೦೧ |
| ಬ. ರವಾನೆ ಮತ್ತು ಹಂಚಿಕೆಯ ಲೈನುಗಳು ಉದ್ದಳತೆ ಪ್ರತಿ ೧೦೦೦ ಚ.ಕಿ.ಮೀ.ಗಳಂತೆ (ಸರ್ಕ್ಯೂಟ್ ಕಿ.ಮಿ.) - ೧೯೯೦ | ೧೯೦೯ | ೧೩೪೧ |
| ೬. ಉತ್ಪಾದಿಸಲ್ಪಟ್ಟ ವಿದ್ಯುಚ್ಛಕ್ತಿಗೆ ಅನುಗುಣವಾದಂತೆ ರವಾನೆ ಮತ್ತು ಹಂಚಿಕೆಯಲ್ಲಾಗುತ್ತಿರುವ ವಿದ್ಯುತ್ ನಷ್ಟದಲ್ಲಿನ ಶೇಕಡಾವಾರು ಪ್ರಮಾಣ - ೧೯೯೨-೯೩ | ೧೮,೭ | ೨೧.೮ |
| ೭. ಒಟ್ಟು ವಿದ್ಯುತ್ ಉತ್ಪಾದನಾ ಪ್ರಮಾಣ (ಮಿಲಿಯನ್ ಕಿ.ವಾ.ಗ) - ೧೯೯೩-೯೪ | ೧೪,೧೫೫ | ೩೨೩,೫೩೧ |
| ೮. ಅ. ಒಟ್ಟಾರೆ ವಿದ್ಯುತ್ ಬಳಕೆಯ ಪ್ರಮಾಣ (ಮಿ.ಕಿ.ವಾ.ಗ) - ೧೯೮೯-೯೦ | ೧೧,೦೭೮ | ೧೭೫,೪೧೯ |
| ಬ. ತಲಾವಾರು ವಿದ್ಯುತ್ ಬಳಕೆಯ ಪ್ರಮಾಣ (ಕಿ.ವಾ.ಗ) - ೧೯೮೯-೯೦ | ೨೫೨ | ೨೦೭ |
| ಇ. ಗೃಹ ವಿದ್ಯುತ್ ಬಳಕೆಯ ಶೇಕಡಾವಾರು ಪ್ರಮಾಣ - ೧೯೮೯-೯೦ | ೧೫.೩ | ೧೬.೯ |
| ಈ. ಕೃಷಿಗೆ ಬಳಸಿದ ವಿದ್ಯುಚ್ಛಕ್ತಿಯ ಶೇಕಡಾವಾರು ಪ್ರಮಾಣ - ೧೯೮೯-೯೦ | ೩೨.೨ | ೨೫.೧ |
| ಉ. ಕೈಗಾರಿಕೆಗೆ ಬಳಸಿದ ವಿದ್ಯುಚ್ಛಕ್ತಿಯ ಶೇಕಡಾವಾರು ಪ್ರಮಾಣ - ೧೯೮೯-೯೦ | ೪೯.೦ | ೪೬.೦ |
| ಊ. ವಾಣಿಜ್ಯ ಕ್ಷೇತ್ರಕ್ಕೆ ಬಳಸಿದ ವಿದ್ಯುಚ್ಛಕ್ತಿಯ ಶೇಕಡಾವಾರು ಪ್ರಮಾಣ - ೧೯೮೯-೯೦ | ೨.೦ | ೫.೪ |

| | | |
|---|---|---|
| ಋ. ಇತರೇ ಕ್ಷೇತ್ರಕ್ಕೆ ಬಳಸಿದ ವಿದ್ಯುಚ್ಛಕ್ತಿಯ ಶೇಕಡಾವಾರು ಪ್ರಮಾಣ - ೧೯೮೯-೯೦ | ೧.೫ | ೬.೬ |
| ೠ. ಗ್ರಾಮೀಣ ವಿದ್ಯುದ್ದೀಕರಣದ ಶೇಕಡಾವಾರು ಪ್ರಾಮಾಣ ೧೯೯೨-೯೩ | ೧೦೦ | ೮೪ |
| ಎ. ನೀರಾವರಿ ಪಂಪುಸೆಟ್ಟುಗಳು/ಕೊಳವೆ ಬಾವಿಗಳಿಗೆ ಒದಗಿಸಿದ ವಿದ್ಯುತ್ ಪ್ರಮಾಣ, ಪ್ರತಿ ೧೦೦೦ ಹೆಕ್ಟೇರ್‌ವುಳ್ಳ ಒಟ್ಟು ಬೆಳೆ ತೆಗೆಯುವ ಭೂಮಿ - ೧೯೯೩ | ೭೫ | ೫೬ |

ಆಧಾರ: ಸೆಂಟರ್ ಫಾರ್ ಮಾನಿಟೋರಿಂಗ್ ಇಂಡಿಯನ್ ಎಕಾನಮಿ - ಜೂನ್ ೧೯೯೪, 'ಕರೆಂಟ್ ಎನರ್ಜಿ ಸೀನ್ ಇನ್ ಇಂಡಿಯಾ', ಬಾಂಬೆ.

# ಭೌತಿಕ ಜೀವನ ಗುಣಮಟ್ಟ ಸೂಚಿ - ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಒಂದು ಮಾಪನ

ಐ.ಜಿ.ಎಚ್. ಲೂಯಿಸ್

## ೧. ಪರಿಚಯ

ನಾಲ್ಕು ದಶಕಗಳ ಆರ್ಥಿಕ ಯೋಜನೆಗಳ ಹೊರತಾಗಿಯೂ, ಬಡವರ ಬವಣೆಗಳಲ್ಲಿ ಹೆಚ್ಚೇನು ಸುಧಾರಣೆಯಾಗಿಲ್ಲ ಹಾಗೂ ರಾಜ್ಯಗಳ ಒಳಗೆ ಹಾಗೂ ಅಂತರ ರಾಜ್ಯಗಳ ತಾರತಮ್ಯಗಳು ಆಶಿಸಿದ ಮಟ್ಟದಲ್ಲಿ ಕಿರಿದಾಗಿಲ್ಲ ಎಂಬುದು ವಿಶಾಲವಾಗಿ ಸ್ವೀಕರಿಸಲ್ಪಡುವ ಅಂಶವಾಗಿರುತ್ತದೆ. ಯೋಜನಾಕಾರರಿಗಾದ ಈ ಸತ್ಯಾಂಶದ ಅರಿವಿನಿಂದ, ಹೆಚ್ಚು ವ್ಯಾಪ್ತಿ ಹಾಗೂ ಅಗಲ ಬುನಾದಿಯ ಆರ್ಥಿಕ ಪ್ರಗತಿ ಮತ್ತು ಅಭಿವೃದ್ಧಿಯ ಬದಲಿ ತಂತ್ರಗಳ ಹಾಗೂ ನೀತಿಗಳ ಹುಡುಕುವಿಕೆಯ ಉಗಮವಾಯಿತು. ಉತ್ತಮ ಸಮಾನತೆಯ ಗುರಿಯಿರುವ ಅಂತಹ ಹೊಸ ಯೋಜನೆಗಳು ಅವಶ್ಯಕವಾಗಿ ಆರ್ಥಿಕ ಅಭಿವೃದ್ಧಿಯ ಲಾಭಗಳನ್ನು ವಿತರಿಸುವ ನಿಖರ ಮಾಪನಗಳ ಮೇಲೆ ಕಟ್ಟಬೇಕಾಗುತ್ತದೆ. ದೇಶಗಳ ನಡುವಿನ ಹೋಲಿಕೆಗಾಗಿ, ತಲಾ ಆದಾಯವು ವಿಶೇಷತಃ ಅಂತಹ ಒಂದು ಮಾಪನವಾಗಿರುತ್ತದೆ. ಆದರೆ ಒಂದು ದೇಶದ ಒಳಗಿನ ವಿಭಿನ್ನ ಗುಂಪು/ರಾಜ್ಯದ ಜೀವನ ಗುಣಮಟ್ಟದ ಸುಧಾರಣೆಯ ಪ್ರಶ್ನೆ ಬಂದಾಗ, ಒಂದು ವೇಳೆ ತಲಾ ಆದಾಯ ದೊರೆತರೂ, ಅದು ಸರಿಯಾದ ಮಾಪನವಾಗಲಾರದು. ತಲಾ ಆದಾಯ ಮಟ್ಟ ಹಾಗೂ ಕಲ್ಯಾಣ ಸೂಚಿಗಳಾದ ಶಿಶುಮರಣ ಸಂಖ್ಯೆ, ಸಾಕ್ಷರತೆ ಪ್ರಮಾಣ ಮತ್ತು ಜೀವನ ಸುದೀರ್ಘತೆ (ದೀರ್ಘಾಯುಷ್ಯ) ಇವುಗಳೊಳಗೆ ಒಂದು ಸಾಮಾನ್ಯ ಸಹ ಸಂಬಂಧವಿದೆ ಎಂಬುದು ಸತ್ಯ. ಆದರೆ, ವಿಭಿನ್ನ ದೇಶಗಳಿಗೆ ಹೋಲಿಸಿದಾಗ ಇದು ಯಾವಾಗಲೂ ಅದೇ ರೀತಿ ಅಲ್ಲ ಎಂಬುದಕ್ಕೆ ಸಾಕಷ್ಟು ರುಜುವಾತುಗಳಿವೆ, ಅಂದರೆ ಹೆಚ್ಚಿನ ತಲಾ ಆದಾಯವು ಎಂದೂ ಹೆಚ್ಚಿನ ಪ್ರಮಾಣದ ಸಾಕ್ಷರತೆ, ಸುದೀರ್ಘಜೀವನಾಯುಷ್ಯ ಹಾಗೂ ಕಡಿಮೆ ಶಿಶುಮರಣ ಸಂಖ್ಯೆಯೊಂದಿಗೆ ಸಾಗುತ್ತದೆ ಎಂದರೆ ಸರಿಯಲ್ಲ.

ಆರ್ಥಿಕ ಪ್ರಗತಿ ಮತ್ತು ಅಭಿವೃದ್ಧಿಯ ಸೂಕ್ತವಾದ ಮಾಪನ ಕಂಡುಕೊಳ್ಳಲು ನಡೆಸುವ ಹುಡುಕಾಡುವಿಕೆಯಲ್ಲಿ ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ಪರೀಕ್ಷಿಸಲಾಗಿದೆ. ರಾಷ್ಟ್ರೀಯ ಒಟ್ಟು ಆದಾಯ ಸೂಚಿಯಂತಹ ಇತರ ಸಾಮಾನ್ಯ ಅಭಿವೃದ್ಧಿ ಸೂಚಿಗಿಂತ ಭೌತಿಕ ಜೀವನ ಗುಣಮಟ್ಟ ಸೂಚಿಗೆ ಕೆಲವು ಲಾಭಗಳಿವೆ. ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ಕಟ್ಟುವುದು ಬಹಳ ಸರಳವಾಗಿದ್ದು ಇದು ಸಮಾಜ ಕಲ್ಯಾಣಕ್ಕಿರುವ ಅಭಿವೃದ್ಧಿ ಕಾರ್ಯಕ್ರಮಗಳು ನಿರ್ಧಿಷ್ಟವಾಗಿ ಶಿಶುಮರಣ ಸಂಖ್ಯೆ, ಸಾಕ್ಷರತೆ, ಜೀವನ ಸುದೀರ್ಘತೆಗಳ ನಿಖರವಾದ ಪ್ರಭಾವವನ್ನು ಮಾಪನ ಮಾಡುವುದು. ಹೀಗೆ, ಆರ್ಥಿಕ ಪ್ರಗತಿ ಮತ್ತು ಅಭಿವೃದ್ಧಿಯು ಹೇಗೆ ಮತ್ತು ಯಾವ ಪ್ರಮಾಣದಲ್ಲಿ ಸಾಮಾನ್ಯ ಜನಜೀವನವನ್ನು ನಾಟುವುದು ಎಂದು 'ರಾಷ್ಟ್ರೀಯ ಒಟ್ಟು ಆದಾಯ'ದಲ್ಲಿ ಪ್ರತಿಬಿಂಬಿಸಲಾಗದ ದೊಡ್ಡ ವೈಫಲ್ಯವನ್ನು ಇದು ಜಯಿಸುವುದು. ಅಂತಹ ಒಂದು ನಾಟುವಿಕೆಯ ವಿಶ್ಲೇಷಣೆಗೆ ರಾಷ್ಟ್ರೀಯ ಒಟ್ಟು ಆದಾಯದೊಂದಿಗೆ ಭೌತಿಕ ಜೀವನ ಗುಣಮಟ್ಟ ಸೂಚಿಯು ಪೂರಕವಾಗಿ ಕೆಲಸವೆಸಗಬಹುದು.

**೨. ಭೌತಿಕ ಜೀವನ ಗುಣಮಟ್ಟ ಸೂಚಿ ಏನನ್ನು ಮಾಪನ ಮಾಡುವುದು?**

ಜನರ ಮೂಲ ಅವಶ್ಯಕತೆಗಳನ್ನು ಅಭಿವೃದ್ಧಿ ಹೊಂದುವ ಆರ್ಥಿಕ ವ್ಯವಸ್ಥೆಯು ಎದುರಿಸುವ ಕಾರ್ಯರೀತಿಯನ್ನು ಮಾಪನ ಮಾಡಲು ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ಮೂಲತಃ ವಿನ್ಯಾಸಗೊಳಿಸಲಾಗಿದೆ. ಒಂದು ವರ್ಷಪ್ರಾಯದಲ್ಲಿನ ಜೀವನಾಯುಷ್ಯ ಮತ್ತು ಶಿಶುಮರಣ ಸಂಖ್ಯೆಯು ಒಟ್ಟಾರೆ ಸಾಮಾಜಿಕ ಗತಿಯ ಸೂಚಿಯಂತೆ ತೋರುವುದು, ಹಾಗೂ ಇದು ಪೌಷ್ಠಿಕತಯ ಮಟ್ಟ, ಸಾರ್ವಜನಿಕ ಆರೋಗ್ಯ ಮತ್ತು ಕೌಟುಂಬಿಕ ವಾತಾವರಣದ ಒಗ್ಗೂಡಿದ ಪ್ರತಿಬಿಂಬವಾಗಿರುತ್ತದೆ. ಸಾಕ್ಷರತೆಗೆ, ಸೂಚಿಯು ಅಭಿವೃದ್ಧಿಯ ರಕ್ಷಣೆ ಹಾಗೂ ಬಡ ಗುಂಪುಗಳು ಅಭಿವೃದ್ಧಿ ಕಾರ್ಯವನ್ನು ಹಂಚಿಕೊಳ್ಳುವ ಸಾಧ್ಯತೆಯ ಪರಿಮಾಣವನ್ನು ಮತ್ತು ಲಾಭಕ್ಷಮತೆಯ ಮಾಹಿತಿಯನ್ನು ನೀಡುವುದು.

ಭೌತಿಕ ಜೀವನ ಗುಣಮಟ್ಟ ಸೂಚಿಯು ಸಾಮಾಜಿಕ ಅಭಿವೃದ್ಧಿಯ ಈ ಕೆಳಗಿನ ಮೂರು ಸೂಚಿಕೆಗಳ ಒಂದು ಸರಳ ಸರಾಸರಿಯಾಗಿರುವುದು.

ಅ. ಒಂದು ವರ್ಷ ಪ್ರಾಯದಲ್ಲಿನ ಜೀವನಾಯುಷ್ಯ

ಆ. ಶಿಶುಮರಣ ಸಂಖ್ಯೆ

ಇ. ಸಾಕ್ಷರತೆಯ ದರ

ಈ ಸೂಚಿಗಳು ಆಯ್ಕೆಯು ಕೆಳಗಿನ ವಿಚಾರಗಳಿಂದ ಪ್ರಭಾವಿತಗೊಂಡಿರುತ್ತದೆ.

ಅ. ಈ ಮೂರು ಮಾಪನಗಳು ದೇಶದಲ್ಲಿನ ಪ್ರಚಲಿತ ಆರ್ಥಿಕ ವ್ಯವಸ್ಥೆ ಹಾಗೂ ಸಂಸ್ಥೆಗಳಿಂದ ಸ್ವತಂತ್ರವಾಗಿದೆ.

ಆ. ಸುದೀರ್ಘ ಜೀವನ ಪಡೆಯುವ ಇಚ್ಛೆ, ಕಡಿಮೆ ಶಿಶುಮರಣ ಸಂಖ್ಯೆ ಹಾಗೂ ಹೆಚ್ಚಿನ ಸಾಕ್ಷರತೆಯನ್ನು ಪಡೆಯುವ ಆಶಯ ನಿರ್ವಿವಾದ.

ಇ. ಇವುಗಳೆಲ್ಲವು ಅಭಿವೃದ್ಧಿ ಯತ್ನಗಳ ಫಲಿತಾಂಶಗಳನ್ನು ಅಳತೆ ಮಾಡುವುದು.

ಈ. ಈ ಮೂರು ಸೂಚಿಗಳು ಬೆಳವಣಿಗೆಯ ವಿತರಣಾ ಸ್ವರೂಪಕ್ಕಾಗಿ ನಿಂತಿರುತ್ತದೆ. ಅಂದರೆ, ವಿಶೇಷವಾಗಿ ಶಿಶುಮರಣ ಸಂಖ್ಯಾದರ ಮತ್ತು ಸಾಕ್ಷರತಾ ದರ, ಇವುಗಳಲ್ಲಿ ಯಾವುದಾದರೊಂದರಲ್ಲಿ ಸುಧಾರಣೆ ಕಂಡರೂ ಅವುಗಳಿಂದ ಮಾಪನಗೊಂಡ ಪ್ರಯೋಜನ ಲಾಭವು ಹೆಚ್ಚು ಅಗಲವಾಗಿ ಹರಡಿದೆ ಮತ್ತು ಹೆಚ್ಚಿನ ಸಮಾಜ ಕಲ್ಯಾಣದ ಸಮಾನವಾದ ವಿತರಣೆ ಎಂದು ಅರ್ಥವಾಗುತ್ತದೆ.

## ೩. ರಚನೆಯ ವಿಧಾನ

ಭೌತಿಕ ಜೀವನ ಗುಣಮಟ್ಟ ಸೂಚಿಯಲ್ಲಿ ಬಳಸಿದ ಮೂರು ಸೂಚಿಗಳಿಗೆ ಯಾವುದೇ ಸಾಮಾನ್ಯ ಸಂಖ್ಯಾ ಸೂಚಕವಿಲ್ಲದಿರುವ ಕಾರಣ, ಒಂದು ಸರಳ ಸೂಚಿ ವ್ಯವಸ್ಥೆಯನ್ನು ಬಳಸಲಾಗಿದೆ. ಪ್ರತಿ ಸೂಚಿಗಳಿಗೆ ಸಂಬಂಧಿಸಿ ರಾಜ್ಯಗಳ ವೈಯುಕ್ತಿಕ ಸಾಧನೆಗಳನ್ನು ೦ಯಿಂದ ೧೦೦ರ ತನಕ ಮಾಪನವುಳ್ಳ ಅಳತೆಗೋಲಿನಲ್ಲಿ ಮಾಪನ ಮಾಡುವುದು. ಇಲ್ಲಿ ೦ಯು ವ್ಯಾಖ್ಯಾನಿಸಿದ ಅತ್ಯಂತ ಕೆಟ್ಟ ಸಾಧನೆಯನ್ನು, ಮತ್ತು ೧೦೦ ವ್ಯಾಖ್ಯಾನಿಸಿದ ಅತ್ಯುತ್ತಮ ಸಾಧನೆಯನ್ನು ಪ್ರತಿನಿಧಿಸುವುದು. ಪ್ರತೀ ಮೂರು ಸೂಚಿಗಳನ್ನು ಒಂದು ಸಾಮಾನ್ಯ ಮಾಪನಕ್ಕೆ ಅಳತೆ ಮಾಡಿದ ಬಳಿಕ ಮೂರು ಸೂಚಿಗಳಿಗೂ ಸಮಾನ ತೂಕ ನೀಡಿ ತೆಗೆದ ಸರಾಸರಿಯಿಂದ ಭೌತಿಕ ಜೀವನ ಗುಣಮಟ್ಟ ಸೂಚಿಯು ಬರುವುದು.

ಸಾಕ್ಷರತಾ ದರದ ಬಗೆಗಿನ ಸೂಚಿಯು ದರದ ತದ್ರೂಪವಾಗಿದ್ದು, ಅದು ಈಗಾಗಲೇ ೦ಯಿಂದ ೧೦೦ರ ಅಳತೆಯಲ್ಲಿದೆ (ಕೋಷ್ಟಕ-೧). ಪ್ರತಿ ರಾಜ್ಯದ ಶಿಶುಮರಣ ಸಂಖ್ಯಾ ದರದ ಸೂಚಿಯನ್ನು ಕೆಳಗಿನ ಸೂತ್ರ ಉಪಯೋಗಿಸಿ ಲೆಕ್ಕ ಹಾಕಲಾಗುವುದು:

$$\frac{\text{ಅತೀ ಹೆಚ್ಚು ಶಿಶುಮರಣ ದರ - ನಿಜವಾದ ಶಿಶುಮರಣ ದರ x ೧೦೦}}{\text{ಅತೀ ಹೆಚ್ಚು ಶಿಶುಮರಣ ದರ - ಅತೀ ಕಡಿಮೆ ಶಿಶುಮರಣ ದರ}}$$

ಇಲ್ಲಿ 'ಅತೀ ಹೆಚ್ಚು' ಎಂಬುದು, ರಾಜ್ಯಗಳಲ್ಲಿನ ಪ್ರತಿ ೧೦೦೦ ಜೀವಂತ ಜನನಕ್ಕೆ ಗರಿಷ್ಠ ಮರಣ ಸಂಖ್ಯೆಯನ್ನು ಪ್ರತಿನಿಧಿಕರಿಸುವುದು, ಇದು ೧೯೭೧ರಲ್ಲಿ ೧೬೭, ೧೯೮೧ರಲ್ಲಿ ೧೫೦ ಮತ್ತು ೧೯೯೧ರಲ್ಲಿ ೧೨೬ (ಉತ್ತರ ಪ್ರದೇಶ); 'ಅತೀ ಕಡಿಮೆ' ಎಂಬುದು ಪ್ರತೀ ೧೦೦೦ ಜೀವಂತ ಜನನಕ್ಕೆ ಕನಿಷ್ಠ ಸಂಖ್ಯೆಯ ಮರಣವನ್ನು ಪ್ರತಿನಿಧೀಕರಿಸುವುದು, ಅದು ೧೯೭೧ರಲ್ಲಿ ೫೮, ೧೯೮೧ರಲ್ಲಿ ೩೭

ಮತ್ತು ೧೯೯೧ರಲ್ಲಿ ೨೬ (ಎಲ್ಲವೂ ಕೇರಳಕ್ಕೆ ಸಂಬಂಧಿಸಿದೆ) ಸೂಚಿಯು ೦ಯಿಂದ ೧೦೦ವರೆಗಿನ ವ್ಯಾಪ್ತಿಯಲ್ಲಿದೆ (ಕೋಷ್ಟಕ ೧). ನಿರೀಕ್ಷಿತ ಜೀವನಾವಧಿಗೆ ಸಂಬಂಧಿಸಿದಂತೆ, ಮೊದಲಿಗೆ ಜನನ ಸಮಯದ ನಿರೀಕ್ಷಿತ ಜೀವನಾವಧಿಯ ಬಗ್ಗೆ ಸಿಗುವ ಅಂಕಿ ಸಂಖ್ಯೆಗಳನ್ನು ಒಂದು ವರ್ಷ ಪ್ರಾಯಾವಧಿಯ ನಿರೀಕ್ಷಿತ ಜೀವನಾವಧಿಯನ್ನಾಗಿ ಈ ಕೆಳಗಿನ ಸೂತ್ರವನ್ನು ಬಳಸಿ ಪರಿವರ್ತಿಸಬೇಕು.

$$L1 = \frac{L_O - 1 + q^*(1 - K^*)}{1 - q^*}$$

L1 = ಒಂದು ವರ್ಷ ಪ್ರಾಯದಲ್ಲಿನ ನಿರೀಕ್ಷಿತ ಜೀವನಾವಧಿ

L0 = ಜನನ ಸಮಯದ ಜೀವನಾವಧಿ

$q^*$ = ೧೦೦೦ ಜೀವಂತ ಜನನಕ್ಕೆ ಶಿಶುಮರಣ ಸಂಖ್ಯೆ (ಅಪೂರ್ಣಾಂಕ: ಬಿಂದುಗಳಲ್ಲಿ ಸೂಚಿಸುವುದು)

$k^*$ = ಮೊದಲ ವರ್ಷದಲ್ಲಿ ಬದುಕುಳಿದ ಸರಾಸರಿ (೦.೨ ವರ್ಷಗಳು ಎಂದು ರೂಪಿಸಲಾಗಿದೆ).

ಸೂಚಿಯನ್ನು ಲೆಕ್ಕಹಾಕಲು ಒಂದು ವರ್ಷದ ಜೀವನಾವಧಿಯು ದೊರಕಿದ ಬಳಿಕ, ಅತೀ ಕಡಿಮೆ ಜೀವನಾವಧಿ ಎಂದರೆ ೩೮ ವರ್ಷ (ವಿಯಟ್ನಾಮ್, ೧೯೫೦), ಇದನ್ನು ೦ ಎಂದು ತೆಗೆದುಕೊಳ್ಳಲಾಗುವುದು. ಗಂಡಸರು ಮತ್ತು ಹೆಂಗಸರಿಗೆ ಜಂಟಿಯಾಗಿ (೧೦೦) ಮೇಲ್ಮಿತಿಯಾಗಿ ೭೭ ವರ್ಷಗಳೆಂದು ಇಡಲಾಗಿದ್ದು, ಇದನ್ನು ವಿವಿಧ ವಿಶೇಷಜ್ಞರುಗಳು ೨೦೦೦ನೇ ವರ್ಷಕ್ಕೆ ಸಮ್ಮತವೆಂದು ತೀರ್ಮಾನಿಸಿದ ಆಧಾರದಲ್ಲಿ ತೆಗೆದುಕೊಳ್ಳಲಾಗಿದೆ. ಮುಂದೆ ತಿಳಿಸಿರುವ ಸೂತ್ರದೊಂದಿಗೆ ಈ ಸೂಚಿಯನ್ನು ರಚಿಸಿದೆ (ಕೋಷ್ಟಕ ೧).

$$\frac{\text{ನಿಜವಾದ ಜೀವನಾವಧಿ ಒಂದು ವರ್ಷ ಪ್ರಾಯದ ಅವಧಿಯಲ್ಲಿ - ೩೮}}{\text{೦.೩೯}}$$

ಸಾರಾಂಶದಲ್ಲಿ, ಸಾಕ್ಷರತೆ ಸೂಚಿಯು ೦ಯಿಂದ ೧೦೦ರವರೆಗೆ, ಶಿಶುಮರಣ ಸಂಖ್ಯೆ ೦ ಯಿಂದ ೧೦೦ವರೆಗೆ ಹಾಗೂ ಒಂದು ವರ್ಷ ಪ್ರಾಯದ ನಿರೀಕ್ಷಿತ ಜೀವನಾವಧಿಯು ೩೮ ವರ್ಷಗಳಿಂದ ೭೭ರವರೆಗೆ ವ್ಯಾಪಿಸಿರುವುದು (ಸೂಕ್ತ ಮಟ್ಟಗಳಲ್ಲಿ ಅಂತಿಮ ಮೌಲ್ಯಗಳನ್ನು ಪುನರ್ ವ್ಯಾಖ್ಯಾನಿಸಿದ ಬಳಿಕ ಈ ಸೂಚಿ ಚಿಹ್ನೆಗಳ ಪುನರ್ ಲೆಕ್ಕಾಚಾರ ಮಾಡಬಹುದು).

**೪. ಮಿತಿಗಳು**

ಭೌತಿಕ ಜೀವನ ಗುಣಮಟ್ಟ ಸೂಚಿಯು ಅಭಿವೃದ್ಧಿಯನ್ನು ಅಳೆಯುವ

ಪರಿಮಿತಿಯ ಮಾಪನವಾಗುತ್ತದೆ. ಅರ್ಥಾತ್ ರಕ್ಷಣೆ, ನ್ಯಾಯ, ಮಾನವೀಯ ಹಕ್ಕುಗಳಂತಹ ಭೌತಿಕ ಗುಣ ಲಕ್ಷಣಗಳಲ್ಲಿನ್ನ ಬದಲಾವಣೆಗಳನ್ನು ಇದು ಮಾಪನ ಮಾಡಲು ಯತ್ನಿಸುವುದಿಲ್ಲ. ಸಾಕ್ಷರತೆಯನ್ನು ಬಹುಶಃ ಮಾನವ ಜೀವನದ ಒಂದು ಭೌತಿಕ ಲಕ್ಷಣವೆಂದು ಹೇಳಲಾಗುವುದಿಲ್ಲ. ಒಟ್ಟಾರೆಯಾಗಿ ಭೌತಿಕ ಜೀವನ ಗುಣಮಟ್ಟ ಸೂಚಿಗೆ ಕಿರಿದಾದ ಪರಿಮಿತಿಯಿದೆಯೆನ್ನುವುದು ಸತ್ಯ.

## ೫. ಫಲಿತಾಂಶಗಳ ಮೇಲಿನ ಚರ್ಚೆ (ಕೋಷ್ಟಕ ೧ ಮತ್ತು ೨ನ್ನು ಉಲ್ಲೇಖಿಸಿ)

ಭಾರತದ ರಾಜ್ಯಗಳಿಗೆ ಸಂಬಂಧಿಸಿದಂತೆ ತಲಾ ಆದಾಯ ಹೆಚ್ಚಿರುವ ಪಂಜಾಬ್ ಮತ್ತು ಮಹಾರಾಷ್ಟ್ರಗಳಲ್ಲಿ ಮೇಲ್ಪಟ್ಟಿದ, ಅಂದರೆ ರಾಷ್ಟ್ರೀಯ ಸರಾಸರಿ ೪೯ಕ್ಕಿಂತಲೂ ಬಹು ಮೇಲ್ಪಟ್ಟಿದ ಭೌತಿಕ ಜೀವನ ಗುಣಮಟ್ಟ ಸೂಚಿಗಳಿವೆ. ಇತರ ರಾಜ್ಯಗಳಿಗೆ ಹೋಲಿಸಿದರೆ ಕೇರಳ ರಾಜ್ಯವು ಭಿನ್ನವಾದ ಬೇರೆಯೇ ಮಜಲನ್ನು ಪ್ರವೇಶಿಸಿದೆ. ಈ ರಾಜ್ಯವು ಸ್ಥಿರವಾಗಿ, ಮುಂದುವರಿದ ದೇಶಗಳಿಗೆ ಹೋಲಿಸಬಹುದಾದ ಉನ್ನತ ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ದಾಖಲಿಸಿದೆ (ಇದು ಇತರ ರಾಜ್ಯಗಳಿಗೆಲ್ಲ ಉನ್ನತವಾಗಿದೆ). ಇಂತಹ ಪ್ರಮುಖ ಸಾಧನೆಯ ಹಿನ್ನಲೆಯಲ್ಲಿನ ಅಂಶಗಳನ್ನು ಅಧ್ಯಯನ ಮಾಡುವುದು ಯೋಗ್ಯವೆನಿಸುವುದು.

ಎಲ್ಲಾ ಮೂರು ವಿಷಯ ಸೂಚಿಗಳಲ್ಲಿ ಕೇರಳದ ಸಾಧನೆಯು ಬೇರೆಲ್ಲ ರಾಜ್ಯಗಳು ಮತ್ತು ನಮ್ಮ ರಾಷ್ಟ್ರದ ಸರಾಸರಿಗಿಂತ ಮುನ್ನಡೆಯಲ್ಲಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ ೧೯೪೯ರಲ್ಲಿ ಕೇರಳ ರಾಜ್ಯವು ೯೦.೬% (ತಾತ್ಕಾಲಿಕ) ಸಾಕ್ಷರತೆಯನ್ನು ಹೊಂದಿದ್ದು ದೇಶದ ಸಾಕ್ಷರತೆಯು ೫೨.೧% ಆಗಿದ್ದು ಬಳಿಕದ ಉನ್ನತ ದರವು ತಮಿಳುನಾಡಿನದಾಗಿದ್ದು ಇದು ಕೇವಲ ೬೩.೭% ಆಗಿತ್ತು. ೧೯೯೧ರಲ್ಲಿ ಶಿಶುಮರಣ ಸಂಖ್ಯೆ ದರ ಪ್ರತಿ ೧೦೦೦ ಜೀವಂತ ಜನನಕ್ಕೆ ಭಾರತ ದೇಶದ ೯೫ಕ್ಕೆ ಹೋಲಿಸಿದಾಗ ಕೇರಳದಲ್ಲಿ ಕೇವಲ ೨೬ ಆಗಿತ್ತು. ತದನಂತರದ ರಾಜ್ಯ ಇಳಿಕೆಯ ಕ್ರಮದಲ್ಲಿ ಪಂಜಾಬ್ ಆಗಿದ್ದು (ಇಲ್ಲಿ ಶಿಶುಮರಣ ಸಂಖ್ಯೆ ೬೨ರಷ್ಟಿದೆ) ಇದು ಕೇರಳಕ್ಕಿಂತಲೂ ಸಂಪದ್ಭರಿತ ರಾಜ್ಯವಾಗಿರುವುದು, ಒಂದು ಗಮನಿಸಬೇಕಾದ ಕುತೂಹಲಕಾರಿ ಅಂಶವಾಗಿದೆ. ನಿರೀಕ್ಷಿತ ಜೀವನಾವಧಿಯ ಬಗ್ಗೆ ಕೇರಳದ ಸಾಧನೆ ಅತ್ಯಾಕರ್ಷಕವಲ್ಲದಿದ್ದರೂ, ಅತ್ಯುತ್ತಮವಾಗಿರುವುದು. ಭಾರತದ ೫೮ ವರ್ಷಗಳಿಗೆ ಹೋಲಿಸಿದಾಗ ಕೇರಳದ ನಿರೀಕ್ಷಿತ ಜೀವನಾವಧಿ ೭೧ ವರ್ಷಗಳಾಗಿದೆ ಹಾಗೂ ನಂತರದ ಉತ್ತಮ ಸಾಧನೆ ಮತ್ತೆ ಪಂಜಾಬ್‌ನದಾಗಿದ್ದು ಇಲ್ಲಿ ೬೬ ವರ್ಷಗಳು. ಈ ಮೇಲಿನ ವಿಷಯಗಳಿಂದ ಸ್ಫುಟಗೊಳ್ಳುವುದೇನೆಂದರೆ, ಕೇರಳದ ಉನ್ನತ ಭೌತಿಕ ಜೀವನ ಗುಣಮಟ್ಟ ಸೂಚಿಯು ಅಲ್ಲಿನ ಹೆಚ್ಚಿನ ಸಾಕ್ಷರತೆಯ ದರ ಹಾಗೂ ಕಡಿಮೆ ಶಿಶುಮರಣ ಸಂಖ್ಯೆದರದ ಫಲಿತಾಂಶವಾಗಿರುವುದು. ಹೆಚ್ಚಿನಂಶ, ಸಾಕ್ಷರತೆಯು ಶಿಶುಮರಣ ಸಂಖ್ಯೆಯ ಮೇಲೆ ಬೀರಿರುವ ಪ್ರಭಾವವು ರಾಜ್ಯದ ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ಎತ್ತರಿಸಿರಬಹುದು.

ಕೇರಳ ರಾಜ್ಯದ ಇಂತಹ ಗಮನಾರ್ಹ ಸಾಧನೆಗೆ ಮೂಲ ಆ ರಾಜ್ಯದ ಅನುಪಮ ಸಾಮಾಜಿಕ ಮತ್ತು ಆರ್ಥಿಕ ಒಲವು ಹಾಗೂ ಸಾಮಾಜಿಕ ವೈಶಿಷ್ಟ್ಯತೆ. ಮೊದಲನೆಯದಾಗಿ, ಈ ರಾಜ್ಯದ ಜನರಲ್ಲಿ ವೈಯಕ್ತಿಕ ಹಾಗೂ ಪರಿಸರದ ಸ್ವಚ್ಛತೆಯ ಮೇಲಿನ ಸಾಮಾನ್ಯ ತಿಳುವಳಿಕೆಯು ಬಹಳವಾಗಿದೆ. ಲೇಖಕರ ಈ ಭಾವನೆಯನ್ನು ಕೇರಳದಲ್ಲಿ ಜೀವಿಸಿದ ಹಾಗೂ ದೇಶದ ಇತರ ಭಾಗದಲ್ಲಿ ಜೀವಿಸಿದ ಹಲವರು ಸಮರ್ಥಿಸಿಕೊಂಡಿದ್ದಾರೆ. ಎರಡನೆಯದಾಗಿ, ಕೇರಳದಲ್ಲಿ ಕಂಡು ಬರುವ ಅದ್ವಿತೀಯ ಸಾಮಾಜಿಕ ರಚನೆಯಲ್ಲಿ, ಮಾತೃಪ್ರಧಾನ ವ್ಯವಸ್ಥೆಯಿದ್ದು ಇಲ್ಲಿ, ಮಗಳು ತಾಯಿಯಿಂದ ಆಸ್ತಿಯ ಪರಭಾರೆ ಪಡೆಯುವಳು. ಪ್ರಾಯಶಃ ಇದರಿಂದಾಗಿಯೇ ಇಲ್ಲಿ ಮಹಿಳೆಯರಿಗೆ ಹೆಚ್ಚಿನ ಸಾಮಾಜಿಕ ಸ್ಥಾನಮಾನ ಹಾಗೂ ಗೌರವವಿದ್ದು ಇದುವೆ ಮಹಿಳೆಯರ ಬಹು ವ್ಯಾಪ್ತಿ ಸಾಕ್ಷರತೆಗೆ ಕಾರಣವಾಗಿರಬಹುದು (ಜನಸಂಖ್ಯೆಯಲ್ಲಿ ಹೆಣ್ಣು ಮತ್ತು ಗಂಡಿನ ಅನುಪಾತಕ್ಕೆ ಸಂಬಂಧಿಸಿ, ಇಲ್ಲಿ ಗಮನಕ್ಕೆ ತರುವುದು ಉಚಿತವಾಗುವುದು. ಏನೆಂದರೆ, ಕೇರಳ ಒಂದು ರಾಜ್ಯದಲ್ಲಿ ಮಾತ್ರ ಹೆಣ್ಣಿನ ಸಂಖ್ಯೆ ಜಾಸ್ತಿಯಿರುವುದು). ವಿದ್ಯಾವಂತ ಮಹಿಳೆಯಿದ್ದು ಅವರಿಗೆ ಆರೋಗ್ಯ ಅಭ್ಯಾಸಗಳು ಮತ್ತು ಸವಲತ್ತುಗಳ ಬಗ್ಗೆ ತಿಳುವಳಿಕೆಯಿದ್ದರೆ ಸಂಪೂರ್ಣ ಕುಟುಂಬವೇ ಬಹುವಾಗಿ ಸುಧಾರಿಸುವುದು.

ಚಿತ್ರಣದ ಇನ್ನೊಂದು ತುದಿಯಲ್ಲಿರುವ, ಉತ್ತರ ಪ್ರದೇಶಕ್ಕೆ ಸಂಬಂಧಿಸಿ ಭೌತಿಕ ಜೀವನ ಗುಣಮಟ್ಟ ಸೂಚಿಯು ಮೂರು ಜನಗಣತಿ ವರ್ಷಗಳಲ್ಲಿ ಅತೀ ಕಡಿಮೆಯಿದ್ದು ಈ ರಾಜ್ಯದಲ್ಲಿ ಶಿಶುಮರಣ ಸಂಖ್ಯೆ ಮಾತ್ರ ಹೆಚ್ಚಿರುವುದು (ಈ ನಿಟ್ಟಿನಲ್ಲಾದ ವೈಶಿಷ್ಟ್ಯವನ್ನು ಉತ್ತರಪ್ರದೇಶದೊಂದಿಗೆ ೧೯೯೧ರಲ್ಲಿ ಒರಿಸ್ಸಾನೂ ಹಂಚಿಕೊಂಡಿದೆ).

ನಿರೀಕ್ಷಿತ ಜೀವನಾವಧಿಗೆ ಸಂಬಂಧಿಸಿದಂತೆಯೂ ಕೂಡ ಉತ್ತರಪ್ರದೇಶವು ಇತರ ರಾಜ್ಯಗಳಿಗಿಂತ ಅತ್ಯಂತ ಅನಾನುಕೂಲಕರ ಸ್ಥಿತಿಯಲ್ಲಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ ಕನಿಷ್ಠ ಸಾಕ್ಷರತೆಯ ರಾಜ್ಯ ರಾಜಸ್ಥಾನಕ್ಕೆ ಹೋಲಿಸಿದಾಗ, ಉತ್ತರಪ್ರದೇಶವು ಸ್ವಲ್ಪಮಟ್ಟಿನ ಉತ್ತಮ ಸಾಧನೆಯನ್ನು ತೋರಿಸಿದರೂ, ನಾವು ರಾಷ್ಟ್ರದ ಮತ್ತು ಉತ್ತರಪ್ರದೇಶದ ಸಾಕ್ಷರತಾ ಸಾಧನೆಯಲ್ಲಿ ಅಗಾಧಗೊಳ್ಳುತ್ತಿರುವ ವ್ಯತ್ಯಾಸವನ್ನು ತುಲನೆ ಮಾಡಿದಾಗ ರಾಷ್ಟ್ರ ಮಟ್ಟದಲ್ಲಿ ಉತ್ತರಪ್ರದೇಶದ ಸ್ಥಾನವು ಕುಸಿಯುತ್ತದೆ.

ವ್ಯತ್ಯಾಸವು ೧೯೭೧, ೧೯೮೧ ಮತ್ತು ೧೯೮೭ರಲ್ಲಿ ಅನುಕ್ರಮವಾಗಿ ೭.೬೯, ೯.೦೭ ಮತ್ತು ೧೦.೪೦ ಆಗಿದೆ. ಇಂತಹ ಒಂದು ಸ್ಥಿತಿಯನ್ನು ಪಡೆಯಲು ದೊಡ್ಡ ಪ್ರಮಾಣದ ವಯಸ್ಕರ ಸಾಕ್ಷರತೆಯಂತಹ ಕಾರ್ಯಕ್ರಮವನ್ನು ಹಾಕಿಕೊಳ್ಳದಿದ್ದರೆ ಬಹುಶಃ ಸಾಕ್ಷರತೆಯ ದಿಸೆಯಲ್ಲಿಯೂ ಸಹ ಈ ರಾಜ್ಯವು ಕೆಳಗಿನ ಹಂತಕ್ಕೆ ಹೋಗುವುದು.

## ೬. ಭೌತಿಕ ಜೀವನ ಗುಣಮಟ್ಟ ಸೂಚಿ ಮತ್ತು ಯೋಜನಾ ಯತ್ನಗಳ ನಡುವೆ ಸಂಬಂಧ

ಭೌತಿಕ ಜೀವನ ಗುಣಮಟ್ಟ ಸೂಚಿ ನಡುವಳಿಕೆಯನ್ನು ಯೋಜನಾ ವೆಚ್ಚಗಳ ಕೋನದಿಂದ ವಿವರಿಸಲು ಒಂದು ಯತ್ನ ಮಾಡಿದ್ದು, ವಿಶೇಷವಾಗಿ ಸಾಮಾಜಿಕ ಸೇವೆಗಳಾದ ಶಿಕ್ಷಣ, ಪೌಷ್ಟಿಕತೆ ಇತ್ಯಾದಿಗಳಿಗೆ ಯೋಜನಾ ಖರ್ಚಿನ ಬಗ್ಗೆ ಪರೀಕ್ಷಿಸಲಾಗಿತ್ತು ಇಂತಹ ಖರ್ಚುಗಳು ಹಾಗೂ ಸಮಾಜದ ಮೇಲಿನ ಅದರ ಪ್ರಭಾವದ ನಡುವೆ ಸ್ವಲ್ಪ ಮಟ್ಟಿನ ಓನ್ನಡಿಗೆಯಿದ್ದು, ರಾಜ್ಯಗಳಿಗೆ ಸಂಬಂಧಿಸಿದ ೧೯೮೮-೮೯ರಲ್ಲಿ ಯೋಜನಾ ವೆಚ್ಚಗಳನ್ನು ಮತ್ತು ೧೯೯೧ರ ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ನಾವು ತುಲನೆ ಮಾಡಿದ್ದೇವು. ಶಿಕ್ಷಣ, ವೈದ್ಯಕೀಯ ಮತ್ತು ಕುಟುಂಬ ಕಲ್ಯಾಣ ಹಾಗೂ ಪೌಷ್ಟಿಕತೆ ಮತ್ತು ಸಮಾಜ ಕಲ್ಯಾಣದ ವಲಯ ಸಂಬಂಧಿತ ಯೋಜನಾ ಖರ್ಚುಗಳನ್ನು ತುಲನೆ ಮಾಡಲಾಯಿತು. (ಕೋಷ್ಟಕ ೩). ಇತರೆಲ್ಲ ರಾಜ್ಯಗಳಿಗೆ ಹೋಲಿಸಿದಾಗ ಕೇರಳ ರಾಜ್ಯವು ಶಿಕ್ಷಣಕ್ಕೆ ಯೋಜನೆಯಲ್ಲಿ ಹೆಚ್ಚಿನ ಪಾಲು ಅಂದರೆ ೨೮%ರಷ್ಟು ಇರಿಸಿದ್ದು, ಇದು ಭಾರತದ ಸರಾಸರಿ ೨೦%, ಇದಕ್ಕಿಂತ ಜಾಸ್ತಿಯಿರುವುದು. ಇದು ನಿರೀಕ್ಷಿತ ಸಾಲಿನಲ್ಲಿ ನಡೆದರೆ ಅತೀ ಹೆಚ್ಚಿನ ಯೋಜನಾ ನಿಗದಿಯಲ್ಲಿ ಎರಡನೆಯದು ಬಿಹಾರ, ಈ ರಾಜ್ಯವು ಶಿಕ್ಷಣಕ್ಕೆ ೨೬.೩%ವನ್ನು ತೆಗೆದಿರಿಸಿರುವುದು ಅನಿರೀಕ್ಷಿತ ವಿಷಯವಾಗಿದೆ. ಆದರೆ ಕೇರಳವು ಗರಿಷ್ಠ ಸಾಕ್ಷರತೆಯನ್ನು ಸಾಧಿಸಿದ್ದರೆ ಬಿಹಾರದಲ್ಲಿ ಸಾಕ್ಷರತಾ ಪ್ರಮಾಣವು ೧೯೯೧ರಲ್ಲಿ ಅತೀ ಕನಿಷ್ಠವಲ್ಲಿದೆ (ಕೋಷ್ಟಕ ೧). ತಮಿಳುನಾಡಿನಲ್ಲಿ ಶಿಕ್ಷಣ ಯೋಜನಾ ನಿಗದಿಯು ಭಾರತದ ಸರಾಸರಿಯಷ್ಟೆ ಇದ್ದರೂ ಸಾಕ್ಷರತೆಯ ಪ್ರಮಾಣ ಮಾತ್ರ ಬಹಳಷ್ಟು ಹೆಚ್ಚಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಶಿಕ್ಷಣಕ್ಕೆ ಯೋಜನಾ ನಿಗದಿಯು ೨೧.೩% ಆಗಿದ್ದು ಇದು ಇತರ ಹಲವು ರಾಜ್ಯಗಳಿಗಿಂತ ಹೆಚ್ಚಾಗಿರುವುದು, ಆದರೆ ಮಹಾರಾಷ್ಟ್ರ, ಪಂಜಾಬ್ ಮತ್ತು ತಮಿಳುನಾಡಿನಲ್ಲಿ ಸಾಕ್ಷರತೆಯು ಇಲ್ಲಿಗಿಂತ ಹೆಚ್ಚಿರುವುದು. ಇದರಿಂದ ತಿಳಿಯುವುದೇನೆಂದರೆ ಎಲ್ಲಿ ಪ್ರೌಢ ಶಿಕ್ಷಣ ಮತ್ತು ಉನ್ನತ ಶಿಕ್ಷಣಕ್ಕೆ ಪ್ರಾಥಮಿಕ ಶಿಕ್ಷಣಕ್ಕಿಂತನೂ ಹೆಚ್ಚಿನ ಯೋಜನಾ ನಿಗದಿಯಾಗುವುದೋ ಅಲ್ಲಿ ಇಂತಹ ಗೋಜಲಾಗುವುದು. ವಿವರ ಅಂಕಿ ಅಂಶಗಳು ದೊರೆಯದ ಕಾರಣ ಇದನ್ನು ಪರೀಕ್ಷಿಸಲಾಗಿಲ್ಲ.

ವೈದ್ಯಕೀಯ ಮತ್ತು ಕುಟುಂಬ ಕಲ್ಯಾಣಕ್ಕೆ ಸಂಬಂಧಿಸಿ, ತುಲನಾತ್ಮಕವಾಗಿ ಕೇರಳದ ಪಾಲು ಗರಿಷ್ಠವಿರುವುದು (೭.೩%) ಅದೇ, ಭಾರತದ ಸರಾಸರಿ ೬.೩% ಇದ್ದು, ಇದು ಪಶ್ಚಿಮ ಬಂಗಾಳ ಮತ್ತು ಉತ್ತರಪ್ರದೇಶ ರಾಜ್ಯಗಳ ಪಾಲಿಗಿಂತಲೂ ಕಡಿಮೆಯಾಗಿರುವುದು. ವೈದ್ಯಕೀಯ ಸವಲತ್ತಿಗೆ ತೆಗೆದಿರಿಸಿದ ಪ್ರತಿ ಶತವು ಕರ್ನಾಟಕ ಮತ್ತು ತಮಿಳುನಾಡಿನಲ್ಲಿ ಸಮನಾಗಿರುವುದು. ವೈದ್ಯಕೀಯ ವೆಚ್ಚಗಳ ಮೇಲೆಯೇ ಶಿಶುಮರಣ ಸಂಖ್ಯೆಯು ಅವಲಂಬಿತವಾಗಿದ್ದು, ಇದು ಕರ್ನಾಟಕವಲ್ಲಿ ೬೯ರಿಂದ

೭೫ಕ್ಕೆ ಏರಿದ್ದು, ತಮಿಳುನಾಡಿನಲ್ಲಿ ೯೧ರಿಂದ ೭೬ಕ್ಕೆ ಇಳಿದಿದೆ. ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಆರೋಗ್ಯ ಸೇವೆಗೆ ಹೆಚ್ಚಿನ ಮಹತ್ವ ನೀಡಬೇಕಾಗಿದೆ. ಬಹುಶಃ ವೈದ್ಯಕೀಯ ಮತ್ತು ಪೌಷ್ಟಿಕತೆಯ ಹೆಚ್ಚಿನ ಯೋಜನಾ ನಿಗದಿಯ ಜಂಟಿ ಪ್ರಭಾವವು ತಮಿಳುನಾಡಿನಲ್ಲಿ ಇಂತಹ ವ್ಯತ್ಯಾಸವನ್ನು ತಂದಿರಬಹುದು.

ಪೌಷ್ಟಿಕತೆಗೆ ಸಂಬಂಧಿಸಿ ಎಲ್ಲಾ ರಾಜ್ಯಗಳು, ತಮಿಳುನಾಡು ೨.೧%, ಗುಜರಾತ್ ೨.೦%, ಮತ್ತು ಕರ್ನಾಟಕ ೧.೮%ವನ್ನು ಹೊರತುಪಡಿಸಿ ಒಟ್ಟಾರೆ ಯೋಜನಾ ನಿಗದಿಯಲ್ಲಿ ೧%ಕ್ಕಿಂತನೂ ಕಡಿಮೆ ವೆಚ್ಚ ಮಾಡಿರುವುದು. ನಿರ್ಧಿಷ್ಟವಾಗಿ ಕೇರಳ ರಾಜ್ಯವನ್ನು ಗಮನಿಸಿದಾಗ ೨% ವೆಚ್ಚದೊಂದಿಗೆ. ಶಿಶುಮರಣ ಸಂಖ್ಯೆ ಮತ್ತು ನಿರೀಕ್ಷಿತ ಜೀವನಾವಧಿಯ ಬಗ್ಗೆ ಗಮನಾರ್ಹ ಪ್ರಗತಿಯನ್ನು ಸಾಧಿಸಿರುವುದು. ಬಿಹಾರ ಮತ್ತು ಉತ್ತರಪ್ರದೇಶಗಳು ಪೌಷ್ಟಿಕತೆಯ ಬಗ್ಗೆ ಏನು ಖರ್ಚು ಮಾಡದ ರಾಜ್ಯಗಳಾಗಿ ನಿಲ್ಲುತ್ತವೆ. ಸಾಮಾಜಿಕ ರಕ್ಷಣೆ ಮತ್ತು ಕಲ್ಯಾಣದ ಪಾಲಿನ ವೆಚ್ಚದ ಬಗ್ಗೆ ಹರಿಯಾಣ ರಾಜ್ಯವು ೭.೨ದೊಂದಿಗೆ ಮೊದಲನೆಯದಾಗಿ ನಿಲ್ಲುತ್ತದೆ. ಅದೇ ಒಟ್ಟಾರೆ ಭಾರತದ ಅಂಕೆಯು ೧.೮% ಆಗಿದ್ದು, ಇತರ ರಾಜ್ಯಗಳಲ್ಲಿ ತಮಿಳುನಾಡು ೪.೨% ದೊಂದಿಗೆ ಎರಡನೆಯ ಗರಿಷ್ಠ ಪಾಲಿನದಾಗಿ ನಿಲ್ಲುತ್ತದೆ.

## ೭. ತಲಾ ಯೋಜನಾ ಅಂದಾಜು ವೆಚ್ಚ

ಜನಸಂಖ್ಯೆಗೆ ಸರಿಯಾದ ಒತ್ತುಕೊಡದ ಒಟ್ಟಾರೆ ಖರ್ಚು ಕೆಲವೊಮ್ಮೆ ಹಾದಿ ತಪ್ಪಿಸುತ್ತದೆ. ಉತ್ತರಪ್ರದೇಶದ ಪಾಲಿಗಂತೂ ಇದು ನಿಜ ಸಂಗತಿಯಾಗಿದೆ. ಒಟ್ಟು ಹಾಗೂ ವಲಯ ಸಂಬಂಧಿತ, ತಲಾ ಯೋಜನಾ ಅಂದಾಜು ವೆಚ್ಚ ಒಂದು ಸ್ಪಷ್ಟ ಚಿತ್ರಣವನ್ನು ನೀಡುತ್ತದೆ. ಶಿಕ್ಷಣಕ್ಕೆ ಪಂಜಾಬ ತಲಾ ಅತಿ ಹೆಚ್ಚಿನ (ರೂ. ೨೦೦) ಖರ್ಚು ಮಾಡುತ್ತಿದ್ದು, ಕೇರಳವು ಸ್ವಲ್ಪದರಲ್ಲೇ ಕಡಿಮೆ ಸಂಖ್ಯೆಯೊಂದಿಗೆ (ರೂ. ೧೯೮) ಅನುಸರಿಸುತ್ತಿದೆ, ಹಾಗೇ ಇತರ ರಾಜ್ಯಗಳಿಗೆ ಹೋಲಿಸಿದಾಗ ಹರಿಯಾಣವು ಅತಿ ಹೆಚ್ಚಿನ ತಲಾ (ರೂ. ೬೭) ಸಾಮಾಜಿಕ ರಕ್ಷಣೆ ಮತ್ತು ಕಲ್ಯಾಣಕ್ಕೆ ಖರ್ಚು ಮಾಡುತ್ತಿದೆ (ಕೋಷ್ಟಕ ೪ನ್ನು ಉಲ್ಲೇಖಿಸಿ). ಸಾಮಾಜಿಕ ರಕ್ಷಣೆಯ ಮೇಲೆ ಎರಡನೆಯ ಅತೀ ಹೆಚ್ಚಿನ ಖರ್ಚು ಮಾಡುವವರಲ್ಲಿ ತಮಿಳುನಾಡು ಇದ್ದರೂ ಇದು ಮಾಡುವ ಖರ್ಚು ಬಹಳಷ್ಟು ಕಡಿಮೆ ಅಂದರೆ ರೂ. ೨೮ ಆಗಿರುತ್ತದೆ. ಅದೇ ರಾಷ್ಟ್ರೀಯ ಸರಾಸರಿ ರೂ. ೧೨/- ಆಗಿರುತ್ತದೆ. ಅಂತಹ ಅತೀ ಹೆಚ್ಚಿನ ಖರ್ಚನ್ನು ಸಾಮಾಜಿಕ ರಕ್ಷಣೆ ಹಾಗೂ ಕಲ್ಯಾಣದ ಮೇಲೆ ಮಾಡಿದ್ದರೂ, ಭೌತಿಕ ಜೀವನ ಗುಣಮಟ್ಟ ಸೂಚಿಯಲ್ಲಿ ಹರಿಯಾಣದ ಸ್ಥಾನವು ೧೯೭೧ರಲ್ಲಿ ಎರಡನೇ ಸ್ಥಾನದಲ್ಲಿರುವುದು, ೧೯೯೧ರಲ್ಲಿ ಆರನೇ ಸ್ಥಾನಕ್ಕೆ ಇಳಿದಿದೆ. ಸಮಾಜ ಕಲ್ಯಾಣದ ಮೇಲೆ ಅತೀ ಕಡಿಮೆ ಖರ್ಚು ಮಾಡುತ್ತಿರುವ ರಾಜ್ಯಗಳಾದ ಕೇರಳ, ಪಂಜಾಬ್

ಮತ್ತು ಮಹಾರಾಷ್ಟ್ರಗಳು, ೧೯೯೧ರಲ್ಲಿ ಭೌತಿಕ ಜೀವನ ಗುಣಮಟ್ಟ ಸೂಚಿಯಲ್ಲಿ ಮೊದಲನೇ, ಎರಡನೇ ಮತ್ತು ಮೂರನೇ ಸ್ಥಾನಗಳನ್ನು ಗಳಿಸಿವೆ. ಸೂಕ್ತ ವಿವರಣೆಗಳು ದೊರಕಿದಲ್ಲಿ ಸಮಾಜ ಕಲ್ಯಾಣಕ್ಕೆ ಹರಿಯಾಣವು ಖರ್ಚು ಮಾಡಿರುವ ರೀತಿಯನ್ನು ವಿಶ್ಲೇಷಿಸುವುದು ಕುತೂಹಲಕಾರಿಯಾಗಬಹುದು.

ಜೀವನ ಗುಣಮಟ್ಟದ ಮೇಲೆ ನೇರ ಪರಿಣಾಮ ಬೀರಬಹುದು ಎಂದು ಭಾವಿಸಿದರೂ, ಸಮಾಜ ಕಲ್ಯಾಣದ ಮೇಲಾದ ಖರ್ಚುಗಳಿಗೆ ಹೋಲಿಸಿದಾಗ, ಶಿಕ್ಷಣ ವಲಯದ ಮೇಲೆ ನಡೆದ ಯೋಜಿತ ಯತ್ನಗಳು ಜೀವನ ಗುಣಮಟ್ಟದಲ್ಲಿ ಗಣನೀಯ ಬದಲಾವಣೆಗೆ ಪ್ರಭಾವ ಬೀರುವಂತೆ ಕಾಣುತ್ತದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ, ಪೌಷ್ಟಿಕತೆ ಮತ್ತು ಸಮಾಜಕಲ್ಯಾಣ ಅತೀ ಹೆಚ್ಚು ಅಂದಾಜು ತಲಾ ವೆಚ್ಚವು, ಮೊದಲನೆಯದಕ್ಕೆ ಸಂಬಂಧಿಸಿ ಗುಜರಾತ್ ಮತ್ತು ತಮಿಳುನಾಡಿನ ಬಳಿಕ ಹಾಗೂ ಎರಡನೆಯದಕ್ಕೆ ಸಂಬಂಧಿಸಿ ಹರಿಯಾಣ ಮತ್ತು ತಮಿಳುನಾಡಿನ ಬಳಿಕ ಮೂರನೇ ಸ್ಥಾನದಲ್ಲಿದೆ.

ಭೌತಿಕ ಜೀವನ ಗುಣಮಟ್ಟ ಸೂಚಿ ಸ್ಥಾನಗಳ ಬಗ್ಗೆ ಅತೀ ಸಮೀಪದ ಪೈಪೋಟಿಯಲ್ಲಿರುವ ಕರ್ನಾಟಕ ಮತ್ತು ತಮಿಳುನಾಡಿನ ಸಾಧನೆಗಳನ್ನು ಹೋಲಿಸಿದಾಗ ಒಂದು ಕುತೂಹಲಕಾರಿ ಪ್ರಶ್ನೆ ಉದ್ಭವಿಸುತ್ತದೆ. ಒಟ್ಟಾರೆ ತಲಾ ಅಂದಾಜು ವೆಚ್ಚ ಹಾಗೂ ವಲಯಗಳ ತಲಾ ಅಂದಾಜು ವೆಚ್ಚಗಳಿಗೆ ಸಂಬಂಧಿಸಿ ತಮಿಳುನಾಡು ಅತೀ ಹೆಚ್ಚು ಅಂದಾಜು ವೆಚ್ಚ ಹಾಕಿದೆ. ಆದರೆ, ಕರ್ನಾಟಕ ಭೌತಿಕ ಜೀವನ ಗುಣಮಟ್ಟ ಸೂಚಿಯು, ತಮಿಳುನಾಡಿಗಿಂತ ಉತ್ತಮ (ಸ್ವಲ್ಪ ಮಟ್ಟಿನ) ಸಾಧನೆಯನ್ನು ತೋರಿಸಿದೆ. ೧೯೯೧ರಲ್ಲಿ ನಿರೀಕ್ಷಿತ ಜೀವನಾವಧಿಯು ಕರ್ನಾಟಕಕ್ಕೆ ಅನುಕೂಲಕರವಾಗಿದ್ದರೆ, ಸಾಕ್ಷರತೆಯು ತಮಿಳುನಾಡಿನಲ್ಲಿ ಹೆಚ್ಚು ಇರುವುದು ಹಾಗೂ ಶಿಶುಮರಣ ಸಂಖ್ಯೆಯ ದರವು ಎರಡು ರಾಜ್ಯಗಳಲ್ಲಿ ಸಮನಾಗಿರುವುದರ ಬಗ್ಗೆ ನಾವು ಈ ಹಿಂದೆನೇ ನೋಡಿರುತ್ತೇವೆ. ಅನುಬಂಧ ೧ರ ಕೋಷ್ಟಕ ೧ನ್ನು ವೀಕ್ಷಿಸಿದಾಗ ಭೌತಿಕ ಜೀವನ ಗುಣಮಟ್ಟ ಸೂಚಿ ಹಾಗೂ ಸಾಕ್ಷರತೆಗಿಂತ, ಭೌತಿಕ ಜೀವನ ಗುಣಮಟ್ಟ ಸೂಚಿ ಮತ್ತು ನಿರೀಕ್ಷಿತ ಜೀವನಾವಧಿಯ ಸಹಸಂಬಂಧವು ಯಾವಾಗಲೂ ಜಾಸ್ತಿಯಿರುವುದು, ಇದು ಮೇಲಿನ ಸ್ಥಿತಿಯನ್ನು ವಿವರಿಸುವುದು.

**೮. ಭೌತಿಕ ಜೀವನ ಗುಣಮಟ್ಟ ಸೂಚಿ, ತಲಾ ಆದಾಯ ಮತ್ತು ಬಡತನದ ನಡುವಿನ ಸಂಬಂಧ**

ತಲಾ ಆದಾಯ ಹಾಗೂ ಬಡತನದ, ಭೌತಿಕ ಜೀವನ ಗುಣಮಟ್ಟ ಸೂಚಿಯೊಂದಿಗಿನ ಸಂಬಂಧವನ್ನು ಪರೀಕ್ಷಿಸಲು ರಾಜ್ಯವಾರು ಅಂಕಿ ಸಂಖ್ಯೆಗಳನ್ನು

ತೆಗೆದುಕೊಳ್ಳಲಾಯಿತು (ಕೋಷ್ಟಕ ೫). ಸಹಸಶಕ್ತದ ಸಹಸಬಂಧವು ನಿರೀಕ್ಷಿತ ಧನಾತ್ಮಕ ದಿಕ್ಕಿನಲ್ಲಿದ್ದರೂ, ಪರಿಮಾಣದಲ್ಲಿ ಅವು ಬಹು ಕಡಿಮೆಯಿದ್ದವು. ಉದಾಹರಣೆಗೆ, ಭೌತಿಕ ಜೀವನ ಗುಣಮಟ್ಟ ಸೂಚಿ ಹಾಗೂ ತಲಾ ಆದಾಯದ ಸಹ ಸಶಕ್ತ ಸಹಸಂಬಂಧವು ೧೯೭೧, ೧೯೮೧ ಮತ್ತು ೧೯೯೧ರಲ್ಲಿ ಅನುಕ್ರಮವಾಗಿ ೦.೩೨೪, ೦.೩೨೨ ಮತ್ತು ೦.೪೧೬ ಆಗಿರುತ್ತದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಕೂಡಾ, ಭೌತಿಕ ಜೀವನ ಗುಣಮಟ್ಟ ಸೂಚಿ ಮತ್ತು ತಲಾ ಆದಾಯದ ಸಹಸಂಬಂಧವು ಕಡಿಮೆಯಿದೆ. ಅಂದರೆ ಅವೆರಡರ ನಡುವೆ ಸಹ ಸಂಬಂಧವಿಲ್ಲ ಎಂಬ ಸ್ಪಷ್ಟ ವಿಷಯ ಗಮನಿಸಲು ಕುತೂಹಲ ಪೂರ್ಣ. ಸಾಮಾಜಿಕ ಮತ್ತು ಆರ್ಥಿಕ ನೀತಿಯ ಒಟ್ಟಾರೆ ಪರಿಣಾಮವನ್ನು ಭೌತಿಕ ಜೀವನ ಗುಣಮಟ್ಟ ಸೂಚಿಯು ಹಿಡಿದಿರುತ್ತದೆ ಎಂದು ವಾದಿಸಬಹುದು ಹಾಗೂ ಅದರೊಂದಿಗೆ ಖಾಸಗಿ ಆದಾಯ ಯಾವ ರೀತಿ ಖರ್ಚಾಯಿತು ಎನ್ನುವುದು ಕೂಡಾ. ಬೇರೆ ಶಬ್ದಗಳಲ್ಲಿ ಹೇಳುವುದಾದರೆ, ಕಲ್ಯಾಣ ಪ್ರಭಾವಗಳನ್ನು ಕೇವಲ ಆದಾಯದ ಅಂಕಿ ಸಂಖ್ಯೆಗಳಿಂದ ಅಳಿಯುವುದು ಅಸಾಧ್ಯ.

ಭೌತಿಕ ಜೀವನ ಗುಣಮಟ್ಟ ಸೂಚಿ ಹಾಗೂ ಬಡತನದ ದರ ನಡುವಿನ ಸಹಸಂಬಂಧವು ಮೇಲಿನ ತೀರ್ಪನ್ನು ಪ್ರತಿಪಾದಿಸುತ್ತದೆ. ನಮ್ಮಲ್ಲಿ ೧೯೭೨-೭೮ ಮತ್ತು ೧೯೮೩-೮೪ನೇ ವರ್ಷದ ಬಡತನದ ದರದ ಮೇಲಿನ ಅಂಕಿ ಸಂಖ್ಯೆಗಳಿವೆ. ಮೊದಲನೇ ಮತ್ತು ಮೂರನೇ ಸರಣಿಯನ್ನು ೧೯೭೧ ಮತ್ತು ೧೯೮೧ನೇ ಭೌತಿಕ ಗುಣಮಟ್ಟ ಸೂಚಿಗೆ ಅನುಕ್ರಮವಾಗಿ ಹೋಲಿಸಿದಾಗ ಮತ್ತು ಸಹಸಂಬಂಧ ಸಹಸಶಕ್ತಗಳು ೦.೧೯೫ ಮತ್ತು ೦.೨೧೪ ಎಂದು ಕಂಡುಬಂದಿವೆ. ಇಲ್ಲಿ ಮತ್ತೆ ಸಹಸಶಕ್ತಗಳ ಚಿಹ್ನೆಯು ನಿರೀಕ್ಷಿಸಿದಂತೆ ಇದ್ದರೂ ಪರಿಮಾಣ ಮಾತ್ರ ಬಹಳ ಚಿಕ್ಕದು. ಆರ್ಥಿಕ ಉನ್ನತಿ ಅಥವಾ ಬಡತನ ಭೌತಿಕ ಜೀವನ ಗುಣಮಟ್ಟದ ಮೇಲೆ ಹಿಡಿದಿಟ್ಟ ಭೌತಿಕ ಜೀವನ ಗುಣಮಟ್ಟ ಸೂಚಿಗೆ ಹೆಚ್ಚೇನೂ ಪ್ರಭಾವ ಬೀರಿರುವಂತೆ ಕಾಣುವುದಿಲ್ಲ.

### ೯. ಸಹಸಂಬಂಧ ಸಹಸಶಕ್ತತೆಯ ಸ್ಥಾನ

ಯೋಜನಾ ತಲಾ ಅಂದಾಜು ವೆಚ್ಚಗಳಿಗೆ ಅನುಗುಣವಾಗಿ ರಾಜ್ಯಗಳ ಸ್ಥಾನ ಪಟ್ಟಿ ಮಾಡಿದರೆ, ಒಟ್ಟಾರೆ ಹಾಗೂ ಆಯ್ದ ವಲಯಕ್ಕನುಗುಣವಾಗಿ ೧೯೯೧ರಲ್ಲಿ ಭೌತಿಕ ಜೀವನ ಗುಣಮಟ್ಟ ಸೂಚಿ ಲೆಕ್ಕಾಚಾರದಲ್ಲಿ ಅವುಗಳ ಸ್ಥಾನಗಳು, ಹೆಚ್ಚಾಗಿ ಶಿಕ್ಷಣ ಮತ್ತು ಆರೋಗ್ಯದ ಖರ್ಚಿನ ಮೇಲೆ ಸ್ಥಾನಗಳನ್ನು ಲೆಕ್ಕ ಹಾಕಿದರೆ ಅದು ಭೌತಿಕ ಜೀವನ ಗುಣಮಟ್ಟ ಸೂಚಿ ಸ್ಥಾನಗಳ (ಕೋಷ್ಟಕ ೬) ಕೊನೆಯ ಅಂಕಣಕ್ಕೆ ಬಹು ಸಮೀಪದಿಂದ ಸಂಬಂಧಿಸಿದೆ. ಪೌಷ್ಟಿಕತೆಗೆ ಸಂಬಂಧಿಸಿ ಸ್ಥಾನಗಳ ಸಹ ಸಂಬಂಧ ಸಹಸಶಕ್ತತೆಯು ಆಶ್ಚರ್ಯಕರವಾಗಿ ಬಹಳ ಕೆಳಮಟ್ಟದಲ್ಲಿದೆ. (ಕೆಳಗಿನ ಕೋಷ್ಟಕ ನೋಡಿರಿ).

ಸಹಸಂಬಂಧ ಸಹಸಕ್ತತೆಯ ಸ್ಥಾನ:

| | | | |
|---|---|---|---|
| ಒಟ್ಟು ಯೋಜನೆ | VS | ಭೌತಿಕ ಜೀವನ ಗುಣಮಟ್ಟ ಸೂಚಿ | : ೦.೭೬೯ |
| ಶಿಕ್ಷಣ | VS | ಭೌತಿಕ ಜೀವನ ಗುಣಮಟ್ಟ ಸೂಚಿ | : ೦.೮೭೪ |
| ಆರೋಗ್ಯ | VS | ಭೌತಿಕ ಜೀವನ ಗುಣಮಟ್ಟ ಸೂಚಿ | : ೦.೮೧೧ |
| ಪೌಷ್ಟಿಕತೆ | VS | ಭೌತಿಕ ಜೀವನ ಗುಣಮಟ್ಟ ಸೂಚಿ | : ೦.೦೮೪ |
| ಸಮಾಜಕಲ್ಯಾಣ | VS | ಭೌತಿಕ ಜೀವನ ಗುಣಮಟ್ಟ ಸೂಚಿ | : ೦.೬೭೮ |

ಪೌಷ್ಟಿಕತೆಯ ಮೇಲಿನ ಯೋಜನಾ ಅಂದಾಜು ವೆಚ್ಚವನ್ನು ಹೆಚ್ಚಿಸುವುದರಿಂದ ಜೀವನದ ಗುಣಮಟ್ಟ ಸುಧಾರಿಸುವುದಿಲ್ಲ ಎಂದು ಇದರಿಂದ ವಿಧಿತವಾಗುವುದು. ನಿಜವೆಂದರೆ, ಪೌಷ್ಟಿಕತೆಯ ಅಂದಾಜು ವೆಚ್ಚಕ್ಕೆ ಸಂಬಂಧಿಸಿ ಮೊದಲಿನ ನಾಲ್ಕು ರಾಜ್ಯಗಳು, ಗುಜರಾತ್, ತಮಿಳುನಾಡು, ಕರ್ನಾಟಕ ಮತ್ತು ಹರಿಯಾಣ, ಭೌತಿಕ ಜೀವನ ಗುಣಮಟ್ಟ ಸೂಚಿಯಲ್ಲಿ ಕೆಳಗಿನ ಸ್ಥಾನಗಳನ್ನು ದಾಖಲಿಸಿವೆ, ಅವುಗಳು ಕ್ರಮವಾಗಿ ೮ನೇ, ೫ನೇ, ೪ನೇ ಮತ್ತು ೬ನೇಯದು.

ಸಮಾಜ ಕಲ್ಯಾಣದ ಅಂದಾಜು ವೆಚ್ಚ ಸ್ಥಾನಗಳಿಗೆ ಸಂಬಂಧಿಸಿ, ಭೌತಿಕ ಜೀವನ ಗುಣಮಟ್ಟ ಸೂಚಿಯ ಸ್ಥಾನದೊಂದಿಗಿನ ಅದರ ಸಹಸಂಬಂಧ ಪೌಷ್ಟಿಕತೆಗಿಂತ ಉತ್ತಮವಾಗಿರುವುದು. ಆದರೆ ಶಿಕ್ಷಣ ಮತ್ತು ಆರೋಗ್ಯದ ಸಹಸಂಬಂಧದ ಸಹಸಕ್ತಕ್ಕಿಂತ ಕಡಿಮೆಯಾಗಿರುವುದು.

ಅಂತಿಮ ವಿಶ್ಲೇಷಣೆಯಲ್ಲಿ ಜೀವನ ಗುಣಮಟ್ಟವನ್ನು ಉತ್ತಮಗೊಳಿಸಲು ಹೆಣಗುವ ರಾಜ್ಯಗಳು, ಮೊದಲನೆಯದಾಗಿ ಶಿಕ್ಷಣ ಹಾಗೂ ಎರಡನೆಯದಾಗಿ ವೈದ್ಯಕೀಯ ಮತ್ತು ಆರೋಗ್ಯ ಸೌಲಭ್ಯಗಳ ಮೇಲಿನ ಯೋಜನಾ ಅಂದಾಜು ವೆಚ್ಚವನ್ನು ಹೆಚ್ಚಿಸಬೇಕು. ಆದ್ಯತೆಯ ಪಟ್ಟಿಯಲ್ಲಿ ಮೂರನೆಯದಾಗಿ ಸಮಾಜ ಕಲ್ಯಾಣ ಹಾಗೂ ಸಾಮಾಜಿಕ ರಕ್ಷಣಾ ಕಾರ್ಯಕ್ರಮದ ವೆಚ್ಚಗಳು ಬರುವುವು. ಪೌಷ್ಟಿಕತೆಯ ಕಾರ್ಯಕ್ರಮಗಳನ್ನು ಹೆಚ್ಚಿಸಿಂತ ಜೀವನ ಗುಣಮಟ್ಟವನ್ನು ಉತ್ತಮಗೊಳಿಸುವ ಗುರಿ ಸಾಧಿಸುವಲ್ಲಿ ಎಂದು ಕರೆಯಬಹುದು.

## ೧೦. ಕರ್ನಾಟಕ ರಾಜ್ಯದ ಸ್ಥಾನ

ರಾಜ್ಯದ ಭೌತಿಕ ಜೀವನ ಗುಣಮಟ್ಟ ಸೂಚಿ ಮೌಲ್ಯದಲ್ಲಿ ಕೇರಳ ೯೩.೫ ಪಂಜಾಬ್ ೬೭.೩, ಮಹಾರಾಷ್ಟ್ರ ೬೪.೩ ಬಳಿಕ, ಕರ್ನಾಟಕ ರಾಜ್ಯವು ನಾಲ್ಕನೇ ಸ್ಥಾನದಲ್ಲಿದೆ. ಆದಾಗ್ಯೂ ತನ್ನ ಅತೀ ಸಮೀಪದ ಪೂರ್ವಾಧಿಕಾರಿ ಮಹಾರಾಷ್ಟ್ರಕ್ಕಿಂತ ಮೌಲ್ಯವು ಬಹಳಷ್ಟು ಕಡಿಮೆಯಿರುವುದು ಹಾಗೂ ತಮಿಳುನಾಡಿನ ೫೯.೦ ಮೌಲ್ಯದ ಅತೀ ಸಮೀಪದಲ್ಲಿರುವುದು ಹಾಗೂ ತಮಿಳುನಾಡು ಭೌತಿಕ ಜೀವನ

ಗುಣಮಟ್ಟ ಸೂಚಿ ಪಟ್ಟಿಯಲ್ಲಿ ಐದನೇ ಸ್ಥಾನದಲ್ಲಿದೆ. ಹೀಗೆ, ಕರ್ನಾಟಕ ರಾಜ್ಯವು ಈ ಸಾಮಾಜಿಕ ಸೂಚಿಗಳ ಸುಧಾರಣೆಗೆ ತೀವ್ರವಾದ ಹೆಜ್ಜೆಗಳನ್ನು ತೆಗೆದುಕೊಳ್ಳದಿದ್ದರೆ, ಸಮೀಪದ ಭವಿಷ್ಯತ್ತಿನಲ್ಲಿ ತನ್ನ ನಾಲ್ಕನೆಯ ಸ್ಥಾನವನ್ನು ತಮಿಳುನಾಡಿಗೆ ಕಳೆದುಕೊಳ್ಳುವ ಸಾಧ್ಯತೆಗಳಿವೆ.

ಅಂಗಗಳಿಗೆ ಬರುವುದಾದರೆ (ಕೋಷ್ಟಕ ೧) ಇತ್ತೀಚಿನ ಜನಗಣತಿ ೧೯೯೧ರಂತೆ, ಕರ್ನಾಟಕವು ಸಾಕ್ಷರತೆ ದರದಲ್ಲಿ ಐದನೇ ಸ್ಥಾನವನ್ನು ಹೊಂದಿದ್ದು, ೧೯೮೧ರಲ್ಲಿ ೩೮.೫%ದಿಂದ ೧೯೯೧ರಲ್ಲಿ ಶೇ. ೫೬ಕ್ಕೆ ದರವನ್ನು ದೊಡ್ಡದಾಗಿ ಸುಧಾರಿಸಿಕೊಂಡಿರುತ್ತದೆ. ಆದರೆ ಶಿಶುಮರಣದ ದರದ ಬಗ್ಗೆ ೧೯೮೧ರಲ್ಲಿ ೬೯ರಿಂದ ೧೯೯೧ರಲ್ಲಿ ೭೫ಕ್ಕೆ ಕೆಲವು ಕಾರಣಕ್ಕೆ ಹೆಚ್ಚಳಗೊಂಡಿದ್ದು, ಇದು ಭೌತಿಕ ಜೀವನ ಗುಣಮಟ್ಟ ಸೂಚಿಯ ಮೇಲೆ ಕೆಟ್ಟದಾಗಿ ಪ್ರತಿಫಲಿತಗೊಂಡಿದೆ. ಇಂತಹ ಹೆಚ್ಚಳ ಕಂಡುಬರುವ ಏಕ ಮಾತ್ರ ಇನ್ನೊಂದು ರಾಜ್ಯ ಆಂಧ್ರಪ್ರದೇಶ.

ನಿರೀಕ್ಷಿತ ಜೀವನಾವಧಿಯಲ್ಲಿ ಕರ್ನಾಟಕವು ಮೂರನೇ ಸ್ಥಾನದಲ್ಲಿ ನಿಲ್ಲುತ್ತದೆ. ಕೇರಳ (೭೧ ವರ್ಷಗಳು) ಪಂಜಾಬ್ (೬೬ ವರ್ಷಗಳು)ನ ಬಳಿಕ ಕರ್ನಾಟಕವು ೬೧.೬ ವರ್ಷಕ್ಕೆ ನಿರೀಕ್ಷಿತ ಜೀವನಾವಧಿಯೊಂದಿಗೆ ಮಹಾರಾಷ್ಟ್ರದೊಂದಿಗೆ ಮೂರನೇ ಸ್ಥಾನವನ್ನು ಹಂಚಿಕೊಂಡಿದೆ.

ಮೇಲಿನವುಗಳಿಂದ ನಿಚ್ಚಳವಾಗುವುದೇನೆಂದರೆ, ೧೯೯೧ರಲ್ಲಿ ಹೆಚ್ಚಿನ ಭೌತಿಕ ಜೀವನ ಗುಣಮಟ್ಟ ಸೂಚಿಯನ್ನು ಕರ್ನಾಟಕವು ಸಾಧಿಸಬಹುದಿತ್ತು ಶಿಶು ಮರಣ ದರದ ೧೯೮೧ಕ್ಕೆ ಹೋಲಿಸಿದಾಗ ೧೯೯೧ರಲ್ಲಿ ಆದ ಹೆಚ್ಚಳವೊಂದು ಆಗಿರದಿದ್ದರೆ.

## ೧೧. ಜಿಲ್ಲಾವಾರು (ಕರ್ನಾಟಕ) ಭೌತಿಕ ಜೀವನ ಗುಣಮಟ್ಟ ಸೂಚಿಯ ಒಂದು ವಿಶ್ಲೇಷಣೆ

ಜಿಲ್ಲಾ ಮಟ್ಟದಲ್ಲಿ ಅಂಕಿ ಸಂಖ್ಯೆ ಸೂಕ್ಷ್ಮತೆಯ ವಿಶ್ಲೇಷಣೆ ನೀಡಲು ಇರುವ ಪ್ರಮುಖ ತೊಂದರೆಯೆಂದರೆ ಅಂಕಿ ಸಂಖ್ಯೆಗಳ ಕೊರತೆ. ಎರಡನೆಯ ಮತ್ತು ಬಹು ಗಂಭೀರವಾದ ವಿಷಯವೆಂದರೆ ಜಿಲ್ಲಾ ಮಟ್ಟದಲ್ಲಿ ಏಕರೂಪದ ಹಾಗೂ ನಂಬಲರ್ಹ ಅಂಕಿ ಸಂಖ್ಯೆಗಳು ದೊರಕುವುದು ಖಂಡಿತವಿಲ್ಲ. ನಿಜವೆಂದರೆ, ಮೂರು ಶಿಶುಮರಣ ದರದ ಅಂಕಿ ಅಂಶಗಳು ಕರ್ನಾಟಕದಲ್ಲಿ ದೊರಕಲಿಲ್ಲ. ಕೇವಲ ಸಾಕ್ಷರತಾ ದರ ಮತ್ತು ತಲಾ ಆದಾಯದ ಮೇಲೆ ಮಾತ್ರ ಜಿಲ್ಲಾವಾರು ಅಂಕಿ ಅಂಶಗಳನ್ನು ಪಡೆಯಲಾಯಿತು. ಈ ಹಿಂದೆ, ತಲಾ ಆದಾಯವನ್ನು ಸಮಾಜ ಕಲ್ಯಾಣದ ಮಾಪನಕ್ಕೆ ಗಣನೆಗೆ ತೆಗೆದುಕೊಳ್ಳಬಾರದು ಎಂದು ವಾದಿಸಿದ್ದರೂ, ಇತರ ಅಂಗಗಳ ಮೇಲೆ ಅಂಕಿ ಅಂಶಗಳ ಕೊರತೆಯಿಂದಾಗಿ ಇದನ್ನು ಸಾಕ್ಷರತಾ ದರದೊಂದಿಗೆ ಇಲ್ಲಿ ಕರ್ನಾಟಕದ ಜಿಲ್ಲೆಗಳಿಗೆ ತುಲನೆ ಮಾಡಲಾಗಿದೆ.

ಜಿಲ್ಲೆಗಳಲ್ಲಿ ಬೆಂಗಳೂರು ನಗರ ೭೮.೮೭%, ಒಟ್ಟಾರೆ, ದಕ್ಷಿಣ ಕನ್ನಡ ಜಿಲ್ಲೆಯ ಸಾಕ್ಷರತಾ ದರದಲ್ಲಿ ೧೯೯೧ರಲ್ಲಿ ೭೫.೮೬% ಅಗ್ರಸ್ಥಾನದಲ್ಲಿದ್ದು, ಕೊಡಗು ೬೮.೩೫% ಅದನ್ನು ಹಿಂಬಾಲಿಸಿದೆ. ಆದರೆ ತಲಾ ಆದಾಯದಲ್ಲಿ (ಪ್ರಸಕ್ತ ದರಗಳಲ್ಲಿ) ಕೊಡಗಿಗೆ ಉನ್ನತ ಸಂಖ್ಯೆಯಿದೆ. (ರೂ. ೧೦, ೪೭೭), ಇತರವು ಹೀಗಿವೆ, ಬೆಂಗಳೂರು ರೂ. ೭,೧೬೪, ಚಿಕ್ಕಮಗಳೂರು ರೂ. ೬,೬೫೫ ಮತ್ತು ದಕ್ಷಿಣ ಕನ್ನಡ ರೂ. ೫.೬೮೨ ಹೀಗೆ, ಆರ್ಥಿಕ ಉನ್ನತಿ ಹಾಗೂ ಸಾಕ್ಷರತೆಯ ನಡುವಿನ ಸಂಬಂಧ ಬಹಳ ಅಲ್ಪ ನಿಜವೆನ್ನಬೇಕಾಗಿದೆ. ಈ ರೀತಿಯ ಪರಿಸಮಾಪ್ತಿಯನ್ನು ರಾಯಚೂರು ಜಿಲ್ಲೆಯ ನಿಜ ಸಂಗತಿಯಿಂದಾಗಿ ತೆಗೆದುಕೊಳ್ಳಲಾಗಿದೆ. ಇಲ್ಲಿ ಸಾಕ್ಷರತೆ ದರವು ೩೫.೯೬% ಇದ್ದು ತಲಾ ಆದಾಯದಲ್ಲಿ ರೂ. ೪,೫೩೮, ಇದು ಏಳನೆಯ ಸ್ಥಾನದಲ್ಲಿ ನಿಲ್ಲುತ್ತದೆ.

### ೧೨. ಉಪಸಂಹಾರ ಹಾಗೂ ಶಿಫಾರಸುಗಳು

ಈವರೆಗಿನ ವಾದಗಳಿಂದ ಈ ಕೆಳಗಿನ ಮುಖ್ಯ ತೀರ್ಮಾನಗಳು ಉದ್ಭವಿಸುತ್ತವೆ:

೧. ಭಾರತದ ರಾಜ್ಯಗಳ ಪೈಕಿ ಕೇರಳದ ಭೌತಿಕ ಜೀವನ ಗುಣಮಟ್ಟ ಸೂಚಿಯು ಅಭಿವೃದ್ಧಿ ಹೊಂದಿದ ದೇಶಗಳಿಗೆ ಹೋಲಿಸಬಹುದಾಗಿದೆ, ಇಂತಹ ಅಪೂರ್ವ ಸಾಧನೆಗೆ ಕಾರಣಗಳನ್ನು ಆ ರಾಜ್ಯದ ಅದ್ವಿತೀಯ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಥಿಕ ಗುಣಲಕ್ಷಣಗಳಿಂದ ಎಂದು ಛಾಪಿಸಲಾಗಿದೆ.

೨. ಪೌಷ್ಟಿಕತೆಯ ಮೇಲಿನ ಅಂದಾಜು ಯೋಜನಾ ವೆಚ್ಚ ಹಾಗೂ ಭೌತಿಕ ಜೀವನ ಗುಣಮಟ್ಟ ಸೂಚಿಯ ನಡುವಿನ ಸಂಬಂಧವು ಬಹಳಷ್ಟು ದುರ್ಬಲವಾಗಿರುವುದು ಹಾಗೂ ಶಿಕ್ಷಣದಿ ಮೇಲಿನ ಅಂದಾಜು ವೆಚ್ಚ ಹಾಗೂ ಭೌತಿಕ ಜೀವನ ಗುಣಮಟ್ಟ ಸೂಚಿಯ ನಡುವಿನ ಸಂಬಂಧವು ಬಹಳಷ್ಟು ಪ್ರಬಲವಾಗಿರುವುದು ಕಾಣುತ್ತದೆ. ಹೀಗಾಗಿ ಶಿಕ್ಷಣದ ಮೇಲಿನ ಯೋಜನಾ ಯತ್ನಗಳು ವಿಶೇಷತಃ ಪ್ರಾಥಮಿಕ ಹಂತದಲ್ಲಿ ಪೌಷ್ಟಿಕತೆ ಕಾರ್ಯಕ್ರಮಗಳ ಮೇಲಿನ ಯೋಜನಾ ಅಂದಾಜು ವೆಚ್ಚಕ್ಕೆ ಹೋಲಿಸಿದಾಗ, ಜೀವನ ಗುಣಮಟ್ಟದಲ್ಲಿ ಹೆಚ್ಚಿನ ಸುಧಾರಣೆಗಳಿಗೆ ಎಡೆ ಮಾಡುವುದು.

೩. ಬಹುವ್ಯಾಪಿಯಾಗಿ ನಂಬಿರುವ ತೀರ್ಮಾನ ಏನೆಂದರೆ ಆರ್ಥಿಕ ಉನ್ನತಿ ಅಥವಾ ಬಡತನವು ಜೀವನ ಗುಣಮಟ್ಟವನ್ನು ನಿರ್ಧರಿಸುತ್ತದೆ ಎಂಬ ಮಾತಿಗೆ ಈ ವ್ಯತಿರಿಕ್ತವಾಗಿ ತಲಾ ಆದಾಯ ಹಾಗೂ ಬಡತನದ ದರವು ಭೌತಿಕ ಜೀವನ ಗುಣಮಟ್ಟ ಸೂಚಿಯೊಂದಿಗೆ ಬಹು ದುರ್ಬಲವಾಗಿ ಸಂಬಂಧಿಸಿದೆ.

೪. ಕರ್ನಾಟಕದಲ್ಲಿ ೧೯೮೧ಕ್ಕೆ ಹೋಲಿಸಿದಾಗ ೧೯೯೧ರಲ್ಲಿ ಶಿಶುಮರಣ

೪. **ಗೃಹರಹಿತರ ಪ್ರಮಾಣ:** ಗೃಹರಹಿತತೆಯೂ ಸಹ ಬಡತನದ ಚಿಹ್ನೆಯಾಗಿದೆ. ಬಡತನದ ಸಮಸ್ಯೆಯನ್ನು ಚೆನ್ನಾಗಿ ಅರಿಯಲು ನಾವು ಸಂಪೂರ್ಣ ಬಡತನ ಹಾಗೂ ತುಲನಾತ್ಮಕ ಬಡತನಗಳ ಮಧ್ಯೆ ಇರುವ ವ್ಯತ್ಯಾಸವನ್ನು ಗುರುತಿಸಬೇಕು. ಒಬ್ಬ ವ್ಯಕ್ತಿಯ ಸಮಗ್ರ ಬಡತನವೆಂದರೆ ಆತನ ವರಮಾನ ಅಥವಾ ಬಳಕೆಯ ವೆಚ್ಚವು ಕನಿಷ್ಟ ಜೀವನಾಧಾರಕ್ಕಿಂತಲೂ ಕಡಿಮೆ ಮಟ್ಟದಲ್ಲಿ ಜೀವಿಸಿರುವಷ್ಟು ಅಲ್ಪ ಪರಮಾಣದ್ದಾಗಿರುತ್ತದೆ. ಈ ಸಮಗ್ರ ಬಡತನದ ಸ್ಥಿತಿಯಿಂದಾಗಿ ಆತನು ತನ್ನ ಆರೋಗ್ಯ ಹಾಗೂ ದಕ್ಷತೆಯನ್ನು ಕಾಪಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಅಲ್ಲದೆ ವಾಸ್ತವವಾಗಿ ಆತನು ಹಸಿದು ಕಂಗಾಲಾಗಿರಬಹುದು. ಇದಕ್ಕೆ ಬದಲಾಗಿ ಸಾಪೇಕ್ಷ ಬಡತನವು ಆರ್ಥಿಕ ಅಸಮತೋಲನತೆಯ ಜೊತೆಯಲ್ಲಿ ಮಿಳಿತಗೊಂಡಿರುವುದು. ಅವರು ಆರ್ಥಿಕವಾಗಿ ಹಿಂದುಳಿದ ಗುಂಪಿನಲ್ಲಿದ್ದು, ಮುಂದುವರೆದ ಗುಂಪಿಗಿಂತ ವರಮಾದಲ್ಲಿ ಕಡಿಮೆ ಪಾಲನ್ನು ಪಡೆದಿರುತ್ತಾರೆ. ನಾವು ಬಡತನದ ಬಗ್ಗೆ ಮಾತನಾಡುವಾಗಲೆಲ್ಲ ಅದು ಸಮಗ್ರ ಬಡತನಕ್ಕೆ ಸಂಬಂಧಿಸಿದ್ದುದಾಗಿರುತ್ತದೆ. ಶ್ರೀಮಂತ ದೇಶಗಳು ಸಮಗ್ರ ಬಡತನವನ್ನು ತೊಡೆದು ಹಾಕುವಲ್ಲಿ ಯಶಸ್ವಿಯಾಗಿದ್ದಾಗ್ಯೂ ತುಲನಾತ್ಮಕ ಬಡತನ ಅಲ್ಲಿ ಇದ್ದೇ ಇರುವುದಕ್ಕೆ ಅಲ್ಲಿನ ಆದಾಯದಲ್ಲಾಗಿರುವ ಅಸಮಾನ ಹಂಚಿಕೆಯು ಕಾರಣವಾಗಿರುತ್ತದೆ.

ಭಾರತದ ಏಳನೆಯ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ, ಗ್ರಾಮೀಣ ಪ್ರದೇಶದ ಪ್ರತಿವ್ಯಕ್ತಿಗೆ, ಪ್ರತಿ ದಿವಸಕ್ಕೆ, ೨೪೦೦ ಕ್ಯಾಲೋರಿಗಳಷ್ಟು ಪುಷ್ಠಿಕರ ಆಹಾರ, ನಗರ ಪ್ರದೇಶದ ಪ್ರತಿ ವ್ಯಕ್ತಿಗೆ ೨೧೦೦ ಕ್ಯಾಲೋರಿಗಳಷ್ಟು ಪುಷ್ಠಿಕರ ಆಹಾರದ ಅವಶ್ಯಕತೆಯ ಆಧಾರವನ್ನಾಗಿಸಿ ಕೊಂಡು ಬಡತನದ ರೇಖೆಯನ್ನು ಗುರುತಿಸಲು ಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಿರುವುದನ್ನು ಪುನರುಚ್ಚರಿಸಲಾಗಿದೆ. ಆರ್ಥಿಕ ಮಾನದಿಂದ ಹೇಳುವುದಾದರೆ, ಬಡತನದ ರೇಖೆಯನ್ನು ೧೯೮೪-೮೫ನೇ ಸಾಲಿನ ಬೆಲೆಗಳಲ್ಲಿನ ಖರ್ಚು ವೆಚ್ಚವನ್ನಾಧರಿಸಿ ನಿರ್ಧರಿಸಲಾಗಿದೆ. ಈ ಆಧಾರದಂತೆ, ಗ್ರಾಮೀಣ ಪ್ರದೇಶದಲ್ಲಿ ಮಾಸಿಕ ತಲಾವಾರು ಗ್ರಾಹಕ ವೆಚ್ಚವು ರೂ. ೧೦೭.೦೦ (ಅಂದರೆ ರೂ. ೧೨೮೪.೦೦ ಪ್ರತಿ ವರ್ಷಕ್ಕೆ) ನಗರ ಪ್ರದೇಶಗಳಲ್ಲಿನ ಮಾಸಿಕ ತಲಾವಾರು ಗ್ರಾಹಕ ವೆಚ್ಚವು ರೂ. ೧೨೨.೦೦ (ಅಂದರೆ ರೂ. ೧೪೬೪.೦೦ ಪ್ರತಿ ವರ್ಷಕ್ಕೆ) ಬಡತನದ ರೇಖೆಯೆಂದು ಅಂದಾಜು ಮಾಡಲಾಗಿದೆ. ೫ ಜನರ ಕುಟುಂಬದ ಬಡತನದ ರೇಖೆಯ ಮಟ್ಟ ೬೪೦೦.೦೦ ರೂ. ವಾರ್ಷಿಕ ವರಮಾನ ಉಳ್ಳದ್ದು ಗ್ರಾಮೀಣ ಪ್ರದೇಶದಲ್ಲಾಗಿದ್ದರೆ, ರೂ. ೭೨೦೦.೦೦ ನಗರ ಪ್ರದೇಶದ್ದಾಗಿರುತ್ತದೆ. ೮ನೇ ಪಂಚವಾರ್ಷಿಕ ಯೋಜನೆಯಲ್ಲಿ ೧೯೯೧-೯೨ನೇ ಸಾಲಿನ ಬೆಲೆಗಳಲ್ಲಿ ರೂ. ೧೧೮೦೦.೦೦ನ್ನು ಕುಟುಂಬದ ವಾರ್ಷಿಕ ವರಮಾನವನ್ನಾಗಿಟ್ಟುಕೊಂಡು ಬಡತನ ರೇಖೆಯನ್ನು ಗುರುತಿಸಲು ಆಧಾರವಾಗಿಟ್ಟುಕೊಳ್ಳಲಾಗಿದೆ.

ಬಡತನದ ಪ್ರಸಕ್ತ ನಿಯಕಾಂಕಗಳು (parameters) ಮತ್ತು ವಿಮರ್ಶೆಗಳು

೧. **ಪುಷ್ಠಿಕರ ಆಹಾರವನ್ನಾಧರಿಸಿದ ಬಡತನದ ರೇಖೆಯ ಬಗ್ಗೆ ವಿಮರ್ಶೆಗಳು:** ಈ ಸಂಬಂಧದಲ್ಲಿ ಕೆಳಕಂಡ ವಿಮರ್ಶೆಗಳನ್ನು ಗಮನಿಸಬಹುದು.

ಅ) ಕ್ಯಾಲೋರಿಗಳ ಸೇವನೆಯು ಪುಷ್ಠಿಕರ ಆಹಾರ ಮಟ್ಟವನ್ನು ಅಳೆಯುತ್ತದೆಯೇ ಹೊರತು ಬಡತನವನ್ನು ಅಳೆಯುವುದಿಲ್ಲ.

ಆ) ಕ್ಯಾಲೋರಿ ಸೇವನೆಯ ಮಟ್ಟದ ನಿರ್ಣಯ ಹೇಗೆ?

ಇ) ವೈವಿಧ್ಯತೆಯಿಂದ ಕೂಡಿದ ಜನ ಸಮುದಾಯದ ಕ್ಯಾಲೋರಿಗಳ ಅವಶ್ಯಕತೆಯು ವಯಸ್ಸು, ಲಿಂಗ ಮತ್ತು ಚಟುವಟಿಕೆಗಳನ್ನು ಅವಲಂಬಿಸಿ ವ್ಯತ್ಯಾಸ ಹೊಂದುತ್ತದೆ.

ಈ) ಸದ್ಯದ ವ್ಯಾಖ್ಯೆಯ ಕನಿಷ್ಠ ಅವಶ್ಯಕತೆಗಳನ್ನು ಮಾತ್ರ ಆಧರಿಸಿದೆಯೇ ಹೊರತು ಸಮತೋಲನ ಆಹಾರದ ಅವಶ್ಯಕತೆಗಳನ್ನು ಆಧರಿಸಿಲ್ಲ.

೨. ಬಡತನವನ್ನು, ಒಬ್ಬ ವ್ಯಕ್ತಿಯು ಕನಿಷ್ಠ ಒಪ್ಪತವಾದ ಬದುಕನ್ನು ಸಾಗಿಸಲು ಮೂಲ ಸಾಮರ್ಥ್ಯಗಳ ಅಭಾವದ ದೃಷ್ಠಿಯಿಂದ ನೋಡಬೇಕು. ಅಂದರೆ ಸಾಕಾಗುವಷ್ಟು ಪುಷ್ಠಿಕರ ಆಹಾರ, ರೋಗ ರುಜಿನ ಮತ್ತು ಮರಣಗಳನ್ನು ತಡೆಗಟ್ಟುವ ಸಾಧ್ಯತೆ, ಬಟ್ಟೆ ಮತ್ತು ವಸತಿ ಇವುಗಳ ಆಧಾರದಿಂದ ಬಡತನವನ್ನು ಅಳೆಯಬೇಕು.

೩. ಬಡತನವನ್ನು ತಗ್ಗಿಸುವುದನ್ನು ರಾಷ್ಟ್ರೀಯ ಉತ್ಪನ್ನದ ಬೆಳವಣಿಗೆಯ ದೃಷ್ಠಿಯಿಂದ ನೋಡಬಾರದಲ್ಲದೆ, ಜನರಿಗೆ ತಮ್ಮ ಅಭಿವೃದ್ಧಿ ಸಾಮರ್ಥ್ಯವನ್ನು ಸ್ಪಷ್ಟವಾಗಿ ಗ್ರಹಿಸುವಂತೆ ಶಿಕ್ಷಣ, ಪ್ರಾಥಮಿಕ ಆರೋಗ್ಯ ಸೇವೆ, ಶುದ್ಧವಾದ ಕುಡಿಯುವ ನೀರು, ವಸತಿ ಮತ್ತು ಪೌಷ್ಠಿಕ ಆಹಾರದ ಪ್ರಾಪ್ತಿಯ ಭರವಸೆಯನ್ನು ನೀಡುವುದರ ಮೂಲಕ ಕನಿಷ್ಠವಾದ ಒಪ್ಪಿತವಾದ ಜೀವನವನ್ನು ನಡೆಸಲು ಅವರಿಗೆ ಸಾಮರ್ಥ್ಯವನ್ನು ಉತ್ತಮಗೊಳಿಸುವ ದೃಷ್ಠಿಯಿಂದ ನೋಡಬೇಕು.

## ನಿರುದ್ಯೋಗ

ಈಗ ನಿರುದ್ಯೋಗ ಸಾಮಾನ್ಯ ಜ್ಞಾನ, ಅವುಗಳ ವಿಧಗಳು ಹಾಗೂ ಅವುಗಳ ವಿವರಣೆಗಳ ಬಗ್ಗೆ ಈ ಮುಂದೆ ಚರ್ಚಿಸಲಾಗಿದೆ.

ನಿರುದ್ಯೋಗವು, ಕೆಲಸ ಮಾಡಲು ಸಿದ್ಧರಿರುವ ದೈಹಿಕವಾಗಿ ಸಮರ್ಥರಾದ ವ್ಯಕ್ತಿಗಳಿಗೆ ನಿರಂತರವಾಗಿ ವರಮಾನ ನೀಡುವ ಕೆಲಸಗಳಲ್ಲದ ಸ್ಥಿತಿಯನ್ನು ವರ್ಣಿಸುತ್ತದೆ. ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ನಿರುದ್ಯೋಗಿಯೆ, ಅರೆ ಉದ್ಯೋಗಿಯೆ ಎಂಬುದನ್ನು ನಿರ್ಧರಿಸಲು ನಾಲ್ಕು ಮಾನದಂಡಗಳನ್ನು ಪರಿಗಣಿಸುತ್ತಾರೆ.

ಅ. **ಕಾಲದ ಮಾನ ದಂಡ:** ಒಂದು ವರ್ಷದಲ್ಲಿ ಒಂದು ಗೊತ್ತಾದ ಅವಧಿಗೆ ಅಂದರೆ ಗಂಟೆ ಅಥವಾ ದಿನಗಳಿಗಿಂತ ಕಡಿಮೆ ಅವಧಿಗೆ ಒಬ್ಬ ವ್ಯಕ್ತಿಯು ಸಂಪಾದನಾ ನಿರತನಾಗಿರುವುದು.

ಆ. **ವರಮಾನದ ಮಾನ ದಂಡ:** ಕನಿಷ್ಠ ನಿರೀಕ್ಷಿತ ವರಮಾನಕ್ಕಿಂತ ಕಡಿಮೆ ವರಮಾನವನ್ನು ಪ್ರತಿ ವರ್ಷ ಒಬ್ಬ ವ್ಯಕ್ತಿಯು ಗಳಿಸುವುದು.

ಇ. **ಇಚ್ಛಾ ಸ್ವಾತಂತ್ರ್ಯದ ಮಾನದಂಡ:** ಒಬ್ಬ ವ್ಯಕ್ತಿಯು ಸದ್ಯ ಒಪ್ಪಿತವಾದ ಕೆಲಸಕ್ಕಿಂತ ಹೆಚ್ಚಿಗೆ ಕೆಲಸ ಮಾಡಲು ಇಚ್ಛಿಸುವುದು.

ಈ. **ಉತ್ಪಾದಕತೆಯ ಮಾನದಂಡ:** ಒಂದು ಸಂಸ್ಥೆಯ ಉತ್ಪನ್ನಕ್ಕೆ ಒಬ್ಬ ವ್ಯಕ್ತಿಯ ಕೊಡುಗೆಯು ಒಂದು ಗೊತ್ತಾದ ಉತ್ಪತ್ತಿ ಮಟ್ಟಕ್ಕಿಂತ ಕಡಿಮೆ ಇದ್ದು, ಉದ್ಯೋಗದಿಂದ ತೆಗೆದುಹಾಕುವ ಸಾಧ್ಯತೆ.

**ನಿರುದ್ಯೋಗದ ವಿಧಗಳು**

೧. **ಘರ್ಷಣಾ (Friction) ನಿರುದ್ಯೋಗ:** ಈ ನಿರುದ್ಯೋಗವು ಕಾರ್ಮಿಕ ಶಕ್ತಿಯ ನಿಶ್ಚಲತೆ, ಕೆಲಸದ ಕಾಲಿಕ ಸ್ವಭಾವ, ಕಚ್ಚಾ ವಸ್ತುಗಳ ತಾತ್ಕಾಲಿಕ ಕೊರತೆಗಳು, ಯಂತ್ರೋಪಕರಣಗಳು ಕೆಟ್ಟುಹೋಗುವುದು, ಉದ್ಯೋಗಾವಕಾಶಗಳ ಅಜ್ಞಾನ ಇದೇ ಮುಂತಾದ ಕಾರಣಗಳಿಂದ ಉಂಟಾಗುತ್ತದೆ.

೨. **ಚಕ್ರೀಯ ನಿರುದ್ಯೋಗ:** ಈ ಬಗೆಯ ನಿರುದ್ಯೋಗವು ವ್ಯಾಪಾರದ ಹಿಂಜರಿತದ ಘಟ್ಟದಲ್ಲಿ ಆಗುವ ಬದಲಾವಣೆಗಳಿಂದಾಗಿ ಈ ಹೆಸರನ್ನು ಪಡೆದಿರುತ್ತದೆ.

೩. **ತಾಂತ್ರಿಕ ನಿರುದ್ಯೋಗ:** ಉತ್ಪಾದನಾ ತಂತ್ರಗಳಲ್ಲಿ ಆಗುವ ಬದಲಾವಣೆಗಳ ಫಲವಾಗಿ ಈ ಬಗೆಯ ನಿರುದ್ಯೋಗವು ಉಂಟಾಗುತ್ತದೆ. ಅಲ್ಲದೆ, ಕಾರ್ಮಿಕ ಶಕ್ತಿಯ ಬದಲಾಗಿ ಬಂಡವಾಳ ಕೇಂದ್ರೀಕೃತ ಉತ್ಪಾದನೆಯು ಸಹ ಈ ಬಗೆಯ ನಿರುದ್ಯೋಗಕ್ಕೆ ಕಾರಣವಾಗಿದೆ.

೪. **ಕಾಲಿಕ ನಿರುದ್ಯೋಗ:** ಋತುಮಾನದ ಸ್ಥಿತಿಗಳು ಅಥವಾ ರೀತಿ ನೀತಿ ಇತ್ಯಾದಿಗಳಲ್ಲಿ ಆಗುವ ಬದಲಾವಣೆಗಳಿಂದ ಒಂದು ಕ್ಷೇತ್ರದಲ್ಲಿನ ಚಟುವಟಿಕೆಗಳಲ್ಲಿ ಕಾಲಿಕ ವ್ಯತ್ಯಾಸಗಳ ಮೂಲಕ ಈ ನಿರುದ್ಯೋಗವು ಸಂಬಂಧಿಸುತ್ತದೆ.

೫. **ಉತ್ಪಾದನಾ ಅಂಶಗಳ ಸ್ವರೂಪದಿಂದಾಗಿ ನಿರುದ್ಯೋಗ:** ಉತ್ಪಾದನೆಯ ಅಂಶಗಳಾದ ಭೂಮಿ, ಕಾರ್ಮಿಕ ಶಕ್ತಿ ಮತ್ತು ಬಂಡವಾಳ ಇವುಗಳು ಸಾಕಷ್ಟು ಪ್ರಮಾಣದಲ್ಲಿ ಲಭ್ಯವಿಲ್ಲದೇ ಉಂಟಾಗುವ ನಿರುದ್ಯೋಗ ಅಥವಾ ಅರೆ ಉದ್ಯೋಗ,

ಭೂಮಿ, ಬಂಡವಾಳ ಅಥವಾ ನೈಪುಣ್ಯತೆಯ ಕೊರತೆ ಹಾಗೂ ಕಾರ್ಮಿಕ ಕ್ಷೇತ್ರದಲ್ಲಿನ ಅಸಮತೋಲನದಿಂದಾಗಿ ನಿರುದ್ಯೋಗ ಉಂಟಾಗುತ್ತದೆ.

೬. **ಕೃತಕ ನಿರುದ್ಯೋಗ:** ಈ ನಿರುದ್ಯೋಗವು ಯಾರಿಗೂ ಪ್ರತ್ಯಕ್ಷವಾಗಿ ಗೋಚರವಾಗದೆ, ಅಗೋಚರವಾಗಿರುತ್ತದೆ. ಉದಾಹರಣೆಗೆ, ಭಾರತದ ಹಳ್ಳಿಗಳಲ್ಲಿ ನಿರುದ್ಯೋಗವು ಈ ಬಗೆಯಲ್ಲಿ ಇರುತ್ತದೆ. ಏಕೆಂದರೆ, ಮೇಲು ನೋಟಕ್ಕೆ ಜನರು ಕೃಷಿ ಚಟುವಟಿಕೆಗಳಲ್ಲಿ ನಿರತರಾಗಿರುವಂತೆ ಗೋಚರಿಸುತ್ತದೆ. ಆದರೆ ಅಂತಹ ಉದ್ಯೋಗವು ಕೆಲಸವನ್ನು ಹಂಚಿಕೊಳ್ಳುವ ಒಂದು ಸಾಧನವಾಗಿರುತ್ತದೆ. ಅಂದರೆ, ಇರುವ ಕೆಲಸವನ್ನು ಅದು ಎಷ್ಟೇ ದೊಡ್ಡದಿದ್ದರೂ, ಹಲವಾರು ಕೆಲಸಗಾರರು ಹಂಚಿಕೊಂಡಿರುತ್ತಾರೆ. ಅಂತಹ ಸ್ಥಿತಿಯಲ್ಲಿ ಹಲವಾರು ಕೆಲಸಗಾರರನ್ನು ಕೈಬಿಟ್ಟರೂ ಸಹ ಅದೇ ಕೆಲಸವನ್ನು ಉಳಿದ ಜನ ಮಾಡಿ ಮುಗಿಸಬಹುದಾಗಿರುತ್ತದೆ. ಹೀಗಾಗಿ, ಸದ್ಯದ ಉತ್ಪಾದನಾ ಮಟ್ಟವನ್ನು ಕಾಪಾಡಿಕೊಳ್ಳಲು ಅಲ್ಲಿ ನಿರತರಾಗಿರುವ ಎಲ್ಲಾ ಕೆಲಸಗಾರರ ಅವಶ್ಯಕತೆ ಇರುವುದಿಲ್ಲ. ಒಟ್ಟು ಉತ್ಪಾದನೆಗೆ ಅಂತಹ ಕೆಲಸಗಾರರ ಕೊಡುಗೆ ಈ ದೃಷ್ಟಿಯಿಂದ ಶೂನ್ಯ ಅಥವಾ ಶೂನ್ಯಕ್ಕೆ ಸಮೀಪ. ವಾಸ್ತವವಾಗಿ, ಭಾರತದ ಹೊಲಗದ್ದೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೆಲಸಗಾರರು ನಿರತರಾಗಿರುವುದರಿಂದ ಕೃಷಿ ಚಟುವಟಿಕೆಗಳಿಗೆ ಅಡಚಣೆ ಉಂಟುಮಾಡುವುದಲ್ಲದೆ, ತನ್ಮೂಲಕ ಉತ್ಪಾದನೆಯನ್ನು ತಗ್ಗಿಸುತ್ತದೆ. ಇಲ್ಲಿ ಕೃತಕ ನಿರುದ್ಯೋಗ ಮತ್ತು ಪೂರ್ಣ ಉದ್ಯೋಗದ ಮಧ್ಯೆ ಇರುವ ವ್ಯತ್ಯಾಸವನ್ನು ಗುರುತಿಸುವುದು ಉಪಯುಕ್ತ. ಪ್ರತಿಯೋರ್ವ ಸಮರ್ಥ ಮತ್ತು ಕೆಲಸ ಮಾಡಲು ಸಿದ್ದನಿರುವ ವ್ಯಕ್ತಿಗೆ ಕೆಲಸ ದೊರಕುವ ಸ್ಥಿತಿ ಅಥವಾ ಕೆಲಸ ಮಾಡಲು ಸಿದ್ದನಿರುವ ಪ್ರತಿಯೊಬ್ಬ ವ್ಯಕ್ತಿಗೆ ತನ್ನ ರೀತಿಯ ಕೆಲಸಕ್ಕೆ ಸದ್ಯ ಚಾಲ್ತಿ ಇರುವ ಮಜೂರಿ ದರದಲ್ಲಿ ಉದ್ಯೋಗ ನಿರತನಾಗಿರುವ ಸ್ಥಿತಿಯನ್ನು ಪೂರ್ಣ ಉದ್ಯೋಗ ಎನ್ನುತ್ತಾರೆ. ಆದರೆ, ಅದೇ ಕೃತಕ ನಿರುದ್ಯೋಗದ ಸಂಬಂಧದಲ್ಲಿ ಪ್ರತಿಯೋರ್ವನೂ ಮೇಲ್ನೋಟಕ್ಕೆ ಪೂರ್ಣ ಉದ್ಯೋಗ ನಿರತನಾಗಿರುವಂತೆ ತೋರುತ್ತದೆ. ಇದು ನಿಗದಿತ ಕೆಲಸವನ್ನು ಅವಶ್ಯಕತೆಗಿಂತ ಹೆಚ್ಚು ಮಂದಿ ಹಂಚಿಕೊಳ್ಳುವುದರಿಂದಾಗಿ ಸಂಭವಿಸುತ್ತದೆ. ಹೀಗಾಗಿ, ಯಾರೂ ಕೆಲಸವಿಲ್ಲದೆ ಇಲ್ಲ ಎಂಬಂತೆ ತೋರುತ್ತದೆ. ಆದರೆ ಕೆಲಸಗಾರರು ತಮ್ಮ ಪೂರ್ಣ ಸಾಮರ್ಥ್ಯಕ್ಕೆ ತಕ್ಕಂತೆ ಕೆಲಸ ಮಾಡದೇ ಇರುವುದರಿಂದ ಇಂತಹ ಸಂದರ್ಭಗಳಲ್ಲಿ ಪೂರ್ಣ ಉದ್ಯೋಗ ಇರುವುದಿಲ್ಲ ಎಂಬ ಅಂಶವನ್ನು ಅದು ಮರೆಮಾಡುತ್ತದೆ. ಇದಕ್ಕೆ ಪ್ರಮಾಣವೆಂದರೆ ಈ ಕಾರ್ಮಿಕ ಶಕ್ತಿಯ ಒಂದು ಭಾಗವನ್ನು ಕೈಬಿಟ್ಟರೂ ಉತ್ಪಾದನೆ ಕಡಿಮೆಯಾಗುವುದಿಲ್ಲ ಎಂಬುದೇ ಆಗಿದೆ. ಅದೇ ಪೂರ್ಣ ಉದ್ಯೋಗದ ಸಂಬಂಧದಲ್ಲಿ ಎಲ್ಲಾ ಕೆಲಸಗಾರರು ಸಮಾನವಾಗಿ ಉತ್ಪಾದನೆಗೆ ತಮ್ಮ ಕೊಡುಗೆಯನ್ನು ನೀಡುವುದರಿಂದ, ಈ ಕಾರ್ಮಿಕ ಶಕ್ತಿಯ ಒಂದು ಭಾಗವನ್ನು ಕೈಬಿಡುವುದರಿಂದ ಉತ್ಪಾದನೆಯು ಕುಂಠಿತಗೊಳ್ಳುತ್ತದೆ.

**ಅರೆ ಉದ್ಯೋಗ:** ಉದ್ಯೋಗ ನಿರತರಾದ ಜನರು ಒಟ್ಟು ಉತ್ಪಾದನೆಗೆ ತಮ್ಮ ಸಾಮರ್ಥ್ಯಕ್ಕಿಂತ ಕಡಿಮೆ ಕೊಡುಗೆಯನ್ನು ನೀಡುವ ಸ್ಥಿತಿಯೇ ಅರೆ ಉದ್ಯೋಗ. ಉದಾಹರಣೆಗೆ, ಇಂಜಿನಿಯರಿಂಗ್‌ನಲ್ಲಿ ಡಿಪ್ಲೋಮಾ ಪಡೆದವನೊಬ್ಬ ಸೂಕ್ತ ಕೆಲಸದ ಕೊರತೆಯಿಂದಾಗಿ ಬೂಟು ಪಾಲಿಶ್ ಕೆಲಸವನ್ನು ಪ್ರಾರಂಭಿಸಿದರೆ ಆಗ ಆತನನ್ನು ಅರೆ ಉದ್ಯೋಗಿ ಎಂದು ಕರೆಯಬಹುದು. ಏಕೆಂದರೆ, ಮೇಲ್ನೋಟಕ್ಕೆ ಆತನನ್ನು ಉದ್ಯೋಗಿ ಹಾಗೂ ಯಾವುದೋ ಒಂದು ಉತ್ಪಾದನೆಯಲ್ಲಿ ತೊಡಗಿ ಸಂಪಾದಿಸುತ್ತಾನೆ ಎಂದು ಪರಿಗಣಿಸಿ, ಉತ್ಪಾದನೆಗೆ ತನ್ನದೇ ಕೊಡುಗೆ ನೀಡುತ್ತಾನೆ ಎಂದು ಭಾವಿಸಿದರೂ, ವಾಸ್ತವವಾಗಿ ಆತನ ತನ್ನ ಸಾಧ್ಯತೆ ಹಾಗೂ ಸಂಪೂರ್ಣ ಸಾಮರ್ಥ್ಯಕ್ಕೆ ತಕ್ಕಂತೆ ಉದ್ಯೋಗಿಯಾಗಿರುವುದಿಲ್ಲ. ಆದ್ದರಿಂದ, ಆತ ಪೂರ್ಣ ಉದ್ಯೋಗಿಯಲ್ಲ. ಇಲ್ಲಿಯೂ ಸಹ ಅರೆ ಉದ್ಯೋಗವು ಕೃತಕವಾಗಿರುತ್ತದೆ.

**ತೆರೆದ ನಿರುದ್ಯೋಗ:** ಯಾವ ವ್ಯಕ್ತಿ ಕೆಲಸ ಮಾಡಲು ಸರ್ವಥಾ ಸಮರ್ಥನಿದ್ದು, ಇಷ್ಟವಿದ್ದು ಕೆಲಸವಿಲ್ಲದೆ ಇರುವ, ವರ್ಗವು ಇದಾಗಿರುತ್ತದೆ. ಆ ನಿರುದ್ಯೋಗವು ಅನಪೇಕ್ಷಿತವಾದ ಪಿರಾಮಿಡ ಸ್ವರೂಪದಲ್ಲಿರುತ್ತದೆ. ಅಂಥಹವರ ಸಂಖ್ಯೆಯು ಹಳ್ಳಿಗಳಲ್ಲಿ ವಿರಳವಾಗಿದ್ದರೆ, ನಗರಗಳಲ್ಲಿ ಅಧಿಕವಾಗಿರುತ್ತದೆ. ಬಹುತೇಕ ಜನರು ಗ್ರಾಮೀಣ ಪ್ರದೇಶಗಳಿಂದ ಉದ್ಯೋಗ ಅರಸಿ ಬಂದವರಾಗಿರುತ್ತಾರೆ. ಬಹಳಷ್ಟು ಜನರು ಮೂಲತಃ ನಗರ ಪ್ರದೇಶದವರಾಗಿರುತ್ತಾರೆ. ಈ ನಿರುದ್ಯೋಗವನ್ನು ನೋಡಬಹುದಾಗಿದ್ದು, ಅಂತಹ ಜನರ ಸಂಖ್ಯೆಯಿಂದ ಎಣಿಕೆ ಮಾಡಬಹುದಾಗಿದೆ. ಪುನಃ ತೆರೆದ ನಿರುದ್ಯೋಗವನ್ನು ಕೃತಕ ನಿರುದ್ಯೋಗ ಮತ್ತು ಅರೆ ನಿರುದ್ಯೋಗದಿಂದ ಬೇರೆ ಎಂದು ಗುರುತಿಸಬೇಕು. ಏಕೆಂದರೆ, ಇವುಗಳಲ್ಲಿ ಮೊದಲನೆಯದು ಕೆಲಸಗಾರರು ಸಂಪೂರ್ಣ ಕೆಲಸವಿಲ್ಲದ ಸ್ಥಿತಿಯಲ್ಲಿದ್ದರೆ, ಇತರೆ ಎರಡರಲ್ಲಿ ಅವರು ಮೇಲ್ನೋಟಕ್ಕೆ ಕಾರ್ಯನಿರತರೆಂದೂ, ಅವರ ಸಮಯವನ್ನು ಅಪ್ರಯೋಜಕವಾಗಿ ಕಳೆಯದೆ ದೂರ ಉಳಿಯುತ್ತಾರೆಂದೂ ಕಂಡುಬರುತ್ತದೆ.

**ವಿದ್ಯಾವಂತ ನಿರುದ್ಯೋಗ:** ಇದು ಕೆಲಸವಿಲ್ಲದ ವಿದ್ಯಾವಂತರಿಗೆ ಸಂಬಂಧಿಸಿದ್ದಾಗಿದೆ (ಅಂದರೆ ಮೆಟ್ರಿಕ್ ಪರೀಕ್ಷೆ ಉತ್ತೀರ್ಣಗೊಂಡ ಮತ್ತು ಉನ್ನತ ವಿದ್ಯಾಭ್ಯಾಸ ಹೊಂದಿರುವ) ಇವುಗಳಲ್ಲಿ ಕೆಲವರು ತೆರೆದ ನಿರುದ್ಯೋಗಕ್ಕೆ ಗುರಿಯಾಗಿರಬಹುದು ಮತ್ತು ಕೆಲವರು ಅರೆ ಉದ್ಯೋಗಿಗಳಾಗಿರ ಬಹುದು. ಮೊದಲನೆಯ ಬಗೆಯ ನಿರುದ್ಯೋಗಿ ವ್ಯಕ್ತಿಗಳು ತಮ್ಮ ಸಾಮರ್ಥ್ಯವನ್ನು ಪೂರ್ಣವಾಗಿ ಬಳಸಿಕೊಳ್ಳಲು ಅನುಕೂಲವಾಗುವಂತೆ ತಮ್ಮ ವಿದ್ಯಾರ್ಹತೆಗೆ ತಕ್ಕ ಕೆಲಸಗಳನ್ನು ಪಡೆಯದೇ ಇರಬಹುದು. ಬಹುತೇಕ ಪಟ್ಟಣಗಳು ಮತ್ತು ನಗರಗಳು ವಿದ್ಯಾವಂತ ನಿರುದ್ಯೋಗದ ಸಮಸ್ಯೆಯನ್ನು ಎದುರಿಸುತ್ತಿವೆ.

**ನಿರುದ್ಯೋಗದ ಕಾರಣಗಳು:** ನಿರುದ್ಯೋಗದ ವ್ಯಾಪಕತೆಗೆ ಈ ಕೆಳಕಂಡ ಕಾರಣಗಳನ್ನು ಗುರುತಿಸಬಹುದು.

ಅ) ಬಡತನ
ಆ) ಅತ್ಯಧಿಕ ಜನಸಂಖ್ಯಾ ಬೆಳವಣಿಗೆ
ಇ) ಆರ್ಥಿಕ ಬೆಳವಣಿಗೆಯ ನಿಧಾನಗತಿ
ಈ) ಕೃಷಿಯ ಹಿಂದುಳಿಯುವಿಕೆ
ಉ) ರಾಷ್ಟ್ರೀಯ ಉದ್ಯೋಗ ನೀತಿಯ ಅಭಾವ
ಊ) ಕೈಗಾರಿಕೆ ಸಾಮರ್ಥ್ಯದ ಅಪೂರ್ಣ ಬಳಕೆ
ಋ) ಬಂಡವಾಳ ಕೇಂದ್ರೀಕೃತ ತಂತ್ರಗಳಿಗೆ ಒತ್ತು ನೀಡುವುದು
ೠ) ಖಾಸಗಿ ಉದ್ಯಮಗಳ ಬಗ್ಗೆ ಉತ್ತಮ ಸರ್ಕಾರಿ ನೀತಿಯ ಅಭಾವ
ಎ) ದೋಷಪೂರಿತ ಶಿಕ್ಷಣ ಪದ್ಧತಿ

**ಮಾಹಿತಿಯ ಮೂಲಗಳು ಹಾಗೂ ವಿಶ್ಲೇಷಣಾ ವಿಧಾನ**

ಬಹಳಷ್ಟು ಬಡತನದ ಮೇಲಿನ ಅಧ್ಯಯನಗಳು ರಾಷ್ಟ್ರೀಯ ಮಾದರಿ ಸಮೀಕ್ಷೆಯಲ್ಲಿ ಸಂಗ್ರಹಿಸುವ ಕುಟುಂಬ ಗ್ರಾಹಕರ ವೆಚ್ಚದ ಮಾಹಿತಿಯನ್ನು ಅವಲಂಬಿಸಿರುತ್ತವೆ. ಈ ಮಾಹಿತಿಗಳು ೧೯೫೦ರ ಮಧ್ಯಭಾಗದಿಂದ ಪ್ರಾರಂಭವಾಗಿ, ೧೯೭೩-೭೪ರವರೆಗೆ ಅವಿಚ್ಛಿನ್ನವಾಗಿ ವಾರ್ಷಿಕ ಆಧಾರದಲ್ಲಿ ಲಭ್ಯವಿವೆ. ಅನಂತರ, ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯು ಈ ಮಾಹಿತಿಗಳನ್ನು ಪಂಚವಾರ್ಷಿಕ ಆಧಾರದ ಮೇಲೆ ಸಂಗ್ರಹಿಸಲು ನಿರ್ಧರಿಸಿತು. ಆದರೆ, ಈ ಮಾಹಿತಿಗಳ ಸಮಯಾಧಾರಿತ ಸರಣಿಯೊಂದನ್ನು ನಿರ್ಮಿಸುವ ಉದ್ದೇಶದಿಂದ ೧೯೮೬-೮೭ರಿಂದ ಪಂಚವಾರ್ಷಿಕ ಸಮೀಕ್ಷೆಗಳ ಮಾಹಿತಿಗಳಿಗೆ ಪೂರಕವಾಗಿ ಅಲ್ಪ ಪ್ರಮಾಣದ ಮಾದರಿಗಳಿಂದ ಇಂತಹ ಮಾಹಿತಿಗಳನ್ನು ವಾರ್ಷಿಕ ಆಧಾರದ ಮೇಲೆ ಸಂಗ್ರಹಿಸಬೇಕೆಂದು ಪುನಃ ನಿರ್ಧರಿಸಲಾಯಿತು. ಕುಟುಂಬಗಳ ಆದಾಯದ ಮಾಹಿತಿಗಳ ಅಭಾವದಲ್ಲಿ, ಬಡನತವನ್ನು ಅಧ್ಯಯನ ಮಾಡಲು ರಾಷ್ಟ್ರೀಯ ಮಾದರಿ ಸಮೀಕ್ಷೆಯಿಂದ ಹೊರಬೀಳುವ ಕುಟುಂಬ ಗ್ರಾಹಕರ ವೆಚ್ಚದ ಮಾಹಿತಿಗಳನ್ನು ಉಪಯೋಗಿಸಬೇಕಾಗುತ್ತದೆ. ಅಷ್ಟೇ ಅಲ್ಲದೆ, ಗ್ರಾಹಕರ ವೆಚ್ಚವು ಶಾಶ್ವತ ಆದಾಯಕ್ಕೆ ಉತ್ತಮ ಪ್ರಾತಿನಿಧ್ಯವಾಗಿದ್ದು, ಬಡತನದ ವಿಶ್ಲೇಷಣೆಗೆ ಕೇವಲ ಚಾಲ್ತಿ ಆದಾಯಕ್ಕೆ ಅನುಗುಣವಾಗಿರುವ ಕುಟುಂಬ ಆದಾಯ ಮಾಹಿತಿಗಿಂತ ಹೆಚ್ಚು ಯೋಗ್ಯವಾಗಿದೆ. ಬಹುತೇಕ, ಬಡತನದ ಸಂಶೋಧನಾ ಅಧ್ಯಯನಗಳು, ಗ್ರಾಮೀಣ ಪ್ರದೇಶಗಳಲ್ಲಿ ಬಡತನದ ವ್ಯಾಪ್ತಿಯನ್ನು ಅಂದಾಜಿಸಲು ೧೯೬೦-೬೧ರ ಬೆಲೆಗಳ ಆಧಾರದಲ್ಲಿ ಮಾಸಿಕ ತಲಾ ಗ್ರಾಹಕ ವೆಚ್ಚ ರೂ. ೧೫..೦೦ರ ಪ್ರಮಾಣವನ್ನು ಉಪಯೋಗಿಸಿವೆ.

ಒಬ್ಬ ವ್ಯಕ್ತಿಯ ಒಂದು ಗೊತ್ತಾದ ಕನಿಷ್ಟ ಮಟ್ಟದ ಸರಕುಗಳು ಮತ್ತು ಸೇವೆಗಳ ಸಮುದಾಯವನ್ನು ಪಡೆಯುವ ಸಾಧ್ಯತೆಯ ಭರವಸೆಗಾಗಿ ಈ ವೆಚ್ಚವನ್ನು ಮಾಡಲೇ ಬೇಕಾಗುತ್ತದೆ ಎಂದು ಅಭಿಪ್ರಾಯ ಪಡಲಾಗಿದೆ. ಈ ಪ್ರಮಾಣಕವನ್ನು

೧೯೬೦-೬೧ರ ನಂತರದ ವರ್ಷಗಳಿಗೆ ಗ್ರಾಮೀಣ ಪ್ರದೇಶಗಳಿಗೆ ಅನ್ವಯವಾಗುವ ಒಂದೇ ಒಂದು ಸೂಚ್ಯಂಕವಾದ ಭಾರತ ಸರ್ಕಾರದ ಕಾರ್ಮಿಕ ಬ್ಯೂರೋವು ಸಂಗ್ರಹಿಸುವ ೧೯೬೦-೬೧=೧೦೦ ಆಧಾರವುಳ್ಳ ಕೃಷಿ ಕಾರ್ಮಿಕರ ಗ್ರಾಹಕರ ಬೆಲೆಗಳ ಸೂಚ್ಯಾಂಕವನ್ನು ಉಪಯೋಗಿಸಿ ಕೃತಕವಾಗಿ ವಿಸ್ತರಿಸಲಾಗುತ್ತದೆ. ರಾಜ್ಯಗಳಲ್ಲಿನ ವಿವಿಧ ವಸ್ತುಗಳ ಬೆಲೆಗಳ ಹಾಗೂ ಹಣದುಬ್ಬರದ ದರಗಳ ವ್ಯತ್ಯಾಸದ ಕಾರಣದಿಂದಾಗಿ ರಾಜ್ಯಗಳಿಗೆ ಸಂಬಂಧಪಟ್ಟ ಬಡತನ ರೇಖೆಗಳನ್ನು ನಿಗದಿಮಾಡಲು, ಇಂತಹ ಪ್ರಮಾಣವನ್ನು ಭಾರತದ ಗ್ರಾಮೀಣ ಪ್ರದೇಶಗಳ ಬೆಲೆಗಳನ್ನು ಒಂದು ಗೊತ್ತಾದ ವರ್ಷಕ್ಕೆ ೧೦೦ ಎಂದಿಟ್ಟುಕೊಂಡು ರಾಜ್ಯಗಳಿಗೆ ಸಂಬಂಧಪಟ್ಟ ಗ್ರಾಹಕರ ಬೆಲೆಗಳ ಸೂಚ್ಯಾಂಕಗಳನ್ನು ಉಪಯೋಗಿಸಿಕೊಂಡು ಹೊಂದಾಣಿಕೆ ಮಾಡಲಾಗುತ್ತದೆ. ಹಾಗೂ ರಾಜ್ಯಗಳಿಗೆ ಸಂಬಂಧಪಟ್ಟ ಕೃಷಿ ಕಾರ್ಮಿಕರ ಬೆಲೆಗಳ ಸೂಚ್ಯಾಂಕಗಳನ್ನು ಉಪಯೋಗಿಸಿಕೊಂಡು ಈ ಹೊಂದಾಣಿಕೆ ಮಾಡಿದ ಬಡತನ ರೇಖೆಗಳನ್ನು ನಂತರದ ವರ್ಷಗಳಿಗೆ ಕೃತಕವಾಗಿ ವಿಸ್ತರಿಸಲಾಗುತ್ತದೆ. ಹೀಗೆ, ರಾಜ್ಯಗಳ ಗ್ರಾಮೀಣ ಪ್ರದೇಶಗಳ ಬಡತನದ ವ್ಯಾಪಕತೆಯನ್ನು ನಿರ್ಧರಿಸಲು ಇಂತಹ ಪ್ರಮಾಣಕಗಳನ್ನು ಉಪಯೋಗಿಸಲಾಗುತ್ತದೆ. ಬಡತನದ ವ್ಯಾಪಕತೆಯನ್ನು ಅಂದಾಜಿಸುವ ವಿಧಾನಗಳಲ್ಲಿ, ಒಂದು ಗೊತ್ತಾದ ಬಡತನ ರೇಖೆಗೆ ಸಂಬಂಧಿಸಿದಂತೆ ಬಡವರ ಪ್ರಮಾಣದ ಅಂದಾಜುಗಳನ್ನು ನೀಡುವ "ತಲೆ ಎಣಿಕೆ ಪ್ರಮಾಣ" ಮತ್ತು ಬಡವರ ಪ್ರಮಾಣ, ಬಡತನ ರೇಖೆ ಹಾಗೂ ಬಡವರ ಸರಾಸರಿ ಬಳಕೆ ಹಾಗೂ ಬಡ ಕುಟುಂಬಗಳ ಬಳಕೆ ವೆಚ್ಚದ ಲಾರೆನ್ಸ್ ಪ್ರಮಾಣಗಳನ್ನು ಗಮನದಲ್ಲಿಟ್ಟುಕೊಂಡು ತಯಾರಿಸಲಾದ ಸುಧಾರಿತ ಬಡತನ ಸೂಚ್ಯಾಂಕವಾದ 'ಸೇನರ ಬಡತನ ಸೂಚ್ಯಾಂಕಗಳು' ಬಹಳ ಜನಪ್ರಿಯವಾಗಿವೆ.

ಸಾಮಾಜಿಕ ಆರ್ಥಿಕ ಸಮೀಕ್ಷಾ ಸುತ್ತುಗಳ ಒಂದು ಭಾಗವಾಗಿ ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯು ಕಾರ್ಮಿಕ ಶಕ್ತಿ ಸಮೀಕ್ಷೆಗಳನ್ನು ನಡೆಸುತ್ತಿದೆ. ವಿವಿಧ ಜನಗಣತಿಗಳ ವ್ಯಾಖ್ಯೆಗಳಲ್ಲಿ ವ್ಯತ್ಯಾಸಗಳಿದ್ದರೂ ಸಹ, ಕೆಲಸಗಾರರು ಮತ್ತು ಕೆಲಸಗಾರರಲ್ಲದವರ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸುವುದು ನಮ್ಮ ಜನಗಣತಿಗಳ ಒಂದು ಸಂಯುಕ್ತ ಭಾಗವಾಗಿದೆ. ತಾಂತ್ರಿಕವಾಗಿ ಅಷ್ಟಾಗಿ ಸರಿಯಲ್ಲದಿದ್ದರೂ, ಮತ್ತೊಂದು ಜನಪ್ರಿಯ ನಿರುದ್ಯೋಗದ ಸೂಚಿ ಎಂದರೆ, ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ದಾಖಲು ಮಾಡಿಸಿರುವ ಉದ್ಯೋಗಾಕಾಂಕ್ಷಿಗಳ ಸಂಖ್ಯೆ. ಅಲ್ಲದೆ, ಉದ್ಯೋಗ ವಿನಿಮಯ ಕೇಂದ್ರಗಳು ಉದ್ಯೋಗ ಮಾರುಕಟ್ಟೆ ಮಾಹಿತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ತನ್ಮೂಲಕ ಸಂಘಟಿತ ಕ್ಷೇತ್ರಗಳಲ್ಲಿನ ಉದ್ಯೋಗ ಮಾಹಿತಿಯನ್ನು ಸಂಗ್ರಹಿಸುತ್ತಿವೆ. ಕೇಂದ್ರೀಯ ಸಾಂಖ್ಯಿಕ ಸಂಸ್ಥೆ ನಡೆಸುವ ಆರ್ಥಿಕ ಸಮೀಕ್ಷೆಗಳೂ ಸಹ ಉದ್ಯೋಗದ ಬಗ್ಗೆ ಮಾಹಿತಿಗಳನ್ನು

ನೀಡುತ್ತಿವೆ. ಒಬ್ಬ ವ್ಯಕ್ತಿಯ ಉದ್ಯೋಗ ಮತ್ತು ನಿರುದ್ಯೋಗ, ದೀರ್ಘಾವದಿಯಲ್ಲಿ ಒಂದೇ ಆಗಿರದೆ, ಒಂದೇ ದಿನದಲ್ಲಿ ವ್ಯತ್ಯಾಸವಾಗುವ ಸಾಧ್ಯತೆ ಇರುವುದರಿಂದ ಜನಸಂಖ್ಯೆಯನ್ನು ಅದರ ಕಾರ್ಮಿಕ ಶಕ್ತಿಯ ಲಕ್ಷಣಗಳ ಆಧಾರದ ಮೇಲೆ (ಕಾರ್ಮಿಕ ಶಕ್ತಿಯಲ್ಲಿರುವ ಜನಸಂಖ್ಯೆ, ಕಾರ್ಮಿಕ ಶಕ್ತಿಯಲ್ಲಿರದ ಜನಸಂಖ್ಯೆ, ಉದ್ಯೋಗಿಗಳು, ನಿರುದ್ಯೋಗಿಗಳು, ಪೂರ್ಣೋದ್ಯೋಗಿಗಳು ಅರೆ ಉದ್ಯೋಗಿಗಳು, ಪ್ರತ್ಯಕ್ಷ ಅರೆ ಉದ್ಯೋಗಿಗಳು, ಅಪ್ರತ್ಯಕ್ಷ ಅರೆ ಉದ್ಯೋಗಿಗಳು) ವರ್ಗೀರಿಸುವದು ಬಹಳ ಕಷ್ಟ. ಈ ಮೂರು ಮುಖ್ಯ ಮಾಹಿತಿ ಆಧಾರಗಳ ಮೂಲಕ ಉದ್ಯೋಗ ಮತ್ತು ನಿರುದ್ಯೋಗದ ಅಳತೆ ಮಾಡಲು ಉಪಯೋಗಿಸುವ ವ್ಯಾಖ್ಯೆಗಳು ಹಾಗೂ ವಿಧಾನಗಳು ಈ ಕೆಳಕಂಡಂತಿವೆ:

೧. **ರಾಷ್ಟ್ರೀಯ ಮಾದರಿ ಸಮೀಕ್ಷೆ (ರಾಮಾಸ):** ಪರಿಣಿತರ ಸಮಿತಿಯ (ದಾಂತವಾಲ ಸಮಿತಿ) ಕೆಲವು ನಿರ್ದಿಷ್ಟ ಶಿಫಾರಸ್ಸುಗಳ ಆಧಾರದ ಮೇಲೆ ರಾಷ್ಟ್ರೀಯ ಮಾದರಿ ಸಮೀಕ್ಷೆ ಸಂಸ್ಥೆಯ ಸುಧಾರಿತ ವ್ಯಾಖ್ಯೆಗಳು ಮತ್ತು ಅಳತೆಯ ವಿಧಾನಗಳನ್ನು ಅಳವಡಿಸಿಕೊಂಡು, ೧೯೭೨-೭೩ (೨೭ನೇ ಸುತ್ತ)ರಿಂದ ಕಾರ್ಮಿಕ ಶಕ್ತಿ ಸಮೀಕ್ಷೆಗಳ ಪಂಚವಾರ್ಷಿಕ ಸುತ್ತುಗಳ ಹೊಸ ಶ್ರೇಣಿಯನ್ನು ಪ್ರಾರಂಭಿಸಿತು. ಅಲ್ಲಿಂದೀಚೆಗೆ, ಇಂತಹ ನಾಲ್ಕು ಸಮೀಕ್ಷೆಗಳನ್ನು ೧೯೭೭-೭೮ ರಲ್ಲಿ ೩೨ನೇ ಸುತ್ತು ೧೯೮೩ರಲ್ಲಿ ೩೮ನೇ ಸುತ್ತು ೧೯೮೭-೮೮ರಲ್ಲಿ ೪೩ನೇ ಸುತ್ತು ಹಾಗೂ ೧೯೯೩-೯೪ರಲ್ಲಿ ೫೦ನೇ ಸುತ್ತುಗಳ ಮೂಲಕ ನಡೆಸಿದೆ. ಈ ಸಮೀಕ್ಷೆಗಳಲ್ಲಿ ಇದೇ ಜನಸಂಖ್ಯೆಯನ್ನು ಕಾರ್ಮಿಕ ಶಕ್ತಿಯ ವಿವಿಧ ಭಾಗಗಳಾಗಿ ಈ ಕೆಳಕಂಡ ೩ ಲಕ್ಷಣಗಳ ಆಧಾರದ ಮೇಲೆ ವರ್ಗೀಕರಿಸಲಾಗಿದೆ. ಅ) ಸಾಮಾನ್ಯ ಸ್ಥಿತಿ, ಆ) ಪ್ರಸ್ತುತ ವಾರದ ಸ್ಥಿತಿ ಮತ್ತು ಇ) ಪ್ರಸ್ತುತ ನಿತ್ಯದ ಸ್ಥಿತಿ.

**ಅ) ಸಾಮಾನ್ಯ ಸ್ಥಿತಿ:** ಒಬ್ಬ ವ್ಯಕ್ತಿಯ ಸಾಮಾನ್ಯ ಸ್ಥಿತಿಯನ್ನು ಸಮೀಕ್ಷೆಯ ದಿನಾಂಕದಿಂದ ಹಿಂದಕ್ಕೆ ಒಂದು ವರ್ಷದ ಅವಧಿಯ ಚಟುವಟಿಕೆಯ ಅವಧಿಯನ್ನು ಆಧರಿಸಿ ಆ ವ್ಯಕ್ತಿಯು ಉದ್ಯೋಗಿಯೇ, ನಿರುದ್ಯೋಗಿಯೇ ಅಥವಾ ಕಾರ್ಮಿಕ ಶಕ್ತಿಯಿಂದ ಹೊರಗೆ ಉಳಿದಿದ್ದಾನೆಯೆ/ಳೆಯೇ ಎಂಬುದನ್ನು ನಿರ್ಧರಿಸಲಾಗುತ್ತದೆ. ೩೨ನೇ ಸುತ್ತಿನಿಂದ ಮುಖ್ಯ ಸಾಮಾನ್ಯ ಸ್ಥಿತಿ, ಉಪ ಮುಖ್ಯ ಸಾಮಾನ್ಯ ಸ್ಥಿತಿಗಳ ಮಧ್ಯೆ ಮತ್ತೆ ವ್ಯತ್ಯಾಸವನ್ನು ಗುರುತಿಸಲಾಗುತ್ತಿದೆ. ಮುಖ್ಯ ಸಾಮಾನ್ಯ ಸ್ಥಿತಿಯನ್ನು ಈ ರೀತಿ ನಿರ್ಧರಿಸಲಾಗುತ್ತಿದೆ. ೧) ಉದ್ಯೋಗಿ ೨) ನಿರುದ್ಯೋಗಿ ೩) ಕಾರ್ಮಿಕ ಶಕ್ತಿಯ ಹೊರಗೆ ಎಂಬುದನ್ನು ಆ ವ್ಯಕ್ತಿ ೧) ಸಮೀಕ್ಷಾ ದಿನಾಂಕಕ್ಕೆ ಹಿಂದಿನ ೩೬೫ ದಿನಗಳ ಅವಧಿಯಲ್ಲಿ ತುಲನಾತ್ಮಕವಾಗಿ ಹೆಚ್ಚಿನ ಅವಧಿಯಲ್ಲಿ ಸಂಪಾದನಾ ಚಟುವಟಿಕೆಯಲ್ಲಿ ನಿರತನಾಗಿರುವುದು, ೨) ಅದೇ ಅವಧಿಯಲ್ಲಿ ತುಲನಾತ್ಮಕವಾಗಿ ಹೆಚ್ಚಿನ ಅವಧಿಯಲ್ಲಿ ಸಂಪಾದನಾ ನಿರತನಾಗಿರದೆ ಕೆಲಸಕ್ಕೆ ದೊರಕುವ ಅಥವಾ ಕೆಲಸವನ್ನು ಹುಡುಕುವುದರಲ್ಲಿ ನಿರತನಾಗಿರುವುದು. ೩) ಅದೇ ಅವಧಿಯಲ್ಲಿ

ಸಂಪಾದನಾ ನಿರತನಾಗಿಯೂ ಇರದೆ, ಕೆಲಸಕ್ಕೆ ದೊರಕುವ ಅಥವಾ ಕೆಲಸವನ್ನು ಹುಡುಕುವುವರಲ್ಲಿ ನಿರತನಾಗಿರದೆ ಇರುವುದು. ಇವುಗಳ ಆಧಾರದ ಮೇಲೆ ನಿರ್ಧರಿಸಲಾಗುತ್ತದೆ. ಒಂದು ವೇಳೆ ಒಬ್ಬ ವ್ಯಕ್ತಿಯು ಮೇಲಿನ (೨) ಮತ್ತು (೩) ವರ್ಗಗಳಿಗೆ ಸೇರದೆ ಅಲ್ಪ ಪ್ರಮಾಣದಲ್ಲಿ ಸಂಪಾದನಾ ನಿರತನಾಗಿದ್ದರೆ, ಆ ವ್ಯಕ್ತಿಯನ್ನು ಸಾಮಾನ್ಯ ಸ್ಥಿತಿಯ ಉಪ ಮುಖ್ಯ ಕೆಲಸಗಾರ ಎಂದು ಪರಿಗಣಿಸಲಾಗುತ್ತದೆ. ಎರಡೂ ಗುಂಪುಗಳು ಅಂದರೆ ಮುಖ್ಯ ಕೆಲಸಗಾರರು ಹಾಗು ಉಪ ಮುಖ್ಯ ಕೆಲಸಗಾರರನ್ನು ಒಟ್ಟಾಗಿ ಸಾಮಾನ್ಯ ಸ್ಥಿತಿಯ "ಒಟ್ಟಾರೆ ಕೆಲಸಗಾರರು" ಎಂದು ಪರಿಗಣಿಸಲಾಗುತ್ತದೆ.

ಆ) **ಪ್ರಸ್ತುತವಾದ ಸ್ಥಿತಿ:** ಸಮೀಕ್ಷಾ ದಿನಾಂಕದಿಂದ ಹಿಂದಿನ ಒಂದು ವಾರದ ಅವಧಿಯಲ್ಲಿ ಯಾವುದೇ ಒಂದು ದಿನದಲ್ಲಿ ಒಬ್ಬ ವ್ಯಕ್ತಿಯು ಕನಿಷ್ಠ ಒಂದು ಗಂಟೆಯಾದರೂ ಸಂಪಾದನಾ ನಿರತನಾಗಿದ್ದರೆ ಆ ವ್ಯಕ್ತಿಯನ್ನು ಪ್ರಸ್ತುತ ವಾರದ ಸ್ಥಿತಿಯಲ್ಲಿ ಉದ್ಯೋಗಿ ಎಂದು ಪರಿಗಣಿಸಲಾಗುತ್ತದೆ. ಅದೇ ಅವಧಿಯಲ್ಲಿ ಒಬ್ಬ ವ್ಯಕ್ತಿಯು ಒಂದು ಗಂಟೆಯೂ ಸಂಪಾದನಾ ನಿರತನಾಗಿರದ ಕೆಲಸಕ್ಕೆ ದೊರಕುವ ಅಥವಾ ಕೆಲಸವನ್ನು ಹುಡುಕುತ್ತಿದ್ದರೆ, ಆ ವ್ಯಕತಿಯನ್ನು ನಿರುದ್ಯೋಗಿ ಎಂದು ಪರಿಗಣಿಸಲಾಗುತ್ತದೆ. ಮಿಕ್ಕೆಲ್ಲರನ್ನು "ಕಾರ್ಮಿಕ ಶಕ್ತಿಯ ಹೊರಗೆ" ಎಂದು ಪರಿಗಣಿಸಲಾಗುತ್ತದೆ. ಒಂದು ವೇಳೆ ಒಬ್ಬ ವ್ಯಕ್ತಿಯು ಆ ಒಂದು ವಾರದ ಅವಧಿಯಲ್ಲಿ ಒಂದಕ್ಕಿಂತ ಹೆಚ್ಚಿಗೆ ವರ್ಗಗಳಲ್ಲಿ ವರ್ಗೀಕೃತನಾದರೆ ಅವನ ಅಥವಾ ಅವಳ ಸ್ಥಿತಿಯನ್ನು ಆದ್ಯತಾ ನಿಯಮದ ಪ್ರಕಾರ ನಿಧರಿಸಲಾಗುತ್ತದೆ. ಈ ನಿಯಮದಂತೆ "ಉದ್ಯೋಗದ ಸ್ಥಿತಿಯು ನಿರುದ್ಯೋಗದ ಸ್ಥಿತಿಯ ಮೇಲೂ ಹಾಗೂ ನಿರುದ್ಯೋಗದ ಸ್ಥಿತಿಯು ಕಾರ್ಮಿಕ ಶಕ್ತಿಯ ಹೊರಗೆ" ಸ್ಥಿತಿಯ ಮೇಲೂ ಆದ್ಯತೆಗಳನ್ನು ಪಡೆಯುತ್ತಾರೆ.

ಇ) **ಪ್ರಸ್ತುತ ನಿತ್ಯದ ಸ್ಥಿತಿ:** ಒಂದು ವಾರದ ಒಳಗಿನ ಚಟುವಟಿಕೆಗಳ ಸ್ಥಿತಿಯಲ್ಲಿ ಬದಲಾಗಬಹುದಾದ ಪರಿಸ್ಥಿತಿಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ನಿತ್ಯದ ಸ್ಥಿತಿ ವಿಧಾನವು ವಾರದ ಪ್ರತಿ ದಿನಗಳಲ್ಲಿನ ಸ್ಥಿತಿಗಳನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತದೆ ಹಾಗೂ ಎಲ್ಲಾ ಏಳೂ ದಿನಗಳಿಗೂ ಗರಿಷ್ಠ ಎರಡು ಚಟುವಟಿಕೆಗಳನ್ನು ನಿರ್ಧರಿಸುತ್ತದೆ. ಈ ವರ್ಗೀಕರಣದ ಮಾನದಂಡ ಅರ್ಧ ದಿನವಾಗಿದೆ. ವಾರದ ಪ್ರತಿದಿನದ ಎರಡು ಅರ್ಧ ದಿನಗಳ ಸ್ಥಿತಿಗಳನ್ನು ಕೆಳಕಂಡಂತೆ ನಿರ್ಧರಿಸಲಾಗುತ್ತದೆ.

| ಚಟುವಟಿಕೆ | ಸ್ಥಿತಿ |
|---|---|
| ೧. ದಿನದಲ್ಲಿ ೪ ಗಂಟೆಗಳಿಗೂ ಹೆಚ್ಚು ಸಮಯ ಕೆಲಸ ಮಾಡುವುದು. | ಎರಡೂ ಅರ್ಧ ದಿನಗಳಲ್ಲಿ ಉದ್ಯೋಗ |

| | | |
|---|---|---|
| ೨. | ದಿನದಲ್ಲಿ ೧ರಿಂದ ೪ ಗಂಟೆಗಳ ಕಾಲ ಕೆಲಸ ಮಾಡುವುದು ಹಾಗೂ ಇನ್ನುಳಿದ ಸಮಯ ದಲ್ಲಿ ಕೆಲಸಕ್ಕೆ ದೊರಕುವ ಅಥವಾ ಕೆಲಸ ಹುಡುಕುವುದು | ಒಂದು ಅರ್ಧ ದಿನ ಉದ್ಯೋಗಿ ಹಾಗೂ ಮತ್ತೊಂದು ಅರ್ಧ ದಿನ ನಿರುದ್ಯೋಗಿ |
| ೩. | ದಿನದಲ್ಲಿ ೧ರಿಂದ ೪ ಗಂಟೆಗಳ ಕಾಲ ಕೆಲಸ ಮಾಡುವುದು ಇನ್ನುಳಿದ ಸಮಯ ಕೆಲಸಕ್ಕೆ ದೊರಕದೆ ಇರುವುದು ಅಥವಾ ಕೆಲಸ ಹುಡುಕದೆ ಇರುವುದು | ಒಂದು ಅರ್ಧ ದಿನ ಉದ್ಯೋಗ ಹಾಗೂ ಇನ್ನೊಂದು ಅರ್ಧದಿನ ಕಾರ್ಮಿಕ ಶಕ್ತಿಯ ಹೊರಗೆ |
| ೪. | ಕೆಲಸ ಮಾಡದೆ ಇರುವುದು ಅಂದರೆ ದಿನದ ೪ ಗಂಟೆಗಳಿಗೂ ಹೆಚ್ಚು ಕಾಲ ಕೆಲಸಕ್ಕೆ ದೊರಕುವ ಅಥವಾ ಕೆಲಸವನ್ನು ಹುಡುಕುವುದು. | ಎರಡು ಅರ್ಧ ದಿನಗಳು |
| ೫. | ಕೆಲಸ ಮಾಡದೇ ಇರುವುದು ಆದರೆ ದಿನದ ೪ ಗಂಟೆಗಳಿಗೂ ಕಡಿಮೆ ಸಮಯ ಕೆಲಸಕ್ಕೆ ದೊರ ಕುವ ಅಥವಾ ಕೆಲಸವನ್ನು ಹುಡುಕುವುದು | ಒಂದು ಅರ್ಧ ದಿನ ನಿರುದ್ಯೋಗಿ ಹಾಗೂ ಇನ್ನೊಂದು ಅರ್ಧ ದಿನ ಕಾರ್ಮಿಕ ಶಕ್ತಿಯ ಹೊರಗೆ |
| ೬. | ಕೆಲಸ ಮಾಡದಿರುವುದು ಹಾಗೂ ದಿನ ಪೂರ್ತಿ ಕೆಲಸಕ್ಕೆ ದೊರಕದೆ ಇರುವುದು ಮತ್ತು ಕೆಲಸ ಹುಡುಕದೆ ಇರುವುದು. | ಎರಡೂ ಅರ್ಧ ದಿನಗಳು ಕಾರ್ಮಿಕ ಶಕ್ತಿಯ ಹೊರಗೆ |

ಈ ರೀತಿ ವಾರದ ಎಲ್ಲಾ ೧೪ ಅರ್ಧ ದಿನಗಳನ್ನು ಉದ್ಯೋಗಿ, ನಿರುದ್ಯೋಗಿ ಅಥವಾ ಕಾರ್ಮಿಕ ಶಕ್ತಿಯ ಹೊರಗೆ ಎಂಬ ಅರ್ಧ ದಿನಗಳನ್ನಾಗಿ ಹಂಚಲಾಗಿದೆ. ಈ ಫಲಿತಾಂಶಗಳನ್ನು ವ್ಯಕ್ತಿಗತವಾಗಿ ಕೂಡಿದಾಗ ಉದ್ಯೋಗ, ನಿರುದ್ಯೋಗ ಹಾಗೂ ಕಾರ್ಮಿಕ ಶಕ್ತಿಯ ಒಟ್ಟಾರೆ ಅಳತೆಯು ವ್ಯಕ್ತಿಗಳ ದಿನಗಳಲ್ಲಿ ದೊರೆಯುತ್ತದೆ. ಸಾಮಾನ್ಯ ಸ್ಥಿತಿ ಮತ್ತು ಪ್ರಸ್ತುತ ವಾರದ ಸ್ಥಿತಿ ವರ್ಗೀಕರಣಗಳು ಉದ್ಯೋಗ, ನಿರುದ್ಯೋಗ ಅಥವಾ ಕಾರ್ಮಿಕ ಶಕ್ತಿಯ ದಿನಗಳಲ್ಲಿ ನೀಡಿದರೆ ಪ್ರಸ್ತುತ ನಿತ್ಯದ ಸ್ಥಿತಿ ವರ್ಗೀಕರಣವು ಉದ್ಯೋಗ, ನಿರುದ್ಯೋಗ ಮತ್ತು ಕಾರ್ಮಿಕ ಶಕ್ತಿಯ ಹಂಚಿಕೆಯನ್ನು ವ್ಯಕ್ತಿಗಳ ದಿನಗಳಲ್ಲಿ ನೀಡುತ್ತದೆ. ಸಾಮಾನ್ಯ ಸ್ಥಿತಿಯು, ಪ್ರ ಸ್ತುತವಾದ ಸ್ಥಿತಿ ಹಾಗು ನಿತ್ಯದ ಸ್ಥಿತಿಯ ಮರುವರ್ಗೀಕರಣವು ಪ್ರತ್ಯಕ್ಷ ಅರೆ ಉದ್ಯೋಗದ ಅಳತೆಯನ್ನು ನೀಡುತ್ತದೆ.

**೨. ಬಡತನ ಮತ್ತು ನಿರುದ್ಯೋಗಕ್ಕಿರುವ ಸಂಬಂಧ ಹಾಗೂ ಅವುಗಳ ಮಟ್ಟ**

ಬಡತನ ಮತ್ತು ನಿರುದ್ಯೋಗಗಳು ಸಯಾಮೀ ಅವಳಿಗಳಿದ್ದಂತೆ. ಒಬ್ಬ ವ್ಯಕ್ತಿಯು ನಿರುದ್ಯೋಗಿಯಾಗಿರುವುದರಿಂದ ಬಡವನಾಗಿರುತ್ತಾನೆ ಹಾಗೂ

ಬಡವನಾಗಿರುವುದರಿಂದ ನಿರುದ್ಯೋಗಿಯಾಗಿರುತ್ತಾನೆ. ಬಡವನಾಗಿರುವುದರಿಂದ ಉದ್ಯೋಗಿಯಾಗಿರುವುದಕ್ಕೆ ಸಂಪನ್ಮೂಲಗಳಿರುವುದಿಲ್ಲ. ಇದನ್ನು ಭಾರತದಲ್ಲಿ ನಿರುದ್ಯೋಗದ ಮತ್ತು ತಲಾಮಾಸಿಕ ವೆಚ್ಚದ ಮುಖಾಂತರ ತಿಳಿಯಬಹುದು. ೧೯೭೭-೭೮ರಲ್ಲಿ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಅತಿ ಕೆಳಮಟ್ಟದ ಮಾಸಿಕ ತಲಾ ವೆಚ್ಚದ ಗುಂಪಿನಲ್ಲಿ ಶೇ. ೨೨.೪ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ಶೇ. ೨೯ರಷ್ಟು ನಿರುದ್ಯೋಗದ ದರಗಳಿದ್ದವು. ಈ ತಲಾ ವೆಚ್ಚವು ಹೆಚ್ಚಾದಂತೆ ನಿರುದ್ಯೋಗ ದರವು ಕಡಿಮೆಯಾಗುತ್ತದೆ. ಉದಾಹರಣೆ: ಅತಿ ಹೆಚ್ಚಿನ ತಲಾವೆಚ್ಚ ರೂ. ೧೦೦.೦೦ಕ್ಕಿಂತ ಹೆಚ್ಚಿನ ಗುಂಪಿನಲ್ಲಿ ಶೇ. ೩.೨ ಹಾಗೂ ೪.೯ ನಿರುದ್ಯೋಗ ದರಗಳು ಭಾರತದ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿದ್ದವು. ಕರ್ನಾಟಕದಲ್ಲಿಯೂ ಸಹ ೧೯೮೩ರಲ್ಲಿ ತಲಾ ಮಾಸಿಕ ವೆಚ್ಚವಾದ ರೂ. ೧೦೦ಕ್ಕಿಂತ ಕಡಿಮೆ ವೆಚ್ಚದ ಗುಂಪಿನಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಶೇ. ೩೦ ನಿರುದ್ಯೋಗ ದರವಿದ್ದು, ಕ್ರಮೇಣ ಕಡಿಮೆಯಾಗುತ್ತಾ ಅತ್ಯಂತ ಹೆಚ್ಚಿನ ವೆಚ್ಚದ ಗುಂಪಾದ ರೂ. ೩೦೦ಕ್ಕಿಂತ ಹೆಚ್ಚಿನ ಗುಂಪಿನಲ್ಲಿ ನಿರುದ್ಯೋಗ ದರವು ಶೇ. ೪ ಆಗಿತ್ತು. ಆದರೆ ನಗರ ಪ್ರದೇಶಗಳಲ್ಲಿ ಅತ್ಯಂತ ಕೆಳಗಿನ ಗುಂಪಾದ ರೂ. ೧೫೦ಕ್ಕೆ ಕಡಿಮೆ ವೆಚ್ಚದ ಗುಂಪಿನಲ್ಲಿ ಅತ್ಯಂತ ಹೆಚ್ಚಿನ ಅಂದರೆ ಶೇ. ೫೦ರಷ್ಟು ನಿರುದ್ಯೋಗ ದರವಿದ್ದು ಅತ್ಯಂತ ಹೆಚ್ಚಿನ ವೆಚ್ಚದ ಗುಂಪಾದ ರೂ. ೭೦೦ಕ್ಕಿಂತ ಹೆಚ್ಚಿನ ಗುಂಪಿನಲ್ಲಿಯೂ ಸಹ ನಿರುದ್ಯೋಗ ದರವು ಶೇ. ೨೩ರಷ್ಟು ಇತ್ತು.

ಬಡತನಕ್ಕೆ ಹಲವಾರು ಕಾರಣಗಳನ್ನು ಈಗಾಗಲೇ ಗುರುತಿಸಲಾಗಿದ್ದು, ಅವುಗಳಲ್ಲಿ ನಿರುದ್ಯೋಗವು ಅತಿ ಮುಖ್ಯ ಕಾರಣವಾಗಿರುವುದರಿಂದ, ಈ ಪ್ರಬಂದದಲ್ಲಿ ಚರ್ಚೆಯನ್ನು ನಿರುದ್ಯೋಗಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ. ಈ ಮುಂದೆ ಕರ್ನಾಟಕದಲ್ಲಿ ನಿರುದ್ಯೋಗಕ್ಕೆ ಸಂಬಂಧಿಸಿದ ಅಂದರೆ ಉದ್ಯೋಗ, ಅರೆ ಉದ್ಯೋಗಿಗಳ ಮಟ್ಟಗಳ ಬಗ್ಗೆ ಚರ್ಚಿಸಲಾಗಿದೆ.

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಇತ್ತೀಚೆಗೆ ಪ್ರಕಟಿಸಿರುವ "ಕರ್ನಾಟಕದಲ್ಲಿ ಉದ್ಯೋಗ ಮತ್ತು ನಿರುದ್ಯೋಗ ಪ್ರವೃತ್ತಿಯ ಅಧ್ಯಯನ" ಎಂಬ ಪ್ರಕಟಣೆಯಲ್ಲಿ ಉದ್ಯೋಗ, ನಿರುದ್ಯೋಗ, ಅರೆ ಉದ್ಯೋಗಿಗಳ ಚಿತ್ರಣವನ್ನು ರಾಷ್ಟ್ರೀಯ ಮಾದರಿ ಸಮೀಕ್ಷೆಯ ಪಂಚವಾರ್ಷಿಕ ಸುತ್ತುಗಳ ಫಲಿತಾಂಶಗಳನ್ನು ಆಧರಿಸಿ ನೀಡಲಾಗಿದೆ. ಈ ಅಧ್ಯಯನದಂತೆ ಕರ್ನಾಟಕದಲ್ಲಿ ಕಾರ್ಮಿಕ ಶಕ್ತಿಯ ದರವು ಇಳಿಮುಖವಾಗುತ್ತಿದೆ. ಈ ದರವು ೧೯೭೨-೭೩ರಲ್ಲಿ ಜನಸಂಖ್ಯೆಯ ಶೇ. ೫೩ರಷ್ಟು ಇದ್ದುದು ೧೯೮೭-೮೮ರಲ್ಲಿ ಶೇ. ೪೬ಕ್ಕೆ ಇಳಿದಿತ್ತು ಆದರೆ ವಾಸ್ತವಿಕ ಕಾರ್ಮಿಕ ಶಕ್ತಿಯು ಇದೇ ಅವಧಿಯಲ್ಲಿ ೧೪೦.೩ ಲಕ್ಷದಿಂದ ೧೭೧.೬ ಲಕ್ಷಕ್ಕೆ ಏರಿದೆ.

ಕಾರ್ಮಿಕ ಶಕ್ತಿಯ ದರ ಹಾಗೂ ವಾಸ್ತವಿಕ ಕಾರ್ಮಿಕ ಶಕ್ತಿ ವಿಶೇಷವಾಗಿ, ೧೯೮೩ರಿಂದ ೧೯೮೭-೮೮ ಅವಧಿಯಲ್ಲಿ ೭ ಪ್ರತಿಶತ ಅಂಶಗಳಷ್ಟು ಕಡಿಮೆಯಾಗಿ, ೩.೫ ಲಕ್ಷದಷ್ಟು ಜನರು ಕಾರ್ಮಿಕ ಶಕ್ತಿಯಿಂದ ಹೊರಗುಳಿದಿದ್ದರು. ಈ ಇಳಿಕೆ ನಗರ ಪ್ರದೇಶಗಳಲ್ಲಿ ಅತ್ಯಧಿಕವಾಗಿತ್ತು. ೧೯೭೨-೭೩ರಿಂದ ೧೯೮೭-೮೮ರ ೧೫ ವರ್ಷಗಳ ಅವಧಿಯಲ್ಲಿ ಕಾರ್ಮಿಕ ಶಕ್ತಿಯ ಬೆಳವಣಿಗೆಯ ಸರಾಸರಿ ವಾರ್ಷಿಕ ದರವು ಶೇ. ೧.೫ ಎಂದು ಅಂದಾಜಿಸಲಾಗಿದೆ. ಅದರಂತೆ ಉದ್ಯೋಗದ ಬೆಳವಣಿಗೆಯ ಸರಾಸರಿ ವಾರ್ಷಿಕ ದರವನ್ನು ೦.೯೭ ಎಂದು ಅಂದಾಜಿಸಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಶೇ. ೨೫ರಷ್ಟು ಬಾಲ ಕಾರ್ಮಿಕರು ಹಾಗೂ ಬಾಲಕಿಯರಿಗಿಂತ ಬಾಲಕರು ಹೆಚ್ಚಿನ ಸಂಖ್ಯೆಯಲ್ಲಿದ್ದುದು ಕ್ರಮೇಣ ಕಡಿಮೆಯಾಗುತ್ತಿದೆ. ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿನ ಮಹಿಳೆಯರ ಸಾಮಾನ್ಯ ಸ್ಥಿತಿಯ ನಿರುದ್ಯೋಗದ ದರಗಳು ಗಮನಾರ್ಹವಾಗಿ ಇಳಿದಿತ್ತು. ಅಂತೆಯೇ ಗ್ರಾಮೀಣ ಪ್ರದೇಶಗಳಲ್ಲಿ ಪ್ರಸ್ತುತವಾದದ ಸ್ಥಿತಿಯ ನಿರುದ್ಯೋಗದ ದರಗಳು ನಿರಂತರವಾಗಿ ಇಳಿದಿತ್ತು. ಆದರೆ ನಗರ ಪ್ರದೇಶಗಳ ಪುರುಷರು ನಿತ್ಯದ ಸ್ಥಿತಿಯ ನಿರುದ್ಯೋಗದ ದೃಷ್ಟಿಯಿಂದ ತೊಂದರೆಗೊಳಗಾಗಿದ್ದರು.

ಕಾರ್ಮಿಕ ಶಕ್ತಿಯ ಶೇಕಡವಾರು ಪ್ರಮಾಣದಲ್ಲಿ ಸಾಮಾನ್ಯ ಸ್ಥಿತಿಯ ನಿರುದ್ಯೋಗದ ದರಗಳು ಹೆಚ್ಚಾಗಿದ್ದು ಪ್ರಸ್ತುತ ನಿತ್ಯದ ಸ್ಥಿತಿಯ ದರಗಳು ಕಡಿಮೆಯಾದದ್ದು ಕಂಡು ಬರುತ್ತದೆ. ನಿರುದ್ಯೋಗದ ರಚನೆಯು ಅರೆ ಉದ್ಯೋಗದಿಂದ ತೆರೆದ ನಿರುದ್ಯೋಗದ ಕಡೆಗೆ ವಾಲಿತ್ತು ಎಂದು ಅಭಿಪ್ರಾಯ ಪಡಲಾಗಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ದಿನಗೂಲಿಗೆ ಬದಲಾಗಿ ನಿರಂತರ ಉದ್ಯೋಗವನ್ನು ಹೆಚ್ಚಾಗಿ ಬಯಸುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ.

ಅರೆ ಉದ್ಯೋಗವು ಇಳಿಮುಖವಾಗುತ್ತಿದ್ದು, ವಿಶೇಷವಾಗಿ, ಗ್ರಾಮೀಣ ಪ್ರದೇಶಗಳಲ್ಲಿ ಹಾಗೂ ಮಹಿಳೆಯರಲ್ಲಿಹೆಚ್ಚಿನ ಇಳಿತ ಕಂಡು ಬಂದಿತ್ತು. ನಿರುದ್ಯೋಗ ಮತ್ತು ಅರೆ ಉದ್ಯೋಗವನ್ನು ಒಟ್ಟಾರೆ ತೆಗೆದುಕೊಂಡು ಕಾರ್ಮಿಕ ಶಕ್ತಿಯಲ್ಲಿ ಇವುಗಳ ಪ್ರಮಾಣವನ್ನು ಗಮನಿಸಿದರೆ, ೫ನೇ ಪಂಚವಾರ್ಷಿಕ ಯೋಜನೆಯಲ್ಲಿ ಶೇ. ೧೮.೬ ಇದ್ದುದು ೭ನೇ ಪಂಚವಾರ್ಷಿಕ ಅವಧಿಯಲ್ಲಿ ಶೇ. ೧೩.೫ಕ್ಕೆ ಇಳಿದಿರುವುದು ಗೋಚರವಾಗುತ್ತದೆ.

ನಿರುದ್ಯೋಗದ ಅಳತೆಯ ೩ನೇ ವಿಧಾನದ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ದಾಖಲಾದ ನಿರುದ್ಯೋಗಿಗಳ ಸಂಖ್ಯೆಯ ಆಧಾರದಲ್ಲಿ ೧-೪-೯೫ರಲ್ಲಿ ೧೬.೫೧ ಲಕ್ಷ ಮಂದಿ ರಾಜ್ಯದಲ್ಲಿ ನಿರುದ್ಯೋಗಿಗಳಿದ್ದರು. ಆದರೆ ಈ ಅಳತೆಯಲ್ಲಿ ಕೆಲವು ನ್ಯೂನತೆಗಳಿವೆ. ಅವುಗಳೆಂದರೆ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ದಾಖಲು

ಮಾಡದೇ ಇರುವವರ ಸಂಖ್ಯೆ ಹಾಗೂ ಉದ್ಯೋಗದಲ್ಲಿದ್ದು ಉದ್ಯೋಗ ವಿನಿಮಯ ಕೇಂದ್ರಗಳ ದಾಖಲೆಗಳಲ್ಲಿ ಮುಂದುವರೆಯುತ್ತಿರುವವರ ಸಂಖ್ಯೆಯಿಂದಾಗಿ ಈ ಅಳತೆಯು ಪರಿಪೂರ್ಣವಲ್ಲ. ಒಟ್ಟು ೧೬.೫೧ ಲಕ್ಷ ದಾಖಲಾದ ಉದ್ಯೋಗಾಕಾಂಕ್ಷಿಗಳಲ್ಲಿ ಮೆಟ್ರಿಕ್ ವಿದ್ಯಾರ್ಹತೆಗಿಂತ ಕಡಿಮೆ ಇರುವವರು ೧೩.೮೫ ಲಕ್ಷ (ಶೇ. ೮೩.೯), ಪದವೀಧರರು ೧.೬೦ ಲಕ್ಷ (ಶೇ. ೯.೭), ಡಿಪ್ಲೊಮೋದಾರರು ೩೫ ಸಾವಿರ (ಶೇ. ೨.೧), ಸರ್ಟಿಫಿಕೇಟ್ ಹೊಂದಿರುವವರು ೪೯ ಸಾವಿರ (ಶೇ. ೩) ಹಾಗೂ ಸ್ನಾತಕೋತ್ತರ ಪದವಿ ಪಡೆದವರು ೧೫ ಸಾವಿರ (ಶೇ. ೦.೯) ಇದ್ದರು. ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ದಾಖಲಾದವರು ಸಂಖ್ಯೆಗೂ, ಉದ್ಯೋಗ ಪಡೆದವರ ಸಂಖ್ಯೆಗೂ ಮಧ್ಯೆ ಅಗಾಧವಾದ ಅಂತರವಿತ್ತು. ೧೯೯೪-೯೫ರ ಅಂತ್ಯಕ್ಕೆ ಉದ್ಯೋಗಾಕಾಂಕ್ಷಿಗಳೂಳು ೧೬.೫೧ ಲಕ್ಷ ಇದ್ದರೆ, ೨೪ ಸಾವಿರ ಖಾಲಿ ಹುದ್ದೆಗಳಿಗೆ ಸೂಚನೆ ನೀಡಲಾಗಿ, ಕೇವಲ ೧೨,೪೦೦ ಮಂದಿಗೆ ಉದ್ಯೋಗ ನೀಡಿಕೆಯಾಗಿತ್ತು.

ಇನ್ನು ಉದ್ಯೋಗದ ಬಗ್ಗೆ ಹೇಳುವುದಾದರೆ, ಕಳೆದ ೩೦ ವರ್ಷಗಳಲ್ಲಿ ಕರ್ನಾಟಕದಲ್ಲಿ ಸಂಘಟಿತ ವಲಯದ ಉದ್ಯೋಗವು ಸರಾಸರಿ ವಾರ್ಷಿಕವಾಗಿ ೩೦ ಸಾವಿರದಂತೆ ಹೆಚ್ಚಿತ್ತು. ಇದು ಭಾರತದಲ್ಲಿ ವಾರ್ಷಿಕವಾಗಿ ೫ ಲಕ್ಷವಾಗಿತ್ತು. ೧-೪-೯೫ರಲ್ಲಿ ಕರ್ನಾಟಕದಲ್ಲಿ ಸಂಘಟಿತ ವಲಯದಲ್ಲಿ ಉದ್ಯೋಗವು ೧೪.೪೫ ಲಕ್ಷ ಆಗಿತ್ತು. ಇದು ಒಟ್ಟು ಉದ್ಯೋಗದ ಕೇವಲ ಶೇ. ೧೦ರಷ್ಟು ಮಾತ್ರ. ಒಟ್ಟು ಸಂಘಟಿತ ವಲಯದ ಉದ್ಯೋಗದಲ್ಲಿ ಸಾರ್ವಜನಿಕ ಮತ್ತು ಖಾಸಗಿ ವಲಯಗಳ ಶೇಕಡಾ ಪ್ರಮಾಣವು ಕ್ರಮವಾಗಿ ೬೭.೫ ಮತ್ತು ೩೨.೫ ಆಗಿತ್ತು. ಉದ್ಯೋಗ ನಿರುದ್ಯೋಗದ ಸ್ಥಿತಿಯನ್ನು ವಿಶ್ಲೇಷಿಸಿದ ಮೇಲೆ, ಇವುಗಳನ್ನು ಒಂದು ನಿರ್ದಿಷ್ಟ ಅವಧಿಗೆ (೧-೪-೯೫) ಅಂದಾಜಿಸುವುದು ಉಪಯುಕ್ತ.

೧೯೮೧ನೇ ಜನಗಣತಿಯ ಮಾಹಿತಿಯ ಆಧಾರದ ಮೇಲೆ ೧೫ರಿಂದ ೫೯ ವರ್ಷ ವಯಸ್ಸಿನ ಗುಂಪಿನ ಜನ ಸಂಖ್ಯೆಗೆ ಕೆಲಸಗಾರರಲ್ಲಿದ್ದವರ ಪ್ರಮಾಣವನ್ನು ಉಪಯೋಗಿಸಿ ೧-೪-೯೫ರಂದು ಕರ್ನಾಟಕದಲ್ಲಿ ಸುಮಾರು ೨೨.೪ ಲಕ್ಷ ನಿರುದ್ಯೋಗಿಗಳಿದ್ದರೆಂದು ಅಂದಾಜು ಮಾಡಲಾಗಿದೆ. ಅಂತೆಯೇ, ರಾಷ್ಟ್ರೀಯ ಮಾದರಿ ಸಮೀಕ್ಷೆ ೪೮ನೇ ಸುತ್ತಿನ ಕಾರ್ಮಿಕ ಶಕ್ತಿಯ ದರವನ್ನು ೧೯೯೧ನೇ ಜನಗಣತಿಯ ಜನಸಂಖ್ಯೆಗೆ ಅನ್ವಯಿಸಿ ಹಾಗೂ ಕಾರ್ಮಿಕ ಶಕ್ತಿಯ ಸರಾಸರಿ ವಾರ್ಷಿಕ ಬೆಳವಣಿಗೆಯಾದ ಶೇ. ೧.೫ನ್ನು ಊಹಿಸಿ ೧-೪-೯೫ರಂದು ಕರ್ನಾಟಕದ ಒಟ್ಟು ಕಾರ್ಮಿಕ ಶಕ್ತಿ ೨೦೪.೧೬ ಲಕ್ಷ ಎಂದು ಅಂದಾಜಿಸಿದೆ. ಈ ಕಾರ್ಮಿಕ ಶಕ್ತಿಗೆ ನಿರುದ್ಯೋಗ ದರವನ್ನು ಅನ್ವಯಿಸಿದರೆ ಈ ಮಾಹಿತಿ ಮೂಲದ ಪ್ರಕಾರ ಕರ್ನಾಟಕದ ನಿರುದ್ಯೋಗಿಗಳ ಸಂಖ್ಯೆ ೯.೨೨ ಲಕ್ಷ ಆಗುತ್ತದೆ. ಹಾಗೂ ಉದ್ಯೋಗಿಗಳ ಸಂಖ್ಯೆ ೧೯೪.೯೪ ಲಕ್ಷ ಆಗುತ್ತದೆ. ರಾಷ್ಟ್ರೀಯ ಮಾದರಿ ಸಮೀಕ್ಷೆ

೪೩ನೇ ಸುತ್ತಿನ ಅರೆ ಉದ್ಯೋಗಿ ದರವನ್ನು ಉಪಯೋಗಿಸಿ ೧-೪-೯೫ರಂದು ಒಟ್ಟು ಅರೆ ಉದ್ಯೋಗಿಗಳ ಸಂಖ್ಯೆ ೧೫.೭೭ ಲಕ್ಷ ಎಂದು ಅಂದಾಜಿದೆ. ವಿವರಗಳನ್ನು ಕೋಷ್ಟಕ- ೧ರಲ್ಲಿ ಕೊಡಲಾಗಿದೆ.

ಕೋಷ್ಟಕ - ೧

೧-೪-೧೯೯೫ರಂದು ಕಾರ್ಮಿಕ ಶಕ್ತಿ, ನಿರುದ್ಯೋಗ ಮತ್ತು ಉದ್ಯೋಗದ ಅಂದಾಜುಗಳು

| ವಿವರಗಳು | ಗಂಡಸರು | ಹೆಂಗಸರು | ಒಟ್ಟು |
|---|---|---|---|
| **೧. ಕಾರ್ಮಿಕ ಶಕ್ತಿ** | | | |
| ಅ. ಗ್ರಾಮೀಣ | ೯೯.೪೭ | ೫೧.೯೦ | ೧೫೧.೩೬ |
| ಆ. ನಗರ | ೪೧.೯೧ | ೧೦.೮೮ | ೫೨.೮೦ |
| ಒಟ್ಟು | ೧೪೧.೩೮ | ೬೨.೭೮ | ೨೦೪.೧೬ |
| **೨. ನಿರುದ್ಯೋಗ** | | | |
| ಅ. ಗ್ರಾಮೀಣ | ೫.೪೨ | ೦.೪೧ | ೫.೮೩ |
| ಆ. ನಗರ | ೨.೮೨ | ೦.೫೩ | ೩.೩೪ |
| ಒಟ್ಟು | ೮.೨೪ | ೦.೯೪ | ೯.೨೨ |
| **೩. ಅರೆ ಉದ್ಯೋಗ** | | | |
| ಅ. ಗ್ರಾಮೀಣ | ೭.೬೬ | ೨.೭೬ | ೧೦.೪೨ |
| ಆ. ನಗರ | ೪.೦೮ | ೧.೨೭ | ೫.೩೫ |
| ಒಟ್ಟು | ೧೧.೭೪ | ೪.೦೩ | ೧೫.೭೭ |
| **೪. ಉದ್ಯೋಗ** | | | |
| ಅ. ಗ್ರಾಮೀಣ | ೪೪.೬೧ | ೫೦.೩೧ | ೧೪೪.೯೨ |
| ಆ. ನಗರ | ೩೯.೬೫ | ೧೦.೩೭ | ೫೦.೦೨ |
| ಒಟ್ಟು | ೧೩೪.೨೬ | ೬೦.೬೮ | ೧೯೪.೯೪ |

ಈ ಎಲ್ಲಾ ವಿಶ್ಲೇಷಣೆಯಿಂದ, ನಿರುದ್ಯೋಗ ಮತ್ತು ಅರೆ ಉದ್ಯೋಗವನ್ನು ನಮ್ಮ ರಾಜ್ಯದಲ್ಲಿ ಪ್ರತ್ಯೇಕಿಸಲು ಇರುವುದರಿಂದ, ಇವುಗಳನ್ನು ಒಟ್ಟಾಗಿ ನಿರುದ್ಯೋಗ ಎಂದು ಊಹಿಸಿಕೊಂಡರೆ ರಾಜ್ಯದ ನಿರುದ್ಯೋಗದ ಮಟ್ಟ ಕಾರ್ಮಿಕ ಶಕ್ತಿಯ ಶೇ.

೧೨ರಷ್ಟು ಆಗಿರುತ್ತದೆ. ಅಲ್ಲದೆ ಈ ಮಟ್ಟವು ಗ್ರಾಮೀಣ ಪ್ರದೇಶಗಳಲ್ಲಿ ಇದಕ್ಕಿಂತ ಹೆಚ್ಚಾಗಿದ್ದು ೮ನೇ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ ವಿಶ್ಲೇಷಿಸಿರುವಂತೆ ಸುಮಾರು ಶೇ. ೧೫ರಿಂದ ೨೦ರ ಮಟ್ಟದಲ್ಲಿ ಇರುತ್ತದೆ.

ಈ ಮುಂದಿನ ಪುಟಗಳಲ್ಲಿ ಕರ್ನಾಟಕದ ಬಡತನದ ಮಟ್ಟವನ್ನು ನಿರ್ಧರಿಸುವ ಪ್ರಯತ್ನ ಮಾಡಲಾಗಿದೆ.

ಹಿಂದೆ ತಿಳಿಸಿರುವಂತೆ, ಕುಟುಂಬಗಳ ವರಮಾನದ ಮಾಹಿತಿಯ ಅಭಾವದಲ್ಲಿ, ಬಡತನವನ್ನು ಅಧ್ಯಯನ ಮಾಡಲು ರಾಷ್ಟ್ರೀಯ ಮಾದರಿ ಸಮೀಕ್ಷೆಯ ಕುಟುಂಬ ಗ್ರಾಹಕರ ವೆಚ್ಚದ ಮಾಹಿತಿಯನ್ನು ಉಪಯೋಗಿಸಲಾಗುತ್ತದೆ. ಕೋಷ್ಟಕ-೨ರಲ್ಲಿ ೧೯೮೭-೮೮ರಿಂದ ೧೯೯೧-೯೨ರ ವರೆಗಿನ ಕುಟುಂಬ ಗ್ರಾಹಕ ವೆಚ್ಚದ ವರ್ಗವಾರು ಜನಸಂಖ್ಯೆ ಮತ್ತು ಕುಟುಂಬಗಳ ಹಂಚಿಕೆಯನ್ನು ನೀಡಲಾಗಿದೆ.

ಕೋಷ್ಟಕ - ೨

ಶೇಕಡಾವಾರು ತಲಾ ಮಾಸಿಕ ವೆಚ್ಚಗಳ ವರ್ಗವಾರು ಜನಸಂಖ್ಯೆ ಮತ್ತು ಕುಟುಂಬಗಳ ಹಂಚಿಕೆ ೧೯೮೭-೮೮ರಿಂದ ೧೯೯೨

| ತಲಾ ಮಾಸಿಕ ವರ್ಗದ ವೆಚ್ಚ (ರೂ. ಗಳಲ್ಲಿ) | | ೧೯೮೭೮೮ | ೮೮೮೯ | ೮೯೯೦ | ೯೦೯೧ | ೯೧ (ಜುಲೈ-ಡಿಸೆಂಬರ್ ೯೧) | ೧೯೯೨ |
|---|---|---|---|---|---|---|---|
| ೧೧೦ಕ್ಕಿಂತ ಕಡಿಮೆ | ಕುಟುಂಬ | ೩೪.೦ | ೨೫.೬ | ೨೩.೬ | ೨೧.೯ | ೮.೭ | ೫.೨ |
| | ಜನಸಂಖ್ಯೆ | ೩೭.೪ | ೨೯.೧ | ೨೮.೬ | ೨೪.೮ | ೧೧.೧ | ೮.೦ |
| ೧೧೦ರಿಂದ | ಕುಟುಂಬ | ೪೮.೪ | ೫೪.೬ | ೪೯.೮ | ೪೬.೨ | ೪೫.೮ | ೪೫.೦ |
| ೨೧೫ | ಜನಸಂಖ್ಯೆ | ೪೮.೯ | ೫೩.೨ | ೫೦.೯ | ೪೪.೩ | ೪೯.೬ | ೫೦.೧ |
| ೨೧೫ರಿಂದ | ಕುಟುಂಬ | ೧೪.೩ | ೧೬.೯ | ೨೧.೮ | ೨೯.೬ | ೩೬.೬ | ೩೮.೬ |
| ೩೮೫ | ಜನಸಂಖ್ಯೆ | ೧೧.೬ | ೧೩.೮ | ೧೬.೯ | ೨೯.೩ | ೩೪.೪ | ೩೫.೭ |
| ೩೮೫ಕ್ಕಿಂತ | ಕುಟುಂಬ | ೩.೩ | ೨.೯ | ೪.೮ | ೨.೩ | ೮.೭ | ೧೦.೦ |
| ಹೆಚ್ಚು | ಜನಸಂಖ್ಯೆ | ೨.೧ | ೧.೯ | ೩.೬ | ೧.೬ | ೫.೯ | ೬.೨ |
| ೧೩೫ಕ್ಕಿಂತ | ಜನಸಂಖ್ಯೆ | ೩೦.೦ | ೧೯.೫ | ೨೦.೨ | ೧೫.೯ | ೭.೮ | ೬.೧ |
| ಕಡಿಮೆ | ಕುಟುಂಬ | ೨೩.೪ | ೧೫.೦ | ೧೪.೦ | ೧೧.೨ | ೬.೯ | ೪.೫ |
| ೧೩೫ರಿಂದ | ಜನಸಂಖ್ಯೆ | ೪೪.೪ | ೪೫.೮ | ೪೦.೧ | ೩೬.೧ | ೪೧.೨ | ೩೮.೩ |
| ೨೫೫ | ಕುಟುಂಬ | ೪೧.೪ | ೪೦.೮ | ೩೫.೭ | ೩೧.೯ | ೩೫.೫ | ೨೯.೨ |
| ೨೫೫ರಿಂದ | ಜನಸಂಖ್ಯೆ | ೨೪.೨ | ೩೨.೬ | ೩೬.೭ | ೪೨.೫ | ೪೬.೯ | ೪೭.೮ |
| ೭೦೦ | ಕುಟುಂಬ | ೩೨.೭ | ೪೦.೧ | ೪೫.೩ | ೪೬.೯ | ೫೦.೫ | ೫೬.೧ |
| ೭೦೦ಕ್ಕಿಂತ | ಜನಸಂಖ್ಯೆ | ೧.೪ | ೨.೧ | ೩.೦ | ೫.೫ | ೪.೦ | ೭.೭ |
| ಹೆಚ್ಚು | ಕುಟುಂಬ | ೨.೬ | ೩.೧ | ೫.೦ | ೧೦.೦ | ೬.೫ | ೧೦.೩ |

= ಅಲ್ಪ ಪ್ರಮಾಣದ ಮಾದರಿಗಳು = ಬಹುಪ್ರಮಾಣದ ಮಾದರಿಗಳು

ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ತಲಾ ಮಾಸಿಕ ವೆಚ್ಚ ರೂ. ೧೧೦ಕ್ಕಿಂತ ಕಡಿಮೆ ವರ್ಗದ ಜನಸಂಖ್ಯೆಯ ಶೇಕಡ ಪ್ರಮಾಣವು ೧೯೮೭-೮೮ರಲ್ಲಿ ೩೭.೪ ಇದ್ದುದು, ೧೯೯೨ರಲ್ಲಿ ಶೇ. ೮ಕ್ಕೆ ಗಮನಾರ್ಹವಾಗಿ ಇಳಿಯಿತು. ಆದರೆ ಮುಂದಿನ ವರ್ಗವಾದ ರೂ.೧೧೦-೨೫೫ರ ವರ್ಗದಲ್ಲಿ ಈ ಶೇಕಡ ಪ್ರಮಾಣದಲ್ಲಿ ಯಾವುದೇ ಬದಲಾವಣೆ ಇಲ್ಲದೆ ಹೆಚ್ಚು ಕಡಿಮೆ ಅದು ಶೇ. ೫೦ರ ಅಂಚಿನಲ್ಲಿ ನಿಂತಿತ್ತು. ರೂ.೨೧೫-೩೮೫ರ ವರ್ಗದಲ್ಲಿನ ಜನಸಂಖ್ಯೆಯ ಶೇಕಡ ಪ್ರಮಾಣವು ಇದೇ ಅವಧಿಯಲ್ಲಿ ೧೧.೬ರಿಂದ ೩೫.೭ಕ್ಕೆ ಏರಿತ್ತು. ಅತ್ಯಂತ ಹೆಚ್ಚಿನ ವರ್ಗವಾದ ರೂ. ೩೮೫ಕ್ಕಿಂತ ಹೆಚ್ಚಿನ ವರ್ಗದಲ್ಲಿ ಈ ಶೇಕಡ ಪ್ರಮಾಣವು ಈ ಐದು ವರ್ಗಗಳ ಅವಧಿಯಲ್ಲಿ ೨.೧ರಿಂದ ೬.೨ಕ್ಕೆ ಏರಿತ್ತು.

ಅದರಂತೆ, ನಗರ ಪ್ರದೇಶಗಳಲ್ಲಿ ರೂ. ೧೩೫ಕ್ಕಿಂತ ಕಡಿಮೆ ತಲಾಮಾಸಿಕ ವೆಚ್ಚದ ವರ್ಗದ ಜನಸಂಖ್ಯೆಯ ಶೇಕಡ ಪ್ರಮಾಣವು ೧೯೮೭-೮೮ರಿಂದ ೧೯೯೨ರ ಅವಧಿಯಲ್ಲಿ ೩೦ರಿಂದ ೬.೧ಕ್ಕೆ ಇಳಿದಿತ್ತು. ಆದರೆ ಮುಂದಿನ ವರ್ಗವಾದ ರೂ. ೧೩೫ರಿಂದ ೨೫೫ರ ವರ್ಗದಲ್ಲಿ ಇದೇ ಅವಧಿಯಲ್ಲಿ ಶೇ. ೬ ಅಂಶಗಳಷ್ಟು ಇಳಿತವಿದ್ದರೂ ಅಂತಹ ಗಮನಾರ್ಹ ವ್ಯತ್ಯಾಸವೇನೂ ಕಂಡು ಬಂದಿಲ್ಲ. ರೂ. ೨೫೫-೭೦೦ ವರ್ಗದಲ್ಲಿ ಈ ಶೇಕಡ ಪ್ರಮಾಣವು ೨೪.೨ಕ್ಕೆ ಕ್ರಮೇಣವಾಗಿ ಏರಿತ್ತು. ಪುನಃ ಇದೇ ಅವಧಿಯಲ್ಲಿ ರೂ. ೭೦೦ಕ್ಕಿಂತ ಹೆಚ್ಚಿನ ವೆಚ್ಚದ ವರ್ಗದಲ್ಲಿ ಈ ಶೇಕಡ ಪ್ರಮಾಣವು ೧.೪ರಿಂದ ೭.೭ಕ್ಕೆ ಏರಿತ್ತು.

ಇಷ್ಟೇ ಅಲ್ಲದೆ, ಕೇಂದ್ರದಲ್ಲಿನ ಯೋಜನಾ ಆಯೋಗವು ಅಧಿಕೃತವಾಗಿ ರಾಜ್ಯಗಳ ಬಡತನ ರೇಖೆಯನ್ನು ನಿರ್ಧರಿಸಿ ಬಿಡುಗಡೆ ಮಾಡುತ್ತಿದೆ. ಕೋಷ್ಟಕ ೩ ಇಂತಹ ಮಾಹಿತಿಗಳನ್ನು ಒಳಗೊಂಡಿದೆ.

ಕೋಷ್ಟಕ - ೩

ಕರ್ನಾಟಕ ಹಾಗೂ ಭಾರತದ ಬಡತನ ಮಟ್ಟಗಳು

| ವರ್ಷ | ಗ್ರಾಮೀಣ | | | ನಗರ | | | ಒಟ್ಟು | |
|---|---|---|---|---|---|---|---|---|
| | ಬಡತನ ರೇಖೆ (ರೂ.) | ಸಂಖ್ಯೆ (ಲಕ್ಷ ಗಳಲ್ಲಿ) | ಶೇಕಡ | ಬಡತನ ರೇಖೆ (ರೂ.) | ಸಂಖ್ಯೆ (ಲಕ್ಷ ಗಳಲ್ಲಿ) | ಶೇಕಡ | ಸಂಖ್ಯೆ (ಲಕ್ಷ ಗಳಲ್ಲಿ) | ಶೇಕಡ |
| ೧೯೭೨-೭೩ | | | | | | | | |
| ಕರ್ನಾಟಕ | ೪೮.೪೬ | ೧೧೯.೦ | ೫೨.೩ | ೪೮.೭೨ | ೩೪.೩ | ೪೫.೮ | ೧೫೩.೩ | ೫೦.೦ |
| ಭಾರತ | ೪೦.೨೪ | ೨೪೪೨.೨ | ೫೪.೧ | ೪೭.೩೧ | ೪೭೩.೩ | ೪೧.೨ | ೨೯೧೫.೫ | ೫೧.೫ |
| ೧೯೭೭-೭೮ | | | | | | | | |
| ಕರ್ನಾಟಕ | ೬೪.೦೬ | ೧೩೧.೯ | ೫೩.೨ | ೭೯.೧೮ | ೪೧.೬ | ೪೪.೬ | ೧೭೩.೫ | ೫೦.೮ |
| ಭಾರತ | ೬೧.೦೫ | ೨೫೩೧.೦ | ೫೧.೨ | ೮೭.೦೦ | ೫೩೭.೦ | ೩೮.೨ | ೩೦೬೮.೦ | ೪೮.೩ |
| ೧೯೮೩-೮೪ | | | | | | | | |

| | | | | | | | | |
|---|---|---|---|---|---|---|---|---|
| ಕರ್ನಾಟಕ | ೧೦೨.೧೩ | ೧೦೨.೯ | ೩೭.೫ | ೧೨೩.೯೧ | ೩೪.೭ | ೨೯.೨ | ೧೩೭.೬ | ೩೫.೦ |
| ಭಾರತ | ೧೦೧.೭೦ | ೨೨೧೫.೦ | ೪೦.೪ | ೧೧೭.೫೦ | ೪೦೫.೦ | ೨೮.೧ | ೨೭೧೦.೦ | ೩೭.೪ |
| ೧೯೮೭-೮೮ | | | | | | | | |
| ಕರ್ನಾಟಕ | ೧೨೮.೫೪ | ೧೦೨.೮ | ೩೫.೯ | ೧೫೯.೧೧ | ೩೩.೭ | ೨೪.೨ | ೧೩೬.೫ | ೩೨.೧ |
| ಭಾರತ | ೧೩೧.೬೦ | ೧೯೫೯.೭ | ೩೩.೪ | ೧೫೨.೧೩ | ೪೧೭.೦ | ೨೦.೧ | ೨೩೭೬.೭ | ೨೯.೯ |

ಈ ಕೋಷ್ಟಕದಿಂದ ಹೊರಬೀಳುವ ಫಲಿತಾಂಶವೆಂದರೆ, ಕರ್ನಾಟಕದ ಬಡತನದ ಮಟ್ಟವು ಗ್ರಾಮೀಣ ಹಾಗೂ ನಗರ ಪ್ರದೇಶಗಳೆರಡಲ್ಲೂ ಭಾರತದ ಮಟ್ಟಕ್ಕಿಂತ ಹೆಚ್ಚಾಗಿರುತ್ತದೆ ಎಂಬುದು.

ಹೀಗೆಯೇ ಉದ್ಯೋಗ, ನಿರುದ್ಯೋಗ ಮಟ್ಟಗಳನ್ನು ಭಾರತದೊಂದಿಗೆ ಹೋಲಿಸಿದಾಗ ಅರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಈ ಹಿಂದೆ ತಿಳಿಸಿರುವ ಪ್ರಕಟಣೆಯಿಂದ ತಿಳಿದು ಬರುವಂತೆ, ಎಲ್ಲಾ ಮೂರು ವಿಧಾನಗಳಾದ ಸಾಮಾನ್ಯ ಸ್ಥಿತಿ, ಪ್ರಸ್ತುತ ವಾರದ ಸ್ಥಿತಿ ಹಾಗೂ ಪ್ರಸ್ತುತ ನಿತ್ಯದ ಸ್ಥಿತಿಗಳಂತೆ, ಉದ್ಯೋಗಸ್ಥರ ಪ್ರಮಾಣವು ಭಾರತದ ಪ್ರಮಾಣಕ್ಕಿಂತ ಉತ್ತಮವಾಗಿತ್ತು ಎಂಬುದು. ಅಲ್ಲದೆ, ಮೇಲ್ಕಾಣಿಸಿದ ಎಲ್ಲಾ ಮೂರು ಸ್ಥಿತಿಯಂತೆ, ನಿರುದ್ಯೋಗವೂ ಸಹ ಭಾರತದ ಸ್ಥಿತಿಗಿಂತ ಗಮನಾರ್ಹವಾಗಿ ಕಡಿಮೆಯಿತ್ತು.

## ೩. ಕರ್ನಾಟಕದಲ್ಲಿ ಉದ್ಯೋಗದ ರಚನೆ

ಉದ್ಯೋಗ ಉತ್ಪತ್ತಿಗಳ ಅವಕಾಶಗಳನ್ನು ತಿಳಿಯುವುದಕ್ಕೆ ಮೊದಲು ಸದ್ಯದ ಕರ್ನಾಟಕದ ಉದ್ಯೋಗದ ರಚನೆಯನ್ನು ತಿಳಿಯುವುದು ಉತ್ತಮ.

ರಾಷ್ಟ್ರೀಯ ಮಾದರಿ ಸಮೀಕ್ಷೆಗಳ ಪಂಚವಾರ್ಷಿಕ ಸುತ್ತುಗಳ ಫಲಿತಾಂಶಗಳನ್ನು ೧೯೮೩ರಲ್ಲಿ ಒಟ್ಟು ಉದ್ಯೋಗದಲ್ಲಿ ಸ್ವಯಂ ಉದ್ಯೋಗಿಗಳು ಶೇ. ೪೬.೪ ಇದ್ದುದು, ೧೯೮೭-೮೮ರಲ್ಲಿ ೪೪.೫ಕ್ಕೆ ಇಳಿದಿತ್ತು ಎಂದೂ, ಇದೇ ಅವಧಿಯಲ್ಲಿ ದಿನಗೂಲಿ ಉದ್ಯೋಗಸ್ಥರು ಶೇ. ೩೮.೬ರಿಂದ ಶೇ. ೧.೬ಕ್ಕೆ ಏರಿದ್ದರೆಂದೂ ಹಾಗೂ ವೇತನ ಪಡೆಯುವ ಉದ್ಯೋಗಸ್ಥರು ಶೇ. ೧.೫ರಿಂದ ಶೇ. ೧೩.೯ಕ್ಕೆ ಇಳಿದಿದ್ದರೆಂದು ತಿಳಿಸುತ್ತವೆ. ಒಟ್ಟಿನಲ್ಲಿ ಈ ವಿಶ್ಲೇಷಣೆಯಿಂದ ಸ್ವಯಂ ಉದ್ಯೋಗಸ್ಥರು ಹಾಗೂ ವೇತನ ಪಡೆಯುವ ಉದ್ಯೋಗಸ್ಥರಲ್ಲಿ ಇಳಿಕೆಯೂ ದಿನಗೂಲಿ ಉದ್ಯೋಗಸ್ಥರಲ್ಲಿ ಏರಿಕೆಯೂ ಕಂಡು ಬಂದಿದೆ ಎಂದು ಹೇಳಬಹುದು.

ಈ ಸಮೀಕ್ಷೆಗಳ ಕೈಗಾರಿಕಾ ಗುಂಪುಗಳಲ್ಲಿನ ಉದ್ಯೋಗದ ವಿಶ್ಲೇಷಣೆಯಂತೆ, ೧೯೮೩ರಲ್ಲಿ ಕೃಷಿ, ಶಿಕಾರಿ, ಅರಣ್ಯ ಹಾಗೂ ಮೀನುಗಾರಿಕೆಗಳು ಒಟ್ಟು ಉದ್ಯೋಗದ ಶೇಕಡಾ ೬೭ ಇದ್ದುದು ೧೯೮೭-೮೮ರಲ್ಲಿ ೬೫.೫೪ಕ್ಕೆ ಇಳಿದಿತ್ತು. ಉತ್ಪಾದಕತೆಯ ವಲಯದ ಪಾಲು ೧೯೮೩ರಲ್ಲಿ ಶೇ. ೧೧.೧ ಇದ್ದುದು,

೧೯೮೭-೮೮ರಲ್ಲಿ ಅಲ್ಪ ಪ್ರಮಾಣದ (ಶೇ. ೧೧.೩) ಏರಿಕೆಯಾಗಿತ್ತು. ಸಮೂಹ, ಸಾಮಾಜಿಕ ಮತ್ತು ವೈಯಕ್ತಿಕ ಸೇವೆಗಳ ವಲಯಗಳ ಉದ್ಯೋಗದ ಪಾಲು ೧೯೮೩ರಲ್ಲಿ ಶೇ. ೭ ಆಗಿದ್ದುದು, ೧೯೮೭-೮೮ರಲ್ಲಿ ಶೇ. ೯.೧ಕ್ಕೆ ಏರಿತ್ತು. ಸಾರಾಂಶವೆಂದರೆ, ಕೃಷಿ ವಲಯ ಶೇ. ೭೫ಕ್ಕೆ ಹೆಚ್ಚು ಉದ್ಯೋಗದ ಪಾಲನ್ನು, ಉತ್ಪಾದನಾ ವಲಯವು ಸುಮಾರು ಶೇ.೧೧ರಷ್ಟು ಪಾಲನ್ನೂ, ಶೇ. ೧೦ರಷ್ಟು ಪಾಲು ಇನ್ನುಳಿದ ವಲಯಗಳ ಪಾಲಾಗಿತ್ತು. ಕೃಷಿ ವಲಯವು ಒಟ್ಟು ಉದ್ಯೋಗದ ೨/೩ ಪಾಲು ಪಡೆದಿದ್ದು, ಕೃಷಿಯೇತರ ವಲಯಗಳ ಪಾಲಿನಲ್ಲಿ ಕರ್ನಾಟಕದಲ್ಲಿ ಶೇ. ೨ ಏರಿಕೆಯಾಗಿದ್ದರೆ, ಭಾರತದಲ್ಲಿ ಸುಮಾರು ಶೇ. ೩ರಷ್ಟು ಏರಿಕೆಯಾಗಿತ್ತು.

ಅತಿ ದೊಡ್ಡ ಪಾಲು ಪಡೆದಿರುವ ಕೃಷಿವಲಯದ ಬಗ್ಗೆ ಹೇಳುವುದಾದರೆ, ಕೃಷಿ ವಲಯದ ಒಟ್ಟು ಉದ್ಯೋಗದಲ್ಲಿ ಕೃಷಿ ಉತ್ಪಾದನೆ ಶೇ. ೮೫ರಷ್ಟು ಹೈನುಗಾರಿಕೆ ಉತ್ಪಾದನೆ ಶೇ. ೮ರಷ್ಟು ಆಗಿತ್ತು. ೧೯೯೦-೯೧ರ ಕೃಷಿಗಣತಿಯ ಭೂಹಿಡುವಳಿ ರಚನೆಯನ್ನು ವಿಶ್ಲೇಷಿಸಿದಾಗ, ಶೇ. ೩೩ ಭೂ ಹಿಡುವಳಿಗಳು ಒಟ್ಟು ವಿಸ್ತೀರ್ಣದ ಶೇ. ೭೩ ಪಾಲನ್ನು ಹೊಂದಿದ್ದವು ಎಂದೂ, ಸರಾಸರಿ ಭೂಹಿಡುವಳಿಗಳ ಗಾತ್ರ ೩.೨ ಭೂಹಿಡುವಳಿ ೨ ಹೆಕ್ಟೇರು ಆಗಿತ್ತೆಂದು ಕಂಡು ಬರುತ್ತದೆ. ಅಲ್ಲದೆ ಅತಿ ಸಣ್ಣ ಹಿಡುವಳಿದಾರರ ಪ್ರಮಾಣವು ಹೆಚ್ಚಾಗಿದ್ದು, ಸಣ್ಣ ಭೂಹಿಡುವಳಿದಾರರ ಪ್ರಮಾಣದಲ್ಲಿ ಯಾವ ವ್ಯತ್ಯಾಸವು ತೋರದೆ, ದೊಡ್ಡ ಭೂಹಿಡುವಳಿದಾರರ ಪ್ರಮಾಣವು ಇಳಿದಿತ್ತು ಎಂಬುದು ವೇದ್ಯವಾಗುತ್ತದೆ. ಹೀಗಾಗಿ, ಕಾಲಾನುಕ್ರಮದಲ್ಲಿ ಭೂಹಿಡುವಳಿಗಳ ಅಸಮತೆಯ ಮಟ್ಟವು ಹೆಚ್ಚಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅತಿ ಸಣ್ಣ ಭೂಹಿಡುವಳಿದಾರರ ಸರಾಸರಿ ಹಿಡುವಳಿ ಗಾತ್ರ ಕಡಿಮೆಯಾಗುತ್ತಿರುವುದರಿಂದ ಈ ಅತಿ ಸಣ್ಣ ರೈತರು ಕೃಷಿ ಕ್ಷೇತ್ರದ ಹೊರಗಡೆ ಉದ್ಯೋಗವನ್ನರಸುವ ಸಾಧ್ಯತೆ ಇರುತ್ತದೆ. ಹೀಗಾಗಿ, ಕೃಷಿ ಕ್ಷೇತ್ರದಿಂದ ಕೃಷಿಯೇತರ ಕ್ಷೇತ್ರಕ್ಕೆ ಉದ್ಯೋಗವು ಬದಲಾಗಬಹುದಾಗಿದ್ದು, ಗ್ರಾಮೀಣ ಪ್ರದೇಶಗಳಲ್ಲಿ ಈ ಹೆಚ್ಚಿನ ಕಾರ್ಮಿಕ ಶಕ್ತಿಯನ್ನು ಕೃಷಿಯೇತರ ಕ್ಷೇತ್ರಗಳ ಉದ್ಯೋಗದಲ್ಲಿ ಒಳಗೊಳ್ಳುವಂತೆ ಮಾಡುವ ಕ್ರಮಗಳ ಮೇಲೆ ಒತ್ತು ನೀಡಬೇಕಾಗುತ್ತದೆ.

ರಾಷ್ಟ್ರೀಯ ಮಾದರಿ ಸಮೀಕ್ಷೆಗಳ ಇನ್ನೂ ಆಳವಾದ ವಿಶ್ಲೇಷಣೆಯು, ಗ್ರಾಮೀಣ ಕೈಗಾರಿಕೆಗಳು, ವಿಶೇಷವಾಗಿ, ಆಹಾರ ಸಾಮಗ್ರಿಗಳು, ಪಾನೀಯಗಳು, ಹೊಗೆಸೊಪ್ಪು ಮತ್ತು ಹೊಗೆಸೊಪ್ಪು ಸಾಮಗ್ರಿಗಳು, ಹತ್ತಿ ಬಟ್ಟೆಗಳು, ಸಿದ್ಧ ಉಡುಪುಗಳು ಹಾಗೂ ಚರ್ಮ ಮತ್ತು ಉಣ್ಣೆಯ ಸಾಮಗ್ರಿಗಳು ವಲಯಗಳ ಕೈಗಾರಿಕೆಗಳ ಉದ್ಯೋಗದಲ್ಲಿ ಉತ್ತಮ ಮಟ್ಟದ ಹೆಚ್ಚಳವಾಗಿದೆ ಎಂದು ತೋರಿಸುತ್ತದೆ. ಇವೆಲ್ಲವೂ ಇಂತಹ ಕೈಗಾರಿಕೆಗಳನ್ನು ಬಲಪಡಿಸುವುದರ ಹಾಗೂ ಪ್ರೋತ್ಸಾಹಿಸುವ ಕ್ರಮ ಕೈಗೊಳ್ಳುವ ನೀತಿಯ ಅವಶ್ಯಕತೆಯನ್ನು ಎತ್ತಿ ತೋರಿಸುತ್ತವೆ.

೧೯೯೪-೯೫ರ ಕರ್ನಾಟಕದ ಆರ್ಥಿಕ ಸಮೀಕ್ಷೆಯ ವರದಿಯು, ಸಂಘಟಿತ ಕ್ಷೇತ್ರದಲ್ಲಿನ ಉದ್ಯೋಗದ ಬೆಳವಣಿಗೆಯು ಕೇವಲ ಶೇ. ೧ ಎಂದು ಹೇಳುತ್ತದೆ. ಅಲ್ಲದೆ ಈ ವಲಯದ ಉದ್ಯೋಗ ಉತ್ಪತ್ತಿಯ ಕುಂಠಿತ ಬೆಳವಣಿಗೆಯಿಂದಾಗಿ ನಿರುದ್ಯೋಗಿಗಳಿಗೆ ಹಾಗೂ ಅರೆ ಉದ್ಯೋಗಿಗಳಿಗೆ ಉದ್ಯೋಗ ಒದಗಿಸುವ ಕಾರ್ಯ ಬೃಹತ್ತಾಗಿರುತ್ತದೆ. ಸಂಘಟಿತ ವಲಯದಲ್ಲಿನ ಸೀಮಿತ ಉದ್ಯೋಗಾವಕಾಶಗಳಿಂದಾಗಿ ವೃತ್ತಿ ಶಿಕ್ಷಣವನ್ನು ಒದಗಿಸುವುದು ಹಾಗೂ ಸ್ವಯಂ ಉದ್ಯೋಗಾವಕಾಶಗಳನ್ನು ವಿದ್ಯಾವಂತ ನಿರುದ್ಯೋಗಿಗಳಿಗೆ ಒದಗಿಸುವುದು ಒಂದು ಉಪಾಯವಾಗಬಹುದು. ಈವರೆಗೂ ನಮ್ಮ ಅದ್ಯತೆಗಳು ವೃತ್ತಿಪರವಲ್ಲದ ಶಿಕ್ಷಣವಾಗಿದ್ದು ನಮ್ಮ ಶಿಕ್ಷಣ ಸಂಸ್ಥೆಗಳಿಂದ ಹೊರಬರುವ ಪದವೀಧರರು ಕೇವಲ 'ವೈಟ್‌ಕಾಲರ್ ಕೆಲಸಗಳನ್ನು' ಬಯಸುತ್ತಿರುವುದರಿಂದ ಇಂತಹ ವಿದ್ಯಾವಂತ ಯುವಕರು ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋಗುವಂತಾಗಿದೆ. ಆದ್ದರಿಂದ ಇದಕ್ಕೆ ಪರಿಹಾರೋಪಾಯವೆಂದರೆ, ವಿದ್ಯಾವಂತರಿಗೆ ಹೆಚ್ಚು ಹೆಚ್ಚಾಗಿ ಸ್ವಯಂ ಉದ್ಯೋಗಗಳನ್ನು ಕೈಗೊಳ್ಳುವಂತೆ ಪ್ರೋತ್ಸಾಹಿಸುವುದಾಗಿದೆ.

ಅಸಂಘಟಿತ ವಲಯದ ಉದ್ಯೋಗದ ಚಿತ್ರಣದಂತೆ, ಈ ವಲಯವು ಗಣನೀಯವಾಗಿ ಉದ್ಯೋಗಗಳನ್ನು ಒದಗಿಸಿದ್ದರೂ ಸಹ, ಈ ವಲಯದ ಕೈಗಾರಿಕೆಗಳು ಅಸಂಘಟಿತವಾಗಿರುವುದ ರಿಂದ ಅಲ್ಲಿರುವ ಉದ್ಯೋಗಗಳನ್ನು ಉಳಿಸಿಕೊಳ್ಳುವಲ್ಲಿ ಅನೇಕ ಸಮಸ್ಯೆಗಳನ್ನು ಸೃಷ್ಟಿಸಿದೆ.

ಕರ್ನಾಟಕದ ೮ನೆಯ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ ರಾಜ್ಯಾದಾಯದ ಶೇ.೧ರ ಬೆಳವಣಿಗೆಯು ಉದ್ಯೋಗದ ಶೇ. ೦.೨೨ರ ಬೆಳವಣಿಗೆಗೆ ಕಾರಣವಾಗಿದೆ ಎಂದು ಅಂದಾಜು ಮಾಡಲಾಗಿದೆ. ಈ ಅನುಪಾತವನ್ನು ಉಳಿಸಿಕೊಳ್ಳಲು ರಾಜ್ಯಾದಾಯದಲ್ಲಿನ ಬೆಳವಣಿಗೆಯು ಭವಿಷ್ಯದಲ್ಲಿ ಅತಿ ಹೆಚ್ಚಿನ ಮಟ್ಟದ್ದಾಗಬೇಕಾಗುತ್ತದೆ. ಅಂದರೆ, ೮ನೇ ಪಂಚವಾರ್ಷಿಕ ಯೋಜನಾವಧಿಯಲ್ಲಿಯೇ ಎಲ್ಲರಿಗೂ ಉದ್ಯೋಗ ಗುರಿಯನ್ನು ಸಾಧಿಸಲು ರಾಜ್ಯಾದಾಯದಲ್ಲಿ ವಾರ್ಷಿಕವಾಗಿ ಶೇ. ೧೧ರ ಬೆಳವಣಿಗೆಯನ್ನು ಸಾಧಿಸಬೇಕಾಗುತ್ತದೆ. ಆದರೆ, ೧೯೯೪-೯೫ರ ಕರ್ನಾಟಕದ ಆರ್ಥಿಕ ಸಮೀಕ್ಷೆಯು ೧೯೯೨-೯೩ರಲ್ಲಿ ಶೇ. ೪.೨ರ ರಾಜ್ಯಾದಾಯದ ಬೆಳವಣಿಗೆಯ ಪ್ರತಿಯಾಗಿ ೧೯೯೪-೯೫ರಲ್ಲಿ ಶೇ. ૩.೫ರ ಬೆಳವಣಿಗೆಯನ್ನು ನಿರೀಕ್ಷಿಸಿದೆ. ಆದ್ದರಿಂದ ಈ ಶತಮಾನಾಂತ್ಯದಲ್ಲಿಯೂ ಸಹ ಎಲ್ಲರಿಗೂ ಉದ್ಯೋಗದ ಗುರಿಯನ್ನು ಸಾಧಿಸಲು ಸಾಧ್ಯವಿಲ್ಲ. ಈ ಪ್ರವೃತ್ತಿಯು ಮುಂದುವರೆಯುವುದಾದಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಪ್ರಯತ್ನವನ್ನಷ್ಟೇ ಮಾಡಬಹುದು. ಇದಕ್ಕಾಗಿ, ನಮ್ಮ ಹಿಂದಿನ ಅನುಭವಗಳನ್ನು ಆಧಾರವಾಗಿಟ್ಟು ಕೊಳ್ಳಬೇಕಾಗುತ್ತದೆ.

ಹಿಂದಿನ ಅಂದರೆ, ಏಳನೆಯ ಪಂಚ ವಾರ್ಷಿಕ ಯೋಜನಾವಧಿಯಲ್ಲಿ (೧೯೮೫-೯೦) ಸರ್ಕಾರದ ಉದ್ಯೋಗ ಪ್ರಧಾನ ಕಾರ್ಯಕ್ರಮಗಳಾದ ಜವಾಹರ್ ರೋಜ್‌ಗಾರ್ ಯೋಜನೆ, ಅಭಾವ ಪೀಡಿತ ಪ್ರದೇಶಗಳ ಕಾರ್ಯಕ್ರಮ, ಸಮಗ್ರ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ, ಉದ್ಯೋಗ ಭರವಸೆ ಯೋಜನೆ, ಇತ್ಯಾದಿಗಳಿಂದ ವಾರ್ಷಿಕವಾಗಿ ಸರಾಸರಿ ೪.೪೭ ಕೋಟಿ ಮಾನವ ದಿನಗಳ ಉದ್ಯೋಗವನ್ನು ಸೃಷ್ಟಿಸಲಾಗಿತ್ತು. ಫಲಾನುಭವಿ ಆಧಾರಿತ ಕಾರ್ಯಕ್ರಮವಾದ ಸಮಗ್ರ ಗ್ರಾಮೀಣಾಭಿವೃದ್ಧಿಯಂತಹ ಕಾರ್ಯಕ್ರಮಗಳಿಂದ ವರ್ಷಕ್ಕೆ ಸರಾಸರಿ ೧.೭ ಲಕ್ಷ ಮಂದಿ ಪ್ರಯೋಜನ ಪಡೆದಿದ್ದರು. ಸ್ವಯಂ ಉದ್ಯೋಗ ಕಾರ್ಯಕ್ರಮಗಳಿಂದ ವರ್ಷಕ್ಕೆ ಸರಾಸರಿ ಸುಮಾರು ೩೫ ಸಾವಿರ ಮಂದಿಗೆ ಸ್ವಯಂ ಉದ್ಯೋಗ ಕಲ್ಪಿಸಲಾಗಿತ್ತು. ಈ ಮಾಹಿತಿಗಳಲ್ಲದೆ, ಉದ್ಯಮಿಗಳಿಗೆ ಭೂಮಿಯ ವಿತರಣೆ, ಕರಕುಶಲಕರ್ಮಿಗಳಿಗೆ ಹಾಗೂ ಮಗ್ಗದ ಕೈಕೆಲಸಗಾರರಿಗೆ ಪ್ರತಿ ವರ್ಷ ಒದಗಿಸಿದ ಸರಾಸರಿ ನೆರವುಗಳ ವಿವರಗಳನ್ನೂ ಸ್ವಯಂ ಉದ್ಯೋಗ ಕೈಗೊಳ್ಳಲು ನೀಡಿದ ತರಬೇತಿಯ ವಿವರಗಳನ್ನೂ ಸಹ ಕೋಷ್ಟಕ ೫ರಲ್ಲಿ ನೀಡಲಾಗಿದೆ.

ಕೋಷ್ಟಕ - ೫
ಏಳನೆಯ ಪಂಚವಾರ್ಷಿಕ ಯೋಜನಾವಧಿಯಲ್ಲಿ (೧೯೮೫-೯೦)
ಉದ್ಯೋಗ ಉತ್ಪತ್ತಿಯ ಸಾಧನೆ

| ಕಾರ್ಯಕ್ರಮಗಳು | ಮೂಲಮಾನ | ಉದ್ಯೋಗ ಉತ್ಪತ್ತೀ ಫಲಾನುಭವಿಗಳ ವಾರ್ಷಿಕ ಸರಾಸರಿ |
|---|---|---|
| ೧. ಉದ್ಯೋಗ ಪ್ರಧಾನ ಕಾರ್ಯಕ್ರಮಗಳು | ಲಕ್ಷ ಮಾನ ದಿನ | ೪೪೬.೫ |
| ೨. ಫಲಾನುಭವಿ ಪ್ರಧಾನ ಕಾರ್ಯಕ್ರಮಗಳು | ಸಂಖ್ಯೆ | ೧೬೯೨೪೯ |
| ೩. ಸ್ವಯಂ ಉದ್ಯೋಗ ಕಾರ್ಯಕ್ರಮಗಳು | ಸಂಖ್ಯೆ | ೩೪೯೧೬ |
| ೪. ನೆರವಿನ ಕಾರ್ಯಕ್ರಮಗಳು | ಸಂಖ್ಯೆ | ೩೩೮೯೦ |
| ೫. ಸ್ವಯಂ ಉದ್ಯೋಗಕ್ಕಾಗಿ ತರಬೇತಿ ಕಾರ್ಯಕ್ರಮಗಳು | ಸಂಖ್ಯೆ | ೮೧೫೬ |

ಹೀಗಾಗಿ, ಏಳನೆಯ ಪಂಚವಾರ್ಷಿಕ ಯೋಜನೆಯಲ್ಲಿನ ನಮ್ಮ ಅನುಭವವು ಬರಿಯ ಉದ್ಯೋಗ ಉತ್ಪತ್ತಿಗಾಗಿ ಮಾಡಿದ ಪ್ರಯತ್ನವಾಗಿರದೆ, ವರಮಾನಕ್ಕೆ ಪೂರಕವಾದ ಪ್ರಯೋಜನಗಳನ್ನೂ ನೀಡಿದ್ದು ಸ್ವಯಂ ಉದ್ಯೋಗಕ್ಕಾಗಿ ನೆರವನ್ನೂ ಇದರಲ್ಲಿನ ಬಹುಮುಖ ಅಂಶವಾದ ತರಬೇತಿಯನ್ನೂ ನೀಡುವುದಾಗಿತ್ತು ಎಂಬುದನ್ನು ನಿಚ್ಚಳಗೊಳಿಸುತ್ತದೆ.

ಇದೀಗ, ೧೯೯೪-೯೫ರ ಆರ್ಥಿಕ ಸಮೀಕ್ಷೆಯ ವರದಿಯಂತೆ, ಕಳೆದ ವರ್ಷಕ್ಕೆ ಹೋಲಿಸಿದಲ್ಲಿ ೧೯೯೪-೯೫ರಲ್ಲಿ ರಾಜ್ಯದಲ್ಲಿ ಉದ್ಯೋಗ ಉತ್ಪತ್ತಿಯು ಅಲ್ಪ ಪ್ರಮಾಣದಲ್ಲಿ ಉತ್ತಮವಾಗಬಹುದು ಎಂದು ನಿರೀಕ್ಷಿಸಲಾಗಿದೆ. ೧೯೯೪-೯೫ರ ಹೆಚ್ಚುವರಿ ಉದ್ಯೋಗ ಉತ್ಪತ್ತಿಯನ್ನು ಸುಮಾರು ೨.೭ ಲಕ್ಷ ಎಂದು ಅಂದಾಜಿಸಲಾಗಿದೆ. ಇದು ಕಳೆದ ಸಾಲಿನ ಉದ್ಯೋಗ ಉತ್ಪತ್ತಿಗಿಂತ ಶೇ. ೧.೪ ಹೆಚ್ಚಳವಾಗಿದ್ದು, ಇವರಲ್ಲಿ ಸೇವಾವಲಯದ ಕೊಡುಗೆ ಶೇ. ೩೨.೬ ಹಾಗೂ ಕೃಷಿ ವಲಯದ ಕೊಡುಗೆ ಶೇ. ೨೧.೯ ಎಂದು ಅಂದಾಜಿಸಿದೆ. ಅಲ್ಲದೆ, ಡಿಸೆಂಬರ್ ೧೯೯೪ರ ಅಂತ್ಯಕ್ಕೆ ಉದ್ಯೋಗ ಉತ್ಪತ್ತಿಯ ವಿಶೇಷ ಕಾರ್ಯಕ್ರಮಗಳಡಿಯಲ್ಲಿ ರಾಜ್ಯದಲ್ಲಿ ೮.೪೨ ಕೋಟಿ ಮಾನವ ದಿನಗಳ ಉದ್ಯೋಗ ಉತ್ಪತ್ತಿಯಾಗಿತ್ತು. ಇದು ಏಳನೆಯ ಪಂಚ ವಾರ್ಷಿಕ ಯೋಜನಾವಧಿಯ ವಾರ್ಷಿಕ ಸರಾಸರಿಯ ಸುಮಾರು ಎರಡು ಪಟ್ಟಾಗಿತ್ತು. ಇದರಲ್ಲಿ ಉದ್ಯೋಗ ಪ್ರಧಾನ ಕಾರ್ಯಕ್ರಮಗಳಾದ ಜವಾಹರ್ ರೋಜಗಾರ್ ಯೋಜನೆ, ಅಭಾವಪೀಡಿತ ಪ್ರದೇಶಗಳ ಅಭಿವೃದ್ಧಿ ಕಾರ್ಯಕ್ರಮ, ಉದ್ಯೋಗ ಭರವಸೆ ಯೋಜನೆ ಮತ್ತು ನೆಮ್ಮದಿಗಳ ಪಾಲು ಶೇ. ೪೨.೯ ಆಗಿತ್ತು. ವಿವರಗಳಿಗಾಗಿ ಕೋಷ್ಟಕ ೬ನ್ನು ನೋಡಿ.

ಕೋಷ್ಟಕ - ೬

ರಾಜ್ಯದ ವಿವಿಧ ಕಾರ್ಯಕ್ರಮಗಳಿಂದ ೧೯೯೪-೯೫ರಲ್ಲಿ ಆದ ದಿನಗೂಲಿ ಉದ್ಯೋಗ ಉತ್ಪತ್ತಿಯ ವಿವರಗಳು

| ಕ್ರಸಂ. | ಕಾರ್ಯಕ್ರಮ | ವಾರ್ಷಿಕ ಗುರಿ ೧೯೯೪-೯೫ | ಡಿಸೆಂಬರ್ ೯೪ರ ವರೆಗೆ ಆದ ಪ್ರಗತಿ | ಶೇಕಡವಾರು |
|---|---|---|---|---|
| ೧. | ಜವಹಾರ್ ರೋಜ್‌ಗಾರ್ ಯೋಜನೆ | ೪೧೫.೭೨ | ೨೧೪.೯೮ | ೫೧.೭ |
| ೨. | ಅಭಾವ ಪೀಡಿತ ಪ್ರದೇಶಾಭಿವೃದ್ಧಿ ಕಾರ್ಯಕ್ರಮ | ೪೭.೮೬ | ೧೬.೮೭ | ೩೫.೨ |
| ೩. | ಸಮಗ್ರ ಪಶ್ಚಿಮಘಟ್ಟ ಅಭಿವೃದ್ಧಿ ಕಾರ್ಯಕ್ರಮ | ೨೩.೨೭ | ೫.೮೮ | ೨೪.೯ |
| ೪. | ಉದ್ಯೋಗ ಭರವಸೆ ಯೋಜನೆ | ೨೧೪.೮೬ | ೧೦೯.೪೩ | ೫೦.೯ |
| ೫. | ನೆಮ್ಮದಿ | ೧೦೨.೮೫ | ೧೪.೧೬ | ೧೩.೭ |
| ೬. | ಭಾರಿ ಮತ್ತು ಮಧ್ಯಮ ನೀರಾವರಿ ಹಾಗೂ ನೆರೆ ನಿಯಂತ್ರಣ | ೫೦೧.೪೫ | ೧೫೮.೦೩ | ೩೧.೫ |
| ೭. | ಸಣ್ಣ ನೀರಾವರಿ | ೬೯.೫೬ | ೫೬.೮೦ | ೮೧.೬ |
| ೮. | ಕಾಡಾ | ೩೪.೭೬ | ೯.೦೦ | ೨೫.೯ |
| ೯. | ಭೂ ಸಂರಕ್ಷಣೆ | ೧೮೧.೨೯ | ೭೫.೩೭ | ೪೧.೬ |
| ೧೦. | ಜಲಾನಯನ ಪ್ರದೇಶಾಭಿವೃದ್ಧಿ | ೧೫.೨೮ | ೯.೩೮ | ೬೧.೪ |
| ೧೧. | ರಸ್ತೆ ಮತ್ತು ಸೇತುವೆಗಳು | ೧೭೫.೨೮ | ೧೩೩.೮೩ | ೭೬.೩ |
| ೧೨. | ಕಟ್ಟಡಗಳು | ೧೦೬.೯೯ | ೩೮.೭೪ | ೩೬.೨ |
| | ಒಟ್ಟು | ೧೮೮೯.೧೭ | ೮೪೨.೪೭ | ೪೪.೬ |

**೪. ರಕ್ಷಣಾ ಕಾರ್ಯಕ್ರಮಗಳು, ಬಡತನ ಮತ್ತು ನಿರುದ್ಯೋಗವನ್ನು ಎದುರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳು**

೧. **ಬಡತನದ ವಿರುದ್ಧ ಕಾರ್ಯಕ್ರಮಗಳು:** ಫಲಾನುಭವಿಗಳಿಗೆ ಯಾವುದಾದರೂ ಉತ್ಪನ್ನಕಾರಕ ಆಸ್ತಿಗಳನ್ನು ಹೊಂದಲು ನೆರವು ಹಾಗೂ ಅವರ ವರಮಾನವನ್ನು ತುಂಬಿಕೊಡಲು ಅಲ್ಪಾವಧಿಯ ದಿನಗೂಲಿ ಒದಗಿಸುವುದರ ಮೂಲಕ ಬಡತನ ಸಮಸ್ಯೆಯನ್ನು ಎದುರಿಸಲು ಸರ್ಕಾರವು ಕೆಲವು ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಇಂತಹ ಎರಡು ಬಗೆಯ ಕಾರ್ಯಕ್ರಮಗಳೆಂದರೆ ಅ) ಸ್ವಯಂ ಉದ್ಯೋಗ ಮತ್ತು ಆ) ದಿನಗೂಲಿ ಒದಗಿಸುವ ಕಾರ್ಯಕ್ರಮಗಳು. ಗ್ರಾಮೀಣ ಪ್ರದೇಶಗಳಲ್ಲಿ ಬಡತನವನ್ನು ತಗ್ಗಿಸುವ ಪ್ರಧಾನ ಕಾರ್ಯಕ್ರಮಗಳೆಂದರೆ, ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ಹಾಗೂ ಜವಾಹರ್ ರೋಜ್‌ಗಾರ್ ಯೋಜನೆ. ನಗರ ಪ್ರದೇಶಗಳಲ್ಲಿ ಇಂತಹ ಕಾರ್ಯಕ್ರಮಗಳನ್ನು ಅಲ್ಪ ಪ್ರಮಾಣದಲ್ಲಿ ಜಾರಿಗೊಳಿಸಲಾಗಿದೆ. ಈ ಕೆಲವು ಕಾರ್ಯಕ್ರಮಗಳು ನಿರುದ್ಯೋಗಿ ವ್ಯಕ್ತಿಗಳು ಸ್ವಯಂ ಉದ್ಯೋಗವನ್ನು ಕೈಗೊಳ್ಳುವಂತೆ ಪ್ರೋತ್ಸಾಹಿಸಲು ಕಡಿಮೆ ಬಡ್ಡಿ ದರದ ಸಾಲ, ಸಬ್ಸಿಡಿಗಳು ಹಾಗೂ ಸಾಲ ಮರುಪಾವತಿಗಾಗಿ ದೀರ್ಘ ಕಾಲಾವಧಿಯನ್ನು ನೀಡುತ್ತವೆ. ಕೈಗಾರಿಕಾ ಎಸ್ಟೇಟುಗಳಲ್ಲಿ ಕೈಗಾರಿಕಾ ಶೆಡ್ಡುಗಳನ್ನು ನಿರ್ಮಿಸಿ ಉದ್ಯಮಿಗಳಿಗೆ ಹಂಚಲಾಗುತ್ತದೆ. ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ಆದ್ಯತೆಯ ಮೇಲೆ ಸಾಲ ನೀಡಲಾಗುತ್ತಿದೆ. ರಾಷ್ಟ್ರೀಯ ಈಕ್ವಿಟಿ ನಿಧಿ ಯೋಜನೆಯಡಿಯಲ್ಲಿ ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ನೆರವು ನೀಡಲಾಗುತ್ತದೆ. ಅಲ್ಲದೆ, ನಿರುದ್ಯೋಗಿ ವ್ಯಕ್ತಿಗಳು ಸ್ವಯಂ ಉದ್ಯೋಗ ಕೈಗೊಳ್ಳುವಂತೆ ಪ್ರೋತ್ಸಾಹಿಸಲು ರಾಜ್ಯದಲ್ಲಿ ೧೯೯೩-೯೪ರಿಂದ ಪ್ರಧಾನ ಮಂತ್ರಿಯವರ ರೋಜ್‌ಗಾರ್ ಯೋಜನೆ ಜಾರಿಯಲ್ಲಿದೆ. ಈ ಕಾರ್ಯಕ್ರಮಗಳ ರೂಪುರೇಶೆ, ಸಾಧನೆ ಇತ್ಯಾದಿ ವಿವರಗಳನ್ನು ಈ ಮುಂದೆ ನೀಡಲಾಗಿದೆ.

**ಅ) ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ (ಸ.ಗ್ರಾ.ಅ.ಕಾ)**

ಬಡತನ ರೇಖೆಗಿಂತ ಕೆಳಗೆ ಇರುವ ಕುಟುಂಬಗಳಿಗೆ ಆರ್ಥಿಕತೆಯ ಮೂರು ವಲಯಗಳ ವಿವಿಧ ಚಟುವಟಿಕೆಗಳಲ್ಲಿ ಸ್ವಯಂ ಉದ್ಯೋಗ ಉದ್ಯಮಗಳನ್ನು ಸ್ಥಾಪಿಸಲು ನೆರವು ನೀಡುವ ಉದ್ದೇಶದಿಂದ ೧೯೮೦ರಲ್ಲಿ ಈ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ಈ ಕಾರ್ಯಕ್ರಮದ ಲಕ್ಷಣ ಹಾಗೂ ಸಂಪನ್ಮೂಲಗಳ ಹಂಚಿಕೆ ೧) ಬಡತನದ ವ್ಯಾಪಕತೆಗೆ ಸಂಬಂಧಿಸಿದಂತೆ ಫಲಾನುಭವಿಗಳ ಆಯ್ಕೆ ೨) ಬಡವರನ್ನು ಗುರುತಿಸಲು ವಾರ್ಷಿಕ ರೂ. ೬೪೦೦.೦೦ ವರಮಾನದ ಮಿತಿ ಹಾಗೂ ರೂ. ೩೫೦೦.೦೦ಕ್ಕಿಂತ ಕಡಿಮೆ ವಾರ್ಷಿಕ ವರಮಾನವಿರುವ ಕುಟುಂಬಗಳಿಗೆ ಆದ್ಯತೆ ೩) ಹೆಚ್ಚಿಗೆ ಲಾಭಗಳಿಸಲು ನೆರವುಗಳ ಪ್ಯಾಕೇಜ್‌ನೊಂದಿಗೆ ಹೆಚ್ಚಿನ ಬಂಡವಾಳ ಹೂಡಿಕೆ ೪) ಜಿಲ್ಲಾ ಮಟ್ಟದಲ್ಲಿ ವಿಕೇಂದ್ರೀಕೃತ ಯೋಜನೆ

೫) ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ಹಾಗೂ ಇತರೆ ಕಾರ್ಯಕ್ರಮಗಳ ನಡುವೆ ಹೆಚ್ಚಿನ ಅಂತರ ವಲಯ ಹೊಂದಾಣಿಕೆ ೬) ಹಿಮ್ಮುಖಿ ಮತ್ತು ಮುಮ್ಮುಖಿ ಕೊಂಡಿಗಳ ವ್ಯಾಪವನ್ನು ಬಲಪಡಿಸುವುದು ೭) ಬ್ಯಾಂಕು ಮತ್ತು ಸಹಕಾರಿ ಸಂಸ್ಥೆಗಳ ಪಾತ್ರವನ್ನು ಉತ್ತಮಗೊಳಿಸುವುದು ೮) ಜನಪ್ರತಿನಿಧಿಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳು ಹೆಚ್ಚಾಗಿ ಭಾಗವಹಿಸುವುದು - ಇವೇ ಮುಂತಾದವುಗಳನ್ನು ಆಧರಿಸಿತ್ತು. ಈ ರೀತಿ ಸಮಗ್ರ ಅಭಿವೃದ್ಧಿ ಕಾರ್ಯಕ್ರಮವು ಬಡತನ ನಿರ್ಮೂಲನೆ, ಉದ್ಯೋಗ ಉತ್ಪತ್ತಿ ಮತ್ತು ಉತ್ತಮ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಸಮಗ್ರತೆಯ ವ್ಯಾಪಕತೆ ಇರುವುದರಿಂದ ಬಡತನದ ವಿರುದ್ಧ ಬಹುಮುಖಿ ಕವಲುಗೋಲಾಗಿದೆ. ೧೯೯೪-೯೫ರಲ್ಲಿ ರಾಜ್ಯದಲ್ಲಿ ಡಿಸೆಂಬರ್ ೧೯೯೪ರ ಅಂತ್ಯಕ್ಕೆ ೧,೧೨,೦೦೦ ಫಲಾನುಭವಿಗಳಿಗೆ ನೆರವು ನೀಡುವ ಗುರಿಗೆ ಪ್ರತಿಯಾಗಿ ೯೦,೦೦೦ ಫಲಾನುಭವಿಗಳಿಗೆ ನೆರವು ನೀಡಲಾಗಿತ್ತು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಮೌಲ್ಯಮಾಪನವು ಹಲವಾರು ಲೋಪ ದೋಷಗಳನ್ನು ಗುರುತಿಸಿದೆ. ಅವುಗಳೆಂದರೆ ೧) ಶೇ. ೫೪ರಷ್ಟು ಫಲಾನುಭವಿಗಳು ರೂ. ೩೫೦೦.೦೦ ಆದಾಯವನ್ನು ದಾಟಿದ್ದರೂ ಸಹ ಕೇವಲ ಶೇ. ೧೨ರಷ್ಟು ಫಲಾನುಭವಿಗಳು ಬಡತನ ರೇಖೆಯಾದ ರೂ. ೬,೪೦೦.೦೦ ವರಮಾನದ ಮಿತಿಯನ್ನು ದಾಟಿದ್ದರು, ೨) ಶೇ. ೯ ಪ್ರಕರಣಗಳು ಆಯ್ಕೆಗೆ ಅರ್ಹವಲ್ಲವಾಗಿತ್ತು ೩) ಶೇ. ೬೨ ಪ್ರಕರಣಗಳಲ್ಲಿ ಸಾಲ ಮರುಪಾವತಿ ಕಾಲವು ೩ ವರ್ಷಕ್ಕಿಂತ ಹೆಚ್ಚಿನದಾಗಿತ್ತು ೪) ಶೇ. ೪೨ ಪ್ರಕರಣಗಳಲ್ಲಿ ಪಶ್ಚಾದ್ಯೋಗ ಕ್ಷೇಮದ ಅಭಾವವಿತ್ತು. ಆಯಾ ಪ್ರದೇಶದ ಮೂಲಭೂತ ಸೌಲಭ್ಯಗಳು, ಪೂರೈಕೆ, ಬೇಡಿಕೆ ಮತ್ತು ಸಾಂಪ್ರದಾಯಿಕ ಕೌಶಲ್ಯಗಳೊಂದಿಗೆ ನಿರ್ಮಿತವಾಗುವ ಆಸ್ತಿಗಳ ಹೊಂದಾಣಿಕೆಯಾಗಬೇಕು. ಹಾಗೂ ಸಾಂಪ್ರದಾಯಿಕ ಕೌಶಲ್ಯಗಳನ್ನು ಗುರುತಿಸಿ ಸಾಂಸ್ಥಿಕ ಸಾಲಗಳ ಭರವಸೆಗಳನ್ನು ನೀಡಬೇಕೆಂದು ಈ ನಿಟ್ಟಿನ ಅನುಭವವು ತೋರಿಸುತ್ತದೆ.

### ಆ) ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ

ಪ್ರತಿ ವರ್ಷವೂ ಹೆಚ್ಚುವರಿ ಉದ್ಯೋಗ ಉತ್ಪತ್ತಿಯನ್ನು ನಿಗದಿಗೊಳಿಸಿ ಶೇ. ೫೦ ಕೇಂದ್ರ ಸರ್ಕಾರದ ಸಹಾಯದೊಂದಿಗೆ ೧೯೮೦ರಲ್ಲಿ ಈ ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಯಿತು. ಈ ಕಾರ್ಯಕ್ರಮಕ್ಕಾಗಿ ಹಣ ಹಂಚಿಕೆಯ ಪ್ರಮಾಣವು ಹೆಚ್ಚಾಗಿದ್ದರೂ ಅದಕ್ಕೆ ಸಮಪ್ರಮಾಣದಲ್ಲಿ ಉದ್ಯೋಗ ಉತ್ಪತ್ತಿಯಲ್ಲಿ ಹೆಚ್ಚಳವು ಕಂಡು ಬಂದಿಲ್ಲ. ಅಲ್ಲದೆ, ಇನ್ನಿತರ ಕೆಲವು ನ್ಯೂನತೆಗಳೆಂದರೆ ೧) ಅಲ್ಪಾವಧಿಗೆ ಮಾತ್ರ ಉದ್ಯೋಗ ಒದಗಿಸುವಿಕೆ, ೨) ಮಾರುಕಟ್ಟೆ ಕೂಲಿಗಿಂತ ಕಡಿಮೆ ಮಜೂರಿ ದರಗಳು, ೩) ಕ್ರಮ ಬದ್ಧವಲ್ಲದ ಫಲಾನುಭವಿಗಳ ಆಯ್ಕೆ, ೪) ಸ್ಥಳೀಯ ಜನರ ಅವಶ್ಯಕತೆಗಳನ್ನು ಕಡೆಗಣಿಸುವುದರಿಂದ ದೋಷಪೂರಿತ ಕಾರ್ಯಗಳ ಆಯ್ಕೆ, ೫) ರಕ್ಷಣೆಗಾಗಿ ಹಣಕಾಸು ನೆರವು ಇಲ್ಲದಿರುವುದರಿಂದ ನಿರ್ಮಿಸಿದ ಆಸ್ತಿಗಳ

ಹಾಳಾಗುವಿಕೆ, ೬) ಸಸಿಗಳ ಆಯ್ಕೆಯಲ್ಲಿ ಸಮುದಾಯದ ಒಳಗೊಳ್ಳುವಿಕೆ ಇಲ್ಲದಿರುವುದರಿಂದ ಸಾಮಾಜಿಕ ಅರಣ್ಯ ಕಾರ್ಯಕ್ರಮದಲ್ಲಿ ಸಸಿಗಳು ಬದುಕಿ ಉಳಿಯುವ ಪ್ರಮಾಣವು ಅತ್ಯಂತ ಕಡಿಮೆ, ೭) ಈ ಕಾರ್ಯಕ್ರಮವನ್ನು ಬರಿಯ ಇಲಾಖಾ ಕಾರ್ಯಕ್ರಮವೆಂದು ಪರಿಗಣಿಸಿರುವುದು ಮತ್ತು ೮) ಸ್ಥಳೀಯ ಸಂಪನ್ಮೂಲಗಳ ಬಳಕೆ ಮಾಡದಿರುವುದು.

**ಇ) ಗ್ರಾಮೀಣ ಭೂರಹಿತರ ಉದ್ಯೋಗ ಭರವಸೆ ಕಾರ್ಯಕ್ರಮ**

ಪ್ರತಿ ಭೂ ರಹಿತ ಕುಟುಂಬದ ಕನಿಷ್ಠ ಒಬ್ಬನಿಗಾದರೂ ಒಂದು ವರ್ಷದಲ್ಲಿ ೧೦೦ ದಿನಗಳವರೆಗೆ ಉದ್ಯೋಗ ಒದಗಿಸುವ ಭರವಸೆ ಮತ್ತು ಬಾಳಿಕೆ ಬರುವ ಆಸ್ತಿಗಳನ್ನು ನಿರ್ಮಿಸುವ ಉದ್ದೇಶಗಳ ಮೂಲಕ ಗ್ರಾಮೀಣ ಭೂ ರಹಿತ ಉದ್ಯೋಗಾವಕಾಶಗಳನ್ನು ಉತ್ತಮಗೊಳಿಸಲು ಹಾಗೂ ಹೆಚ್ಚಿಸಲು ಈ ಕಾರ್ಯಕ್ರಮವನ್ನು ೧೯೮೩-೮೪ರಲ್ಲಿ ಪ್ರಾರಂಭಿಸಲಾಯಿತು. ಆದರೆ, ಸಂಪನ್ಮೂಲಗಳ ಕೊರತೆಯಿಂದಾಗಿ ಕಾರ್ಯಕ್ರಮದ 'ಭರವಸೆ' ಅಂಶವನ್ನು ಕಾರ್ಯಗತಗೊಳಿಸಲಾಗಲಿಲ್ಲ ಈ ಕಾರ್ಯಕ್ರಮದ ಕೆಲವು ನ್ಯೂನತೆಗಳೆಂದರೆ ೧) ಪ್ರದೇಶವಾರು ಸನ್ನಾಹಗಳನ್ನು ಅಳವಡಿಸದೇ ಇರುವುದು, ೨) ಕೆಲಸಗಾರರ ಹಾಜರಿ ಪಟ್ಟಿಯನ್ನು ತಿದ್ದುವುದು, ೩) ಭೂರಹಿತ ಕಾರ್ಮಿಕರ ಆಯ್ಕೆಯನ್ನು ಕ್ರಮಬದ್ಧವಾಗಿ ಮಾಡದೇ ಇರುವುದು ಮತ್ತು ೪) ದಾಖಲೆಯಲ್ಲಿನ ಕೂಲಿಗಿಂತ ವಾಸ್ತವವಾಗಿ ಕೊಟ್ಟ ಕೂಲಿಯು ಬೇರೆಯೇ ಆಗಿರುವುದು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ ಮತ್ತು ಗ್ರಾಮೀಣ ಭೂರಹಿತರ ಉದ್ಯೋಗ ಭರವಸೆ ಕಾರ್ಯಕ್ರಮಗಳ ಉದ್ದೇಶಗಳು ಹಾಗೂ ಜಾರಿಗೊಳಿಸುವ ವಿಧಾನ ಒಂದೇ ಬಗೆಯದ್ದಾದರಿಂದ ಈ ಎರಡೂ ಕಾರ್ಯಕ್ರಮಗಳನ್ನು ಒಗ್ಗೂಡಿಸಲು ನಿರ್ಧರಿಸಲಾಯಿತು. ಹಾಗೂ, ಇದನ್ನು 'ಜವಾಹರ್ ರೋಜ್‌ಗಾರ್ ಯೋಜನೆ' ಎಂಬ ಹೆಸರಿನಿಂದ ೧೯೮೯ರಲ್ಲಿ ಜಾರಿಗೊಳಿಸಲಾಯಿತು.

**ಈ) ಜವಾಹರ್ ರೋಜ್‌ಗಾರ್ ಯೋಜನೆ**

ಈ ಯೋಜನೆಯು ಪ್ರತಿ ಗ್ರಾಮ ಪಂಚಾಯತಿಯನ್ನು ತಲುಪುವ ಗುರಿ ಇಟ್ಟುಕೊಂಡಿದೆ. ಇದನ್ನು ಗ್ರಾಮಪಂಚಾಯಿತಿಗಳು ಕಾರ್ಯರೂಪಕ್ಕೆ ತರುತ್ತವೆ. ಇದಕ್ಕೆಶೇ. ೮೦ ಕೇಂದ್ರ ಸರ್ಕಾರದ ಹಣಕಾಸಿನ ನೆರವಿದ್ದರೆ,ಇನ್ನುಳಿದ ಶೇ. ೨೦ನ್ನು ರಾಜ್ಯಗಳು ಭರಿಸಬೇಕಾಗುತ್ತದೆ. ಈ ಕಾರ್ಯಕ್ರಮಕ್ಕೆ ಹಣದ ಹಂಚಿಕಯು, ಬಡತನ ರೇಖೆಗಿಂತ ಕೆಳಗಿರುವ ಜನಸಂಖ್ಯೆಯ ಶೇಕಡ ಪ್ರಮಾಣ, ತದನಂತರದ ಜಿಲ್ಲೆಗಳಿಗೆ ಹಣದ ಹಂಚಿಕೆಯನ್ನು ಹಿಂದುಳಿದಿರುವಿಕೆಯ ಲಕ್ಷಣ ಅಂದರೆ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಜನಸಂಖ್ಯೆ, ಕೃಷಿ ಉತ್ಪಾದನೆ ಇತ್ಯಾದಿಗಳ ಆಧಾರದ ಮೇಲೆ ಮಾಡಲಾಗುತ್ತಿದೆ. ಒಟ್ಟು ಉದ್ಯೋಗ ಉತ್ಪತ್ತಿಯಲ್ಲಿ ಮಹಿಳೆಯರ ಪಾಲು ಶೇ. ೩೦ ಆಗಿದ್ದು, ಅಲೆಮಾರಿ ಮತ್ತು ಬುಡಕಟ್ಟು ಜನರ ಯೋಜನೆಗಳೊಂದಿಗೆ ಈ

ಕಾರ್ಯಕ್ರಮವನ್ನು ಸಂಯುಕ್ತಗೊಳಿಸುವ ಅವಕಾಶವೂ ಇದೆ. ಈ ಕಾರ್ಯಕ್ರಮವು ಈ ಮುಂದಿನ ಕೆಲವು ಲೋಪ ದೋಷಗಳಿಂದ ಕೂಡಿದೆ. ೧) ಈ ಕಾರ್ಯಕ್ರಮದ ಅನುಷ್ಠಾನದ ಪ್ರಭಾವ ಇನ್ನೂ ತೋರಬೇಕಾಗಿದೆ ಮತ್ತು ದುರುಪಯೋಗ ತಪ್ಪಬೇಕಿದೆ, ೨) ಈ ಕಾರ್ಯಕ್ರಮದ ನೀಲಿ ನಕ್ಷೆಯನ್ನು ತಾಂತ್ರಿಕ ಪರಿಕರಗಳ ಅಭಾವದಲ್ಲಿ ಅಭಿವೃದ್ಧಿಪಡಿಸುವುದು ತ್ರಾಸದಾಯಕ, ೩) ಇದೊಂದು ರಾಷ್ಟ್ರೀಯ ಗ್ರಾಮೀಣ ಯೋಜನೆಯ ನಿಸ್ಸಾರ ರೂಪವಾಗಿದೆ, ೪) ರಾಜ್ಯದ ಮೇಲೆ ಗಣನೀಯ ಪ್ರಮಾಣದ ಆರ್ಥಿಕ ಹೊರೆ ಬೀಳುತ್ತದೆ, ೫) ಈ ಕಾರ್ಯಕ್ರಮದ ಜಾರಿಯ ಲಕ್ಷಣದಿಂದಾಗಿ ಜನಸಂಖ್ಯೆಯ ಅಧಿಕವಿರುವ ರಾಜ್ಯಗಳ ಪರವಾಗಿ ಪಕ್ಷಪಾತವಿರುತ್ತದೆ.

### ಉ) ನೆಹರು ರೋಜ್‌ಗಾರ್ ಯೋಜನೆ

ಇದು ಜವಾಹರ್ ರೋಜ್‌ಗಾರ್ ಯೋಜನೆಯ ನಗರ ಪ್ರದೇಶಗಳ ಪ್ರತಿ ರೂಪವಾಗಿದ್ದು, ಅಕ್ಟೋಬರ್ ೧೯೮೯ರಿಂದ ಜಾರಿಯಲ್ಲಿದೆ. ಪ್ರತಿ ವರ್ಷ ಉದ್ಯೋಗಗಳನ್ನು ಸೃಜಿಸುವುದು ಇದರ ಉದ್ದೇಶ. ಸ್ವಯಂ ಉದ್ಯೋಗಾವಕಾಶಗಳು ಹಾಗೂ ದಿನಗೂಲಿ ಉದ್ಯೋಗ ಉತ್ಪತ್ತಿ ಈ ಯೋಜನೆಯಿಂದ ಉಂಟಾಗುತ್ತಿದೆ. ಈ ಕಾರ್ಯಕ್ರಮದ ಗುರಿ, ಗುಂಪು ಬಡತನ ರೇಖೆಗಿಂತ ಕೆಳಗೆ ನಗರ ಪ್ರದೇಶಗಳಲ್ಲಿ ವಾಸಿಸುವ ಜನರಾಗಿದ್ದಾರೆ.

### ಊ) ಕುಶಲ ಕರ್ಮಿಗಳಿಗೆ ನೆರವು

ಕುಶಲ ಕರ್ಮಿಗಳು ತಮ್ಮ ಕಸುಬನ್ನು ಮುಂದುವರಿಸಿಕೊಂಡು ಹೋಗಲು ನೆರವನ್ನು, ಮುಖ್ಯವಾಗಿ ಸಬ್ಸಿಡಿಗಳು, ಅಲ್ಪ ಪ್ರಮಾಣದ ಧನ ಸಹಾಯ ಕಚ್ಚಾ ವಸ್ತುಗಳ ಪೂರೈಕೆ, ಮಾರುಕಟ್ಟೆ ಸೌಲಭ್ಯಗಳನ್ನು ಒದಗಿಸುವುದು ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸುವ ರೂಪದಲ್ಲಿ ಸರ್ಕಾರದ ಅಧೀನದ ವಿವಿಧ ಮಂಡಳಿಗಳು ಮತ್ತು ನಿಗಮಗಳು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ.

### ಋ) ಸ್ವಯಂ ಉದ್ಯೋಗಕ್ಕಾಗಿ ತರಬೇತಿ

ಸರ್ಕಾರದ ವಿವಿಧ ಸಂಸ್ಥೆಗಳು ವ್ಯಕ್ತಿಗಳು ಸ್ವಯಂ ಉದ್ಯೋಗವನ್ನು ಪ್ರಾರಂಭಿಸಲು ಸಹಾಯ ಮಾಡಲು ತರಬೇತಿಯನ್ನು ನೀಡುತ್ತವೆ. ಸೀಡಾಕ್, ಸಣ್ಣ ಕೈಗಾರಿಕಾ ಸೇವಾ ಸಂಸ್ಥೆ, ಮುಂತಾದವು ಉದ್ಯಮಶೀಲ ಅಭಿವೃದ್ಧಿ ಕಾರ್ಯಕ್ರಮ (ಇ.ಡಿ.ಪಿ)ಗಳನ್ನು ನಡೆಸುತ್ತಿವೆ. ರಾಜ್ಯ ಪುರಸ್ಕೃತ ಯೋಜನೆಯಾದ 'ವಿಶ್ವ' ಕಾರ್ಯಕ್ರಮದಡಿಯಲ್ಲಿಯೂ ಸಹ ತರಬೇತಿಯನ್ನು ನೀಡುತ್ತಿದೆ. ಅಲ್ಲದೆ ಗ್ರಾಮೀಣ ಯುವಕರಿಗೆ ಸ್ವಯಂ ಉದ್ಯೋಗಕ್ಕಾಗಿ ತರಬೇತಿ (ಟ್ರೈಸಮ್) ಕೂಡ ರಾಜ್ಯದಲ್ಲಿ ಜಾರಿಯಲ್ಲಿದ್ದು ಸುಮಾರು ೧೪ ಸಾವಿರ ಯುವಕರು ಪ್ರತಿ ವರ್ಷ ಇದರಿಂದ ಪ್ರಯೋಜನ ಪಡೆಯುತ್ತಿದ್ದಾರೆ.

### ೨. ಉದ್ಯೋಗ ಉತ್ಪತ್ತಿಯ ನೀತಿ

ರಾಜ್ಯದ ೮ನೇ ಪಂಚವಾರ್ಷಿಕ ಯೋಜನೆಯ ಕರಡಿನಲ್ಲಿ ಈ ನೀತಿಯನ್ನು

ವಿವರವಾಗಿ ಚರ್ಚಿಸಲಾಗಿದೆ. ಈ ಚರ್ಚೆಯಿಂದ ಹೊರಬೀಳುವ ಕೆಲ ಅಂಶಗಳನ್ನು ಕೆಳಗೆ ನೀಡಲಾಗಿದೆ.

**ಅ) ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳು**

ಹಲವಾರು ಸಂಶೋಧನಾ ಅಧ್ಯಯನಗಳು ಕರ್ನಾಟಕದ ಜಲಾನಯನ ಅಭಿವೃದ್ಧಿ ಕಾರ್ಯಕ್ರಮವು ಅತ್ಯಂತ ಸಮಗ್ರವಾದ ಮತ್ತು ಸಮರ್ಪಕವಾದ ಕಾರ್ಯಕ್ರಮವಾಗಿದ್ದು, ಭಾರತದ ಉಳಿದ ಮಳೆ ಆಧಾರಿತ ಪ್ರದೇಶಗಳಲ್ಲಿ ಪುನರಾವರ್ತನೆಗೊಳಿಸಲು ಯೋಗ್ಯವಾಗಿದೆ ಎಂದು ತೋರಿಸುತ್ತವೆ. ಈ ಕಾರ್ಯಕ್ರಮದಡಿಯಲ್ಲಿ ಉತ್ಪತ್ತಿಯಾಗುವ ಹೆಚ್ಚುವರಿ ಉದ್ಯೋಗವು ಪ್ರತಿ ಹೆಕ್ಟೇರಿಗೆ ಸರಾಸರಿ ೧೩೭ ಮಾನವ ದಿನಗಳಾಗಿದ್ದು, ಒಂದು ಮಾನವ ದಿನವನ್ನು ಉತ್ಪತ್ತಿ ಮಾಡಲು ತಗಲುವ ಸರಾಸರಿ ಖರ್ಚು ರೂ. ೧೧.೪೯ ಆಗಿದೆ. ಈ ಸರಾಸರಿ ಖರ್ಚು ೧೯೮೭-೮೮ರಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮದಡಿಯಲ್ಲಿ ಒಂದು ಮಾನವ ದಿನದ ಉದ್ಯೋಗ ಉತ್ಪತ್ತಿ ಮಾಡಲು ತಗುಲಿದ ಸರಾಸರಿ ಖರ್ಚಾದ ರೂ. ೨೩ಕ್ಕಿಂತ ಕೇವಲ ಅರ್ಧದಷ್ಟಾಗಿತ್ತು.

**ಆ) ಸಣ್ಣ ನೀರಾವರಿ**

ಕರ್ನಾಟಕದಲ್ಲಿ ಹೊಸ ಸಣ್ಣ ನೀರಾವರಿ ಕೆರೆಗಳನ್ನು ನಿರ್ಮಿಸುವ ಅವಕಾಶಗಳು ಗಮನಾರ್ಹವಾಗಿ ಕಡಿಮೆಯಾಗಿರುವುದರಿಂದಲೂ ಸದ್ಯ ಇರುವ ಸಣ್ಣ ನೀರಾವರಿ ಕೆರೆಗಳಲ್ಲಿ ಹೂಳೆತ್ತುವ ಅವಶ್ಯಕತೆ ಬಹಳವಾಗಿ ಇರುವುದರಿಂದಲೂ ಉದ್ಯೋಗಾವಕಾಶಗಳ ಸಾಧ್ಯತೆಯನ್ನು ಹೆಚ್ಚು ಮಾಡುವ ಕೆರೆಗಳ ಹೂಳೆತ್ತುವ ಒಂದು ದೊಡ್ಡ ಕಾರ್ಯಕ್ರಮವನ್ನು ಹಮ್ಮಿಕ್ಕೊಳ್ಳಬಹುದು. ಅಲ್ಲದೆ, ಇದರಿಂದಾಗಿ ನೀರಾವರಿ ಸೌಲಭ್ಯಗಳು ಉತ್ತಮಗೊಳ್ಳುವುದರಿಂದ ಕಾರ್ಮಿಕ ಕೇಂದ್ರಿಕೃತ ಕಾರ್ಯಗಳಾದ ಹಣ್ಣು ಮತ್ತು ತರಕಾರಿ ಬೆಳೆಯುವುದನ್ನು ಪ್ರೋತ್ಸಾಹಿಸಬಹುದು.

**ಇ) ಪಶುಸಂಗೋಪನೆ**

ಹಾಲು ಉತ್ಪಾದಕರ ಸಹಕಾರಿ ಸಂಘಗಳ ಸದಸ್ಯರ ಸಂಖ್ಯೆಗಳನ್ನು ಹೆಚ್ಚಿಸುವುದು, ಗ್ರಾಮೀಣ ಮಹಿಳೆಯರಿಗೆ ವರಮಾನ ನೀಡುವ ಹೈನುಗಾರಿಕೆ ಉದ್ಯಮ ಕೈಗೊಳ್ಳಲು ಪ್ರೋತ್ಸಾಹ ಹಾಗೂ ಮಹಿಳಾ ಸಹಕಾರಿ ಸಂಘಗಳನ್ನು ಸ್ಥಾಪಿಸಲು ನೆರವು ನೀಡುವುದು, ಕೋಳಿ ಸಾಕಾಣಿಕೆ, ಮೊಲ ಸಾಕಾಣಿಕೆಯಂತಹ ಕಾರ್ಯಗಳನ್ನು ಜನಪ್ರಿಯಗೊಳಿಸುವುದು ಈ ಕ್ಷೇತ್ರದಲ್ಲಿನ ಕೆಲವು ಮುಖ್ಯ ಕಾರ್ಯಕ್ರಮಗಳಾಗಬುಹುದ.

**ಈ) ಕೈಗಾರಿಕೆಗಳು**

ಅಧಿಕ ಉದ್ಯೋಗಾವಕಾಶಗಳನ್ನು ಸೃಜಿಸುವ ಖಾಸಗಿ ಬಂಡವಾಳ ಹೂಡಿಕೆಗೆ ಹಿತಕರ ವಾತಾವರಣವನ್ನು ನಿರ್ಮಿಸುವ ಹಾಗೂ ಸಣ್ಣ ಕೈಗಾರಿಕೆಗಳು

ಎದುರಿಸುತ್ತಿರುವ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರವು ಸೂಕ್ತ ಸಹಾಯವನ್ನು ಒದಗಿಸುವ ಕೈಗಾರಿಕಾ ನೀತಿಯನ್ನು ರೂಪಿಸಬೇಕು. ಅಲ್ಲದೆ, ವಿಶೇಷ ವೃತ್ತಿಪರ ಯೋಜನೆಗಳಾದ ತಾಂತ್ರಿಕ ಶಿಕ್ಷಣ ಯೋಜನೆ, ಕೈಗಾರಿಕಾ ತರಬೇತಿ ಸಂಸ್ಥೆಗಳ ಕೌಶಲ್ಯ ಅಭಿವೃದ್ಧಿ ಯೋಜನೆಯಂತಹವುಗಳನ್ನು ವಿಶ್ವ ಬ್ಯಾಂಕ್ ಅಥವಾ ಇನ್ನಿತರ ಸಂಸ್ಥೆಗಳ ಸಾಲದ ನೆರವಿನೊಂದಿಗೆ ಕೈಗೆತ್ತಿಕೊಳ್ಳುವುದು ಉದ್ಯೋಗಾವಕಾಶಗಳ ಹೆಚ್ಚುವಿಕೆಗೆ ಕಾರಣವಾಗಬಹುದು.

**ಉ) ಸೇವಾಕ್ಷೇತ್ರ**

ಕನಿಷ್ಠ ಅವಶ್ಯಕತೆಗಳ ಕಾರ್ಯಕ್ರಮಗಳು, ಗ್ರಾಮೀಣ ಪ್ರದೇಶಗಳ ಆಸ್ಪತ್ರೆಗಳ ಸೌಲಭ್ಯಗಳು, ಔಷಧಿಗಳ ಲಭ್ಯತೆ, ಉಪಕರಣಗಳ ಲಭ್ಯತೆಯ ಸುಧಾರಣೆ, ವೈದ್ಯರ ಲಭ್ಯತೆಗಳನ್ನು ಬಲಪಡಿಸು ವುದಲ್ಲದೆ ಆರೋಗ್ಯ ರಕ್ಷಣೆಯ ಸೌಲಭ್ಯಗಳನ್ನು ಉತ್ತಮಗೊಳಿಸಿ, ಉದ್ಯೋಗಾವಕಾಶಗಳ ಹೆಚ್ಚುವಿಕೆಗೆ ಕಾರಣವಾಗುತ್ತದೆ.

ಅಂತೆಯೇ, ಏಕೋಪಾಧ್ಯಾಯ ಶಾಲೆಗಳನ್ನು ಎರಡು ಉಪಾಧ್ಯಾಯ ಶಾಲೆಗಳಾಗಿ ಬದಲಾಯಿಸುವುದರಿಂದ ಮಕ್ಕಳ ವಿದ್ಯಾಭ್ಯಾಸ ಸೌಲಭ್ಯಗಳು ಹೆಚ್ಚುವುದಲ್ಲದೆ ಉದ್ಯೋಗಾವಕಾಶಗಳು ಹೆಚ್ಚುತ್ತವೆ.

**ಉದ್ಯೋಗದ ಹಕ್ಕು**

ಹಿಂದೆ ತಿಳಿಸಿರುವಂತೆ, ಸಂವಿಧಾನದತ್ತವಾದ ಈ ಹಕ್ಕನ್ನು ಜಾರಿಗೊಳಿಸುವುದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸದ್ಯದ ಸಂಪನ್ಮೂಲಗಳ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ. ಆದ್ದರಿಂದ, ಇದನ್ನು ಕಾಲಾನುಕ್ರಮದಲ್ಲಿ ಪ್ರತಿ ಹಳ್ಳಿಯಲ್ಲಿಯೂ ಸ್ಥಳೀಯ ಜನರು ಉದ್ಯೋಗಾಧಾರಿತ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸುವ ವಾತಾವರಣವನ್ನು ಸೃಷ್ಟಿಸುವುದರ ಮೂಲಕ ಪೂರೈಸಬೇಕು. ಇದರಿಂದಾಗಿ, ಈಗಿನ ವೆಚ್ಚದ ಆಧಾರದ ಉದ್ಯೋಗ ಕಾರ್ಯಕ್ರಮಗಳು ಪ್ರತಿಫಲ ನೀಡುವಂತಹ ಬಂಡವಾಳಾಧಾರಿತ ಕಾರ್ಯಕ್ರಮಗಳಾಗಿ ರೂಪುಗೊಳ್ಳುತ್ತವೆ. ಯಾವ ಜನರಿಗೆ ಯೋಜನೆಯು ಅತ್ಯಾವಶ್ಯಕವಾಗಿದೆಯೋ, ಅಂತಹವರನ್ನು ತೊಡಗಿಸಿಕೊಂಡು ಮೂಲಮಟ್ಟದ ಯೋಜನಾಪದ್ಧತಿಯನ್ನು ಅಳವಡಿಸಿಕೊಳ್ಳಬೇಕು.

**೫. ರಕ್ಷಣಾ ಕಾರ್ಯಕ್ರಮಗಳ ಮೌಲ್ಯಮಾಪನ**

**೧. ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ**

ಕರ್ನಾಟಕ ಸರ್ಕಾರದ ಸಾಂಖ್ಯಿಕ ಹಣಕಾಸು ಮತ್ತು ಸಾಂಖ್ಯಿಕ ಇಲಾಖೆಯ ಮೌಲ್ಯಮಾಪನ ವಿಭಾಗವು ಪ್ರಕಟಿಸಿರುವ ಈ ಮೌಲ್ಯಮಾಪನ ವರದಿಯು 'ನಿಜವಾದ ಅರ್ಥದಲ್ಲಿ ಫಲಾನುಭವಿಗಳ ಕುಟುಂಬದ ವರಮಾನವನ್ನು ಹೆಚ್ಚಿಸುವಲ್ಲಿ ಈ ಕಾರ್ಯಕ್ರಮವು ಅಂತಹ ಪ್ರಭಾವಶಾಲಿ ಏನಾಗಿಲ್ಲ. ಈ ಸ್ಥಿತಿಗೆ ಯೋಜನೆಯಲ್ಲಿನ ಕೊರತೆಗಳು, ಕಾರ್ಯಕ್ರಮವನ್ನು ಸಂಘಟಿಸಿ ಜಾರಿಗೊಳಿಸುವಲ್ಲಿನ ಲೋಪದೋಷಗಳು ಕಾರಣವಾಗಿದೆ' ಎಂದು ದಾಖಲಿಸಿದೆ.

**೨. ಸಾರ್ವಜನಿಕ ವಿತರಣಾ ಪದ್ಧತಿ**

ಇದು ಮತ್ತೊಂದು ಬಡತನದ ವಿರುದ್ಧ ರಕ್ಷಣಾ ಕಾರ್ಯಕ್ರಮವಾಗಿದ್ದು, ಇದರಡಿಯಲ್ಲಿ ಸೀಮಿತ ಪ್ರಮಾಣದಲ್ಲಿ ಧಾನ್ಯಗಳು, ಸೀಮೆ ಎಣ್ಣೆ ಮತ್ತು ಸಕ್ಕರೆಯನ್ನು ರಿಯಾಯಿತಿ ದರಗಳಲ್ಲಿ ಪಡಿತರ ಕಾರ್ಡುದಾರರಿಗೆ ವಿತರಿಸಲಾಗುತ್ತದೆ. ನ್ಯಾಯಬೆಲೆಗಳಲ್ಲಿ ಆಹಾರ ಧಾನ್ಯಗಳ ಲಭ್ಯತೆಯ ಭರವಸೆ ನೀಡುವುದರ ಮೂಲಕ ಸಮಾಜದ ಬಡ ವರ್ಗವನ್ನು ರಕ್ಷಿಸುವ ಉದ್ದೇಶ ಈ ಕಾರ್ಯಕ್ರಮಕ್ಕಿದೆ. ಈ ಕಾರ್ಯಕ್ರಮವನ್ನು ಜಾರಿಗೊಳಿಸುವ ಮೂಲ ಉದ್ದೇಶವೇ ವಿಶೇಷವಾಗಿ, ಬಡವರಿಗೆ ಆಹಾರದ ಭದ್ರತೆಯನ್ನು ಒದಗಿಸುವುದಾಗಿದೆ. ಸಣ್ಣ ಮತ್ತು ಬೃಹತ್ ಆರ್ಥಿಕ ನೀತಿಗಳ ಮೂಲಕ ಬಡತನವನ್ನು ನಿರ್ಮೂಲ ಮಾಡುವವರೆಗೆ ಈ ಪದ್ಧತಿಯನ್ನು ಬಡವರ ಪರವಾದ ಆದಾಯದ ವರ್ಗಾವಣೆ ಎಂದು ತಿಳಿಯಬೇಕು. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ಇತ್ತೀಚೆಗೆ ರಾಷ್ಟ್ರೀಯ ಮಾದರಿ ಸಮೀಕ್ಷೆಯ ಸಮಿಕ್ಷಾ ಮಾಹಿತಿಗಳನ್ನಾಧರಿಸಿ ಈ ಪದ್ಧಿತಿಯು ಬಡವರನ್ನು ಪರಿಣಾಮಕಾರಿಯಾಗಿ ತಲುಪುವುದರ ಬಗ್ಗೆ ಒಂದು ಚಿಕ್ಕ ಟಿಪ್ಪಣಿಯನ್ನು ತಯಾರಿಸಿದೆ. ಈ ಟಿಪ್ಪಣಿಯಂತೆ, ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಶೇ. ೩೮.೧ ಜನರು ಈ ಪದ್ದತಿಯಿಂದ ಧಾನ್ಯಗಳನ್ನು ಕೊಂಡಿಲ್ಲವೆಂದು, ಶೇ. ೫೩.೯ ಮಂದಿ ಭಾಗಶಃ ಕೊಂಡಿದ್ದಾರೆಂದು ಮತ್ತು ಶೇ. ೮ ಮಂದಿ ಪೂರ್ಣವಾಗಿ ಈ ಪದ್ಧತಿಯಿಂದಲೇ ಕೊಂಡಿದ್ದರು. ಅಂತೆಯೆ, ಈ ಪದ್ಧತಿಯಿಂದ ಧಾನ್ಯಗಳನ್ನು ಭಾಗಶಃ ಕೊಂಡಿರುವವರಿಗೆ ಸರಾಸರಿ ಸಬ್ಸಿಡಿಯು ಮಾಸಿಕ ತಲಾ ರೂ. ೨.೦೪ ಆಗಿದ್ದರೆ, ಪೂರ್ಣವಾಗಿ ಕೊಂಡಿರುವವರಿಗೆ ರೂ. ೩.೦೦ ಆಗಿತ್ತು. ನಗರ ಪ್ರದೇಶಗಳಲ್ಲಿ ಶೇ. ೩೭.೩ ಜನರು ಈ ಪದ್ಧತಿಯಿಂದ ಧಾನ್ಯಗಳನ್ನು ಕೊಳ್ಳದೇ ಇರುವವರಿದ್ದು ಶೇ. ೫೮.೯ ಜನರು ಭಾಗಶಃ ಕೊಂಡಿದ್ದವರಿದ್ದು, ಪೂರ್ಣವಾಗಿ ಕೊಂಡಿರುವವರ ಪ್ರಮಾಣ ಶೇ. ೩.೮ ಆಗಿತ್ತು ಹಾಗೂ ಸರಾಸರಿ ಸಬ್ಸಿಡಿಯು ರೂ. ೩.೭೮ ಮತ್ತು ೬.೬೨ ಕ್ರಮವಾಗಿ ಭಾಗಶಃ ಕೊಂಡವರು ಮತ್ತು ಪೂರ್ಣವಾಗಿ ಕೊಂಡವರಿಗೆ ದೊರಕಿತ್ತು. ಧಾನ್ಯಗಳ ವಿತರಣೆಯಿಂದ ದೊರೆತ ಸಬ್ಸಿಡಿಯ ವ್ಯಾಪ್ತಿಯ ವಿಶ್ಲೇಷಣೆಯು, ಅತ್ಯಂತ ಬಡಕುಟುಂಬಗಳಾದ ಕೆಳಗಿನ ಶೇ. ೨೦ ಕುಟುಂಬಗಳಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿ ಶೇ. ೯ ಬಡವರು ಮಾಸಿಕ ತಲಾ ರೂ. ೨.೭೯ ಸಬ್ಸಿಡಿ ಪಡೆದಿದ್ದರೆ, ಶೇ. ೫೫.೪ ಬಡವರು ರೂ. ೧.೭೯ ಸಬ್ಸಿಡಿ ಪಡೆದಿದ್ದರು, ಈ ಸಂಖ್ಯೆಗಳು ನಗರ ಪ್ರದೇಶಗಳಲ್ಲಿ ಶೇ. ೩.೬ ಬಡವರು ತಲಾ ಮಾಸಿಕ ರೂ. ೩.೩೩ ಸಬ್ಸಿಡಿ ಪಡೆದಿದ್ದರೆ ಶೇ. ೬.೧೨ ಬಡವರು ರೂ. ೨.೫೫ ಸಬ್ಸಿಡಿ ಪಡೆದಿದ್ದರು ಎಂದು ತೋರಿಸುತ್ತದೆ.

ಅಷ್ಟೇ ಅಲ್ಲದೆ, ಕೆಳಗಿನ ಶೇ. ೨೦ ಕುಟುಂಬಗಳಿಗೆ ಗ್ರಾಮೀಣ ಪ್ರದೇಶಗಳಲ್ಲಿ ಶೇ. ೨೦.೭೯ರಷ್ಟು ಪ್ರಮಾಣದ ಧಾನ್ಯಗಳನ್ನು ವಿತರಿಸಲಾಗಿತ್ತು. ಈ ಟಿಪ್ಪಣಿಯು ಸಾರ್ವಜನಿಕ ವಿತರಣಾ ಪದ್ಧತಿಯುಬಡವರನ್ನು ಗ್ರಾಮೀಣ ಹಾಗೂ ನಗರ

ಪ್ರದೇಶಗಳಲ್ಲಿ ಪರಿಣಾಮಕಾರಿಯಾಗಿ ತಲುಪಿಲ್ಲ ಎಂಬ ಅಂಶವನ್ನು ಹೊರಗೆಡಹಿದೆ.

ಬಡವರು ಮತ್ತು ಅವಶ್ಯಕತೆಯುಳ್ಳವರು ಮಾತ್ರ ಕೆಲಸ ಮಾಡಲು ಬರುವುದರಿಂದ ಉದ್ಯೋಗ ಭರವಸೆ ಯೋಜನೆ ಮತ್ತು ಜವಾಹರ್ ರೋಜ್‌ಗಾರ್ ಯೋಜನೆಗಳಲ್ಲಿ ಒಂದು ದೊಡ್ಡ ಅನುಕೂಲವಿದೆ ಎಂದೂ, ಮಹಾರಾಷ್ಟ್ರದ ಅನುಭವದ ಆಧಾರದ ಮೇಲೆ ಇಂತಹ ಯೋಜನೆಗಳ ವೆಚ್ಚ ಪ್ರತಿಫಲ ಅನುಪಾತವು ಬಹಳ ಹೆಚ್ಚಿರುತ್ತದೆ ಎಂದೂ ಈ ಟಿಪ್ಪಣಿಯಲ್ಲಿ ತೋರಿಸಲಾಗಿದೆ. ಹೀಗಾಗಿ ಈ ಯೋಜನೆಗಳ ಮೂಲಕ ನಿರ್ಮಿಸುವ ಆಸ್ತಿಗಳು ಒಂದು ವೇಳೆ ಪೂರ್ಣವಾಗಿ ನಿಷ್ಪ್ರಯೋಜಕವಾದರೂ ಸಹ ಇಂತಹ ಯೋಜನೆಗಳು ಸಾರ್ವಜನಿಕ ವಿತರಣಾ ಪದ್ಧತಿಗಿಂತ ಬಡವರನ್ನು ತಲುಪುವುದರಲ್ಲಿ ಖಂಡಿತವಾಗಿಯೂ ಉತ್ತಮವಾದ ಒಂದು ಮಾರ್ಗ ಎಂದು ಭಾಪಿಸಿದೆ. ಪ್ರಾಯಶಃ ಬಡವರನ್ನು ತಲುಪುವ ಒಂದು ಪರಿಣಾಮಕಾರಿ ಮಾರ್ಗವೆಂದರೆ ಉದ್ಯೋಗ ಯೋಜನೆಗಳಲ್ಲಿ ಪಾಲ್ಗೊಳ್ಳುವವರಿಗೆ ಮಾತ್ರ ಮಜೂರಿಯ ಜೊತೆಗೆ ಅಯ್ದ ಅಥವಾ ಅಂಗೀಕರಿಸಿದ ಅಂಗಡಿಗಳಲ್ಲಿ ಧಾನ್ಯಗಳಿಗೆ ಪರಿವರ್ತಿಸಿ ಕೊಳ್ಳಬಹುದಾದ ಆಹಾರದ ಚೀಟಿಗಳನ್ನು ನೀಡುವುದರ ಮೂಲಕ ಸಾರ್ವಜನಿಕ ವಿತರಣಾ ಪದ್ಧತಿ ಮತ್ತು ಉದ್ಯೋಗ ಭರವಸೆ ಯೋಜನೆಗಳನ್ನು ಏಕೀಕರಿಸುವುದೇ ಆಗಿದೆ.

ಆದ್ದರಿಂದ, ಸಾರ್ವಜನಿಕ ವಿತರಣಾ ಪದ್ಧತಿಯ ಮೇಲ್ಕಾಣಿಸಿದ ಮೌಲ್ಯಮಾಪನದ ಬೆಳಕಿನಲ್ಲಿ ಈಗ ಇರುವ ಈ ಪದ್ಧತಿಯನ್ನು ಮಾರ್ಪಾಡು ಮಾಡಿ ಬಡಜನತೆಯನ್ನು ಪರಿಣಾಮಕಾರಿಯಾಗಿ ತಲುಪುವಂತೆ ಮಾಡುವ ಕಾಲ ಸನ್ನಿಹಿತವಾಗಿದೆ. ಬಹುಶಃ ಈ ದಿಕ್ಕಿನಲ್ಲಿ ಆಹಾರ ಚೀಟಿಗಳನ್ನು ನೀಡುವ ವಿಚಾರ ಉತ್ತಮವಾದುದು ಎನ್ನಬಹುದು.

**೬. ಮುಖ್ಯ ಫಲಿತಾಂಶಗಳು**

ಈವರೆಗಿನ ಅಧ್ಯಯನದಿಂದ ಹೊರಬೀಳುವ ಕೆಲವು ಮುಖ್ಯ ತೀರ್ಮಾನಗಳನ್ನು ಈ ಮುಂದೆ ನೀಡಲಾಗಿದೆ.

೧. ಕರ್ನಾಟಕದ ನಿರುದ್ಯೋಗದ ಮಟ್ಟವು ಕಾರ್ಮಿಕ ಶಕ್ತಿಯ ಶೇ. ೧೨ರಷ್ಟಿದ್ದು, ಗ್ರಾಮೀಣ ಪ್ರದೇಶಗಳಲ್ಲಿ ಇದು ಶೇ. ೧೫ರಿಂದ ೨೦ರ ಅಂಚಿನಲ್ಲಿದೆ.

೨. ಕರ್ನಾಟಕದಲ್ಲಿ ಉದ್ಯೋಗವು ಕೇವಲ ಶೇ. ೧ರ ವಾರ್ಷಿಕ ದರದಲ್ಲಿ ವೃದ್ಧಿಯಾಗುತ್ತಿದೆ. ಆದರೆ, ಕಾರ್ಮಿಕ ಶಕ್ತಿಯ ಬೆಳವಣಿಗೆಯ ದರವು ಇದಕ್ಕಿಂತ ವೇಗವಾಗಿದ್ದು ವಾರ್ಷಿಕವಾಗಿ ಶೇ. ೧.೫ರಂತೆ ಬೆಳೆಯುತ್ತಿದ್ದು, ನಿರುದ್ಯೋಗ ವ್ಯಕ್ತಿಗಳ ದೊಡ್ಡ ಬ್ಯಾಕ್‌ಲಾಗ್ ಉಳಿಯುವಂತೆ ಆಗಿದೆ.

೩. ಕರ್ನಾಟಕದಲ್ಲಿ, ವಿಶೇಷವಾಗಿ, ನಗರ ಪ್ರದೇಶಗಳ ಮಹಿಳೆಯರು ಅತಿ ದೊಡ್ಡ ಸಂಖ್ಯೆಯಲ್ಲಿ ಕಾರ್ಮಿಕ ಶಕ್ತಿಯ ಹೊರಗೆ ಉಳಿಯುವ ವಿಚಿತ್ರವಾದ ಸನ್ನಿವೇಶವಿದೆ.

೪. ಒಟ್ಟು ಉದ್ಯೋಗಿಗಳಲ್ಲಿ ಅರೆ ಉದ್ಯೋಗಿಗಳ ಪ್ರಮಾಣ ಕಡಿಮೆಯಾಗುತ್ತಿದ್ದರೂ ಅದು ಶೇ. ೮ರ ಅಂಚಿನಲ್ಲಿದೆ.

೫. ಕರ್ನಾಟಕದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಜನಸಂಖ್ಯೆ ಪ್ರಮಾಣವು ಭಾರತದ ಮಟ್ಟಕ್ಕಿಂತ ಹೆಚ್ಚಾಗಿದ್ದು, ಈ ಪ್ರಮಾಣವು ೧೯೮೭-೮೮ರಲ್ಲಿ ಕರ್ನಾಟಕದಲ್ಲಿ ಶೇ. ೩೨.೧ ಇದ್ದುದಕ್ಕೆ ಪ್ರತಿಯಾಗಿ, ಭಾರತದಲ್ಲಿ ಶೇ. ೨೯.೯ ಆಗಿತ್ತು.

೬. ಎಲ್ಲಾ ರಕ್ಷಣಾ ಕಾರ್ಯಕ್ರಮಗಳೂ ಅಂದರೆ, ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ, ಜವಾಹರ್ ರೋಜ್‌ಗಾರ್ ಯೋಜನೆ, ಸಾರ್ವಜನಿಕ ವಿತರಣಾ ಪದ್ಧತಿ ಮುಂತಾದವು ಒಂದಲ್ಲ ಒಂದು ಕೊರತೆಯಿಂದ ಕೂಡಿದೆ.

೭. ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಮೌಲ್ಯಮಾಪನವು ಅನರ್ಹ ವ್ಯಕ್ತಿಗಳು, ನಿರೀಕ್ಷಿತ ಮಟ್ಟದ ಪರಿಣಾಮವಿಲ್ಲದಿರುವುದು, ಮರು ಪಾವತಿಯಲ್ಲಿ ವಿಳಂಬ ಮುಂತಾದ ದೋಷಗಳಿಂದ ಕೂಡಿವೆ ಎಂದು ತೋರಿಸುತ್ತದೆ.

೮. ಸಾರ್ವಜನಿಕ ವಿತರಣಾ ಪದ್ಧತಿಯ ಮೌಲ್ಯಮಾಪನವು ವೆಚ್ಚ-ಪ್ರತಿಫಲ ಅನುಪಾತವು ನಗಣ್ಯವಾಗಿರುತ್ತದೆ. ಅತಿ ಹೆಚ್ಚಿನ ಆಡಳಿತಾತ್ಮಕ ವೆಚ್ಚ ಮತ್ತು ಸೋರುವಿಕೆಗಳಿಂದ ಕೂಡಿದೆ ಹಾಗೂ ಅತ್ಯಂತ ಕಡುಬಡವರನ್ನು ಪರಿಣಾಮಕಾರಿಯಾಗಿ ತಲುಪಿಲ್ಲ ಎಂದು ತೋರಿಸುತ್ತದೆ.

೯. ಬಡತನ ಮತ್ತು ನಿರುದ್ಯೋಗಿಗಳು ಸಯಾಮೀ ಅವಳಿಗಳಂತಿರುವುದರಿಂದ ಬಡತನವನ್ನು ನಿರ್ಮೂಲನ ಮಾಡಲು ಉದ್ಯೋಗ ಪ್ರಧಾನ ಯೋಜನೆ ಅಥವಾ ಕಾರ್ಯಕ್ರಮಗಳನ್ನು ದಕ್ಷತೆ ಮತ್ತು ಪರಿಣಾಮಕಾರಿಯಾಗಿ ಜಾರಿಗೊಳಿಸಬೇಕು.

೧೦. ಸ್ವಭಾವತಹ ಸಣ್ಣ ಮತ್ತು ಗೃಹಕೈಗಾರಿಕೆಗಳು ಉದ್ಯೋಗ ಪ್ರಧಾನವಾಗಿರುವುದರಿಂದ ಸರ್ಕಾರವು ಸೂಕ್ತ ಸಹಾಯಗಳ ಮೂಲಕ ಇವುಗಳನ್ನು ಪ್ರೋತ್ಸಾಹಿಸಬೇಕು. ಇದರಿಂದಾಗಿ, ಗ್ರಾಮೀಣ ಪ್ರದೇಶಗಳಲ್ಲಿರುವ ನಿರುದ್ಯೋಗವನ್ನು ಅಂದರೆ, ಕೃಷಿ ಕ್ಷೇತ್ರದ ಕಾಲಿಕ, ಅಪ್ರತ್ಯಕ್ಷ ಮತ್ತು ಅರೆ ಉದ್ಯೋಗವನ್ನು ನಿಯಂತ್ರಿಸಲು ಸಾಧ್ಯವಾಗುತ್ತದೆ.

೧೧. ರಾಜ್ಯದಾಯದ ಶೇ. ೧ರ ಬೆಳವಣಿಗೆಯಿಂದ ಶೇ. ೦.೨೨ರ ಉದ್ಯೋಗದ ಬೆಳವಣಿಗೆ ಆಗುತ್ತದೆಯಾದ್ದರಿಂದ ರಾಜ್ಯಾದಾಯದ ಬೆಳವಣಿಗೆಯಲ್ಲಿ ಹೆಚ್ಚಿನ ಅಂದರೆ, ವಾರ್ಷಿಕ ಶೇ. ೭.೫ರ ಬೆಳವಣಿಗೆಯನ್ನು ಸಾಧಿಸಬೇಕು.

೧೨. ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ಜನರ ವಲಸೆಯನ್ನು ತಡೆಯಲು ಗ್ರಾಮೀಣ ಕೈಗಾರಿಕೆಗಳಲ್ಲಿ ಈಗಾಗಲೇ ಉದ್ಯೋಗದಲ್ಲಿರುವವರನ್ನು ಉಳಿಸಿಕೊಳ್ಳಲು ಪ್ರೋತ್ಸಾಹಕರ ಹಾಗೂ ಬೆಂಬಲದಾಯಕ ಕ್ರಮಗಳನ್ನು ತೀವ್ರಗೊಳಿಸುವುದರ ಮೂಲಕ ಪ್ರಯತ್ನವನ್ನು ಮಾಡಬೇಕು.

# ಕರ್ನಾಟಕದಲ್ಲಿ ಕೃಷಿ ಅಭಿವೃದ್ಧಿ

ಪಿ.ವಿ. ಶೆಣೈ ಮತ್ತು ಎಂ. ವಿವೇಕಾನಂದ

ನಮ್ಮಲ್ಲಿ ಒದಗಿರುವ ತಾಂತ್ರಿಕ ಮತ್ತು ಕಾಲ್ಪನಿಕ ಯೋಜನೆ ಮತ್ತು ಸಮರ್ಪಕವಾದ ಕೃಷಿ ಅಭಿವೃದ್ಧಿಯ ನೀತಿಯ ಕೊರತೆಯಿಂದಾಗಿ ಒಟ್ಟು ಭಾರತದಲ್ಲಿ ಪ್ರಸ್ತುತ ಕೃಷಿ ಬೆಳೆಯ ಇಳುವರಿಯು ಮೂರನೇ ಒಂದರಿಂದ ಎರಡನೇ ಒಂದರಷ್ಟಿದೆ. ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯದಲ್ಲಿ ಕೃಷಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಕೆಲವೊಂದು ಮುಖ್ಯವಾದ ವಿಷಯಗಳ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಬೆಳೆಯ ಮಾದರಿ, ಉತ್ಪಾದನೆ, ಇಳುವರಿಯಲ್ಲಿ ಉಂಟಾಗುವ ಅಂತರ ಹಾಗೂ ಬದಲಾವಣೆಗಳನ್ನು ಮಾತ್ರ ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಬಹು ವಿಧವಾದ ಬೆಳೆಯು ರಾಜ್ಯದ ಲಕ್ಷಣವಾಗಿದೆ. ಬೆಳೆಯ ಮಾದರಿ ಬಹುರೂಪ ಮತ್ತು ಪ್ರಾದೇಶಿಕ ವ್ಯತ್ಯಾಸಗಳು ಕೃಷಿ ರಂಗದಲ್ಲಿ ಉಂಟಾಗುವ ವ್ಯತ್ಯಾಸಕ್ಕೆ ಸೂಚ್ಯವಾಗಿರಬಹುದು. ರಾಜ್ಯದಲ್ಲಿ ಕೃಷಿ ಬದಲಾವಣೆಯು ಯಾವ ದಿಶೆಯನ್ನು ಅನುಸರಿಸುತ್ತದೆ ಹಾಗೂ ಕೃಷಿಯಲ್ಲಿ ಅನುಷ್ಠಾನಗೊಳಿಸಬೇಕಾದ ನೀತಿಯ ಆಯ್ಕೆ ಕುರಿತಂತೆ ಪ್ರಯತ್ನಿಸುವಲ್ಲಿ ಈ ಲೇಖನವು ಸಫಲವಾಗಬಹುದು.

### ಆರ್ಥಿಕತೆಯಲ್ಲಿ ಕೃಷಿಯ ಪ್ರಾಮುಖ್ಯತೆ

ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿಯು ಮೊದಲ ಸ್ಥಾನವನ್ನು ಆಕ್ರಮಿಸಿದೆ. ಇದರಿಂದ ರಾಜ್ಯಗಳು ಹೊರತಾಗಿಲ್ಲ. ೧೯೬೦-೬೧ರಲ್ಲಿ ದೇಶದ ಒಟ್ಟು ಉತ್ಪಾದನೆಯಲ್ಲಿ ಕೃಷಿ ಕ್ಷೇತ್ರದ ಕೊಡುಗೆ ಪ್ರಚಲಿತ ಬೆಲೆ ಪ್ರಕಾರ ೫೧.೪ ಶೇಕಡಾ ಆಗಿತ್ತು. ೧೯೮೦-೮೧ರಲ್ಲಿ ಶೇಕಡಾ ೪೦ಕ್ಕೆ ಇಳಿದಿತ್ತು ಮತ್ತು ೧೯೯೦-೯೧ರಲ್ಲಿ ೩೪.೪ ಶೇಕಡಾಕ್ಕೆ ಬಂತು. ೧೯೬೦-೬೧ರಲ್ಲಿ ಒಟ್ಟು ೬೯.೫ ಶೇಕಡಾ ಕಾರ್ಮಿಕರು ಕೃಷಿಯನ್ನು ಅವಲಂಬಿಸಿದ್ದರು. ೧೯೯೦-೯೧ನೇ ಸಾಲಿಗೆ ಶೇಕಡಾ ೬೪.೮ ಮಟ್ಟಕ್ಕೆ ತಲುಪಿತು. ೧೯೬೦-೬೧ನೇ ವರ್ಷದಲ್ಲಿ ರಾಜ್ಯದ ೬೦.೭ ಶೇಕಡಾ ದೇಶ ಮಟ್ಟಕ್ಕೆ ಹೋಲಿಸಿದಾಗ ಹೆಚ್ಚಾಗಿತ್ತು. ೧೯೮೦-೮೧ರಲ್ಲಿ ಶೇಕಡಾ

೪೫.೮ ಹಾಗೂ ೧೯೯೦-೯೧ ಶೇಕಡಾ ೬೪.೮ಕ್ಕೆ ಇಳಿದಿತ್ತು. ರಾಜ್ಯದ ಒಟ್ಟು ಉತ್ಪಾದನೆಯಲ್ಲಿ ಕೃಷಿ ಕ್ಷೇತ್ರದ ಕೊಡುಗೆಯು ೬೦.೭ ಶೇಕಡಾ. ಇದು ದೇಶ ಮಟ್ಟಕ್ಕೆ ೧೯೮೦-೮೧ರಲ್ಲಿ ೪೫.೮ ಶೇಕಡಾ ಮತ್ತು ೧೯೯೦- ೯೧ನೇ ಸಾಲಿನಲ್ಲಿ ಶೇಕಡಾ ೩೬.೪ರಷ್ಟಿತ್ತು ಕೃಷಿಯನ್ನೇ ಅವಲಂಬಿಸಿಕೊಂಡಿದ್ದ ಕಾರ್ಮಿಕರ ಕೊಡುಗೆ ಕಾರ್ಮಿಕ ಬಲ ೭೦.೬ರಿಂದ ೧೯೭೦-೭೧ಕ್ಕೆ ಶೇಕಡಾ ೬೫ಕ್ಕೆ ಕಡಿತಗೊಂಡಿತ್ತು. ೧೦೯೦-೯೧ರ ಸಾಲಿನಲ್ಲಿ ಇವರ ಮಟ್ಟ ೬೩.೧ಕ್ಕೆ ಇಳಿಯಿತು. ಈ ಶೇಕಡವಾರು ಅಂಕಿ-ಅಂಶಗಳು ಕೃಷಿ ಕ್ಷೇತ್ರದ ಕೊಡುಗೆಯು ಪರಿಣಾಮಕಾರಿಯಾಗಿ ಕೆಳಕ್ಕೆ ಬಂದಿರುವುದನ್ನು ತೋರಿಸುತ್ತವೆ. ಕೃಷಿಯನ್ನು ಅವಲಂಬಿಸಿಕೊಂಡಿದ್ದ ಕಾರ್ಮಿಕರ ಪ್ರಮಾಣವು ಸಮಪ್ರಮಾಣದಲ್ಲಿ ಕ್ಷೀಣಿಸಿದೆ. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ಕೃಷಿ ಕೆಲಸಗಾರರ ಆದಾಯದ ಪ್ರಮಾಣವನ್ನು ಕೃಷಿಯೇತರ ಕೆಲಸಗಾರರಿಗೆ ಹೋಲಿಸಿದಾಗ ಕಡಿಮೆಯಾಗಿದೆ ಮತ್ತು ಕೈ ಕೂಲಿಗಾರರ ನಡುವೆ ಆದಾಯದಲ್ಲಿ ಅಸಮಾನತೆ ಇತ್ತು, ಕೃಷಿಯೇತರ ಸಂಖ್ಯೆ ಈ ವರ್ಷಗಳಲ್ಲಿ ಹೆಚ್ಚುತ್ತಾ ಬಂತು. ಜೀವನ ಮಟ್ಟದ ಸುಧಾರಣೆಯಲ್ಲಿ ಶೇಕಡಾ ೬೦ರಷ್ಟು ಕೆಲಸ ಕೃಷಿ ಅಭಿವೃದ್ಧಿಯನ್ನು ಅವಲಂಬಿಸಿದೆ. ಇದರೊಂದಿಗೆ ಆರ್ಥಿಕತೆಯ ಇತರ ಮುಖಗಳೊಂದಿಗೆ ಕೃಷಿ ಕ್ಷೇತ್ರವು ಸರಪಣಿ ಹೊಂದಿದೆ. ಇತರ ಕ್ಷೇತ್ರಗಳ ಉನ್ನತಿಯು ಕೂಡ ಕೃಷಿ ಕ್ಷೇತ್ರದ ಕಾರ್ಯ ಸಾಧನೆಯನ್ನು ಅವಲಂಬಿಸಿದೆ.

## ಬೆಳೆಯ ವಿಧಾನ

ಮೂರು ದಶಕಗಳಿಂದ ಭಾರತದ ಕೃಷಿ ಕ್ಷೇತ್ರದಲ್ಲಿ ಮುಖ್ಯವಾಗಿ ಬೆಳೆಯ ವಿಧಾನ, ಬೆಳೆಯ ಉತ್ಪಾದನೆಗಳಲ್ಲಿ ಹಲವಾರು ಬದಲಾವಣೆಗಳಾಗಿವೆ. ಆಹಾರ ಧಾನ್ಯಗಳಲ್ಲಿ ಸ್ವಾವಲಂಬನೆ ಹಾಗೂ ಮಾರುಕಟ್ಟೆ ದರಗಳನ್ನು ಸ್ಥಿರ ಇರುವಂತೆ, ಜೊತೆಗೆ ಪ್ರಕೃತಿ ವಿಕೋಪಗಳ ಸಂದರ್ಭದಲ್ಲಿ ಆಹಾರ ಧಾನ್ಯಗಳ ಕೊರತೆಯನ್ನು ಎದುರಿಸಲು ಹೆಚ್ಚುವರಿ ಆಹಾರ ಸಂಗ್ರಹಣೆಯನ್ನು ಮಾಡುವಲ್ಲಿ ಯಶಸ್ವಿಯಾಗಿದೆ. ನೀರಾವರಿಯ ಸಾಮರ್ಥ್ಯ, ನೀರಾವರಿಯನ್ನು ಅವಲಂಬಿಸಿಕೊಂಡು ಕೃಷಿಕ್ಷೇತ್ರದಲ್ಲಿ ಹೊಸ ತಾಂತ್ರಿಕತೆಯಿಂದಾಗಿ, ಗೊಬ್ಬರ ಮತ್ತು ಬೀಜ ತಳಿಗಳು ಮುಂತಾದ ವಿಶೇಷ ಲಕ್ಷಣಗಳಿಂದಾಗಿ ಈ ಮೇಲಿನ ಬದಲಾವಣೆಯು ಸಾಧ್ಯವಾಯಿತು. ಹೀಗಿದ್ದರೂ ಪ್ರಾಕೃತಿಕ ಸಂಪನ್ಮೂಲಗಳಲ್ಲಿ ಇರುವ ವ್ಯತ್ಯಾಸ, ನೀರಾವರಿ ಮತ್ತು ಹೊಸ ತಾಂತ್ರಿಕತೆಯ ಅಭಿವೃದ್ಧಿಯು ಮುಖ್ಯವಾಗಿ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುವುದರಿಂದ ಕೃಷಿ ಅಭಿವೃದ್ಧಿಯು ಪ್ರಾದೇಶಿಕವಾಗಿ ದೇಶದ ಎಲ್ಲಾ ಕಡೆಯಲ್ಲಿಯೂ ಏಕರೂಪವಾಗಿಲ್ಲ.

ಕಳೆದ ಮೂರು ದಶಕಗಳಿಂದ ಕರ್ನಾಟಕದಲ್ಲಿ ಕೃಷಿ ವಿಧಾನದಲ್ಲಿ ಆದ ವ್ಯತ್ಯಾಸಗಳನ್ನು ಗುರುತಿಸಿ, ದೇಶ ಮಟ್ಟಕ್ಕೆ ಹೋಲಿಸುವ ಪ್ರಯತ್ನ ಇಲ್ಲಿ ಕೈಗೊಳ್ಳಲಾಗಿದೆ. ಸಜ್ಜೆ, ಜೋಳ, ರಾಗಿ, ಮೆಕ್ಕೆ ಜೋಳ, ಅಕ್ಕಿ, ಗೋಧಿ, ನವಣೆ,

ಸಾವೆ (save), ಹರಕ, ಬಡ್ಡಿದರಿ, ಬರಗು, ಇತರ ಕಾಳುಗಳು, ಕಡಲೆ, ತೊಗರಿ, ಹುರಳಿ, ಉದ್ದು, ಹೆಸರು, ಇತರ ದ್ವಿದಳ ಧಾನ್ಯಗಳು, ಶೇಂಗಾ, ಸಾಸಿವೆ, ಹರಳೆಣ್ಣೆ ಬೀಜ, ಅಗಸೆ, ಸೂರ್ಯಕಾಂತಿ, ಹತ್ತಿ, ಕಬ್ಬು, ತೆಂಗು ಮತ್ತು ಅಡಿಕೆ ಮುಂತಾದ ಮೂವತ್ತೆರಡು ಬೆಳೆಗಳನ್ನು ಕರ್ನಾಟಕ ರಾಜ್ಯದಲ್ಲಿ ಶೇಕಡಾ ೯೬ರಷ್ಟು ಹಾಗೂ ದೇಶ ಮಟ್ಟದಲ್ಲಿ ಶೇಕಡಾ ೯೧.೫ರಷ್ಟು ೧೯೫೦-೬೦, ೧೯೬೯-೭೦, ೧೯೭೯-೮೦, ೧೯೮೮-೮೦ ಮತ್ತು ೧೯೮೯-೯೦ನೇ ವರ್ಷಗಳಲ್ಲಿ ಸಂಬಂಧಪಟ್ಟಂತೆ ವಾರ್ಷಿಕ ಏರಿಳಿಕೆಯನ್ನು ಸಮನಾಗಿಸಲು ಅಂಕಿ-ಸಂಖ್ಯೆಗಳನ್ನು ತ್ರಿವರ್ಷಗಳ ಸರಾಸರಿಯಲ್ಲಿ ಮಂಡಿಸಲಾಗಿದೆ. ದೇಶಾದಾದ್ಯಂತ ಸುಮಾರು ೧೫೨೪ ಲಕ್ಷ ಹೆಕ್ಟೇರಿನಿಂದ ೧೭೬೧ ಲಕ್ಷ ಹೆಕ್ಟೇರಿನಷ್ಟು ಬೆಳೆಯನ್ನು ಬೆಳೆಸುವ ಪ್ರದೇಶದಲ್ಲಿ ಸ್ಥಿರವಾಗಿ ಹೆಚ್ಚಳವಾಗಿದೆ. ೧೯೫೯-೬೦ರಿಂದ ೧೯೮೮-೮೯ರವರೆಗೆ ಶೇಕಡಾ ೧೫.೬ರಷ್ಟು ಹೆಚ್ಚುವರಿಯಾಗಿದೆ. ೧೯೫೯-೬೦ರಲ್ಲಿ ಕಾಳುಗಳನ್ನು ಶೇಕಡಾ ೫೯.೮ ಪ್ರದೇಶದಲ್ಲಿ ಬೆಳೆಯಲಾಗಿದೆ ಮತ್ತು ೧೯೬೯-೭೦ರಲ್ಲಿ ಹೊಸ ಬಗೆಯ ಕಾಳುಗಳ ಬೆಳೆಯನ್ನು ಆರಂಭಿಸಿರುವುದರಿಂದ ಶೇಕಡಾ ೬೨ರ ಮಟ್ಟವನ್ನು ತಲುಪಿತು. ಆದರೆ ಮುಂದಿನ ದಶಕಗಳಲ್ಲಿ ಕಾಳುಗಳನ್ನು ಬೆಳೆಸುವ ಪ್ರದೇಶಗಳಲ್ಲಿ ಇಳಿತವಾಗಿವೆ. ೧೯೮೮-೮೯ರಲ್ಲಿ ಶೇಕಡಾ ೫೮ಕ್ಕೆ ನಿಂತಿತು. ಧಾನ್ಯಗಳಲ್ಲಿ ಮುಖ್ಯವಾಗಿ ಗೋಧಿ ಲಾಭದಾಯಕ ಬೆಳೆಯಾಗಿದೆ. ಇದರ ಪ್ರಮಾಣವು ೧೯೫೯-೬೦ ರಲ್ಲಿ ಶೇಕಡಾ ೮.೫ರಿಂದ ೧೯೮೮-೮೯ ವರ್ಷಕ್ಕೆ ಶೇಕಡಾ ೧೩.೪ಕ್ಕೆ ಏರಿತು. ಪ್ರಥಮ ದಶಕಗಳಲ್ಲಿ ಅಕ್ಕಿ ಬೆಳೆಯ ಪ್ರದೇಶವು ಶೇಕಡಾ ೧ರಿಂದ ಸುಮಾರು ೨೨ ಶೇಕಡಾಕ್ಕೆ ಏರಿತು. ಮುಂದಿನ ದಶಕಗಳಲ್ಲಿ ಇದರ ಅಂಶವು, ಶೇಕಡಾ ೨೩ಕ್ಕೆ ಮುಂದುವರಿಯಿತು. ಮೆಕ್ಕೆ ಧಾನ್ಯವನ್ನು ಹೊರತು ಪಡಿಸಿ ಕೆಳ ದರ್ಜೆಯ ಧಾನ್ಯಗಳು ಪ್ರದೇಶಗಳಲ್ಲಿ ತನ್ನ ಸ್ಥಾನವನ್ನು ಕಳೆದುಕೊಂಡಿತು. ಇದರೊಂದಿಗೆ ಸಜ್ಜೆಯ ಅಂಶವು ಕೂಡ ಶೇಕಡಾ ೭.೩ರಿಂದ ಶೇಕಡಾ ೬ಕ್ಕೆ ಕಡಿತಗೊಂಡಿತು. ಜೋಳ ೧೧.೮ರಿಂದ ೮.೬ಕ್ಕೆ ಮತ್ತು ರಾಗಿ ೧.೭ ಶೇಕಡಾದಿಂದ ೧.೩ ಶೇಕಡಾಕ್ಕೆ ಇಳಿತಗೊಂಡಿತು. ಆದರೆ, ಮೆಕ್ಕೆ ಧಾನ್ಯದ ಭಾಗವು ಶೇಕಡಾ ೨.೮ರಿಂದ ೩.೩ಕ್ಕೆ ಹೆಚ್ಚುವರಿಯಾಯಿತು. ದ್ವಿದಳ ಧಾನ್ಯಗಳು ಕೂಡ ಪ್ರದೇಶಗಳಲ್ಲಿ ತನ್ನ ಅಂಶಗಳನ್ನು ಕಳೆದುಕೊಂಡ ವರ್ಗಕ್ಕೆ ಸೇರಲಾಯಿತು. ಇದರ ಅಂಕಿ-ಅಂಶವು ೧೯೫೯-೬೦ರಿಂದ ಶೇಕಡಾ ೧೫.೯ರಿಂದ ೧೯೮೮-೮೯ಕ್ಕೆ ಶೇಕಡಾ ೧೨.೮ಕ್ಕೆ ಕುಂಠಿತಗೊಂಡಿತು. ವಾಣಿಜ್ಯ ಬೆಳೆಗಳಾದ ಎಣ್ಣೆಬೀಜಗಳು ೧೩೫.೭ ಲಕ್ಷ ಹೆಕ್ಟೇರಿನಿಂದ ೨೧೬.೭ ಲಕ್ಷ ಹೆಕ್ಟೇರ ವ್ಯಾಪ್ತಿಯನ್ನು ಹೊಂದಿದೆ. ಮೂರು ದಶಕಗಳಲ್ಲಿ ಶೇಕಡಾ ೫೯.೭ರಷ್ಟು ಭಾಗವನ್ನು ಪಡೆಯಿತು ಮತ್ತು ಇದೇ ದಶಕದಲ್ಲಿ ಇದರ ಪಾಲು ಸುಮಾರು ಶೇಕಡಾ ೮.೯ರಿಂದ ಶೇಕಡಾ ೧೩.೩ಕ್ಕೆ ಉನ್ನತಿಯನ್ನು ಸಾಧಿಸಿತು ಇದು ದ್ವಿದಳ ಧಾನ್ಯದ ಸರಾಸರಿಯ ಮಟ್ಟಕ್ಕೆ ಬಂದಿದೆ. ೧೯೫೯-೬೦ರಲ್ಲಿ ಹತ್ತಿ ಬೆಳೆಯ ಭಾಗವು ಶೇಕಡಾ ೫ರಷ್ಟಿದ್ದೂ, ಮುಂದಿನ

ಮೂರು ದಶಕಗಳಲ್ಲಿ ಶೇಕಡಾ ಒಂದಕ್ಕೆ ಇಳಿಯಿತು. ಇತರ ವಾಣಿಜ್ಯ ಬೆಳೆಗಳಾದ ಕಬ್ಬು, ತೆಂಗು ಮತ್ತು ಅಡಿಕೆಯ ಸರಾಸರಿ ಭಾಗ ಕಡಿಮೆಯಾಗಿದ್ದೂ ಈ ಬೆಳೆಗಳ ಭಾಗವು ೧೯೮೮-೮೯ನೇ ಸಾಲಿನಲ್ಲಿ ಕ್ರಮವಾಗಿ ಶೇಕಡಾ ೧.೯, ೧.೮ ಮತ್ತು ೧.೧ ರಷ್ಟಿತ್ತು ಸಂಕ್ಷಿಪ್ತವಾಗಿ ಹೇಳುವುದಾದರೆ ಧಾನ್ಯಗಳು ಮುಖ್ಯವಾಗಿ (ಅಕ್ಕಿ ಮತ್ತು ಗೋಧಿ), ದ್ವಿದಳ ಧಾನ್ಯಗಳು ಮತ್ತು ಎಣ್ಣೆ ಬೀಜಗಳು ಭಾರತದಲ್ಲಿ ಬೆಳೆಯ ವಿಧಗಳಲ್ಲಿ ಪ್ರಮುಖವಾಗಿದೆ.

ಕರ್ನಾಟಕದಲ್ಲಿ ಸುಮಾರು ೧೯೫೯-೬೦ರಿಂದ ೧೯೭೯-೮೦ರವರೆಗೆ ಶೇಕಡಾ ೩.೭ರಷ್ಟು ಬೆಳೆ ಬೆಳೆಸಲ್ಪಟ್ಟ ಪ್ರದೇಶದಲ್ಲಿ ಅಧಿಕವಾಗಿದೆ. ಕಳೆದ ದಶಕದಲ್ಲಿ (೧೯೭೯-೮೦ರಿಂದ ೧೯೮೯-೯೦) ಅವಧಿಯಲ್ಲಿ ಶೇಕಡಾ ೧೦ರಷ್ಟು ಹೆಚ್ಚುವರಿಯಾಯಿತು. ೧೯೫೯-೬೦ರಲ್ಲಿ ಕಾಳುಗಳನ್ನು ಬೆಳೆಯಲ್ಪಟ್ಟ ಪ್ರದೇಶವು ಶೇಕಡಾ ೫೮ರಷ್ಟಿದ್ದು, ೧೯೬೯-೭೦ ವರ್ಷಗಳಲ್ಲಿ ಶೇಕಡಾ ೫೫.೮ ಮಟ್ಟಕ್ಕೆ ಇಳಿಯಿತು, ೧೯೭೯-೮೦ರ ಸಾಲಿಗೆ ಇದರ ಭಾಗವು ಕ್ಷೀಣಗೊಂಡು, ೧೯೮೯-೯೦ರ ಅವಧಿಯಲ್ಲಿ ಶೇಕಡಾ ೪೭.೬ಕ್ಕೆ ದುರ್ಬಲಗೊಂಡಿತು. ಧಾನ್ಯಗಳಲ್ಲಿ ಮೆಕ್ಕೆ, ರಾಗಿ ಮತ್ತು ಅಕ್ಕಿಯನ್ನು ಹೊರತುಪಡಿಸಿ ಉಳಿದೆಲ್ಲಾ ಧಾನ್ಯಗಳಲ್ಲಿ ೧೯೫೯-೬೦ರಿಂದ ೧೯೮೯-೯೦ಕ್ಕೆ ಬೆಳೆಯಲ್ಪಟ್ಟ ಪ್ರದೇಶಗಳಲ್ಲಿ ತಮ್ಮ ಭಾಗವನ್ನು ಕಳೆದುಕೊಂಡಿತು. ಆದಾಗ್ಯೂ ಮೂರು ದಶಕಗಳಿಂದ ಜೋಳ ಬೆಳೆಯ ಭಾಗವು ಶೇಕಡಾ ೨೭.೨ರಿಂದ ಶೇಕಡಾ ೧೮.೫ಕ್ಕೆ ಕಡಿತಗೊಂಡರೂ ಕೂಡ ಇವತ್ತು ರಾಜ್ಯದ ಮುಖ್ಯ ಬೆಳೆಯಾಗಿ ಪರಿಗಣಿಸಲಾಗಿದೆ. ಜೋಳ ನಂತರ ರಾಗಿ ಮತ್ತು ಅಕ್ಕಿಯ ಭಾಗವು ಬೆಳೆ ಪ್ರದೇಶದಲ್ಲಿ ಪ್ರಮುಖವಾಗಿದೆ. ಈ ಎರಡು ಬೆಳೆಗಳಲ್ಲಿ ಸಣ್ಣ ಪುಟ್ಟ ವ್ಯತ್ಯಾಸಗಳಿದ್ದು ಸರಾಸರಿ ೧೦ರಷ್ಟು ಭಾಗದಲ್ಲಿ ಕ್ರಮವಾಗಿ ಬೆಳೆಯಲ್ಪಟ್ಟಿವೆ. ಮೆಕ್ಕೆ ಧಾನ್ಯವು ಹೊಸ ಬೆಳೆಯಾಗಿದ್ದರೂ ೧೯೫೯-೬೦ರಲ್ಲಿ ಶೇಕಡಾ ೦.೧ ಭಾಗ ಹಾಗೂ ಇದರ ಪ್ರಮಾಣವು ೧೯೮೯-೯೦ರಲ್ಲಿ ಶೇಕಡಾ ೨ಕ್ಕೆ ಅಧಿಕಗೊಂಡಿತು. ದೇಶ ಮಟ್ಟದಲ್ಲಿ ಗೋಧಿ ಪಡೆದುಕೊಂಡ ಸ್ಥಾನ ರಾಜ್ಯ ಮಟ್ಟದಲ್ಲಿ ಗಳಿಸಲಿಲ್ಲ. ಮೂರು ದಶಕಗಳಲ್ಲಿ ಗೋಧಿ ಬೆಳೆಯಲ್ಪಟ್ಟ ಭಾಗಾಂಶವು ಸರಾಸರಿ ೨.೯ರಿಂದ ಸರಾಸರಿ ೧.೯ಕ್ಕೆ ಬಂದಿಳಿಯಿತು. ಎರಡು ದಶಕಗಳಲ್ಲಿ ದೇಶ ಮಟ್ಟಕ್ಕೆ ತಲುಪದಿದ್ದರೂ ದ್ವಿದಳ ಧಾನ್ಯದ ಭಾಗದಲ್ಲಿ ಸರಾಸರಿ ೧೨.೪ರಿಂದ ೧೩.೯ಕ್ಕೆ ಏರಿಕೆಯಾಯಿತು. ೧೯೮೦-೯೦ರಲ್ಲಿ ಇದು ಸರಾಸರಿ ೧೩.೫ರಷ್ಟಿತ್ತು ೧೯೫೯-೬೦, ೧೯೬೯-೭೦, ೧೯೭೯-೮೦ ಎಣ್ಣೆ ಬೀಜದ ಪಾಲು ಶೇಕಡಾ ೧೯೮೯-೯೦ಕ್ಕೆ ಶೇಕಡಾ ೧೯.೬ಕ್ಕೆ ಅಧಿಕಗೊಂಡಿತು.

## ಕೋಷ್ಟಕ - ೧

## ಬೆಳೆಯ ಮಾದರಿ - ಭಾರತದಲ್ಲಿ

(ಮೂರು ವರ್ಷಗಳ ಚಲಾವಣೆಯ ಸರಾಸರಿ ಆಧಾರದಲ್ಲಿ)

(ಪ್ರದೇಶ - ೧೦೦೦ ಹೆಕ್ಟೇರಿಗೆ)

| ಬೆಳೆ | ವರ್ಷ ೧೯೫೯ -೬೦ | ಸರಾಸರಿ ಭಾಗ | ವರ್ಷ ೧೯೬೯ -೭೦ | ಸರಾಸರಿ ಭಾಗ | ವರ್ಷ ೧೯೭೯ -೮೦ | ಸರಾಸರಿ ಭಾಗ | ೧೯೮೮ -೮೯ | ಶೇಕಡಾ |
|---|---|---|---|---|---|---|---|---|
| ಸಜ್ಜೆ | ೧೧೧೯೭ | ೭.೩೫ | ೧೨೪೮೬ | ೭.೬೮ | ೧೧೨೧೦ | ೬.೫೦ | ೧೦೫೫೦ | ೫.೯೯ |
| ಜೋಳ | ೧೮೦೨೬ | ೧೧.೮೩ | ೧೮೨೩೭ | ೧೧.೨೨ | ೧೬೨೧೦ | ೯.೪೧ | ೧೫೧೮೨ | ೮.೬೨ |
| ರಾಗಿ | ೨೫೨೪ | ೧.೬೬ | ೨೪೯೮ | ೧.೫೪ | ೨೬೧೫ | ೧.೫೨ | ೨೩೧೫ | ೧.೩೧ |
| ಮೆಕ್ಕೆ | ೪೩೩೯ | ೨.೮೫ | ೫೮೧೦ | ೩.೫೭ | ೫೮೨೮ | ೩.೩೮ | ೫೭೭೨ | ೩.೨೮ |
| ಅಕ್ಕಿ | ೩೩೭೦೭ | ೨೨.೧೨ | ೩೭೪೧೩ | ೨೩.೦೨ | ೪೦೦೧೬ | ೨೩.೨೨ | ೪೦೯೦೬ | ೨೩.೨೩ |
| ಗೋಧಿ | ೧೨೯೭೫ | ೮.೫೧ | ೧೬೯೪೨ | ೧೦.೪೨ | ೨೨೩೬೪ | ೧೨.೯೮ | ೨೩೫೪೩ | ೧೩.೩೭ |
| ಒಟ್ಟು ಧಾನ್ಯಗಳು | ೯೧೧೫೪ | ೫೯.೮೧ | ೧೦೦೮೩೨ | ೬೨.೦೪ | ೧೦೪೧೭೦ | ೬೦.೪೪ | ೧೦೨೦೭೮ | ೫೭.೯೬ |
| ದ್ವಿದಳ ಧಾನ್ಯಗಳು | ೨೪೨೩೬ | ೧೫.೯೦ | ೨೧೯೪೦ | ೧೩.೫೦ | ೨೨೭೯೧ | ೧೩.೨೨ | ೨೨೫೪೭ | ೧೨.೮೦ |
| ಎಣ್ಣೆ ಬೀಜಗಳು | ೧೩೫೭೫ | ೮.೯೧ | ೧೫೩೦೯ | ೯.೪೨ | ೧೭೪೧೭ | ೧೦.೧೧ | ೨೧೬೬೮ | ೧೨.೩೦ |
| ಹತ್ತಿ | ೭೬೨೩ | ೫.೦೦ | ೭೬೪೪ | ೪.೭೦ | ೮೦೨೩ | ೪.೬೬ | ೭೦೪೪ | ೪.೦೦ |
| ಕಬ್ಬು | ೨೧೬೭ | ೧.೪೨ | ೨೬೩೨ | ೧.೬೨ | ೨೭೮೮ | ೧.೬೨ | ೩೩೩೮ | ೧.೯೦ |
| ತೆಂಗು | ೭೦೭ | ೦.೪೬ | ೧೦೨೨ | ೦.೬೩ | ೧೦೭೧ | ೦.೬೨ | ೧೪೨೭ | ೦.೮೧ |
| ಅಡಿಕೆ | ೦ | ೦.೦೦ | ೧೬೨ | ೦.೧೦ | ೧೮೨ | ೦.೧೧ | ೨೦೫ | ೦.೧೨ |
| ಒಟ್ಟು ಮೊತ್ತ | ೧೩೯೪೬೧ | ೯೧.೫೦ | ೧೪೯೫೪೧ | ೯೨.೦೧ | ೧೫೬೪೪೩ | ೯೦.೭೭ | ೧೫೮೩೦೭ | ೮೯.೮೮ |
| ಬೆಳೆಯಲ್ಪಟ್ಟ ಪ್ರದೇಶ | ೧೫೨೪೦೭ | ೧೦೦.೦೦ | ೧೬೨೫೨೭ | ೧೦೦.೦೦ | ೧೭೨೩೪೩ | ೧೦೦.೦೦ | ೧೭೬೧೨೩ | ೧೦೦.೦೦ |

## ಕೋಷ್ಟಕ - ೨

### ಬೆಳೆಯ ಮಾದರಿ - ಕರ್ನಾಟಕದಲ್ಲಿ

(ಮೂರು ವರ್ಷಗಳ ಚಲಾವಣೆಯ ಸರಾಸರಿ ಆಧಾರದಲ್ಲಿ)

(ಪ್ರದೇಶ - ೧೦೦೦ ಹೆಕ್ಟೇರಿಗೆ)

| ಬೆಳೆ | ವರ್ಷ ೧೯೫೯-೬೦ | ಸರಾಸರಿ ಭಾಗ | ವರ್ಷ ೧೯೬೯-೭೦ | ಸರಾಸರಿ ಭಾಗ | ವರ್ಷ ೧೯೭೯-೮೦ | ಸರಾಸರಿ ಭಾಗ | ೧೯೮೮-೮೯ | ಶೇಕಡಾ |
|---|---|---|---|---|---|---|---|---|
| ಸಜ್ಜೆ | ೫೦೦೬೯೨ | ೪.೭೩ | ೫೬೧೭೪೭ | ೫.೨೩ | ೬೪೭೦೭೧ | ೫.೯೦ | ೪೬೭೮೫೫ | ೩.೯೩ |
| ಜೋಳ | ೨೮೮೧೨೨೧ | ೨೭.೨೪ | ೨೩೫೧೩೮೭ | ೨೧.೮೮ | ೧೯೬೯೨೬೮ | ೧೭.೯೪ | ೨೨೦೦೦೮೩ | ೧೮.೪೯ |
| ರಾಗಿ | ೯೮೭೧೫೬ | ೯.೩೩ | ೧೦೩೪೯೭೧ | ೯.೬೩ | ೧೧೩೧೦೪೫ | ೧೦.೩೧ | ೧೧೨೪೩೨೨ | ೯.೪೫ |
| ಮೆಕ್ಕೆ | ೧೧೧೩೭ | ೦.೧೧ | ೫೭೦೩೨ | ೦.೫೩ | ೧೫೨೩೧೦ | ೧.೩೯ | ೨೫೧೭೭೪ | ೨.೧೨ |
| ಅಕ್ಕಿ | ೧೦೦೨೦೮೩ | ೯.೪೭ | ೧೧೫೦೨೨೭ | ೧೦.೭೦ | ೧೧೧೯೧೭೦ | ೧೦.೨೦ | ೧೧೯೮೦೭೮ | ೧೦.೦೭ |
| ಗೋಧಿ | ೩೦೯೪೮೭ | ೨.೯೩ | ೩೩೬೯೭೪ | ೩.೧೪ | ೩೬೩೨೨೬ | ೩.೩೧ | ೨೨೯೮೪೪ | ೧.೯೩ |
| ಒಟ್ಟು ಧಾನ್ಯಗಳು | ೬೧೬೦೨೩೫ | ೫೮.೨೪ | ೫೯೯೯೮೪೩ | ೫೫.೮೪ | ೫೮೧೧೮೭೫ | ೫೨.೯೬ | ೫೬೬೪೧೬೩ | ೪೭.೬೧ |
| ದ್ವಿದಳ ಧಾನ್ಯಗಳು | ೧೩೦೮೯೯೫ | ೧೨.೩೮ | ೧೪೧೪೮೩೪ | ೧೩.೧೭ | ೧೫೨೮೮೩೧ | ೧೩.೯೩ | ೧೬೩೧೧೪೮ | ೧೩.೭೧ |
| ಎಣ್ಣೆ ಬೀಜಗಳು | ೧೨೭೬೬೨೫ | ೧೨.೦೭ | ೧೩೨೨೫೧೧ | ೧೨.೩೧ | ೧೨೯೭೧೧೭ | ೧೧.೮೨ | ೨೩೭೩೫೧೩ | ೧೯.೯೫ |
| ಹತ್ತಿ | ೧೦೩೦೬೬೨ | ೯.೭೫ | ೧೦೫೩೬೩೪ | ೯.೮೧ | ೧೦೬೧೬೨೪ | ೯.೬೭ | ೬೪೯೨೩೨ | ೫.೪೬ |
| ಕಬ್ಬು | ೬೪೮೪೬ | ೦.೬೧ | ೧೦೬೯೮೭ | ೧.೦೦ | ೧೪೭೮೯೪ | ೧.೩೫ | ೨೫೮೭೨೩ | ೨.೧೭ |
| ತೆಂಗು | ೧೦೨೭೬೨ | ೦.೯೭ | ೧೩೦೭೦೯ | ೧.೨೨ | ೧೬೭೭೮೧ | ೧.೫೩ | ೨೨೬೧೫೩ | ೧.೯೦ |
| ಅಡಿಕೆ | ೩೧೮೬೫ | ೦.೩೦ | ೪೦೯೬೦ | ೦.೩೮ | ೫೩೨೫೮ | ೦.೪೯ | ೬೨೫೦೮ | ೦.೫೩ |
| ಒಟ್ಟು | ೯೯೯೫೯೮೯ | ೯೪.೫೧ | ೧೦೦೬೯೪೮೪ | ೯೩.೭೧ | ೧೦೦೬೮೩೮೦ | ೯೧.೭೫ | ೧೦೮೬೫೬೪೦ | ೯೧.೩೩ |
| ಬೆಳೆಯಲ್ಪಟ್ಟ ಪ್ರದೇಶ | ೧೦೫೭೬೨೧೮ | ೧೦೦.೦೦ | ೧೦೭೪೫೨೨೮ | ೧೦೦.೦೦ | ೧೦೯೭೪೨೧೨ | ೧೦೦.೦೦ | ೧೧೮೯೭೬೬೫ | ೧೦೦.೦೦ |

ಕಡೆ ಮೊದಲ ಮೂರು ವರ್ಷಗಳಲ್ಲಿ ಹತ್ತಿ ಬೆಳೆಯ ಭಾಗವು ಶೇಕಡಾ ೧೦ರಷ್ಟಿದ್ದು, ೧೯೮೯-೯೦ರ ಸಾಲಿನಲ್ಲಿ ಶೇಕಡವಾರು ೫ಕ್ಕೆ ಕಡಿತಗೊಂಡಿತು. ಕಬ್ಬು ಬೆಳೆಯ ಬಾಗವು ೧೯೫೯-೬೦ರ ಸಾಲಿಗೆ ಶೇಕಡಾ ೦.೬ರಷ್ಟಿದ್ದು, ದೇಶ ಮಟ್ಟಕ್ಕೆ ಹೋಲಿಕೆಯಾಗದಿದ್ದರೂ, ೧೯೮೯-೯೦ರ ಅವಧಿಗೆ ಸರಾಸರಿ ೨.೨ಕ್ಕೆ ತಲುಪಿದ್ದು ದೇಶ ಮಟ್ಟಕ್ಕಿಂತ ಹೆಚ್ಚುವರಿಯಾಗಿದೆ. ರಾಜ್ಯದಲ್ಲಿ ಕ್ರಮವಾಗಿ ತೆಂಗು ಮತ್ತು ಅಡಿಕೆ ಬೆಳೆಯ ಪ್ರಮಾಣ ಸರಾಸರಿ ೧.೯ ಮತ್ತು ೦.೫ ಕಡಿಮೆಯಿದ್ದರೂ ದೇಶದ ಮಟ್ಟಕ್ಕೆ ನೋಡಿದಾಗ ಹೆಚ್ಚು ಅಧಿಕವಲ್ಲಿದೆ. ಈ ಮೇಲಿನ

ಅಂಕಿ-ಅಂಶಗಳಾದ ಮೇಲ್ದರ್ಜೆಯ ಧಾನ್ಯಗಳಾದ ಅಕ್ಕಿ, ಗೋಧಿಯು ದೇಶ ಮಟ್ಟದಲ್ಲಿ ಪ್ರಮುಖ ಬೆಳೆಗಳಾಗಿದ್ದರೂ ರಾಜ್ಯ ಮಟ್ಟದಲ್ಲಿ ಗುರುತಿಸಲ್ಪಡಲಿಲ್ಲ. ಈ ಎಲ್ಲಾ ವರ್ಷಗಳಲ್ಲಿ ರಾಜ್ಯದಲ್ಲಿ ಬೆಳೆಯ ಮಾದರಿಯಲ್ಲಿ ವಿಶೇಷ ಬದಲಾವಣೆಯನ್ನು ತೋರಿಸುತ್ತದೆ ಮತ್ತು ವಾಣಿಜ್ಯ ಬೆಳೆಗಳ ಅಂಶವು ಕೂಡ ವಿಧವಿಧವಾಗಿದ್ದವು. ೧೯೮೦ರಲ್ಲಿ ವಾಣಿಜ್ಯ ಬೆಳೆಗಳಲ್ಲಿ ಹೆಚ್ಚಿನ ವೈವಿಧ್ಯತೆ ಕಂಡು ಬಂದಿದೆ.

**ಬೆಳೆಯ ವಿಧಗಳಲ್ಲಿ ಪ್ರಾದೇಶಿಕ ವಿಭಿನ್ನತೆ:**

ಭೌಗೋಳಿಕ ಲಕ್ಷಣಗಳಾದ ಮಣ್ಣಿನ ವಿಧ, ಮಳೆ ಬೀಳುವ ಮಾದರಿ ಮತ್ತು ಬೆಳೆಯ ಮಾದರಿಯನ್ನು ಆಧಾರವಾಗಿಟ್ಟುಕೊಂಡು ರಾಜ್ಯವನ್ನು ಮುಖ್ಯವಾಗಿ ನಾಲ್ಕು ಭೌಗೋಳಿಕ ಪ್ರದೇಶಗಳಾಗಿ ವಿಂಗಡಿಸಲಾಗಿದೆ. ಈ ಕೆಳಗೆ ಪ್ರಾದೇಶಿಕ ಸನ್ನಿವೇಶಕ್ಕೆ ಹೊಂದಿಕೊಂಡು ಜಿಲ್ಲೆಯ ಪಟ್ಟಿಯನ್ನು ಕೊಡಲಾಗಿದೆ.

೧. ಬೆಳಗಾಂ, ಬಳ್ಳಾರಿ, ಬಿಜಾಪುರ, ಬೀದರ್ ಧಾರವಾಡ, ಗುಲ್ಬರ್ಗ ಮತ್ತು ರಾಯಚೂರು

೨. ಬೆಂಗಳೂರು, ಚಿತ್ರದುರ್ಗ, ಕೋಲಾರ ಮತ್ತು ತುಮಕೂರು

೩. ಮಂಡ್ಯ, ಮೈಸೂರು ಮತ್ತು ಹಾಸನ

೪. ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು, ಶಿವಮೊಗ್ಗ ಮತ್ತು ಉತ್ತರ ಕನ್ನಡ

## ಕೋಷ್ಟಕ - ೩

## ೧೯೫೯-೬೦ ಮತ್ತು ೧೯೮೯-೯೦ರ ಸಾಲಿನಲ್ಲಿ ಪ್ರಾದೇಶಿಕತೆಗೆ ಅನುಗುಣವಾಗಿ ಸರಾಸರಿ ಬೆಳೆಯ ಮಾದರಿ (ಮೂರು ವರ್ಷಗಳ ಸರಾಸರಿ ಆಧಾರದಲ್ಲಿ)

(ಹೆಕ್ಟೇರ್‌ಗಳಲ್ಲಿ)

| ಬೆಳೆ | ಪ್ರದೇಶ - ೧ | | | | ಪ್ರದೇಶ - ೨ | | | |
|---|---|---|---|---|---|---|---|---|
| | ಪ್ರದೇಶ | ಶೇ. ಪ್ರಮಾಣ | ಪ್ರದೇಶ | ಶೇ. ಪ್ರಮಾಣ | ಪ್ರದೇಶ | ಶೇ. ಪ್ರಮಾಣ | ಪ್ರದೇಶ | ಶೇ. ಪ್ರಮಾಣ |
| ಸಜ್ಜೆ | ೪೫೧೫೪೩ | ೬.೫೬ | ೪೪೦೨೯೧ | ೬.೧೪ | ೪೪೯೮೩ | ೨.೬೪ | ೨೫೩೧೨ | ೧.೧೮ |
| ಜೋಳ | ೨೫೭೨೩೧೮ | ೩೭.೩೭ | ೧೯೭೫೬೦೬ | ೨೭.೫೫ | ೧೬೫೨೯೫ | ೯.೬೮ | ೯೧೦೦೦ | ೪.೨೫ |
| ರಾಗಿ | ೪೦೦೬೩ | ೦.೫೮ | ೫೪೨೪೨ | ೦.೭೬ | ೬೦೦೧೧೯ | ೩೫.೧೭ | ೬೨೬೧೨೮ | ೨೯.೨೫ |
| ಮೆಕ್ಕೆ | ೧೧೦೧೯ | ೦.೧೬ | ೧೭೫೯೫೮ | ೨.೪೫ | ೧೧೩ | ೦.೦೧ | ೪೬೫೮೦ | ೨.೧೮ |
| ಅಕ್ಕಿ | ೨೩೧೬೪೦ | ೩.೩೭ | ೩೨೧೨೬೭ | ೪.೪೮ | ೧೨೦೬೨೨ | ೭.೦೭ | ೧೬೭೬೧೯ | ೭.೮೩ |
| ಗೋಧಿ | ೩೦೮೩೩೨ | ೪.೪೮ | ೨೨೬೮೪೧ | ೩.೧೬ | ೭೯೬ | ೦.೦೫ | ೭೧೩ | ೦.೦೩ |
| ಒಟ್ಟು ಧಾನ್ಯಗಳು | ೩೮೬೭೧೦೧ | ೫೬.೧೮ | ೩೩೩೫೦೭೬ | ೪೬.೫೧ | ೧೧೧೭೫೧೨ | ೬೫.೪೯ | ೧೦೦೬೮೫೪ | ೪೭.೦೪ |
| ದ್ವಿದಳ ಧಾನ್ಯಗಳು | ೭೫೭೫೧೬ | ೧೧.೦೧ | ೧೧೨೮೨೬೩ | ೧೫.೭೩ | ೨೬೮೩೦೬ | ೧೫.೭೨ | ೨೧೬೮೮೯ | ೧೦.೧೩ |
| ಎಣ್ಣೆ ಬೀಜ | ೧೦೩೫೩೨೧ | ೧೫.೦೪ | ೧೬೬೮೦೪೬ | ೨೩.೨೬ | ೧೫೨೯೬೫ | ೮.೯೬ | ೫೧೭೭೯೦ | ೨೪.೧೯ |
| ಹತ್ತಿ | ೯೬೯೬೯೮ | ೧೪.೦೯ | ೫೨೭೨೯೦ | ೭.೩೫ | ೪೪೧೧೧ | ೨.೫೯ | ೩೯೭೯೯ | ೧.೮೬ |
| ಕಬ್ಬು | ೩೨೬೭೦ | ೦.೪೭ | ೧೭೦೪೪೩ | ೨.೩೮ | ೯೪೨೪ | ೦.೫೫ | ೧೫೬೬೯ | ೦.೭೩ |
| ತೆಂಗು | ೬೫೬ | ೦.೦೧ | ೨೯೨೬ | ೦.೦೪ | ೪೨೮೫೩ | ೨.೫೧ | ೯೮೭೯೪ | ೪.೬೨ |
| ಅಡಿಕೆ | ೨೧೦ | ೦.೦೦ | ೨೨೭ | ೦.೦೦ | ೫೦೬೬ | ೦.೩೦ | ೯೩೭೦ | ೦.೪೪ |
| ಒಟ್ಟು | ೬೬೬೩೧೭೧ | ೯೬.೮೦ | ೬೮೩೨೨೭೧ | ೯೫.೨೮ | ೧೬೪೦೨೩೮ | ೯೬.೧೨ | ೧೯೦೫೧೬೪ | ೮೯.೦೧ |
| ಒಟ್ಟು ಮೊತ್ತ | ೬೮೮೩೩೧೧ | ೧೦೦.೦೦ | ೭೧೭೦೭೦೨ | ೧೦೦.೦೦ | ೧೭೦೬೩೬೩ | ೧೦೦.೦೦ | ೨೧೪೦೪೩೨ | ೧೦೦.೦೦ |

| | ಪ್ರದೇಶ - ೩ | | | | | | ಪ್ರದೇಶ - ೪ | |
|---|---|---|---|---|---|---|---|---|
| ಬೆಳೆ | ಪ್ರದೇಶ | ಶೇ. ಪ್ರಮಾಣ | ಪ್ರದೇಶ | ಶೇ. ಪ್ರಮಾಣ | ಪ್ರದೇಶ | ಶೇ. ಪ್ರಮಾಣ | ಪ್ರದೇಶ | ಶೇ. ಪ್ರಮಾಣ |
| ಸಜ್ಜೆ | ೩೮೦೪ | ೦.೩೮ | ೨೨೩೮ | ೦.೧೭ | ೩೬೨ | ೦.೦೪ | ೧೪ | ೦.೦೦ |
| ಜೋಳ | ೯೬೮೦೭ | ೯.೬೨ | ೮೯೦೦೫ | ೬.೭೮ | ೪೭೦೦೧ | ೪.೭೯ | ೪೪೪೭೧ | ೩.೪೯ |
| ರಾಗಿ | ೨೭೮೬೪೮ | ೨೭.೭೦ | ೩೪೭೩೬೫ | ೨೬.೪೬ | ೬೮೩೨೬ | ೬.೯೭ | ೯೬೫೮೭ | ೭.೫೮ |
| ಮೆಕ್ಕೆ | ೫ | ೦.೦೦ | ೧೯೮೦೬ | ೧.೫೧ | ೦ | ೦.೦೦ | ೯೪೩೦ | ೦.೭೪ |
| ಅಕ್ಕಿ | ೧೫೬೯೧೪ | ೧೫.೬೦ | ೨೦೧೫೨೩ | ೧೫.೩೫ | ೪೯೨೯೦೭ | ೫೦.೨೭ | ೫೦೭೬೬೯ | ೩೯.೮೫ |
| ಗೋಧಿ | ೨೨ | ೦.೦೦ | ೪೭ | ೦.೦೦ | ೩೩೬ | ೦.೦೩ | ೨೪೪ | ೦.೦೨ |
| ಒಟ್ಟು ಧಾನ್ಯಗಳು | ೫೬೬೦೭೭ | ೫೬.೨೬ | ೬೬೨೧೨೯ | ೫೦.೪೪ | ೬೧೯೫೪೫ | ೬೩.೧೯ | ೬೬೦೧೦೪ | ೫೧.೮೨ |
| ದ್ವಿದಳ ಧಾನ್ಯಗಳು | ೨೧೨೨೭೦ | ೨೧.೧೦ | ೨೧೦೨೪೯ | ೧೬.೦೨ | ೭೦೯೦೨ | ೭.೨೩ | ೭೫೭೪೮ | ೫.೯೫ |
| ಎಣ್ಣೆ ಬೀಜ | ೬೪೨೦೫ | ೬.೩೮ | ೧೧೭೯೭೨ | ೮.೯೯ | ೨೪೧೩೪ | ೨.೪೬ | ೬೯೭೦೫ | ೫.೪೭ |
| ಹತ್ತಿ | ೯೭೧೧ | ೦.೯೭ | ೩೬೬೯೩ | ೨.೮೦ | ೭೧೪೧ | ೦.೭೩ | ೪೫೪೫೦ | ೩.೫೭ |
| ಕಬ್ಬು | ೧೩೬೨೩ | ೧.೩೫ | ೪೬೫೦೭ | ೩.೫೪ | ೯೧೨೯ | ೦.೯೩ | ೨೬೧೦೪ | ೨.೦೫ |
| ತೆಂಗು | ೩೧೯೨೫ | ೩.೧೭ | ೬೭೮೧೭ | ೫.೧೭ | ೨೭೩೨೮ | ೨.೭೯ | ೫೬೬೨೭ | ೪.೪೪ |
| ಅಡಿಕೆ | ೨೨೬೭ | ೦.೨೩ | ೨೮೫೨ | ೦.೨೨ | ೨೪೩೨೧ | ೨.೪೮ | ೫೦೦೫೯ | ೩.೯೩ |
| ಒಟ್ಟು | ೯೦೦೦೭೮.೬ | ೮೯.೪೬ | ೧೧೪೪೨೧೮ | ೮೭.೧೭ | ೭೮೨೫೦೧ | ೭೯.೮೧ | ೯೮೩೭೯೬ | ೭೭.೨೨ |
| ಒಟ್ಟು ಮೊತ್ತ | ೧೦೦೬೧೧೦ | ೧೦೦.೦೦ | ೧೩೧೨೫೮೪ | ೧೦೦.೦೦ | ೯೮೦೪೩೪ | ೧೦೦.೦೦ | ೧೨೭೩೯೪೬ | ೧೦೦.೦೦ |

೨ ಮತ್ತು ೩ರಲ್ಲಿ ಕ್ರಮವಾಗಿ ಜೋಳ, ರಾಗಿ ಹಾಗೂ ಪ್ರದೇಶ ೧ ಮತ್ತು ೪ರಲ್ಲಿ ಅಕ್ಕಿ ಪ್ರಮುಖ ಬೆಳೆಗಳಾಗಿವೆ. ಹಾಗಿದ್ದರೂ ಈ ಎಲ್ಲಾ ಜಿಲ್ಲೆಗಳ ಸರಾಸರಿ ಪ್ರಮಾಣ ಎಲ್ಲಾ ವರ್ಷಗಳಲ್ಲಿ ಕ್ರಮವಾಗಿ ಕಡಿಮೆಯಾಗಿದೆ. ಪ್ರದೇಶ - ೧ರಲ್ಲಿ ಜೋಳವನ್ನು ಹೊರತುಪಡಿಸಿ ಇನ್ನಾವ ಪ್ರದೇಶದಲ್ಲಿ ಇತರ ಬೆಳೆಗಳು ಪೂರ್ಣ ಪ್ರಮಾಣದಲ್ಲಿ ಕಡಿಮೆಯಾಗಿಲ್ಲ. ಮುಖ್ಯವಾದ ಬೆಳೆಗಳು ಹೆಚ್ಚುವರಿ ಕೃಷಿ ಪ್ರದೇಶಕ್ಕಿಂತ ಪ್ರಮಾಣದಲ್ಲಿ ಅಧಿಕವಾಗಿಲ್ಲ. ರಾಜ್ಯದಲ್ಲಿ ಪ್ರದೇಶ-೧ ಹತ್ತಿ ಬೆಳೆಗೆ ಕೇಂದ್ರವಾಗಿದೆ ಮತ್ತು ಇದು ಹತ್ತಿ ಜೊತೆಗೆ ಜೋಳದಲ್ಲಿ ನಷ್ಟ ಹೊಂದಿತ್ತು. ಸಜ್ಜೆ ಮತ್ತು ಗೋಧಿ ಬೆಳೆಯು ಸ್ಥಾನವನ್ನು ಕಳೆದುಕೊಂಡಿತು. ದ್ವಿದಳ ಧಾನ್ಯ, ಎಣ್ಣೆ ಬೀಜಗಳು, ಮೆಕ್ಕೆ ಮತ್ತು ಕಬ್ಬು ಬೆಳೆಯು ಈ ಪ್ರದೇಶದಲ್ಲಿವೆ. ಮೆಕ್ಕೆ ಧಾನ್ಯವು ಸುಮಾರು ಶೇಕಡಾ ಹದಿನಾರು ಹೆಚ್ಚುವರಿಯಾಗಿದೆ. ಸುಮಾರು ಮೂವತ್ತು ವರ್ಷಗಳ ಅವಧಿಯಲ್ಲಿ ಕಬ್ಬು ಬೆಳೆಯು ಸುಮಾರು ಶೇಕಡಾ ೫.೨ರಷ್ಟು ಅಧಿಕಗೊಂಡಿವೆ.

ಸಜ್ಜೆ, ಜೋಳ, ದ್ವಿದಳ ಧಾನ್ಯ ಮತ್ತು ಹತ್ತಿ ಬೆಳೆಯು ಪ್ರದೇಶ-೨ರಲ್ಲಿ

ಕಡಿಮೆಯಾಗಿವೆ. ಮೆಕ್ಕೆ, ಧಾನ್ಯವು ಈ ಪ್ರದೇಶದಲ್ಲಿ ಸುಮಾರು ಪಟ್ಟು ಮತ್ತು ಎಣ್ಣೆ ಬೀಜವು ಶೇಕಡಾ ೩.೪ರಷ್ಟು ಪಟ್ಟು ಲಾಭದಾಯಕವಾಗಿದೆ. ಈ ಪ್ರದೇಶದಲ್ಲಿ ಅಕ್ಕಿ ಮತ್ತು ಕಬ್ಬು ನೀರಾವರಿ ಬೆಳೆಯಾಗಿದ್ದರೂ, ತೆಂಗು ಮತ್ತು ಅಡಿಕೆ ತೋಟಗಾರಿಕಾ ಬೆಳೆಯಾಗಿವೆ. ಪ್ರದೇಶ - ೩ರಲ್ಲಿ ಮೆಕ್ಕೆ, ಜೋಳ, ಎಣ್ಣೆ ಬೀಜ, ಹತ್ತಿ ಬೆಳೆಯು ಅನುಕೂಲಕರವಾಗಿದೆ. ಹಾಗೂ ಮೆಕ್ಕೆ ಜೋಳವು ಈ ಪ್ರದೇಶಕ್ಕೆ ಹೊಸ ಬೆಳೆಯಾಗಿದೆ. ಸಜ್ಜೆ, ಜೋಳ ಮತ್ತು ಗೋಧಿ ಬೆಳೆಯನ್ನು ಹೊರತುಪಡಿಸಿ ಉಳಿದೆಲ್ಲಾ ಬೆಳೆಗಳು ಪ್ರದೇಶ - ೪ರಲ್ಲಿ ಇವೆ. ಹತ್ತಿ, ಎಣ್ಣೆ ಬೀಜ ಹಾಗೂ ಕಬ್ಬು ಬೆಳೆಗಳು ಕ್ರಮವಾಗಿ ೬.೪, ೨.೯ ಮತ್ತು ೨.೮೫ ಪಟ್ಟಿನಷ್ಟು ಅಧಿಕ ಹೊಂದಿದೆ. ತೆಂಗು ಮತ್ತು ಅಡಿಕೆ ಬೆಳೆಯು ಎರಡು ಪಟ್ಟವಷ್ಟು ಈ ಪ್ರದೇಶದಲ್ಲಿದೆ.

ಮೇಲಿನ ಕೋಷ್ಟಕದಲ್ಲಿ ಪ್ರದೇಶ-೧ ಮತ್ತು ೨ರಲ್ಲಿ ಹತ್ತಿ ಬೆಳೆಯು ಅದರ ಪ್ರಮಾಣವನ್ನು ಕಳೆದು ಕೊಂಡಿದ್ದರೆ, ಪ್ರದೇಶ ೩ ಮತ್ತು ೪ ಹತ್ತಿ ಬೆಳೆಯನ್ನು ಪಡೆದುಕೊಂಡಿದೆ. ಪ್ರದೇಶ ೨, ೩ ಮತ್ತು ೪ರಲ್ಲಿ ಮೆಕ್ಕೆ ಜೋಳವು ಹೊಸ ಬೆಳೆಯಾಗಿದೆ. ಪ್ರದೇಶ ೧ರಲ್ಲಿ ದ್ವಿದಳ ಧಾನ್ಯ ಬೆಳೆಯು ಹೆಚ್ಚುವರಿಯಾಗಿವೆ. ಎಣ್ಣೆ ಬೀಜಗಳು, ಕಬ್ಬು ಮತ್ತು ತೆಂಗು ಬೆಳೆಯು ಎಲ್ಲಾ ಪ್ರದೇಶಗಳಲ್ಲಿ ಅಧಿಕಗೊಂಡಿವೆ. ಪ್ರದೇಶ ೨ ಮತ್ತು ೪ ಅಡಿಕೆ ಬೆಳೆಯ ಪ್ರಮಾಣದಲ್ಲಿ ಅಭಿವೃದ್ಧಿಗೊಂಡಿದೆ, ಹೀಗೆ ರಾಜ್ಯ ಮಟ್ಟದಲ್ಲಿ ಕೃಷಿ ಮಾದರಿಯಲ್ಲಿ ಮತ್ತು ಬೆಳೆಯ ಬದಲಾವಣೆಯು ಆಯಾ ಪ್ರದೇಶಕ್ಕನುಗುಣವಾಗಿದೆ.

## ಉತ್ಪಾದನೆಯಲ್ಲಿ ಅಭಿವೃದ್ಧಿ

ಕೋಷ್ಟಕ ನಾಲ್ಕು ಮತ್ತು ಐದರಲ್ಲಿ ದೇಶ ಮತ್ತು ರಾಜ್ಯ ಮಟ್ಟದಲ್ಲಿ ಬೆಳೆಯ ಉತ್ಪಾದನೆಯ ಅಂಕಿ-ಅಂಶಗಳನ್ನು ಮಂಡಿಸಲಾಗಿದೆ. ಪ್ರಥಮ ದಶಕದಲ್ಲಿ ಜೋಳ, ಮೆಕ್ಕೆ ಜೋಳ, ಅಕ್ಕಿ, ದ್ವಿದಳ ಧಾನ್ಯ, ಎಣ್ಣೆ ಬೀಜಗಳು ಮತ್ತು ಅಡಿಕೆ ಬೆಳೆಯ ಉತ್ಪಾದನೆಯು ದೇಶ ಮಟ್ಟಕ್ಕಿಂತ ರಾಜ್ಯ ಮಟ್ಟದಲ್ಲಿ ಹೆಚ್ಚುವರಿಯಾಗಿರುವುದನ್ನು ಗಮನಿಸಬಹುದು. ಎರಡನೆಯ ದಶಕದಲ್ಲಿ ಸಜ್ಜೆ, ರಾಗಿ, ಗೋಧಿ, ದ್ವಿದಳ ಧಾನ್ಯ, ಹತ್ತಿ, ತೆಂಗು ಮತ್ತು ಅಡಿಕೆ ಬೆಳೆಯ ಉತ್ಪಾದನೆಯು ರಾಜ್ಯ ಮಟ್ಟದಲ್ಲಿ ಅಧಿಕಗೊಂಡಿವೆ. ಮೂರನೇ ದಶಕದಲ್ಲಿ ದೇಶ ಮಟ್ಟಕ್ಕೆ ಹೋಲಿಸಿದಾಗ ಹತ್ತಿ ಬೆಳೆಯ ಇಳುವರಿಯು ಹೆಚ್ಚಾಗಿದ್ದು, ಉಳಿದೆಲ್ಲಾ ಬೆಳೆಯ ಉತ್ಪಾದನೆಯು ಸ್ಥಗಿತಗೊಂಡಿವೆ. ಮೊದಲನೆ ದಶಕದಲ್ಲಿ ಇದ್ದ ಉತ್ಪಾದನೆಯ ಪ್ರಮಾಣವನ್ನು ಮುಂದಿನ ದಶಕಗಳಲ್ಲಿ ರಾಜ್ಯದಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಮೂರನೇ ದಶಕದಲ್ಲಿ ರಾಜ್ಯದಲ್ಲಿ ಉತ್ಪಾದನಾ ಪ್ರಮಾಣವು ಕಡಿಮೆ ಪ್ರಮಾಣದಲ್ಲಿತ್ತು.

ದೇಶ ಮಟ್ಟದಲ್ಲಿ ಮುಖ್ಯವಾಗಿ ಗೋಧಿ ಮತ್ತು ಅಕ್ಕಿ ಬೆಳೆಯಲ್ಲಿ ಹಸಿರು ಕ್ರಾಂತಿಯಾಗಿದೆ. ಆದರೂ ಗೋಧಿ ಬೆಳೆಯು ರಾಜ್ಯದಲ್ಲಿ ಪ್ರಮುಖವಾಗಿಲ್ಲ. ಅಕ್ಕಿ

ಬೆಳೆಯು ಸರಾಸರಿ ೧೦ ಪ್ರಮಾಣದಲ್ಲಿ ಬೆಳೆ ಪ್ರದೇಶದಲ್ಲಿ ಮುಂದುವರಿದಿತ್ತು ಹಸಿರು ಕ್ರಾಂತಿಯು ರಾಜ್ಯದ ಆಹಾರ ಉತ್ಪಾದನೆಯಲ್ಲಿ ಸಾಕಷ್ಟು ಪರಿಣಾಮ ಬೀರಲಿಲ್ಲ. ೧೯೮೮-೮೯ರ ಅವಧಿಗೆ ದೇಶ ಮಟ್ಟಕ್ಕೆ ಹೋಲಿಸಿದಾಗ ಸಜ್ಜೆ, ಜೋಳ, ರಾಗಿ, ಗೋಧಿ, ದ್ವಿದಳ ಧಾನ್ಯ, ಎಣ್ಣೆ ಬೀಜಗಳು ಮತ್ತು ತೆಂಗು ಬೆಳೆಯ ಉತ್ಪಾದನೆಯು ರಾಜ್ಯ ಮಟ್ಟದಲ್ಲಿ ಕಡಿಮೆಯಾಗಿದೆ. ಹೀಗಿದ್ದರೂ ಅಕ್ಕಿ, ಮೆಕ್ಕೆ, ಜೋಳ, ಕಬ್ಬು ಮತ್ತು ಅಡಿಕೆ ಬೆಳೆಯ ಇಳುವರಿಯು ರಾಜ್ಯದಲ್ಲಿ ಹೆಚ್ಚುವರಿಯಾಗಿವೆ. ಈ ಬೆಳೆಗಳು ಕೇವಲ ಶೇಕಡಾ ೧೪.೯ರಷ್ಟು ಪ್ರದೇಶದಲ್ಲಿ ಮಾತ್ರ ಬೆಳೆಯಲ್ಪಟ್ಟಿವೆ. ಆದುದರಿಂದ ರಾಜ್ಯವು ಕೃಷಿ ಉತ್ಪಾದನೆಯಲ್ಲಿ ಪ್ರಮುಖ ಕೊಡುಗೆಯನ್ನು ನೀಡಿಲ್ಲ.

ಕೋಷ್ಟಕ - ೪

ಬೆಳೆಯ ಇಳುವರಿ ಮತ್ತು ಬೆಳವಣಿಗೆ - ದೇಶ ಮಟ್ಟದಲ್ಲಿ

(ಮೂರು ವರ್ಷಗಳ ಸರಾಸರಿ ಆಧಾರದಲ್ಲಿ)

(೧ ಹೆಕ್ಟೇರಿಗೆ ೧ ಕೆಜಿ ಇಳುವರಿ)

| ಬೆಳೆ | ೧೯೫೯-೬೦ | ೧೯೬೯-೭೦ | ೧೯೭೯-೮೦ | ೧೯೮೮-೮೯ | ೧೯೫೯-೬೦ರಿಂದ ೬೯-೭೦ | ೧೯೬೯-೭೦ರಿಂದ ೭೯-೮೦ | ೧೯೭೯-೮೦ರಿಂದ ೮೮-೮೯ | ೧೯೫೯-೬೦ರಿಂದ ೮೮-೮೯ |
|---|---|---|---|---|---|---|---|---|
| ಸಜ್ಜೆ | ೩೧೭ | ೪೫೮ | ೪೪೨ | ೫೫೯ | ೩.೭೫ | ೦.೩೬ | ೨.೩೮ | ೧.೯೧ |
| ಜೋಳ | ೫೦೭ | ೫೦೫ | ೬೮೯ | ೭೭೫ | ೦.೦೪ | ೩.೧೬ | ೧.೧೮ | ೧.೪೨ |
| ರಾಗಿ | ೭೬೨ | ೭೯೦ | ೧೦೬೩ | ೧೦೮೧ | ೦.೩೬ | ೩.೦೧ | ೦.೧೭ | ೧.೧೭ |
| ಮೆಕ್ಕೆ | ೮೯೨ | ೧೦೮೨ | ೧೦೭೩ | ೧೩೪೯ | ೧.೯೫ | ೦.೦೯ | ೨.೩೨ | ೧.೩೯ |
| ಅಕ್ಕಿ | ೯೬೦ | ೧೦೯೧ | ೧೨೪೭ | ೧೬೪೧ | ೧.೨೮ | ೧.೩೫ | ೨.೭೮ | ೧.೮೦ |
| ಗೋಧಿ | ೮೦೪ | ೧೨೩೧ | ೧೫೪೫ | ೨೧೨೩ | ೪.೩೬ | ೨.೩೦ | ೩.೨೩ | ೩.೨೯ |
| ಒಟ್ಟು ಧಾನ್ಯಗಳು | ೭೨೫ | ೮೮೬ | ೧೦೮೭ | ೧೪೪೮ | ೨.೦೩ | ೨.೦೭ | ೨.೯೧ | ೨.೩೩ |
| ದ್ವಿದಳ ಧಾನ್ಯಗಳು | ೫೧೮ | ೫೧೫ | ೪೫೯ | ೫೫೩ | ೦.೦೫ | ೧.೧೫ | ೧.೮೯ | ೦.೨೨ |
| ಎಣ್ಣೆ ಬೀಜ | ೫೧೨ | ೫೨೭ | ೫೨೦ | ೭೩೦ | ೦.೩೦ | ೦.೨೪ | ೩.೦೬ | ೧.೧೯ |
| ಹತ್ತಿ | ೧೦೨ | ೧೧೭ | ೧೬೦ | ೨೬೩ | ೧.೪೦ | ೩.೧೭ | ೨.೯೪ | ೨.೫೦ |
| ಕಬ್ಬು | ೪೦೧೮೧ | ೪೮೮೯೪ | ೫೧೯೭೧ | ೬೨೧೫೯ | ೧.೯೮ | ೦.೬೧ | ೧.೮೧ | ೧.೪೬ |
| ತೆಂಗು | ೬೫೮೦ | ೫೭೯೯ | ೫೩೧೬ | ೫೮೬೦ | ೧.೪೩ | ೦.೭೯ | ೦.೯೮ | ೦.೩೯ |
| ಅಡಿಕೆ | | ೮೬೪ | ೧೦೩೮ | ೧೨೦೨ | | ೧.೮೬ | ೧.೪೭ | |

### ಕೋಷ್ಟಕ - ೫
### ಬೆಳೆಯ ಇಳುವರಿ ಮತ್ತು ಬೆಳವಣಿಗೆ
### (ಮೂರು ವರ್ಷಗಳ ಸರಾಸರಿ ಆಧಾರದಲ್ಲಿ)

(೧ ಹೆಕ್ಟೇರಿಗೆ ೧ ಕೆಜಿ ಇಳುವರಿ)

| ಬೆಳೆ | ೧೯೫೯-೬೦ | ೧೯೬೯-೭೦ | ೧೯೭೯-೮೦ | ೧೯೮೮-೮೯ | ೧೯೫೯-೬೦ರಿಂದ ೬೯-೭೦ | ೧೯೬೯-೭೦ರಿಂದ ೭೯-೮೦ | ೧೯೭೯-೮೦ರಿಂದ ೮೮-೮೯ | ೧೯೫೯-೬೦ರಿಂದ ೮೮-೮೯ |
|---|---|---|---|---|---|---|---|---|
| ಸಜ್ಜೆ | ೨೪೦ | ೩೨೮ | ೩೮೩ | ೪೯೪ | ೩.೧೫ | ೧.೫೮ | ೨.೫೬ | ೨.೪೩ |
| ಜೋಳ | ೩೯೧ | ೬೬೬ | ೮೩೫ | ೬೭೨ | ೫.೪೮ | ೨.೨೯ | ೨.೧೪ | ೧.೮೩ |
| ರಾಗಿ | ೮೦೧ | ೬೮೭ | ೧೧೬೩ | ೧೦೦೬ | ೧.೫೩ | ೫.೪೧ | ೧.೪೪ | ೦.೭೬ |
| ಮೆಕ್ಕೆ | ೯೩೯ | ೨೮೬೫ | ೨೫೮೩ | ೨೬೭೦ | ೧೧.೮೦ | ೧.೦೩ | ೦.೩೩ | ೩.೫೪ |
| ಅಕ್ಕಿ | ೧೩೫೩ | ೧೭೬೦ | ೧೯೯೪ | ೨೦೩೮ | ೨.೬೬ | ೧.೨೬ | ೦.೨೨ | ೧.೩೭ |
| ಗೋಧಿ | ೨೨೫ | ೪೨೮ | ೬೦೧ | ೫೬೦ | ೬.೬೫ | ೩.೪೫ | ೦.೭೦ | ೩.೦೯ |
| ಒಟ್ಟು ಧಾನ್ಯಗಳು | ೫೮೬ | ೮೩೪ | ೧೦೮೭ | ೧೦೮೮ | ೩.೫೮ | ೨.೬೮ | ೦.೦೧ | ೨.೦೮ |
| ದ್ವಿದಳ ಧಾನ್ಯಗಳು | ೨೬೨ | ೩೪೪ | ೩೯೦ | ೩೧೬ | ೨.೭೪ | ೧.೨೭ | ೨.೦೮ | ೦.೬೨ |
| ಎಣ್ಣೆ ಬೀಜ | ೪೬೬ | ೫೮೭ | ೫೬೬ | ೫೭೫ | ೨.೩೪ | ೦.೩೬ | ೦.೧೬ | ೦.೭೦ |
| ಹತ್ತಿ | ೬೨ | ೬೮ | ೯೫ | ೨೧೩ | ೦.೮೪ | ೩.೪೩ | ೮.೪೮ | ೪.೨೦ |
| ಕಬ್ಬು | ೬೮೯೬೧ | ೮೧೫೯೮ | ೭೩೧೯೬ | ೭೭೯೭೩ | ೧.೮೩ | ೧.೦೮ | ೦.೬೩ | ೦.೪೫ |
| ತೆಂಗು | ೪೬೯೧ | ೪೫೬೯ | ೫೧೭೧ | ೫೧೫೫ | ೦.೨೬ | ೧.೨೫ | ೦.೦೩ | ೦.೩೧ |
| ಅಡಿಕೆ | ೮೮೯ | ೧೩೦೮ | ೧೪೩೯ | ೧೪೬೧ | ೩.೯೩ | ೦.೯೬ | ೦.೧೫ | ೦.೬೭ |

ಕೋಷ್ಟಕ ೬ರಲ್ಲಿ ಮುಖ್ಯ ಬೆಳೆಗಳ ಇಳುವರಿಯು ಕರ್ನಾಟಕ ರಾಜ್ಯವಂತೆ ಒಣಭೂಮಿ ಕೃಷಿ ರಾಜ್ಯಗಳಾದ ತಮಿಳುನಾಡು, ಆಂಧ್ರಪ್ರದೇಶ ಮತ್ತು ಮಹರಾಷ್ಟ್ರದೊಂದಿಗೆ ಹೋಲಿಸಲಾಗಿದೆ. ತದನಂತರ ಈ ಬೆಳೆಗಳ ಇಳುವರಿಯನ್ನು ರೈತರ ಜಮೀನುಗಳಲ್ಲಿ ಏರ್ಪಡಿಸಿದ ಪ್ರಾತ್ಯಕ್ಷತೆಗಳಲ್ಲಿ ಪಡೆಯಲಾದ ಇಳುವರಿಯೊಂದಿಗೆ ಹೋಲಿಸಲಾಗಿದೆ.

## ಕೋಷ್ಟಕ ೬
## ೧೯೮೯-೯೦ನೇ ಕರ್ನಾಟಕ ಮತ್ತು ನೆರೆಹೊರೆಯ ರಾಜ್ಯಗಳಲ್ಲಿ ಪ್ರಮುಖ ಬೆಳೆಯ ಪ್ರಮಾಣ

(ಹೆಕ್ಟೇರಿಗೆ ಒಂದು ಕೆಜಿಯಂತೆ)

| ಬೆಳೆ | ಕರ್ನಾಟಕ | ತಮಿಳುನಾಡು | ಆಂಧ್ರಪ್ರದೇಶ | ಮಹಾರಾಷ್ಟ್ರ | ರೈತರ ಜಮೀನಿನಲ್ಲಿ ಪ್ರಾತ್ಯಕ್ಷತೆಯಲ್ಲಿ ಇಳುವರಿ |
|---|---|---|---|---|---|
| ಅಕ್ಕಿ | ೨೦೦೯ | ೩೦೯೨ | ೨೪೧೭ | | ೬೨೪೦ |
| ಜೋಳ | ೬೯೩ | ೧೦೭೨ | ೫೮೭ | ೧೦೩೨ | ೩೨೦೦ |
| ರಾಗಿ | ೧೧೯೯ | ೧೦೮೫ | ೧೧೧೪ | ೧೭೭೩ | ೧೮೯೦ |
| ಮೆಕ್ಕೆಜೋಳ | ೨೭೭೨ | ೧೪೮೮ | ೧೮೨೧ | ೧೧೨೯ | ೨೮೬೦ |
| ಸಜ್ಜೆ | ೫೫೦ | ೬೬೦ | ೧೧೯೦ | ೬೩೦ | ೧೮೦೦ |
| ತೊಗರಿ | ೩೮೭ | ೬೪೮ | | ೭೪೭ | ೧೪೩೦ |
| ಕಡಲೆ | ೫೦೦ | | ೩೩೪ | ೫೩೩ | ೧೦೧೦ |
| ಶೇಂಗ | ೭೯೩ | ೧೧೫೩ | ೯೦೫ | ೧೧೪೬ | ೨೪೫೦ |
| ಹತ್ತಿ | ೨೨೧ | ೩೨೫ | ೨೫೧ | ೧೪೩ | ೮೫೪ |

ಕರ್ನಾಟಕ ರಾಜ್ಯದಲ್ಲಿ ಮೆಕ್ಕೆ ಜೋಳದ ಇಳುವರಿಯ ಪ್ರಮಾಣವು ಇತರ ಮೂರು ನೆರೆಯ ರಾಜ್ಯಗಳೊಂದಿಗೆ ಹೆಚ್ಚುವರಿಯಾಗಿದೆ ಮತ್ತು ಅಕ್ಕಿ, ಸಜ್ಜೆ, ತೊಗರಿ ಮತ್ತು ಶೇಂಗಾದ ಪ್ರಮಾಣದಲ್ಲಿ ಕಡಿಮೆಯಾಗಿದೆ. ಆಂಧ್ರಪ್ರದೇಶಕ್ಕೆ ಹೋಲಿಸಿದಾಗ ಜೋಳ ಮತ್ತು ಕಡಲೆ ಬೆಳೆಯಲ್ಲಿ ಮಹಾರಾಷ್ಟ್ರಕ್ಕೆ ಹೋಲಿಸಿದಾಗ ಹತ್ತಿ ಬೆಳೆಯಲ್ಲಿ ಅಧಿಕ ಇಳುವರಿ ಪ್ರಮಾಣ ರಾಜ್ಯದಲ್ಲಿ ಗಮನಿಸಲಾಗಿದೆ. ನೆರೆಹೊರೆಯ ರಾಜ್ಯಗಳ ಬೆಳೆಯ ಉತ್ಪಾದನಾ ಪ್ರಮಾಣಕ್ಕಿಂತ ಕರ್ನಾಕದಲ್ಲಿ ಕಡಿಮೆಯಾಗಿವೆ. ಕೃಷಿ ವಿಶ್ವವಿದ್ಯಾನಿಲಯಗಳು ತಯಾರು ಮಾಡಿದ ತಾಂತ್ರಿಕತೆಯಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಸರಾಸರಿ ೪೦ ಇಳುವರಿ ಪ್ರಮಾಣವನ್ನು ದೃಢೀಕರಿಸಲಾಗಿದೆ.

ಕೋಷ್ಟಕ ೭ರಲ್ಲಿ ೧೯೮೮ರಲ್ಲಿ ಒಣ ಭೂಮಿ ಕೃಷಿಯಲ್ಲಿ ಕಬ್ಬಿನಾಲೆ ನೀರಾವರಿ ಯೋಜನೆಯಿಂದ ತಲುಪಿದ ಇಳುವರಿಯ ಮಟ್ಟವನ್ನು ತೋರಿಸಲಾಗಿದೆ.

ಕೋಷ್ಠಕ - ೭

| ವಿವರಗಳು | ಇಳುವರಿ (ಹೆಕ್ಟೇರ್-೧ಕೆಜಿಯಂತೆ) ಧಾನ್ಯ | ಒಣಹುಲ್ಲು |
|---|---|---|
| ೧. ಸ್ಥಳೀಯ ವಿಧಗಳಲ್ಲಿ ಕೃಷಿಯ ಏರು ಮತ್ತು ಇಳಿತ | 605 | 877 |
| ೨. ಸ್ಥಳೀಯ ವಿಧದಲ್ಲಿ ಬಹುದಿನ ಕೃಷಿ | 690 | 1020 |
| ೩. ಹೆಚ್ಚು ಇಳುವರಿ ವಿಧಗಳಲ್ಲಿ ಕೃಷಿಯ ಏರು ಮತ್ತು ಇಳಿತ | 793 | 951 |
| ೪. ಹೆಚ್ಚು ಇಳುವರಿಯು ವಿಧದಲ್ಲಿ ಕೃಷಿ ಬದು ಬೆಳೆ | 928 | 1123 |
| ೫. ಹೆಚ್ಚು ಇಳುವರಿಯ ವಿಧದಲ್ಲಿ ಬಹು ಬೆಳೆಯು ಹಾಗೂ ಶಿಫಾರಸ್ಸು ಮಾಡಿದ ಶೇ. ೫೦ ಗೊಬ್ಬರ | 1425 | 1890 |
| ೬. ಹೆಚ್ಚು ಇಳುವರಿಯ ವಿಧದಲ್ಲಿ ಬಹು ಬೆಳೆಯು ಹಾಗೂ ಶಿಫಾರಸ್ಸು ಮಾಡಿದ ಶೇ. ೧೦೦ ಗೊಬ್ಬರ | 2125 | 2465 |
| ೭. ಸ್ಥಳೀಯ ಬೆಳೆಯ ಎಲ್ಲಾ ಸುಧಾರಿತ ರೂಢಿಯ ಆಚರಣೆ | 1332 | 1972 |
| ೮. ಹೆಚ್ಚು ಇಳುವರಿ ವಿಧದ ಎಲ್ಲಾ ಸುಧಾರಿತ ರೂಢಿ | 2375 | 2755 |

೧೯೮೯ರ ಕಬ್ಬಿನಾಲೆ ತಡೆ ನೀರಾವರಿ ಯೋಜನೆಯ ವಾರ್ಷಿಕ ವರದಿ.

ಹೆಕ್ಟೇರಿಗೆ ೨೩೭೫ ಕೆಜಿಯಂತೆ ಮೇಲೆ ದೃಢೀಕರಿಸಿದ ಕರ್ನಾಟಕ ರಾಜ್ಯದ ಇಳುವರಿಗಿಂತ ಸರಾಸರಿ ೧೦೦ರಷ್ಟು ಹೆಚ್ಚು ವರಿಯಾಗಿದೆ. ಅರೆ ಶುಷ್ಕ ವಲಯದ ಅಂತರಾಷ್ಟ್ರೀಯ ಬೆಳೆಗಳ ಸಂಶೋಧನಾ ಸಂಸ್ಥೆ, ಹೈದರಾಬಾದ್ - ಇದು ವಿಶ್ವದಲ್ಲಿ ಒಣಭೂಮಿ ಕೃಷಿಯ ಸಂಶೋಧನಾ ಕೇಂದ್ರವಾಗಿದೆ. ೧೯೭೬ರಿಂದ ೧೯೮೪ರವರೆಗೆ ಜಲಾನಯನ ಪ್ರದೇಶಗಳಲ್ಲಿ ಮುಂದುವರಿದ ಬೆಳೆಯ ವಿಧಾನದಿಂದ ಮೆಕ್ಕೆ ಮತ್ತು ಕಡಲೆ ಬೆಳೆಯ ಸರದಿಯಲ್ಲಿ ೧ ಹೆಕ್ಟೇರಿಗೆ ೪.೪ ಟನ್‌ನಷ್ಟು ಇಳುವರಿ ಹಾಗೂ ಮತ್ತು ತೊಗರಿ ಅಂತರ ಬೆಳೆಯಲ್ಲಿಹೆಕ್ಟೇರಿಗೆ ೩.೮೩ ಟನ್‌ನಷ್ಟು ಇಳುವರಿಯಾಗಿದೆ. ಇವಕ್ಕೆ ವಿರೋಧವಾಗಿ ಸಂಪ್ರಾದಾಯಿಕ ವಿಧಾನದಲ್ಲಿ ಬೆಳೆಯಲಾದ ಕಡಲೆ ಇಳುವರಿಯಲಿ ಹೆಕ್ಟೇರಿಗೆ ೭೨೬ ಕೆಜಿಯಂತೆ ಮತ್ತು ಮುಂಗಾರು ಋತುಗಳಲ್ಲಿ ಒಂದು ಹೆಕ್ಟೇರಿಗೆ ೫೭೭೦ ಕೆಜಿಯಂತೆ ಇಳುವರಿಯಾಗಿದೆ. ಕೃಷಿ ಉತ್ಪನ್ನದಲ್ಲಿ ಕಂಡು ಬರುವ ಅಂತರಗಳು ಏನನ್ನು ಸೂಚಿಸುತ್ತವೆ ಅಂದರೆ ಕೃಷಿ ಸಂಶೋಧನಾ ಕೇಂದ್ರಗಳಲ್ಲಿ ದೊರೆತ ತಾಂತ್ರಿಕತೆಗೆ ಬೆಳೆ ಉತ್ಪಾದನೆಯನ್ನು ಬಹಳಷ್ಟು ಹೆಚ್ಚಿಸುವ ಶಕ್ತಿ ಇದೆ. ಆದರೆ, ಇರುವ ತಾಂತ್ರಿಕತೆಯ ವಿವರ, ಒಟ್ಟು ಪ್ರಾದೇಶಿಕ ಭೌಗೋಳಿಕ ಸನ್ನಿವೇಶಕ್ಕೆ ಅಳವಡಿಸಿಕೊಳ್ಳಲು ಸೂಕ್ತವಾಗಿವೆಯೇ, ಬೆಲೆ ಪರಿಣಾಮ, ಸಾಲ ವಿತರಣೆ ಹಾಗೂ ಇನ್ನಿತರ ಸೌಲಭ್ಯಗಳ ಅಡೆತಡೆಗಳನ್ನು ತೆಗೆವಾಗ ಎಂದು ತೋರಿಸುತ್ತವೆ.

**ಒಂದು ಹೆಕ್ಟೇರ್ ಉತ್ಪಾದನೆಯ ಒಟ್ಟು ಬೆಲೆ**

ಪ್ರಸ್ತುತ ಮತ್ತು ಸ್ಥಿರ ಬೆಲೆಗಳಲ್ಲಿ ಒಂದು ಹೆಕ್ಟೇರ್ ಮುಖ್ಯ ಬೆಲೆಯ ಉತ್ಪಾದನೆಯ ದರವನ್ನು ಕೋಷ್ಟಕ ೮ರಲ್ಲಿ ಮಂಡಿಸಲಾಗಿದೆ. ಹೆಕ್ಟೇರ್ ಉತ್ಪಾದನೆಯ ಒಟ್ಟು ದರದ ಆಧಾರದ ಮೇಲೆ ಮುಖ್ಯವಾಗಿ ಅಧಿಕ ಮತ್ತು ಕಡಿಮೆ ಬೆಳೆಗಳಿಂದು ವಿಂಗಡಿಸಲಾಗಿದೆ. ಒಂದು ಹೆಕ್ಟೇರಿಗೆ ಒಂದು ಬೆಳೆಯ ಒಟ್ಟು ಉತ್ಪಾದನಾ ದರ ಸರಾಸರಿ ಬೆಳೆಗಳ ಒಟ್ಟು ಉತ್ಪಾದನಾ ಮಟ್ಟಕ್ಕಿಂತ ಹೆಚ್ಚಾಗಿದ್ದರೆ ಆ ಬೆಳೆಯು ಅಧಿಕ ಬೆಲೆಯ ಬೆಳೆ ಎಂದೂ, ೧೯೫೯-೬೦ರ ಸಾಲಿಗೆ ಒಂದು ಹೆಕ್ಟೇರಿಗೆ ಉತ್ಪಾದನೆಯ ದರವು ರೂ. ೫೮೪೧, ತದನಂತರ ಕಬ್ಬು ಬೆಳೆಯ ದರ ರೂ. ೨೭೩೪ಕ್ಕೆ ನಿಂತಿದೆ. ತೆಂಗು, ಅಕ್ಕಿ, ರಾಗಿ ಮತ್ತು ಮೆಕ್ಕೆ ಜೋಳವು ಕ್ರಮವಾಗಿ ಅಧಿಕ ಬೆಲೆಯ ಬೆಳೆಗಳಾಗಿವೆ. ಎಣ್ಣೆ ಬೀಜಗಳು ಸರಾಸರಿ ಬೆಲೆ ರೂ. ೨೬೩ರ ಹತ್ತಿರ ಇದೆ. ೧೯೬೯-೭೦ರಲ್ಲಿ ರಾಗಿಯ ಬೆಳೆಯ ಗುಣಮಟ್ಟವನ್ನು ಕಳೆದುಕೊಂಡಿತು ಮತ್ತು ಮುಂದೆ ಕಡಿಮೆ ದರದ ಬೆಳೆಯ ವರ್ಗಕ್ಕೆ ಸೇರಿಸಲಾಯಿತು ಮತ್ತು ಎಣ್ಣೆ ಬೀಜವು ಸರಾಸರಿ ಬೆಲೆ ರೂ. ೩೭೬ಕ್ಕಿಂತಲೂ ಕಡಿಮೆಯಾಗಿದೆ. ಮುಂದಿನ ಎರಡು ವರ್ಷಗಳವರೆಗೆ ೧೯೬೯-೭೦ರ ಮಾದರಿಯು ಮುಂದುವರಿಯಿತು. ೧೯೬೯-೭೦ರಲ್ಲಿ ಒಂದು ಹೆಕ್ಟೇರ್ ಉತ್ಪಾದನೆಯ ಒಟ್ಟು ದರವನ್ನು ಪ್ರಚಲಿತ ದರದಲ್ಲಿ ನೋಡಿದರೆ ಮೆಕ್ಕೆ ಅಧಿಕ ಬೆಲೆಯ ಬೆಳೆ ಗುಂಪಿಗೆ ಸೇರುತ್ತದೆ. ಮುಂದಿನ ಎರಡು ವರ್ಷಗಳಲ್ಲಿ ಎಲ್ಲಾ ಬೆಳೆಗಳ ಸರಾಸರಿ ಉತ್ಪಾದನೆಯು ಒಟ್ಟು ದರಕ್ಕೆ ಹತ್ತಿರವಾಗಿದೆ. ೧೯೭೦ ಮತ್ತು ೧೯೮೦ರಲ್ಲಿ ಹತ್ತಿ ಬೆಳೆಯಲ್ಲಿ ಹೆಚ್ಚು ಇಳುವರಿಯಾಗಿದ್ದರೂ, ಒಂದು ಹೆಕ್ಟೇರಿಗೆ ಇದರ ಉತ್ಪಾದನ ದರವು ಉಳಿದ ಬೆಳೆಗಿಂತ ಸ್ವಲ್ಪ ಕಡಿಮೆಯಾಗಿದೆ ಹಾಗೂ ಈ ಎಲ್ಲಾ ಅವಧಿಯಲ್ಲಿ ಸಂಬಂಧಿತ ದರವನ್ನು ಕೂಡ ಹತ್ತಿಯು ಪಡೆದುಕೊಂಡಿಲ್ಲ. ಇತರ ವಾಣಿಜ್ಯ ಬೆಳೆಗಳಾದ ಎಣ್ಣೆ ಬೀಜ, ಕಬ್ಬು, ತೆಂಗು ಮತ್ತು ಅಡಿಕೆಯು ಸಂಬಂಧಿಸಿದ ದರದಲ್ಲಿ ಲಾಭದಾಯಕವಾಗಿದೆ.

ಅಧಿಕ ಬೆಲೆಯ ಬೆಳೆಯು ಸಂಬಂಧಿಸಿದ ಅನುಕೂಲಕರವಾದ ಬೆಲೆಯೊಂದಿಗೆ ಒಂದು ಅವಧಿ ಯೊಳಗೆ ತುಲಾನಾತ್ಮಕವಾಗಿ ಅನುಕೂಲ ಪಡೆಯಿತು. ಅಧಿಕ ಇಳುವರಿಯಲ್ಲಿ ಹೆಚ್ಚಿನ ಬೆಳೆಯ ಮಟ್ಟವನ್ನು ಕಂಡರೂ ಕೆಲವೊಂದು ಕಡಿಮೆ ಬೆಲೆಯ ಬೆಳೆಗಳು ಪ್ರದೇಶವನ್ನು ಕಳೆದುಕೊಂಡಿತು. ಮೊದಲ ಮತ್ತು ಎರಡನೇ ವರ್ಷಗಳಲ್ಲಿ ಕ್ರಮವಾಗಿ ಜೋಳ ಬೆಳೆಯ ಇಳುವರಿಯ ಮಟ್ಟವು ೨.೨೭ ಶೇಕಡಾಕ್ಕೆ ತಲುಪಿತು. ಆದರೆ ಎರಡು ವರ್ಷಗಳಲ್ಲಿ ಅದೇ ಪ್ರದೇಶದಲ್ಲಿ -೨.೦೧ ಮತ್ತು -೧.೭೬ ಶೇಕಡಾದಷ್ಟಿದ್ದು ಇದು ನಕಾರಾತ್ಮಕ ಬೆಳೆವಣಿಗೆಯನ್ನು ತೋರಿಸುತ್ತದೆ. ಮೂರನೇ ದಶಕದಲ್ಲಿ ಸಜ್ಜೆ ಮತ್ತು ಹತ್ತಿ ಬೆಳೆಯ ಇಳುವರಿಯು ಕ್ರಮವಾಗಿ ಶೇಕಡಾ ೨.೫೬ ಮತ್ತು ೫.೪೮ರಷ್ಟಿತ್ತು ಆಗ ಎರಡು ಬೆಳೆಯ ಪ್ರದೇಶದ ಬೆಳವಣಿಗೆಯ ದರ -೩.೧೯ ಮತ್ತು ೪.೮೦ ಮೊದಲ ದಶಕದಲ್ಲಿ

ಬೆಲೆಯ ಬೆಳವಣಿಗೆಯ ದರ ಮತ್ತು ಬೆಳೆಯ ಇಳುವರಿ ಸಂಖ್ಯೆಯು ೦.೬೫೨೫ಯಾಗಿದ್ದು ಪರಸ್ಪರ ಸಂಬಂಧಿತವಾಗಿದ್ದು ಮತ್ತು ಇಳುವರಿಯ ಬೆಳವಣಿಗೆಯ ನಡುವೆ ಅನುಕೂಲ ಸಂಬಂಧವನ್ನು ತೋರ್ಪಡಿಸುತ್ತದೆ. ಎರಡನೇಯ ಮತ್ತು ಮೂರನೇ ದಶಕದಲ್ಲಿ ಬೆಳೆಯ ಬೆಲೆಯ ದರ ಮತ್ತು ಇಳುವರಿಯ ದರದ ಪರಸ್ಪರ ನಡುವಿನ ಸಂಬಂಧಿತ ಸಂಖ್ಯೆ -೦.೫೩೧೭ ಮತ್ತು -೦.೪೧೦೦೩ ಆಗಿದ್ದು, ಇಳುವರಿ ಮತ್ತು ಪ್ರದೇಶದ ನಡುವೆ ವಿರೋಧಾಭಾಸವನ್ನು ಸೂಚಿಸುತ್ತದೆ. ಮೇಲಿನ ಹೇಳಿಕೆಯು ಬೆಳೆ ಪ್ರದೇಶದ ಬದಲಾವಣೆಯು ಕಡಿಮೆ ಉತ್ಪಾದನಾ ಬೆಳೆಗೆ ಪೂರಕವಾಗಿದ್ದು, ಇದು ಅಧಿಕ ಬೆಲೆಯ ಬೆಳೆಯಾಗಿದೆ, ಕಡಿಮೆ ಮೌಲ್ಯದ ಬೆಳೆಯಲ್ಲಿ ಅಧಿಕ ಉತ್ಪಾದನೆ ಪಡೆದಿದೆ. ಇದು ಬೆಳೆಗಳ ಮಾದರಿಯಲ್ಲಿ ಪರಸ್ಪರ ವೈರುದ್ಧ್ಯತೆಯನ್ನು ತೋರಿಸುತ್ತವೆ. ಮಾರುಕಟ್ಟೆ ಬೆಲೆ ಮತ್ತು ರೈತರು ಬೆಳೆಯನ್ನು ಉತ್ಪಾದನೆಗಿಂತ ಬದಲಾಗಿ ನಿರೀಕ್ಷಿತ ಫಲದೊಂದಿಗೆ ಬದಲಾವಣೆ ಇರುವುದರಿಂದ ಬೆಳೆಯ ಮಾದರಿಯಲ್ಲಿ ವೈರುದ್ಧ್ಯತೆ ಮತ್ತು ಉತ್ಪಾದನೆಯ ಮಟ್ಟ ಹೆಚ್ಚಾಗಲು ಕಾರಣವಾಯಿತು.

ಕೋಷ್ಟಕ - ೮

ಬೆಳೆಯ ಉತ್ಪಾದನೆಯ ಒಟ್ಟು ಮೌಲ್ಯ - ಕರ್ನಾಟಕ ರಾಜ್ಯದಲ್ಲಿ

(ಮೌಲ್ಯ ರೂ.ಗಳಲ್ಲಿ)

| | ಪ್ರಸ್ತುತ ದರದಲ್ಲಿ | | | | ೧೯೫೯-೬೦ ದರದಲ್ಲಿ | | | |
|---|---|---|---|---|---|---|---|---|
| ಬೆಳೆ | ೫೯-೬೦ | ೬೯-೭೦ | ೭೯-೮೦ | ೮೯-೯೦ | ೫೯-೬೦ | ೬೯-೭೦ | ೭೯-೮೦ | ೮೯-೯೦ |
| ಸಜ್ಜೆ | ೮೨ | ೧೯೮ | ೩೫೦ | ೯೨೨ | ೮೨ | ೧೪೧ | ೧೩೦ | ೧೬೮ |
| ಜೋಳ | ೧೩೯ | ೧೮೨ | ೯೭೪ | ೧೫೦೫ | ೧೩೯ | ೨೩೭ | ೨೩೯ | ೨೩೯ |
| ರಾಗಿ | ೩೦೮ | ೪೩೫ | ೧೨೫೮ | ೨೦೪೬ | ೩೦೮ | ೨೬೪ | ೪೪೭ | ೩೮೭ |
| ಮೆಕ್ಕೆ | ೨೯೩ | ೧೫೭೯ | ೨೫೫೭ | ೫೦೯೫ | ೨೯೩ | ೮೯೪ | ೮೦೨೬ | ೬೩೩ |
| ಅಕ್ಕಿ | ೭೦೭ | ೧೭೨೬ | ೩೧೫೩ | ೭೧೫೦ | ೭೦೭ | ೬೨೦ | ೧೦೪೨ | ೧೦೬೫ |
| ಗೋಧಿ | ೧೩೪ | ೪೭೩ | ೧೨೦೨ | ೨೦೭೫ | ೧೩೪ | ೨೭೬ | ೩೫೯೮ | ೩೩೩ |
| ಒಟ್ಟು ಧಾನ್ಯಗಳು | ೨೫೧ | ೬೮೫ | ೧೪೦೧ | ೨೯೦೯ | ೨೫೧ | ೩೬೦ | ೧೬೨೨ | ೪೬೪ |
| ದ್ವಿದಳ ಧಾನ್ಯಗಳು | ೧೧೯ | ೩೨೪ | ೧೧೦೨ | ೨೨೩೨ | ೧೧೯ | ೧೫೬ | ೧೭೭೨ | ೧೪೪ |
| ಎಣ್ಣೆ ಬೀಜ | ೨೬೧ | ೧೪೮ | ೧೪೭೦ | ೩೯೧೯ | ೨೬೧ | ೩೨೯೯ | ೩೦೭೭ | ೩೨೨ |
| ಹತ್ತಿ | ೯೪ | ೨೪೦ | ೫೯೮ | ೨೪೩೩ | ೯೪ | ೧೧೦೨ | ೧೪೮೩ | ೩೨೨ |
| ಕಬ್ಬು | ೨೭೩೮ | ೮೪೧೮ | ೧೨೧೩೨ | | ೨೭೩೮ | ೩೨೮೩ | ೨೩೫೫ | ೩೧೩೭ |
| ತೆಂಗು | ೧೨೩೩ | ೨೬೨೫ | ೬೩೭೦ | ೧೩೬೫ | ೧೨೩೩ | ೧೨೦೧ | ೧೩೬೦ | ೧೩೫೫ |
| ಅಡಿಕೆ | ೫೮೪೧ | ೮೫೮೯ | ೧೭೧೪೪ | ೫೧೨೮೪ | ೫೮೪೧ | ೮೫೮೯ | ೯೪೫೩ | ೯೫೯೮ |
| ಎಲ್ಲಾ ಬೆಳೆಗಳು | ೨೬೩ | ೭೩೫ | ೧೬೦೮ | ೪೧೩೭ | ೨೬೩ | ೩೭೮ | ೪೬೫ | ೫೧೧ |

೧೯೮೦ರಲ್ಲಿ ಹಲವಾರು ಬೆಳೆಗಳ ಉತ್ಪಾದನೆಯಲ್ಲಿ ಇಳಿತವಾದರೂ ೧೯೮೦-೮೧ರಲ್ಲಿ ಬೆಳೆಯ ಒಟ್ಟು ಉತ್ಪಾದನೆ ಮೌಲ್ಯ ಆ ವರ್ಷಗಳಲ್ಲಿ ವರ್ಷಕ್ಕೆ ಶೇಕಡಾ ೨.೬ನ್ನು ತೋರಿಸುತ್ತದೆ. ಬೆಳೆಯ ಉತ್ಪಾದನಾ ದರದಲ್ಲಿ ಆದ ಬೆಳವಣಿಗೆಯು ಮುಖ್ಯವಾಗಿ ಅಧಿಕ ಬೆಳೆಯ ಅವಧಿಯಲ್ಲಿ ಅನುಕೂಲಕರವಾದ ಬದಲಾವಣೆಯತ್ತ ತಂದಿತ್ತು. ಕಾಳುಗಳು, ದ್ವಿದಳ ಧಾನ್ಯಗಳು ಮತ್ತು ಎಣ್ಣೆ ಬೀಜಗಳ ಉತ್ಪನ್ನಗಳಲ್ಲಿ ನಿಶ್ಚಲತೆಯ ಬಗೆ ಕರ್ನಾಟಕ ಸರ್ಕಾರವು ಗಮನವಹಿಸಿತ್ತು ಹಾಗೂ ಸರ್ಕಾರವು ಕೃಷಿಯ ಉತ್ಪಾದನೆ ಇಳಿತಕ್ಕೆ ಕಾರಣ ಇತರ ಅಡೆತಡೆಗಳು, ಉತ್ಪಾದನೆಯ ಬೆಳವಣಿಗೆಗೆ ಅಡ್ಡಿ ಆತಂಕಗಳನ್ನು ಗುರುತಿಸಲು ಒಂದು ನುರಿತ ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯು ಕೃಷಿ ಉತ್ಪಾದನೆಯ ಹಲವಾರು ಮುಖ್ಯವಾದ ವಿಷಯಗಳನ್ನು ಒಳಗೊಂಡಂತೆ ವರದಿಯನ್ನು ೧೯೯೩ರಲ್ಲಿ ಮಂಡಿಸಲಾಯಿತು. ತಾಂತ್ರಿಕ ಅಡೆತಡೆಗಳಿಂದಾಗಿ ವ್ಯಕ್ತಿಗತ ಬೆಳೆಯ ಉತ್ಪಾದನೆಯ ಇಳುವರಿಯಲ್ಲಿ ಕುಂಠಿತವಾಗಿದೆ ಈ ಸಮಿತಿಯು ಗುರುತಿಸಿತು ಹಾಗೂ ರಾಜ್ಯದಲ್ಲಿ ಕೃಷಿ ವಿಜ್ಞಾನದಲ್ಲಿ ಅಧ್ಯಯನ ನಡೆಸುವಾಗ ಬೆಳೆ ಪ್ರಾದೇಶಿಕವಾಗಿ ಕಂಡು ಬರುವ ವಿಶೇಷ ಸಮಸ್ಯೆಗಳನ್ನು ಗಮನಿಸುವುದು ಸೂಕ್ತ ಎಂದು ಸಮಿತಿಯು ಶಿಫಾರಸ್ಸು ಮಾಡಿತು. ಈ ಸಮಿತಿಯು ಕೃಷಿ ವ್ಯಾಪ್ತಿಯ ಬಗ್ಗೆಹೆಚ್ಚು ಗಮನವನ್ನು ಕೇಂದ್ರಿಕರಿಸಲಾಯಿತು ಮತ್ತು ವಿಸ್ತರಣೆ ವ್ಯವಸ್ಥೆಯಡಿ ಹೊರ ನೋಟದ ದೃಷ್ಟಿಯಲ್ಲಿ ಬದಲಾವಣೆ ಮತ್ತು ಬೆಳೆಗಳ ಹೆಚ್ಚು ಉತ್ಪನ್ನದತ್ತ ಒತ್ತು ಕೊಡುವ ಕಾರ್ಯಕ್ರಮಕ್ಕೆ ಸಲಹೆ ನೀಡಿತು.

### ಕೃಷಿ ಸಾಲ

೧೯೮೬-೮೭ರ ರಾಜ್ಯದ ಕೃಷಿ ಸಾಮಾಗ್ರಿಗಳ ನಿರೀಕ್ಷಣೆಯ ಪ್ರಕಾರ ಶೇಕಡಾ ೨೦.೩ರಷ್ಟು ರೈತರಿಗೆ ಮಾತ್ರ ಸಾಲ ವ್ಯವಸ್ಥೆ ಒದಗಿಸಲಾಯಿತು ಹಾಗೂ ೧೯೮೬-೮೭ರಲ್ಲಿ ಸಹಕಾರ ಸಂಸ್ಥೆಗಳಿಂದ ಶೇಕಡಾ ೧೩ರಷ್ಟು ಅತೀ ಸಣ್ಣ ರೈತರಿಗೆ ಮತ್ತು ೨೧ ಶೇಕಡಾ ಸಾಲ ಸೌಲಭ್ಯವನ್ನು ಒದಗಿಸಲಾಯಿತು. ಒಂದು ವರ್ಷಕ್ಕೆ ಸುಮಾರು ರೂ. ೧೮೦೦ ಕೋಟಿ ಬೆಳೆಯ ಉತ್ಪಾದನೆಗೆ ಸಾಲ ಅಗತ್ಯತೆ ಇದ್ದರೂ (೭೫ ಶೇಕಡಾ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಮತ್ತು ಶೇಕಡಾ ೪೦ರಷ್ಟು ಇತರ ರೈತರಿಗೆ ರೂ. ೩೦೦೦ರಷ್ಟು ಒಂದು ಹೆಕ್ಟೇರ್ ಉತ್ಪಾದನೆಗೆ ಅಗತ್ಯವಿದೆ). ೧೯೯೧-೯೨ರಲ್ಲಿ ರೂ. ೩೦೦ ಕೋಟಿಯಷ್ಟು ಸಾಲ ಸೌಲಭ್ಯವನ್ನು ಒದಗಿಸಲಾಯಿತು. ಸಾಮಗ್ರಿಗಳ ಪಡಿಸಿವಿಕೆ ಹಾಗೂ ಉತ್ಪನ್ನಗಳ ಹೆಚ್ಚಳಕ್ಕೆ ವಾರ್ಷಿಕ, ಮಧ್ಯಮ ಮತ್ತು ದೀರ್ಘಾವದಿ ಸಾಲಗಳ ಅಗತ್ಯತೆಯು ೮೦೦ ಕೋಟಿ ಆಗಿದ್ದರೆ ೧೯೯೧-೯೨ರಲ್ಲಿ ನಿಜವಾದ ಸಾಲ ೨೫೫ ಕೋಟಿ ರೂಪಾಯಿಗಳಾಗಿತ್ತು ಹೀಗೆ ರಾಜ್ಯದಲ್ಲಿ ಕೃಷಿ ಸಾಲದ ಅಗತ್ಯತೆ ಮತ್ತು ನಿಜವಾಗಿ ಒದಗಿಸಿದ ಸಾಲದ ನಡುವೆ ತುಂಬಾ ಅಂತರ ಕಂಡುಬರುತ್ತದೆ.

**ಕರ್ನಾಟಕ ಸರ್ಕಾರದ ವತಿಯಿಂದ ಕೃಷಿ ಕ್ಷೇತ್ರದಲ್ಲಿ ಸರಿಪಡಿಸುವ ದಿಟ್ಟ ಹೆಜ್ಜೆಗಳು**

೧೯೯೫ರಲ್ಲಿ ರಾಜ್ಯದಲ್ಲಿ ಪ್ರಪ್ರಥಮ ಬಾರಿಗೆ ರಾಜ್ಯ ಯೋಜನಾ ಮಂಡಳಿಯು ಕೃಷಿ ನೀತಿಯ ಒಂದು ಕರಡು ಠರಾವನ್ನು ತಂದಿತು. ಕೃಷಿ ಉತ್ಪಾದನೆಯ ಇಳಿತ ಮತ್ತು ಕೃಷಿ ಅಭಿವೃದ್ಧಿ ಹಾಗೂ ಕ್ಷೇತ್ರ ಬೆಳೆ, ತೋಟಗಾರಿಕೆ, ರೇಷ್ಮೆ ಬೆಳೆ, ಮೀನುಗಾರಿಕೆ ಹಾಗೂ ಪಶುಸಂಗೋಪನೆಯ ಕುರಿತಂತೆ ಒಂದು ಸಮಗ್ರ ಪದ್ಧತಿಯ ಹೊರರೇಖೆಯನ್ನು ಗುರುತಿಸಲಾಯಿತು. ಕೃಷಿ ಬೆಳವಣಿಗೆ ಮತ್ತು ಇದಕ್ಕೆ ಪೂರಕ ವಾತಾವರಣವನ್ನು ಸೃಷ್ಟಿಸುವ ಬಗ್ಗೆ ಖಾಸಗಿ ಸಂಸ್ಥೆಗಳ ಇತರ ಚಟುವಟಿಕೆಗಳ ಕುರಿತಂತೆ ಕರಡು ವರದಿ ಬಗ್ಗೆ ಚಿಂತಿಸಲಾಯಿತು. ಖಾಸಗಿಯವರಿಗೆ ಕೃಷಿ ಭೂಮಿಯನ್ನು ಕೊಳ್ಳಲು ಮತ್ತು ೫೬ ಎಕರೆಯವರೆಗೂ ಕೃಷಿ ಮಾಡಲು ಅನುಮತಿ ಕೊಡಲಾಯಿತು. ಜೊತೆಗೆ ಲಭ್ಯವಿರುವ ನೀರಿನ ದರದ ರಿಯಾಯಿತಿ ಮತ್ತು ಕೃಷಿ ಪಂಪು ಸೆಟ್ಟುಗಳಿಗೆ ೧೦ ಎಚ್.ಪಿ. ರಷ್ಟು ಉಚಿತ ವಿದ್ಯುತ್ ಶಕ್ತಿ ಕೊಡುಗೆ ಮತ್ತು ಕೃಷಿಕರಿಗೆ ನೀರು ಮತ್ತು ವಿದ್ಯುತ್ ಶಕ್ತಿಗೆ ಸಂಬಂಧಿಸಿದಂತೆ ಸಮರ್ಪಕವಾದ ದರವನ್ನು ಸಲಹೆ ನೀಡಲಾಯಿತು. ಕೃಷಿಯಲ್ಲಿ ತೊಡಗಿಸಿಕೊಂಡ ಹಣದ ಇಳಿತವ ಬಗ್ಗೆ ಈ ಕರಡು ನೀತಿಯು ಅರಿವನ್ನು ಮೂಡಿಸಿತು. ಬರುವ ಐದು ವರ್ಷಗಳಲ್ಲಿ ಒಂದು ವರ್ಷಕ್ಕೆ ರೂಪಾಯಿ ೧೦೦೦ ವ್ಯಯ ಮಾಡಲು ಸಲಹೆ ನೀಡಿತು ಮತ್ತು ಆ ಹಣವನ್ನು ಸರ್ಕಾರ ಮತ್ತು ಖಾಸಗಿಯವರು ಸಮಾನವಾಗಿ ಹಣವನ್ನು ಹಂಚಿಕೊಂಡು ವಾರ್ಷಿಕವಾಗಿ ಶೇಕಡಾ ೪.೫ರಷ್ಟು ಕೃಷಿಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಸಾಧಿಸಲು ತೀರ್ಮಾನಿಸಲಾಯಿತು.

**ನೀತಿಯ ವಿಧಿ:**

ತಾಂತ್ರಿಕತೆಯ ಮಟ್ಟದಲ್ಲಿ ನೋಡುವಾಗ ಅಲ್ಪ ಕಾಲಾವಧಿಯಲ್ಲಿ ಕೃಷಿ ಅಭಿವೃದ್ಧಿಯಲ್ಲಿ ಶೇಕಡಾ ೪.೫ರಷ್ಟು ವಾರ್ಷಿಕ ಬೆಳವಣಿಗೆಗೆ ತಲುಪುವುದು ಮಹತ್ವಾಂಕ್ಷೆಗೆ ಮೀರಿದಾಗಿದೆ ಎಂದು ಮನದಟ್ಟು ಮಾಡಲಾಯಿತು. ಹೀಗಿದ್ದರೂ ರಾಜ್ಯದ ಭೌಗೋಳಿಕ ಸನ್ನಿವೇಶಕ್ಕೆ ಅನುಗುಣವಾಗಿ ಹೆಚ್ಚು ಇಳುವರಿ ಕೊಡುವ ಬೀಜಗಳನ್ನು ಕೃಷಿ ವಿಶ್ವವಿದ್ಯಾನಿಲಯಗಳು ಮತ್ತು ಖಾಸಗಿ ಉದ್ಯಮಗಳ ಮೂಲಕ ಪ್ರಯತ್ನ ಮಾಡುವುದು ಮತ್ತು ತಾಂತ್ರಿಕತೆಯ ಅಡೆ-ತಡೆಗಳು ಕಂಡು ಬಂದಲ್ಲಿ ತಾಂತ್ರಿಕತೆಯ ರವಾನೆಗೆ ವ್ಯವಸ್ಥೆ ಮಾಡಿಸಬೇಕು. ಕೃಷಿ ಅಧ್ಯಯನ ಕೇಂದ್ರದಿಂದ ರೈತರ ಜಮೀನಿಗೆ ತಾಂತ್ರಿಕತೆಯ ರವಾನೆಯನ್ನು ಸ್ಫೂರ್ತಿ ಮತ್ತು ಅನುಭವವುಳ್ಳ ನುರಿತ ಕೃಷಿ ವಿಸ್ತರಣಾಧಿಕಾರಿಯ ಮೂಲಕ ತಿಳಿಸಬೇಕು. ಸೇವೆಯಲ್ಲಿರುವ ಕೃಷಿ ಸರ್ಕಾರಿ ಕೆಲಸಗಾರರ ಗುಂಪಿಗೆ ಪುನರ್ ತರಬೇತಿ ನೀಡುವುದೊಂದಿಗೆ ಜ್ಞಾನವನ್ನು ಹೆಚ್ಚುವುದರ ಮೂಲಕ ಪ್ರಸ್ತುತ ವಿಸ್ತರಣಾ ಕೆಲಸಗಾರರು ಹೆಚ್ಚು ಪರಿಣಾಮಕಾರಿಯಾಗಿ ತಮ್ಮ ಸೇವೆಯನ್ನು ಸಲ್ಲಿಸುವಂತೆ ಬಲಪಡಿಸಬಹುದು ಹಾಗೂ ಮಾಹಿತಿಯನ್ನು ರೈತರಿಗೆ ತಿಳಿಸಲು ಕೃಷಿ ವಿಸ್ತರಣಾಧಿಕಾರಿಯು ಸಮರ್ಥನಾಗುತ್ತಾನೆ. ಈ ಬಗ್ಗೆ

ರಾಜ್ಯವು ನಿಗಾ ವಹಿಸಿದರೆ ಖಂಡಿತವಾಗಿಯೂ ಬೆಳವಣಿಗೆಯ ಮಟ್ಟವನ್ನು ಸಾಧಿಸಬಹುದು.

ವಸ್ತುಗಳ ಸಂಬಂಧಿತ ಬೆಲೆಯನ್ನು ಅನುಕೂಲಕತೆಗಳ ನಿಜವಾಗಿ ಬಹುಕಾಲ ದೃಢೀಕರಿಸಲಿಲ್ಲ. ಬೆಳೆಯ ಉತ್ಪಾದನೆಯಲ್ಲಿ ಮಂದಗತಿಯಿಂದಾಗಿ ಬಹುಕಾಲ ವಸ್ತುಗಳ ಸಂಬಂಧಿತ ಮೌಲ್ಯಗಳಲ್ಲಿ ವ್ಯತ್ಯಾಸ ಕಂಡು ಬಂದಿದೆ, ಈ ಅಸ್ಥಿರ ಬೆಳೆಯ ಮಾದರಿಯು ಎಲ್ಲಾ ವರ್ಗದ ರೈತರಿಗೆ ಲಾಭದಾಯಕವಾಗಲಿಲ್ಲ. ಅಲ್ಪ ಕಾಲಾವಧಿಯ ಯಾವುದಾದರು ಒಂದು ನೀತಿಯ ಆಯ್ಕೆ ಮಾಡಿ ಬಲಪಡಿಸಲು ಪೂರಕ ವ್ಯವಸ್ಥೆಯನ್ನು ಒದಗಿಸಿ ಅದರಿಂದ ಉಂಟಾಗುವ ಬದಲಾವಣೆಯನ್ನು ಕ್ರೋಢೀಕರಣ ಮಾಡಬೇಕು. ದೀರ್ಘಾವದಿ ನೀತಿಯಲ್ಲಿ ಯಾವ ಬೆಳೆಗೆ ತುಲನಾತ್ಮಕ ಅನುಕೂಲ ಮತ್ತು ಸಂಪ್ರದಾಯಿಕವಲ್ಲದ ಇತರ ಹೆಚ್ಚುವರಿ ಉತ್ಪಾದನೆ ಮಟ್ಟವನ್ನು ಹೆಚ್ಚಿಸಲು ವಿಸ್ತರಣಾ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ಸಜ್ಜುಗೊಳಿಸುವುದರ ಜೊತೆಗೆ ಅಧ್ಯಯನವನ್ನು ಗುರುತಿಸಬೇಕು. ಬೆಳೆಯ ಮಾದರಿಯಲ್ಲಿ ಆದ ಬದಲಾವಣೆಯು ವಾಣಿಜ್ಯ ಬೆಳೆಗೆ ಅನುಕೂಲಕರವಾಗಿದೆ. ಇದು ಕಾಳು ಬೆಳೆಯ ಉತ್ಪಾದನೆಯಲ್ಲಿ ರಾಜ್ಯದಲ್ಲಿ ತುಲಾನಾತ್ಮಕ ಅನುಕೂಲತೆ ಹೊಂದಿಲ್ಲ ಅನ್ನುವುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಹೊಸ ಆರ್ಥಿಕ ನೀತಿಯಲ್ಲಿ (ಉದಾರೀಕರಣ ನೀತಿ) ವ್ಯಾಪಾರದ ಕಟ್ಟು ಪಾಡುಗಳು ಒಳಗೊಂಡಿರುವಾಗ, ರಾಜ್ಯದ ದಾನ್ಯಗಳ ಬೆಳೆಯಲ್ಲಿ ಸ್ವಾವಲಂಬನೆಯತ್ತ ಮತ್ತು ಕಡಿಮೆ ಮಟ್ಟದ ಉತ್ತಾದನೆಯನ್ನು ಮುಂದುವರಿಸುವ ವಿಶೇಷ ಪ್ರಯತ್ನ ಮಾಡಬೇಕಾಗಿಲ್ಲ ಬದಲಾಗಿ ಸಂಶೋಧನೆ ಮತ್ತು ಕೃಷಿ ವಿಸ್ತರಣ ಮೂಲಕ ಯಾವ ಬೆಳೆಯಲ್ಲಿ ಉತ್ಪಾದನೆಯನ್ನು ಹೆಚ್ಚಿಸುವ ಕುರಿತಂತೆ ಪ್ರಯತ್ನಿಸಬೇಕು.

ಲಭ್ಯ ಇರುವ ಎಲ್ಲಾ ಜಲ ಸಂಪನ್ಮೂಲಗಳನ್ನು ಬಳಸಿಕೊಂಡರೂ ರಾಜ್ಯದ ಶೇಕಡಾ ೫೦ರಷ್ಟು ಕೃಷಿ ಪ್ರದೇಶವು ಕಡಿಮೆ ಮಳೆ ಆಧರಿತ ಪ್ರದೇಶವಾಗಿದೆ. ರಾಜ್ಯದ ಉತ್ಪಾದನಾ ಬೆಳವಣಿಗೆಯ ಮಟ್ಟವು ಹೆಚ್ಚಾಗಿ ಮಳೆಯಾಧಾರಿತ ಬೆಳೆಯ ಉತ್ಪನ್ನವನ್ನು ಆಧರಿಸಿಕೊಂಡಿದೆ. ಇದು ಹರಿದು ಹೋಗುತ್ತಿರುವ ನೀರನ್ನು ತಡೆ ನೀರಾವರಿ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಮಣ್ಣಿನ ತೇವಾಂಶವನ್ನು ಉಳಿಸಿಕೊಳ್ಳುವ ಅಗತ್ಯತೆಯನ್ನು ತಿಳಿಸುತ್ತವೆ.

ವ್ಯವಸ್ಥೆಯನ್ನು ಬಲಪಡಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರವು ಸಹಕಾರ ಸಂಸ್ಥೆಗಳಿಗೆ ರೂ. ೫೦೦ ಕೋಟಿಯನ್ನು ಬಿಡುಗಡೆ ಮಾಡಲಾಗಿದೆ. ರಿಯಾಯಿತಿ ವ್ಯವಸ್ಥೆಯು ಭ್ರಷ್ಟಚಾರ, ವಂಚನೆಗೆ ಆಸ್ಪದ ಕೊಡುವುದರ ಜೊತೆಗೆ ಗ್ರಾಮೀಣ ವ್ಯವಸ್ಥೆಯನ್ನು ನಾಶ ಪಡಿಸಿತು. ಸುಮಾರು ಎರಡು ವರ್ಷಗಳಿಂದ ವಿದ್ಯುತ್ ಶಕ್ತಿಯ ಗೊಬ್ಬರ ವಸ್ತು ಇನ್ನಿತರ ಪೂರಕ ರಿಯಾಯಿತಿ ಚಾಲ್ತಿಯಲ್ಲಿದೆ. ಉಳಿತಾಯದ

ಹಣವನ್ನು, ವ್ಯವಸ್ಥೆಯನ್ನು ದಕ್ಷವಾಗಿ ನೋಡಿಕೊಳ್ಳಲು ಒದಗಿಸಬೇಕು ಮತ್ತು ಕೃಷಿ ಸಾಮಗ್ರಿಗಳಿಗೆ ಮತ್ತು ಉತ್ತಮ ಕೃಷಿ ವಿಸ್ತರಣಾ ವ್ಯವಸ್ಥೆಗೆ ಪೂರಕವಾಗಿ ಹಣದ ಪ್ರಮಾಣವನ್ನು ಒದಗಿಸಬೇಕು.

ಉತ್ಪಾದನಾ ಮಟ್ಟವನ್ನು ಹೆಚ್ಚಿಸುವ ಪ್ರಸ್ತುತ ಇರುವ ಮಾರುಕಟ್ಟೆಯನ್ನು ವಿಸ್ತರಣೆ ಮಾಡುವುದರ ಜೊತೆಗೆ ಕೃಷಿ ಮತ್ತು ಉತ್ಪನ್ನಗಳಿಗೆ ಮಾರುಕಟ್ಟೆಯನ್ನು ತೆಗೆಯುವ ಅಗತ್ಯತೆ ಇದೆ.

ಅನುವಾದ : ಸಿ.ಕೆ. ಶ್ಯಾಮಲ

# ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ

ವಿ.ಎಂ. ರಾವ್

೧. ಗ್ರಾಮೀಣಾಭಿವೃದ್ಧಿಯನ್ನು ಹಲವೊಮ್ಮೆ, ಸರ್ಕಾರ ಅಥವಾ ಇನ್ನಿತರ ಸಂಸ್ಥೆಗಳ ವತಿಯಿಂದ ಜಾರಿಗೊಳಿಸಿದ ಅಸಂಖ್ಯ ಅಭಿವೃದ್ಧಿ ಕಾರ್ಯಗಳ ಫಲಿತಾಂಶಗಳಿಗೆ ಹೋಲಿಸಲಾಗುತ್ತದೆ. ಬಹುಶಃ ಅಭಿವೃದ್ಧಿ ಕಾರ್ಯಕ್ರಮಗಳ ವಿವಿಧತೆಯ ಮತ್ತು ಅದರ ವ್ಯಾಪಕತೆಯ ಮಾಪನದಿಂದ, ಕರ್ನಾಟಕದ ಸಾಧನೆಯು ಇನ್ನಿತರ ಹಲವಾರು ರಾಜ್ಯಗಳಿಗಿಂತ ಬಹಳಷ್ಟು ಉತ್ತಮವಿದೆ ಎಂದು ತೀರ್ಮಾನಿಸಬಹುದು. ಯಾವನೇ ಓರ್ವ, ಕರ್ನಾಟಕದ ಹಳ್ಳಿಗಳಲ್ಲಿ ಪ್ರಯಾಣ ಮಾಡಿದಾಗ ಕಣ್ಣಿಗೆ ರಾಚುವುದು ಹೆಚ್ಚಿನ ಪ್ರದೇಶಗಳಲ್ಲಿ ಸರ್ವ ವ್ಯಾಪಿ ಜನತಾ ಮನೆಗಳ ಅಸ್ತಿತ್ವ, ಹೊಸ ಕುಡಿಯುವ ನೀರಿನ ಬಾವಿಗಳು, ಸಾಮಾಜಿಕ ಅರಣ್ಯೀಕರಣ ಮತ್ತು ಉದ್ಯೋಗ ಕಾರ್ಯಕ್ರಮಗಳು. ರೇಷ್ಮೆ ಮತ್ತು ತೋಟಗಾರಿಕೆಯಂತಹ ಚಟುವಟಿಕೆಗಳು ರಾಜ್ಯದಲ್ಲಿ ಉತ್ತಮ ಪ್ರಗತಿ ಸಾಧಿಸುತ್ತಿವೆ ಎಂದು ನಂಬಲಾಗಿದೆ ಮತ್ತು ಹಲವಾರು ಬೆಳಕಿಗೆ ಬರುವ ಉದ್ದಿಮೆಗಳು ಸ್ಥಾಪನೆಯಾಗುವ ಪಥದಲ್ಲಿವೆ. ಪಂಚಾಯತ್ ರಾಜ್ ಸಂಸ್ಥೆಗಳನ್ನು ಸ್ಥಾಪಿಸುವಲ್ಲಿ ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ಅವರಿಗೆ ಹಸ್ತಾಂತರಿಸುವಲ್ಲಿ ರಾಜ್ಯವು ಮುಂಚೂಣಿಯಲ್ಲಿರುವಂತೆ ಬಹಳಷ್ಟು ಜನ ನಿರೀಕ್ಷಿಸುತ್ತಾರೆ. ಇವುಗಳೆಲ್ಲವೂ ಗ್ರಾಮೀಣಾಬಿವೃದ್ಧಿಯನ್ನು ಮಾಪನ ಮಾಡುವ ಸರಿಯಾದ ಸೂಚಿಗಳಾಗಿದ್ದರೂ, ಓರ್ವ ಸಮಾಜ ವಿಜ್ಞಾನ ಸಂಶೋಧಕರು ಅಗಲ ಕೋನಗಳ ಈ ಕೆಳಗಿನವುಗಳನ್ನು ಒಳಗೊಂಡಿರುವ ಸೂಚಿಯನ್ನು ಅಳವಡಿಸಿಕೊಳ್ಳುತ್ತಾರೆ: ಅಭಿವೃದ್ಧಿ ಕಾರ್ಯಕ್ರಮಗಳ ಜತೆಗೆ ಗ್ರಾಮೀಣ ಸಮುದಾಯದ ವಿನ್ಯಾಸ ಹಾಗೂ ಸಂಬಂಧಗಳಲ್ಲಿ ಬದಲಾವಣೆ ತರುವ ಮಾರುಕಟ್ಟೆ ಪ್ರೇರೇಪಿಸಿದ ಆರ್ಥಿಕ ಪ್ರಕ್ರಿಯೆ ಮತ್ತು ಸಾಮಾಜಿಕ-ರಾಜಕೀಯ ಒತ್ತಡಗಳು ಇವುಗಳನ್ನೂ ಒಳಗೊಂಡಿರುವುದು. ಕರ್ನಾಟಕದ ಅನುಭವಗಳನ್ನು ಅಂತಹ ವಿಶಾಲವಾದ ದೃಷ್ಟಿಕೋನದಲ್ಲಿ ಗಣನೆಗೆ ತೆಗೆದುಕೊಳ್ಳುವುದು ಈ ಮಂಡನೆಯ ಉದ್ದೇಶವಾಗಿದೆ. ನಮ್ಮ ದೃಷ್ಟಿಕೋನವು ಒಂದು ಗ್ರಾಮ ಸಮುದಾಯವನ್ನು ವಿವಿಧ ಕೋನಗಳಿಂದ, ಆದರೆ ಅಸಮತೆಯ ವೇಗದಿಂದ, ಬದಲಾಗುತ್ತಿರುವ ಹಂತದಲ್ಲಿದೆ ಎಂದು ಪರಿಗಣಿಸುವುದು. ಇದರಿಂದ ಬೆಳವಣಿಗೆಯು ಬಿಗುವಾತಾವರಣ ಮತ್ತು ಘರ್ಷಣೆಯನ್ನುಂಟು ಮಾಡುತ್ತವೆ ಎಂಬ

ಗಲಿಬಿಲಿಯುಕ್ತ ಚಿತ್ರಣವನ್ನು ತರುತ್ತದೆ, ಹಾಗೂ ಮುಂದಕ್ಕೆ, ಸಮುದಾಯವು ಊಹಿಸಲಸಾಧ್ಯವಾದ ಹಾಗೂ ಹಿಂದಕ್ಕೆ ತಿರುಗಿ ಮರಳಲು ಅಸಾಧ್ಯವಾದ, ಹೊರಗಿನ ಪ್ರಭಾವಗಳ ಬದಲಾವಣೆ ದಿಕ್ಕಿನಲ್ಲಿ ಸಾಗುತ್ತದೆ ಎಂದು ಬಿಂಬಿಸುತ್ತದೆ. ಆದುದರಿಂದ ಗ್ರಾಮೀಣಾಭಿವೃದ್ಧಿಯನ್ನು ಒಂದು ಪ್ರಕ್ರಿಯೆಯೆಂದು ಇದರಲ್ಲಿ, ಗ್ರಾಮ ಸಮುದಾಯವು ತನ್ನ ಸ್ಥಿರತೆ ಮತ್ತು ಸಮಸ್ಥಿತಿಯನ್ನು ಸ್ಥಾಪಿಸುವಲ್ಲಿ ಉದ್ಭವವಾಗುವ ಸಮಸ್ಯೆಗಳೊಂದಿಗೆ ಹೊಂದಾಣಿಕೆ ಮಾಡುವಲ್ಲಿ ಹೋರಾಟ ನಡೆಸುತ್ತದೆ ಎಂದು ಪರಿಗಣಿಸಬಹುದು.

೨. ಹಳ್ಳಿಯ ಆರ್ಥಿಕತೆಯು ಸಂಪ್ರದಾಯಸ್ಥ ತಾಂತ್ರಿಕತೆಗಳ ಹಾಗೂ ಮನೋಭಾವಗಳ ಮೇಲೆ ನೆಲೆ ನಿಂತಿದೆ ಹಾಗೂ ಇದು ಮುಚ್ಚಿದ ಮತ್ತು ಸ್ವನಿಗ್ರಹಿತ ವಿನ್ಯಾಸವನ್ನು ಹೊಂದಿರುತ್ತದೆ. ಮಾರುಕಟ್ಟೆ ಪ್ರೇರಿತ ಆರ್ಥಿಕ ಬಲಗಳು ಇಂತಹ ಬುನಾದಿಯನ್ನೇ ಕೊಚ್ಚಿಕೊಂಡು ಹೋಗುತ್ತವೆ. ಕರ್ನಾಟಕ ರಾಜ್ಯದಲ್ಲಿ ಬಹುತೇಕ ಗಮನಿಸಬಹುದಾದ ಇದರ ಪರಿಣಾಮಗಳೆಂದರೆ:

i) ವಿವಿಧ ತರದ ನಗರ ವಸ್ತುಗಳು ಹಳ್ಳಿಗಳಿಗೆ ಹರಿದು ಬರುತ್ತವೆ. ಇವು ಅತೀ ಹಿಂದುಳಿದ, ಸಮೀಪಿಸಲು ಕಷ್ಟವೆನಿಸುವ ಅತ್ಯಂತ ಬಡ ಗುಂಪುಗಳಿಗೂ ಮುಟ್ಟುತ್ತಿವೆ.

ii) ತಲತಲಾಂತರದಿಂದ ಜೀವನಾಧಾರವಾಗಿದ್ದು, ಗ್ರಾಮೀಣ ಜನತೆಯ ಆರ್ಥಿಕ ಪ್ರಗತಿಗೂ ಅವಕಾಶ ಒದಗಿಸಿದ್ದ ಉತ್ಪನ್ನಗಳ ಹಾಗೂ ಸೇವೆಗಳ ಅವನತಿಯಾಗುತ್ತಿದೆ. ನಗರ ಪ್ರದೇಶದೊಂದಿಗೆ ಉತ್ತಮ ಸಂಬಂಧಗಳನ್ನಿಟ್ಟುಕೊಂಡಿರುವ ಗ್ರಾಮೀಣ ಪ್ರದೇಶದ ಮೇಲ್ವರ್ಗದ ಜನರಿಗೆ ಇಂತಹ ಒಂದು ಬದಲಾವಣೆ ಬಹಳಷ್ಟು ಸರಳ ಮತ್ತು ಲಾಭದಾಯಕವೆನಿಸಿದೆ. ಅವರು ತಮ್ಮ ಹೂಡಿಕೆಯ ಸಂಪತ್ತಿಗೆ ಹೊಸದಾರಿಯನ್ನು ಕಂಡು ಹಿಡಿಯುತ್ತಾರೆ. ಹಾಗೂ ಬಾಡಿಗೆ ಪಡೆಯುವ ಚಟುವಟಿಕೆಯಿಂದ ಲಾಭ ಸಿಗುವ ಉದ್ದಿಮೆಯತ್ತ ಬದಲಾಯಿಸಿಕೊಳ್ಳಲು ಪ್ರೇರಣೆಗೊಳಗಾಗುತ್ತಾರೆ. ಕೇವಲ ಕೆಲವರು ಮಾತ್ರ ಈ ಬದಲಾಗುತ್ತಿರುವ ಪರಿಸ್ಥಿತಿಯನ್ನು ಹಾಗೂ ಗ್ರಾಮೀಣ ಮೇಲ್ವರ್ಗದ ಜನತೆಯ ಮೇಲಿನ ಅವರ ಪ್ರಭಾವವನ್ನು ಗಮನಿಸುತ್ತಾರೆ. ಈ ಮಾರುಕಟ್ಟೆ ಪ್ರೇರಿತ ಶಕ್ತಿಗಳ ಪ್ರಭಾವ ಮಧ್ಯಮಸ್ತರದ, ಅಂದರೆ ಬಡತನದ ರೇಖೆಗಿಂತ ಮೇಲಿರುವ ಆದರೆ, ಶ್ರೀಮಂತ ವರ್ಗದಲ್ಲದ ಜನರ ಮೇಲೆ ಖಂಡಿತವಾಗಿಯೂ ಕಡಿಮೆ. ಇವರಲ್ಲಿ ಕೆಲವರು ನಿಧಾನವಾಗಿ ಯಾದರೂ, ಬೇಕಾದಷ್ಟು ಅಂದರೆ, ಮೇಲ್ವರ್ಗದವರೊಂದಿಗೆ ಸಲುಗೆ ಬೆಳೆಸುವಷ್ಟಾದರುಗಳಿಸ ಬಹುದು. ಇತರರ ಗಳಿಕೆ ಅಲ್ಪಸ್ವಲ್ಪವಿರಬಹುದು ಹಾಗೂ ಇನ್ನೂ ಹಲವರು ಕೆಳಗೆ ತಳ್ಳಲ್ಪಡಬಹುದು. ಬಡವರಿಗೆ ಸಂಬಂಧಿಸಿ, ಮಾರುಕಟ್ಟೆ ಪ್ರೇರಿತ ಶಕ್ತಿಗಳು ಅಲ್ಪ ಮಟ್ಟಗೆ ಕೆಲವರಿಗೆ ಮೇಲೆ ಬರಲು ಸಹಾಯ ಮಾಡಬಹುದು. ಆದರೆ ಹೆಚ್ಚಿನವರು, ಅವರನ್ನು ಮತ್ತಷ್ಟು ಕೆಳತಳ್ಳುವ ಅಥವಾ

ಹೊರತಳ್ಳಲ್ಪಡುವ ಒತ್ತಡಕ್ಕೆ ಬಲಿಯಾಗುತ್ತಾರೆ. ಅನ್ಯಥಾ, ಅವರಿಗೆ ಹೊರಗಿನ ಸಂಸ್ಥೆಗಳಿಂದ ಬೆಂಬಲ ದೊರೆಯದಿದ್ದಾಗ ಅವರು ಕುಸಿಯುತ್ತಾರೆ. ಮಾರುಕಟ್ಟೆ ಪ್ರೇರಿತ ಶಕ್ತಿಗಳ ಎರಡು ಪ್ರತಿಕೂಲ ಪರಿಣಾಮಗಳನ್ನು ಗಮನಿಸಬಹುದು: ೧) ಸ್ಥಳೀಯ ಜನತೆಗೆ ನೇರವಾಗಿ ಬಹಳಷ್ಟು ಕಡಿಮೆ ಲಾಭಗಳನ್ನು ನೀಡಿ, ಸ್ಥಳೀಯ ಸಂಪನ್ಮೂಲಗಳ ದುಬಾರಿ ಬಳಕೆ ಮಾಡುವುದು ಹಾಗೂ ೨) ಉತ್ತಮ ಬೆಳವಣಿಗೆಯ ಸಾಧ್ಯತೆಯಿರುವ ಆದರೆ ದೀರ್ಘಾವದಿ ಆರೈಕೆ ಮತ್ತು ದೊಡ್ಡ ಮೊತ್ತದ ಹೂಡಿಕೆಯ ಅಗತ್ಯವಿರುವ ಸಂಪನ್ಮೂಲಗಳನ್ನು ಸಂಪೂರ್ಣವಾಗಿ ನಿರ್ಲಕ್ಷ್ಯ ಮಾಡುವುದು. ಮಾರುಕಟ್ಟೆ ಪ್ರೇರಿತ ಶಕ್ತಿಗಳು ತರುವ ಬದಲಾವಣೆಯ ಲಕ್ಷಣವೇನೆಂದರೆ, ಅದು ಹಳೇಸ್ಥಿತಿಯನ್ನು ಮತ್ತೆ ಬಾರದ ಪರಿಸ್ಥಿತಿಯಲ್ಲಿ ನಿರ್ನಾಮ ಮಾಡಿ ಹೊಸ ಸ್ಥಿತಿಯನ್ನು ಉದ್ಭವ ಮಾಡಿರುವುದು, ಈ ಸ್ಥಿತಿಯು ಎಲ್ಲಾ ಗ್ರಾಮೀಣ ಸ್ತರಗಳನ್ನು ಸಮಾನವಾಗಿ ಸಮೀಪಿಸಲು ಅಸಾಧ್ಯವಾಗಿರುವುದು. ಅದರಲ್ಲೂ ಬಹಳಷ್ಟು ಅಗಾಧ ಸಂಖ್ಯೆಯಲ್ಲಿರುವ ಭಾಗವೊಂದು ಅಪಾಯದ ಅಂಚಿನಲ್ಲಿ ನಿಂತಿರುವುದು.

೩. ಸರ್ಕಾರದ ನೀತಿ ಧೋರಣೆ ಮತ್ತು ಕಾರ್ಯಕ್ರಮಗಳು, ಗ್ರಾಮೀಣ ಪರಿಸರದಲ್ಲಿ ಬದಲಾವಣೆ ತರುವ ಎರಡನೆಯ ದೊಡ್ಡ ಶಕ್ತಿಯಾಗಿದೆ. ಈ ಕೆಳಗಿನಂತೆ ಗ್ರಾಮೀಣಾಭಿವೃದ್ಧಿಯನ್ನು ಸರ್ಕಾರದ ನೀತಿ ಧೋರಣೆಗಳು ಹಾಗೂ ಕಾರ್ಯಕ್ರಮಗಳು ಗ್ರಾಮೀಣ ಆರ್ಥಿಕತೆಯಲ್ಲಿ ಹಲವಾರು ಗಂಭೀರ ಮಧ್ಯಸ್ಥಿಕೆಯಿಂದ ತರಲು ಯತ್ನಿಸುವುದು: ಗ್ರಾಮೀಣ ಸೌಲಭ್ಯಗಳನ್ನು ಉನ್ನತಿಗೊಳಿಸುವುದು, ಹೊರಗಿನ ದೊಡ್ಡ ಜಗತ್ತಿನೊಂದಿಗೆ ಹಳ್ಳಿಗಳ ಸಂಬಂಧವನ್ನು ಬಲಪಡಿಸುವುದು, ನೆಲ ಮತ್ತು ಜಲ ಸಂಪನ್ಮೂಲಗಳ ಫಲಪ್ರದ ಬಳಕೆಗೆ ವಿನಿಯೋಗ, ಬಡವರಿಗೆ ಉದ್ಯೋಗ ಹಾಗೂ ಆದಾಯ ಬೆಂಬಲವನ್ನು ನೀಡುವುದು, ಕೃಷಿಗೆ ಸಂಶೋಧನೆ, ವಿಸ್ತರಣೆ, ಸಾಲ ಮತ್ತು ಸರಬರಾಜಿನ ಸಹಾಯ, ನಿಯಂತ್ರಿತ ಮಾರುಕಟ್ಟೆ, ಗ್ರಾಮೀಣ ಕೈಗಾರಿಕೆಗೆ ಉತ್ತೇಜನ, ಗ್ರಾಮೀಣ ಸಂಬಂಧಗಳನ್ನು ಸುಧಾರಿಸುವುದು ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ಮಾನವೀಯ ಬೆಳವಣಿಗೆಗೆ ಅಗತ್ಯವೆನಿಸುವ ಶಿಕ್ಷಣ, ಆರೋಗ್ಯ ಮತ್ತು ಪೌಷ್ಟಿಕತೆಯಂತಹ ವಸ್ತುಗಳನ್ನು ನೀಡುವುದು. ಸರ್ಕಾರದ ದಕ್ಷ ಮಧ್ಯಸ್ಥಿಕೆಯ ಬಗ್ಗೆ ಒಂದು ರೀತಿಯ ನಿರಾಶಾದಾಯಕ ಭಾವನೆಯಿದೆ ಯಾಕೆಂದರೆ ಅದರ ಸಾಧನೆಯಲ್ಲಿ ಅಸಮತೆಯಿದೆ ಮತ್ತು ಅದು ನಿರೀಕ್ಷಿಸಿದ ಮಟ್ಟದ ಬದಲಾವಣೆಯ ಪರಿಣಾಮ ನೀಡಲಾಗಿಲ್ಲ. ಸರ್ಕಾರದ ಆಜ್ಞೆಯ ಮುಖಾಂತರ ರಾತ್ರಿ ಬೆಳಗಾಗುವುದರೊಳಗೆ ಬದಲಾವಣೆ ತರಲು, ಗ್ರಾಮೀಣ ಸಮಾಜವು ಬಹಳಷ್ಟು ಜಟಿಲವಿದೆ ಎಂದು ನೆನಪಿಡಬೇಕು. ಹಾಗೆ, ಬಿಡಿ ಕಾರ್ಯಕ್ರಮಗಳನ್ನು ಯಶಸ್ವಿ ಅಥವಾ ವಿಫಲ ಎಂದು ನಿರ್ಣಯಿಸಲು ಒಂದು ಮುಖ್ಯ ಅಂಶವನ್ನೇಕಳೆದುಕೊಳ್ಳುತ್ತದೆ. ಆ ಅಂಶವೇನೆಂದರೆ, ಸರ್ಕಾರದ ಅಸ್ತಿತ್ವವು, ಇತರ ಪರಿವರ್ತನಾ ಮಧ್ಯವರ್ತಿಗಳು ಬಹಳ ಸಣ್ಣ ರೀತಿಯಲ್ಲಿ ಅತೀ ದೂರದ ಹಳ್ಳಿಗಳಲ್ಲಿ

ಒಳ ಪ್ರವೇಶ ಪಡೆಯುವ ಸಂದರ್ಭದಲ್ಲಿ, ಅಭಿವೃದ್ಧಿ ಪ್ರಚೋದಕ ಹಾಗೂ ಇತರ ಪರಿವರ್ತನಾ ಮಧ್ಯವರ್ತಿಗಳ ಪ್ರವೇಶಕ್ಕೆ ಸ್ಥಳೀಯ ಸಮಾಜವನ್ನು ಮುಕ್ತವಾಗಿರಿಸುವಲ್ಲಿ ಅಸ್ತಿಭಾರ ಹಾಕಿದೆ. ಇಂದು, ಸರ್ಕಾರದ್ದ ಕೆಲವಾರು ಅಭಿವೃದ್ಧಿ ಕಾರ್ಯಗಳು, ಮಾರುಕಟ್ಟೆಗೆ, ಸರ್ಕಾರೇತರ ಸಂಸ್ಥೆಗಳಿಗೆ ಹಾಗೂ ಜನರ ತಮ್ಮದೇ ಆದ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಹಸ್ತಾಂತರಗೊಳ್ಳುವಂತಹ ಬೆಳವಣಿಗೆಗೆ ಅವಕಾಶವಿದ್ದಲ್ಲಿ, ಅದರ ಹೆಗ್ಗಳಿಕೆಯು ಖಂಡಿತವಾಗಿಯೂ, ಇದನ್ನು ಸಾಕಾರಗೊಳಿಸಿದ ಸರ್ಕಾರದ ಮಧ್ಯಸ್ತಿಕೆಗೆ ಹೋಗುತ್ತದೆ. ಎರಡನೆಯದು, ಬಡತನ ವಿರೋಧಿ ಕಾರ್ಯಕ್ರಮಗಳನ್ನು ಗಣನೆಗೆ ತೆಗೆದುಕೊಂಡರೆ, ಅವು ಬಡವರಿಗೆ ಅಲ್ಪಮಟ್ಟಿನ ಪರಿಹಾರವನ್ನು ನೀಡುವ ವಿನಃ ಅದಕ್ಕಿಂತ ಮುಂದೆಹೋಗಿಯೇ ಇಲ್ಲ. ಆರ್ಥಿಕ ತಜ್ಞರು ಈ ಕಾರ್ಯಕ್ರಮಗಳನ್ನು ತೂಗಿಸಿ ನೋಡುವಲ್ಲಿ ತಿರಸ್ಕಾರ ಭಾವದಿಂದ ನೋಡುತ್ತಾರಾದರೆ, ಸಮಾಜ ಶಾಸ್ತ್ರಜ್ಞರು ಗ್ರಾಮೀಣ ಸಮಾಜದಲ್ಲಿನ ಬದಲಾಗುತ್ತಿರುವ ಬಡವ ಶ್ರೀಮಂತನ ಸಂಬಂಧಗಳು ಹಾಗೂ, ಬಡವರು ಪ್ರಸ್ತುತ ಸರ್ಕಾರದ ಮೇಲೆ ಹೇರಲು ಸಾಧ್ಯವಾದ ಹೆಚ್ಚುತ್ತಿರುವ ಒತ್ತಡಗಳಂತಹ ಗಂಭೀರ ಪರಿಣಾಮಗಳನ್ನು ಕಂಡು ಹಿಡಿಯದೇ ಹೋಗಲಾರರು. ದೀರ್ಘಾವಧಿಯಲ್ಲಿ, ಹಳೇ ರಚನೆಗಳ ಹಾಗೂ ಕಟ್ಟಳೆಗಳ ಶಿಥಿಲವಾಗುವಿಕೆಯೊಂದಿಗೆ ಸೂಚಿಸಲ್ಪಡುವ ಹೊಸ ಬದಲಾವಣೆಗಳು ಬಹು ಪ್ರಾಮುಖ್ಯವೆನಿಸುತ್ತವೆ. ಗ್ರಾಮೀಣ ಬಡಜನತೆಯ ಹೆಚ್ಚಿನ ಒಳ್ಳೆಯದಕ್ಕಾಗಿ ಸರ್ಕಾರವು ಮಾರುಕಟ್ಟೆಯ ರಕ್ಷಣೆ ಅಥವಾ ಬೆಳವಣಿಗೆಯನ್ನು ಬಡವರತ್ತ ಕೇಂದ್ರಿಕೃತಗೊಳಿಸಲು ಅಸಫಲವಾಗಿರುವುದುದಾದರೆ, ಇಲ್ಲಿ ಕರ್ನಾಟಕದ ಪರಿಸ್ಥಿತಿಯ ಬಗ್ಗೆ ನಮ್ಮ ಪರಿಕಲ್ಪನೆ ಏನೆಂದರೆ ಸರ್ಕಾರದ ಮಧ್ಯಸ್ತಿಕೆಯು, ಹೊಸದಾದ ಸಮಾನ ಬಲಗಳ ವಿಶಾಲ ಬುನಾದಿಯ ಬೆಳವಣಿಗೆಗೆ ಮತ್ತು ಆಧುನಿಕತೆಗೆ ಹಳೆಯ ಪರಿಸ್ಥಿತಿಗಿಂತ ಪ್ರತಿಕೂಲವೆನಿಸುವ ಪರಿಣಾಮವನ್ನು ಬೀರಿರಬಹುದು. ಅಸಂಖ್ಯ ಹೊಸ ಚಟುವಟಿಕೆಗಳು ಗ್ರಾಮೀಣ ಕರ್ನಾಟಕದಲ್ಲಿ ಈಗ ಉದಯವಾಗಿರುವುದು ಇಂತಹ ಪ್ರಕ್ರಿಯೆಯು ವೇಗವನ್ನು ಪಡೆಯುತ್ತಿರುವ ಬಗ್ಗೆ ಒಂದು ಸೂಚನೆಯಾಗಿದೆ.

೪. ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿಗೆ ಕೊಡುಗೆಯಾಗಿರುವ ಮೂರನೆಯ ರೀತಿಯ ಪ್ರಭಾವವು ರಾಜಕೀಯದ್ದಾಗಿದೆ. ಮಾರುಕಟ್ಟೆ ಶಕ್ತಿಗಳು ಮತ್ತು ಸರ್ಕಾರದ ಮಧ್ಯಸ್ತಿಕೆಯಿಂದಾಗಿ ಉಂಟಾದ ಬದಲಾವಣೆಗಳಿಗೆ ವಿವಿಧ ಗ್ರಾಮೀಣ ಸ್ತರಗಳ ರಾಜಕೀಯ ಪ್ರತಿಕ್ರಿಯೆ ಇದಾಗಿದೆ. ಶ್ರೀಮಂತ ವರ್ಗ, ಮೇಲಿನ ಸ್ತರದಲ್ಲಿದ್ದುಕೊಂಡು ಆರ್ಥಿಕವಾಗಿ ಸಾಕಷ್ಟು ಗಳಿಸಲು ಶಕ್ತವಾಗಿದ್ದು, ಅವರಿಗೆ ಗ್ರಾಮೀಣ ಪ್ರದೇಶದಲ್ಲಿ ಉದ್ಭವಿಸಿದ ಈ ಹೊಸ ಚಟುವಟಿಕೆಗಳ ಸಾಮರ್ಥ್ಯದ ಬಗ್ಗೆ ಅರಿವಿತ್ತು, ಏನೆಂದರೆ, ಇದು ರಾಜ್ಯ ಮಟ್ಟದ ಮತ್ತು ರಾಷ್ಟ್ರಮಟ್ಟದ ರಾಜಕೀಯ ಪ್ರಕ್ರಿಯೆಯಲ್ಲಿ ಪ್ರವೇಶಿಸಲು ಯತ್ನಿಸುವುದು ಎಂದು. ಇವು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಬೆಂಬಲದ ಅಡಿಪಾಯವನ್ನು ಗಟ್ಟಿಗೊಳಿಸುವುದಕ್ಕಾಗಿ ಬಹು ಗಂಭೀರ ಪ್ರಯತ್ನ ಮಾಡುವುದು

ಹಾಗೂ ಇದು ಬಹಳಷ್ಟು ಮಧ್ಯಮ ಮತ್ತು ಅತೀ ಕೆಳಗಿನ ಗ್ರಾಮೀಣ ಸ್ತರಗಳ ವಿಶ್ವಾಸ ಗಳಿಸಲು ಯತ್ನಿಸುವುದು. ಘಟನಾವಳಿಗಳು ತೋರಿಸಿರುವಂತೆ, ಇದು ಜನಪ್ರಿಯ ರಾಜಕೀಯದ ಒಂದು ಫಲವತ್ತಾದ ಮೂಲ, ಇಲ್ಲಿ ಶ್ರೀಮಂತ ಮತ್ತು ಮಧ್ಯಮ ವರ್ಗದಲ್ಲಿ ಬೆಳೆಯುತ್ತಿರುವ ಸಂಬಂಧ, ಅವರು ಕೆಲ ಹಂತದ ತನಕ ರಾಷ್ಟ್ರೀಯ ಮಟ್ಟದ ರಾಜಕೀಯದಲ್ಲಿ ಗ್ರಾಮೀಣ ಜನತೆಯು ತೂಕವನ್ನು ಹೆಚ್ಚಿಸಿಕೊಳ್ಳುವಲ್ಲಿ ಜತೆಯಾಗಿ ನಡೆಸುವ ಹಾಗೂ ಗ್ರಾಮೀಣಾಭಿವೃದ್ಧಿಗೆ ಹೆಚ್ಚಿನ ಆದ್ಯತೆ ಮತ್ತು ಸಂಪನ್ಮೂಲಗಳನ್ನು ಪಡೆಯಲು ಸಾಧ್ಯವಾಗಿರುವುದು. ಗ್ರಾಮೀಣ ಮೇಲ್ವರ್ಗ ಮತ್ತು ಮಧ್ಯಮ ವರ್ಗ ಜಂಟಿಯಾಗಿ ಗ್ರಾಮೀಣ ಆರ್ಥಿಕತೆ ಮತ್ತು ರಾಜಕೀಯ ಹಾಗೂ ಅಂತಿಮವಾಗಿ ಗ್ರಾಮೀಣ ಸಮಾಜದಲ್ಲಿ ಒಂದುಪ್ರಭಾವ ಪೂರ್ಣ ಪಾತ್ರಕ್ಕಾಗಿ ಕಾರ್ಯವೆಸಗುತ್ತದೆ. ಬಡವರು, ಆರ್ಥಿಕ ಅವಕಾಶಗಳಲ್ಲಿ ಹೆಚ್ಚಿನ ಪಾಲು ಪಡೆಯುವ ಹೋರಾಟದೊಂದಿಗೆ, ರಾಜಕೀಯವಾಗಿ ಪ್ರಾಂತೀಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ನೀತಿ ರೂಪಣೆಯ ಮಟ್ಟದಲ್ಲಿ ತಮ್ಮ ಅಸ್ತಿತ್ವವನ್ನು ತೋರಿಸಲಿಕ್ಕಾಗಿ ಒಟ್ಟಾಗುವುದು ಅಗತ್ಯ ಎಂಬ ವಿಷಯವನ್ನು ಕಂಡು ಹಿಡಿಯುತ್ತಾರೆ, ಹಾಗೂ ಇದರಿಂದ ಮೇಲ್ವರ್ಗ ಮತ್ತು ಮಧ್ಯಮ ವರ್ಗದ ಜಂಟಿಯನ್ನು ಪ್ರಭಾವ ಪೂರ್ಣವಾಗಿ ಎದುರಿಸಬಹುದು ಎಂದು ಅರಿಯುತ್ತಾರೆ. ಹೀಗೆ, ಗ್ರಾಮೀಣ ಸಮಾಜದಲ್ಲಿ ಒಂದು ಹೊಸ ಧ್ರುವೀಕರಣವು ಗೋಚರಿಸುತ್ತದೆ. ಇದು ನೀತಿ ನಿರೂಪಕರಿಗೆ, ಗ್ರಾಮೀಣ ಪ್ರದೇಶದಲ್ಲಿ ಅಭಿವೃದ್ಧಿಗಾಗಿ ಕಾರ್ಯಾಚರಿಸುವ ಶಕ್ತಿಗಳ ಕಡೆಗೆ ಗಮನವೀಯಲು ಸಾಕಷ್ಟು ಸ್ಥಳಾವಕಾಶ ನೀಡುತ್ತದೆ. ಇದು ಘರ್ಷಣೆ, ಕಡಿದ ಸಂಬಂಧ ಮತ್ತು ಬೆಳವಣಿಗೆಯ ವೇಗವನ್ನು ಕುಂಠಿತಗೊಳಿಸುವುದಕ್ಕಿಂತ ದೂರವಿರುತ್ತದೆ.

೫. ಈ ಉದ್ದೇಶಕ್ಕಾಗಿರುವ ಸೂಕ್ತ ನೀತಿಗಳನ್ನು ಕೆಳಗಿನಂತೆ ಮೂರು ಶೀರ್ಷಿಕೆಗಳಲ್ಲಿ ನೀಡಬಹುದು.

೧. ಬೆಂಬಲ ನೀತಿಗಳು

೨. ಹೂಡಿಕೆಯ ನೀತಿಗಳು

೩. ನಿಯಂತ್ರಕ ನೀತಿಗಳು

**೧) ಬೆಂಬಲ ನೀತಿಗಳು**

ಈ ನೀತಿಗಳು, ಬಡವರು ಮೇಲ್ವರ್ಗದವರ ಮೇಲೆ ಅವಲಂಬಿತರಾಗುವುದನ್ನು ಕಡಿಮೆ ಗೊಳಿಸುವತ್ತ ಕೇಂದ್ರಿಕೃತವಾಗಬೇಕು, ಹಾಗೂ ಬಡವರು ಸ್ವಾವಲಂಬಿಗಳಾಗುವತ್ತ ಸಹಾಯ ಮಾಡಬೇಕು. ಸ್ವಂತ ಜಮೀನು, ಸಂಪನ್ಮೂಲ ಮತ್ತು ಕೌಶಲ್ಯಗಳು ಇಲ್ಲದಿರುವುದು, ಬಡವರನ್ನು ಕಡಿಮೆ ಸಂಬಳದ ಉದ್ಯೋಗದಲ್ಲಿ ತೊಡಗುವಂತೆ ಒತ್ತಾಯಿಸುತ್ತದೆ ಹಾಗೂ, ಇದು ಅವರನ್ನು ಮೇಲ್ವರ್ಗದಲ್ಲಿ ಬೇರೆ ಬೇರೆ ರೀತಿಯ

ಬಂಧನದಲ್ಲಿರುವಂತೆ ತಳ್ಳುವುದು. ಬಡವರಿಗೆ ಕಾನೂನಿನಂತೆ ನಿಗದಿಪಡಿಸಿದ ಕನಿಷ್ಠ ವೇತನದಷ್ಟಾದರೂ ಕೂಲಿ ಒದಗುವಂತಹ ಸಾಕಷ್ಟು ಉದ್ಯೋಗವಕಾಶಗಳನ್ನು ಒದಗಿಸುವುದು ಮೊದಲನೆಯ ಹೆಜ್ಜೆಯಾಗಿದೆ. ಪ್ರಸ್ತುತ ಉದ್ಯೋಗ ಕಾರ್ಯಕ್ರಮಗಳು ತಾತ್ಕಾಲಿಕ ಪರಿಹಾರ ನೀಡುವ ನೀತಿಯಲ್ಲಿ ಕಾರ್ಯಾಚರಿಸುತ್ತಿವೆ, ಆದುದರಿಂದ ಇದು ಬಡವರಿಗೆ ಬೆಂಬಲ ನೀಡುವಲ್ಲಿ ಪರಿಣಾಮಕಾರಿಯಾಗಿಲ್ಲ. ನೀಡಿದ ಉದ್ಯೋಗವು ದೀರ್ಘಕಾಲ ಉತ್ಪಾದಕ ಆಸ್ತಿಯಾಗುವುದೇ ಎಂದು ದೃಢಪಡಿಸುತ್ತ ಇದನ್ನು ವಿಸ್ತರಿಸಿದ ಮಟ್ಟದಲ್ಲಿ ತೆಗೆದುಕೊಳ್ಳಬೇಕು. ಎರಡನೇ ಹೆಜ್ಜೆಯು, ಬಡವರಿಗೆ ನಿರ್ದಿಷ್ಟವಾಗಿ, ಅವರಲ್ಲಿ ಉದ್ಯಮಶೀಲರಿರುವವರಿದ್ದರೆ ಒಳ್ಳೆಯ ಪ್ರತಿಫಲ ನೀಡುವ ಸ್ವ-ಉದ್ಯೋಗ ಚಟುವಟಿಕೆಯಲ್ಲಿ ತೊಡಗಲು ಸಹಾಯ ಮಾಡುವುದು. ಅಂತಹ ಚಟುವಟಿಕೆಗಳನ್ನು ಪ್ರವರ್ಧನಗೊಳಿಸುವಲ್ಲಿ ಸರ್ಕಾರದ ಕಾರ್ಯಕ್ರಮಗಳು, ಬಡವರಲ್ಲದವರತ್ತ ನಿರರ್ಥಕವಾಗಿ ಬಹಳಷ್ಟು ಸೋರಿಹೋಗುತ್ತದೆ ಎಂಬುದು, ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದಂತಹ ಕಾರ್ಯಕ್ರಮದಲ್ಲಿ ಅನುಭವ ವೇದ್ಯವಾಗಿದೆ. ಈ ನ್ಯೂನತೆಗಳನ್ನು ಸರಿಪಡಿಸುವುದು ಬಹಳ ಅಗತ್ಯವಿದೆ, ಇದರಿಂದಾಗಿ ಅದರ ಪ್ರಯೋಜನಗಳು ಬಡವರಿಗೆ ದೊರೆಯುವಂತಾಗುವುದು ಹಾಗೂ ಪ್ರೋತ್ಸಾಹಿತ ಚಟುವಟಿಕೆಗಳು ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಕಾರ್ಯಾಚರಿಸಲು ಸಾಧ್ಯವಾಗುವುದು. ಮೂರನೆಯ ಹೆಜ್ಜೆಯೇನೆಂದರೆ, ಬಡವರಿಗೆ ಶಿಕ್ಷಣ, ಆರೋಗ್ಯ ಮತ್ತು ಪೌಷ್ಠಿಕತೆಯು ದೊರೆಯುವಂತೆ ಅದನ್ನು ಬಲಪಡಿಸುವುದು. ಬಡವರ ಆದಾಯ ಮಟ್ಟವು ಒಂದು ಧೃಡ ಹೊಸ್ತಿಲಿನ ಮಟ್ಟಕ್ಕೆ ತಲುಪಿದಾಗ ಅವರು ತಮ್ಮ ಶಿಕ್ಷಣ, ಆರೋಗ್ಯ ಇತ್ಯಾದಿಗಳನ್ನು ಉತ್ತಮಪಡಿಸುವ ಅವಕಾಶಗಳತ್ತ ನೋಡುತ್ತಾರೆ. ಶಿಕ್ಷಣ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ ಸಾರ್ವಜನಿಕ ಸೌಲಭ್ಯವು ಈಗಿರುವಂತೆ ಕಳಪೆಯಾಗಿರುವುದಾದರೆ, ಬಡವರು ಈ ದಿಕ್ಕಿನಲ್ಲಿ ಮಾಡುವ ಪ್ರಯತ್ನವು ಬಹಳಷ್ಟು ನಿರಾಶೆಗೊಳಪಡುವುದು.

## ೨) ಹೂಡಿಕೆಯ ನೀತಿಗಳು

ಕರ್ನಾಟಕದ ಹೆಚ್ಚಿನ ಭಾಗವು ಬರ ಪೀಡಿತವಾಗಿದೆ. ರಾಜ್ಯದ ನೆಲ ಮತ್ತು ಜಲ ಸಂಪನ್ಮೂಲದ ಸಂರಕ್ಷಣೆ, ಸಂವರ್ಧನೆ ಹಾಗೂ ನಿರಂತರ ಉಪಯೋಗಕ್ಕಾಗಿ ದೊಡ್ಡ ರೀತಿಯ ಹೂಡಿಕೆಯ ಅಗತ್ಯವಿದೆ. ಕಳೆದ ದಶಕದಿಂದೀಚೆಗೆ ಜಾರಿಗೊಳಿಸಿದ ಜಲಾನಯನ ಕಾರ್ಯಕ್ರಮದ ಹೊರತಾಗಿಯೂ ನೆಲ ಮತ್ತು ಜಲ ಸಂಪನ್ಮೂಲದ ಅಭಿವೃದ್ಧಿಯ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ಎದುರಿಸಲು ಆಗಿಲ್ಲ. ಇಕ್ರಿಸಾಟ್ (ICRISAT)ನಂತಹ ಸಂಸ್ಥೆಯು ಅಭಿವೃದ್ಧಿಗೊಳಿಸಿದ ಒಣಭೂಮಿ ಬೇಸಾಯದ ತಾಂತ್ರಿಕತೆಯು ಯಾವಾಗ ಅಳವಡಿಸಲ್ಪಡುತ್ತದೆ ಅಂದರೆ, ಜಲ ಮತ್ತು ನೆಲದಂತಹ ಬೇಸಾಯದ ಬುನಾದಿಯು ಇಂತಹ ತಾಂತ್ರಿಕತೆಯಿಂದ ಲಾಭ ತರುವ ಸಶಕ್ತತೆಯನ್ನು ಪಡೆದಾಗ, ಎಂದು ತಜ್ಞರು ನಂಬುತ್ತಾರೆ. ಕರ್ನಾಟಕದಲ್ಲಿ ೧೯೮೦ರ ದಶಕದಲ್ಲಿ ಬೇಸಾಯವು ಸ್ಥಗಿತ ಸ್ಥಿತಿಯಲ್ಲಿ ನಿಂತಿತ್ತು ಹಾಗೂ, ಇದು

ನೀತಿ ಧೋರಣೆಯನ್ನು ತಯಾರಿಸುವವರಿಗೆ ಬಹಳಷ್ಟು ಯೋಚಿಸಲು ಎಡೆ ಮಾಡಿತ್ತು ಎಂದು ಇಲ್ಲಿ ಉಲ್ಲೇಖಿಸುವ ಅಗತ್ಯವಿದೆ. ರಫ್ತು ಮಾರುಕಟ್ಟೆಗೆ ಮುಖ್ಯವಾಗಿ ದೇಣಿಗೆ ನೀಡುತ್ತಿರುವ ಹೊಸ ರಂಗಗಳಾದ ತೋಟಗಾರಿಕೆ, ಹೂಗಳ ಬೆಳೆ ಮತ್ತು ಮೀನುಗಾರಿಕೆಗೆ ಹೆಚ್ಚಿನ ರೀತಿಯ ವಿವಿಧ ಪರಿಕರ ಸೌಲಭ್ಯಗಳು ಬೇಕಾಗುತ್ತದೆ ಮತ್ತು ಇದಕ್ಕಾಗಿ ಬೃಹತ್ ಹೂಡಿಕೆಯ ಅಗತ್ಯವೂ ಇದೆ. ಈ ಹೂಡಿಕೆಯನ್ನು ಖಾಸಗಿ ಉದ್ಯಮಕ್ಕೆ ಬಿಟ್ಟುಕೊಟ್ಟರೆ, ಗ್ರಾಮೀಣ ಬೆಳವಣಿಗೆ ಮತ್ತು ವೈವಿಧ್ಯತೆಗೆ ಸಾಕಷ್ಟು ಸಾಧ್ಯತೆಯುಳ್ಳ ಈ ಉದಯಗೊಳ್ಳುತ್ತಿರುವ ರಂಗಗಳನ್ನು ಗಂಭೀರವಾಗಿ ಮುದುಡುವಂತೆ ಮಾಡಿದಂತಾಗುವುದು. ಈ ರಂಗಗಳ ಬೆಳವಣಿಗೆಗೆ ಅನುಕೂಲಕರವಾದ ವಾತಾವರಣ ನಿರ್ಮಿಸಲು ಮುಂಗಡ ಯೋಜನೆ ಮತ್ತು ತೀವ್ರತರವಾದ ಕಾರ್ಯಾಚರಣೆಯು ಸರ್ಕಾರದ ವತಿಯಿಂದ ಅಗತ್ಯವಾಗಿದೆ. ಮೂರನೆಯದಾಗಿ, ತುರ್ತಾಗಿ ಗಮನ ನೀಡಬೇಕಾದ ಭಾಗವೆಂದರೆ ಗ್ರಾಮೀಣ ಸೌಲಭ್ಯಗಳು, ಪರಿಕರಗಳು ಹಾಗೂ ನೆರೆಹೊರೆ ಭಾವೈಕ್ಯತೆಯ ಹೊಂದಾಣಿಕೆಯ ಸಂಸ್ಥೆ ಹಾಗೂ ಹೊರ ಜಗತ್ತಿನೊಂದಿಗೆ ಅವುಗಳ ಸಂಪರ್ಕ. ಈ ಕ್ಷೇತ್ರದಲ್ಲಿರತಕ್ಕಂತಹ ಕೊರತೆಗಳು, ಗ್ರಾಮೀಣ ಆರ್ಥಿಕ ಅವಕಾಶಗಳ ಬೆಳವಣಿಗೆಯ ಸರಳವಾದ ಮತ್ತು ಸುಲಲಿತವಾದ ಹೂಡುವಿಕೆಯ ಪ್ರೇರಣೆಯನ್ನು ಬಹಳ ಗಂಭೀರವಾಗಿ ದುರ್ಬಲಗೊಳಿಸುತ್ತದೆ.

### ಖ) ನಿಯಂತ್ರಕ ನೀತಿಗಳು

ಗ್ರಾಮೀಣ ಕರ್ನಾಟಕದಲ್ಲಿ ಉದ್ಭವಿಸುತ್ತಿರುವ ಚಿತ್ರಣವನ್ನು ಮನಸ್ಸಲ್ಲಿಟ್ಟುಕೊಂಡರೆ, ನಿಯಂತ್ರಕ ಧೋರಣೆಗಳು ಅಗತ್ಯವೆನಿಸಿದ ಕೆಲವು ಸಂದಿಗ್ಧದ ಕೆಲಸಗಳನ್ನು ಗುರುತಿಸಿಕೊಳ್ಳಬಹುದು. ಅದರಲ್ಲಿ ಈ ಕೆಳಗಿನವು ತಕ್ಷಣವೇ ಮನಸ್ಸಿಗೆ ಬರುತ್ತವೆ: ಅತಿ ಶೀಘ್ರವಾಗಿ ಬೆಳೆಯುತ್ತಿರುವ ಮೌಲ್ಯ ತುಂಬಿದ ಪ್ರದೇಶದ ಚಟುವಟಿಕೆಗಳನ್ನು ಸಂಸ್ಥೆಗಳನ್ನಾಗಿಸುವುದು ಹೆಚ್ಚುತ್ತಿರುವುದು, ಖಾಸಗಿ ಹೂಡಿಕೆಗಳನ್ನು ಮತ್ತು ಹಂಚಿಕೆಗಳನ್ನು ವ್ಯತಿರಿಕ್ತವಾಗಿ ಬಾಧಿಸುವ ವ್ಯಯ ಮತ್ತು ಉತ್ಪನ್ನಗಳ ವಿಕಾರಗೊಳಿಸುವುದನ್ನು ತಪ್ಪಿಸುವುದು, ಸಾಕಷ್ಟು ಸ್ಪರ್ಧಾತ್ಮಕವಾಗಿರಲು ಮತ್ತು ಸುವ್ಯವಸ್ಥಿತವಾಗಿರಲು ಮಾರುಕಟ್ಟೆಗಳನ್ನು ನಿಯಂತ್ರಿಸುವುದು ಮತ್ತು ನಗರ ಗುಂಪು ಮತ್ತು ನಗರ ಉದ್ದಿಮೆಗಳ ವಿರುದ್ಧ ಗ್ರಾಮೀಣ ಹಿತಾಸಕ್ತಿಗಳನ್ನು ಸಂರಕ್ಷಿಸುವುದು. ವ್ಯತಿರಿಕ್ತವಲ್ಲದ್ದಿರೂ ನೀತಿ ಧೋರಣೆಗಳು ಈ ತನಕ ಗ್ರಾಮೀಣ ಜನತೆಯತ್ತ ಔದಾಸೀನ್ಯ ಭಾವವನ್ನೇ ತೋರಿದ್ದವು. ಗ್ರಾಮೀಣ ಜನತೆ ಒಗ್ಗಟ್ಟಾಗಿ, ಮುಖ್ಯವಾಗಿ ಮಧ್ಯಮ ಮತ್ತು ಕೆಳಸ್ತರದವರು ಅಗತ್ಯವಿರುವ ರಾಜಕೀಯ ಒತ್ತಡ ಹಾಗೂ ಬೆಂಬಲವನ್ನು ತರುವುದು ಅತೀ ಅಗತ್ಯ.

ಅನುವಾದ : ಬಿ. ವಿಜಯಕುಮಾರ್

# ಕರ್ನಾಟಕದಲ್ಲಿ ನೀರಾವರಿ ಅಭಿವೃದ್ಧಿ: ಸಮಸ್ಯೆಗಳು ಹಾಗೂ ಸಂಧಿಗ್ಧಗಳು

ಎಂ. ವೆಂಕಟರೆಡ್ಡಿ

ನಿರಂತರ ಅಂತರಗಳಲ್ಲಿ ಸಂಭವಿಸುತ್ತಿರುವ ಕ್ಷಾಮ ಪರಿಸ್ಥಿತಿಯ ದುಷ್ಪರಿಣಾಮಗಳನ್ನು ತೊಡೆದು ಹಾಕಲು ನೀರಾವರಿಯು ಬಹು ಪ್ರಾಮುಖ್ಯ ಹಾಗೂ ಅತೀ ಅಗತ್ಯವೆನಿಸಿದೆ. ಕೃಷಿ ಉತ್ಪಾದನೆಯಲ್ಲಿನ ಸುಧಾರಣೆಯು ಬಹುಪಾಲು ವಿಸ್ತೃತವಾದ ಅಥವಾ ದೊರೆಯುವ ಕೃಷಿಯೋಗ್ಯ ಭೂಮಿಯ ಸಮರ್ಪಕ ಬಳಕೆಯ ಮೇಲೆ ಅವಲಂಬಿಸಿದೆ. ವಿಸ್ತೃತವಾದ ಕೃಷಿಯು ಭವಿಷ್ಯದ ಒಂದು ಹಂತದ ಬಳಿಕ ಸಾಧ್ಯವಿಲ್ಲ. ಏಕೆಂದರೆ, ಹೆಚ್ಚು ಹೆಚ್ಚು ಭೂಮಿಯನ್ನು ಕೃಷಿಗೆ ಒಳಪಡಿಸುವುದು ಭೌಗೋಳಿಕವಾಗಿ ಅಸಾಧ್ಯವಾಗಿದೆ. ಇನ್ನೊಂದು ರೀತಿಯಲ್ಲಿ ರಾಜ್ಯದ ವಿವಿಧ ಭಾಗಗಳಲ್ಲಿ ಸಮಯಕ್ಕೆ ಸರಿಯಾಗಿ ಬಾರದ ಮಳೆ ಮತ್ತು ಕಡಿಮೆ ಪ್ರಮಾಣದ ಮಳೆ ವಿಸ್ತೃತ ಕೃಷಿಯ ಸಾಧ್ಯತೆಗಳನ್ನು ಕುಂಠಿತಗೊಳಿಸುತ್ತದೆ. ಆದುದರಿಂದ ರಾಜ್ಯದಲ್ಲಿ ಲಭ್ಯವಿರುವ ಜಲಸಂಪನ್ಮೂಲಗಳನ್ನು ನೀರಾವರಿಗಾಗಿ ರಕ್ಷಿಸುವ ಉದ್ದೇಶವು ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಕೆಲವಾರು ದೊಡ್ಡ ಪ್ರಮಾಣದ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಯೋಜನೆಗಳನ್ನು ನಿರ್ಮಿಸುವುದರ ಮೂಲಕ ರಾಜ್ಯವು, ನೀರಿನ ಹೆಚ್ಚಿನ ಬಳಕೆಯತ್ತ ಹಲವಾರು ಉತ್ತಮ ಹೆಜ್ಜೆಗಳನ್ನು ತೆಗೆದುಕೊಂಡಿದೆ ಎನ್ನುವುದಕ್ಕೆ ಸಂಶಯವಿಲ್ಲ. ಆದರೂ, ಈ ಪ್ರಗತಿಯು ನಿರೀಕ್ಷಿಸಿದ ಮಟ್ಟದಲ್ಲಿಲ್ಲ ಎಂದು ಕಂಡುಬರುತ್ತದೆ. ಆದ್ದರಿಂದ ಈ ಲೇಖನದಲ್ಲಿ ಕರ್ನಾಟಕದ ನೀರಾವರಿ ಅಭಿವೃದ್ಧಿಗೆ ಸಂಬಂಧಿಸಿದ ಹಲವಾರು ಸಮಸ್ಯೆಗಳು ಹಾಗೂ ಸಂದಿಗ್ಧಗಳನ್ನು ವಿಶ್ಲೇಷಿಸಲು ಯತ್ನಿಸಲಾಗಿದೆ.

ದೇಶದ ಒಟ್ಟಾರೆ ಭೌಗೋಳಿಕ ಪ್ರದೇಶದಲ್ಲಿ ಕರ್ನಾಟಕವು ಶೇಕಡಾ ೫.೮೧ ಪ್ರದೇಶವನ್ನು ಹೊಂದಿರುತ್ತದೆ ಹಾಗೂ ದೇಶದ ಒಟ್ಟು ಜನಸಂಖ್ಯೆ (೧೯೯೧)ಯಲ್ಲಿ ಶೇ. ೫.೩೧ ಜನಸಂಖ್ಯೆಯನ್ನು ಹೊಂದಿರುತ್ತದೆ. ರಾಜ್ಯದಲ್ಲಿ ೧.೪ ಲಕ್ಷ ಚದರ ಕಿಲೋಮೀಟರ್ ಕೃಷಿ ಭೂಮಿಯಾಗಿದ್ದರೆ, ೦.೫೫ ಲಕ್ಷ ಚದರ ಕಿಲೋಮೀಟರ್

ಮಾತ್ರ ನೀರಾವರಿ ಪ್ರದೇಶವಾಗಿದೆ. ಇದು ಶೇ. ೪೦ ಆಗಿರುತ್ತದೆ. ಉಳಿದ ಶೇ. ೬೦ ಕೃಷಿ ಭೂಮಿಯು ಮಳೆಯಾಧಾರಿತ ಕೃಷಿಯನ್ನು ಅವಲಂಬಿಸಿದೆ. ಇದು, ರಾಜ್ಯದಲ್ಲಿ ದೊರೆಯುವ ಎಲ್ಲಾ ಜಲಮೂಲ (ಭೂಮಿಯ ಮೇಲಿರುವ ಮತ್ತು ಅಂತರ್ಜಲ)ಗಳ ಸರಿಯಾದ ಬಳಕೆಯ ಅಗತ್ಯತೆಯನ್ನು ಒತ್ತಿ ಹೇಳುತ್ತದೆ.

ರಾಜ್ಯದಲ್ಲಿ ಕೃಷ್ಣ, ಕಾವೇರಿ, ತುಂಗಭದ್ರಾ, ಉತ್ತರ ಪೆನ್ನಾರ್, ದಕ್ಷಿಣ ಪೆನ್ನಾರ್, ಪಾಲಾರ್ ಮುಂತಾದ ನದಿಮೂಲಗಳು ಇವೆ ಮತ್ತು ಒಟ್ಟಾರೆ ತೊಂಬತ್ತೇಳು ಸಾವಿರದ ಮುನ್ನೂರ ಐವತ್ತೆರಡು (೯೭,೩೫೨) ದಶಲಕ್ಷ ಘನ ಮೀಟರ್ (೩೦೪೦ TMC) ವಾರ್ಷಿಕ ನೀರಿನ ಹರಿವು ಇದೆ. ಇದರ ನಲ್ವತ್ತೊಂಬತ್ತು ಶೇಕಡಾ (೧೬೮೭ TMC), ಮಿತವಾಗಿ ನೀರಾವರಿ ಉದ್ದೇಶಗಳಿಗಾಗಿ ಉಪಯೋಗಿಸಲಾಗಿದೆ. ಹೆಚ್ಚಾಗಿ, ಈ ನದಿಗಳಿಂದ ನೀರನ್ನು ನೀರಾವರಿ ಉದ್ದೇಶಗಳಿಗಾಗಿ ಇಚ್ಛಿತ ಮಟ್ಟಕ್ಕೆ ಉಪಯೋಗ ಮಾಡಲಾಗದಿರುವುದು ದುರಾದೃಷ್ಟ. ಇದು ಯಾಕೆಂದರೆ ಪ್ರತಿಕೂಲ ಭೌಗೋಳಿಕ ಮೇಲ್ಮೈಗಳಿಂದಾಗಿ ನೀರನ್ನು ಹಿಡಿದಿಡುವ ಅಣೆಕಟ್ಟುಗಳನ್ನು ಕಟ್ಟಲು ಅಸಾಧ್ಯವಾಗಿರುವುದು. ಇದು ನಿರ್ದಿಷ್ಟವಾಗಿ ಪಶ್ಚಿಮಕ್ಕೆ ಹರಿಯುವ ನದಿಗಳ ಬಗೆಗಂತೂ ಬಹಳ ಸತ್ಯ. ಇಳುವರಿಯ (ನೀರಿನ ಹರಿವು) ಬಗ್ಗೆ ರಾಜ್ಯದಲ್ಲಿ ಈ ನದಿಗಳ ಕೊಡುಗೆಯು ಒಟ್ಟು ೫೮ ಆಗಿರುತ್ತದೆ. ರಾಜ್ಯವು ಕೇವಲ ೧೬.೮೭ ಟಿ.ಎಂ.ಸಿ. ನೀರಿನ ಬಳಕೆಯಲಷ್ಟೆ ಸಂತೃಪ್ತಿ ಪಡೆಯಬೇಕಾಗಿದೆ.

**ನೀರಾವರಿ ಅಭಿವೃದ್ಧಿಯ ಸ್ಥಾನ ಮಾನ: ಒಂದು ಪಕ್ಷಿ ನೋಟ**

ನೀರಾವರಿ ಅಭಿವೃದ್ಧಿ ಶಕ್ಯತೆಯ ಬಗ್ಗೆ ಕರ್ನಾಟಕವು ಒಂದು ಹಿಂದುಳಿದ ರಾಜ್ಯವಾಗಿದೆ. ನೀರಾವರಿಯ (ದೊಡ್ಡ, ಮಧ್ಯಮ ಮತ್ತು ಕಿರು, ಅಂತರ್ಜಲವನ್ನೂ ಸೇರಿಸಿ) ಅಭಿವೃದ್ಧಿಯ ಗರಿಷ್ಠ ಶಕ್ಯತೆಯು ೫.೫ ಮಿಲಿಯ ಹೆಕ್ಟೇರುಗಳಾಗಿದೆ. ಇದು ದೇಶದ ಒಟ್ಟಾರೆ ಅಭಿವೃದ್ಧಿ ಶಕ್ಯತೆಯ ೪.೮ ಶೇಕಡಾವಾಗಿರುತ್ತದೆ. ೧೯೯೧-೯೨ರವರೆಗಿನ ದೊರೆತಿರುವ ಅಂಕಿ ಸಂಖ್ಯೆಗಳಂತೆ, ರಾಜ್ಯದ ಒಟ್ಟು ನಿವ್ವಳ ಬಿತ್ತನೆ ಪ್ರದೇಶದಲ್ಲಿ ೨೧.೬* ಶೇಕಡಾ ಪ್ರದೇಶವು ನೀರಾವರಿ ಪ್ರದೇಶವಾಗಿರುತ್ತದೆ. ಆದರೆ ದೇಶದ ಸರಾಸರಿ ನೀರಾವರಿ ಬಿತ್ತನೆಯು ೩೩ ಶೇಕಡಾವಾಗಿರುತ್ತದೆ.

ರಾಷ್ಟ್ರೀಯ ಸರಾಸರಿಗೆ ಹೋಲಿಸಿದಾಗ ಒಟ್ಟಾರೆಯಾಗಿ ರಾಜ್ಯವು ಈ ಬಗ್ಗೆ ಹಿಂದುಳಿದಿರುವ ಸೂಚಕವಾಗಿದೆ. ನೀರಾವರಿ ಅಭಿವೃದ್ಧಿಯ ಶಕ್ಯತೆ ಬಗ್ಗೆ ಕರ್ನಾಟಕವು ತೀವ್ರವಾದ ಅಂತರ್ ಪ್ರಾದೇಶಿಕ ಅಸಮತೋಲವನ್ನು ಪಡೆದಿದೆ.

---

* ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಅಂಕಿ ಸಂಖ್ಯೆಗಳ ಬ್ಯೂರೋ - ಕರ್ನಾಟಕದ ಒಂದು ನೋಟದಲ್ಲಿ ೧೯೯೨-೯೩.

## ಕೋಷ್ಟಕ - ೧

ಕರ್ನಾಟಕದಲ್ಲಿ ಜಿಲ್ಲಾವಾರು ನಿವ್ವಳ ಬಿತ್ತನೆ ಪ್ರದೇಶದಲ್ಲಿನ ಒಟ್ಟು ಶೇಕಡಾ ನೀರಾವರಿ ಪ್ರದೇಶ

| ಕ್ರ.ಸಂ. | ಜಿಲ್ಲೆ | ಒಟ್ಟು ಬಿತ್ತನೆ ೧೯೫೭-೫೮ | ಪ್ರದೇಶದಲ್ಲಿ ಶೇಕಡಾ ೧೯೮೩-೮೪ | ನೀರಾವರಿ ಪ್ರದೇಶ ೧೯೯೧-೯೨ |
|---|---|---|---|---|
| ೧. | ಬೆಂಗಳೂರು | ೧೦.೯ | ೧೯.೦ | ೧೯.೨ |
| ೨. | ಬೆಳಗಾಂ | ೫.೯ | ೨೦.೬ | ೨೮.೯ |
| ೩. | ಬಿಜಾಪುರ | ೧.೮ | ೧೦.೮ | ೨೦.೮ |
| ೪. | ಚಿಕ್ಕಮಗಳೂರು | ೩೨.೭ | ೧೧.೨ | ೧೦.೦ |
| ೫. | ಚಿತ್ರದುರ್ಗ | ೭.೩ | ೧೮.೫ | ೨೦.೨ |
| ೬. | ದಕ್ಷಿಣ ಕನ್ನಡ | ೨೪.೭ | ೩೯.೩ | ೪೩.೦ |
| ೭. | ಧಾರವಾಡ | ೫.೦ | ೮.೭ | ೧೪.೭ |
| ೮. | ಹಾಸನ | ೧೫.೭ | ೧೪.೬ | ೧೭.೧ |
| ೯. | ಕೊಡಗು | ೬.೭ | ೩.೦ | ೨.೪ |
| ೧೦. | ಕೋಲಾರ್ | ೧೭.೦ | ೨೩.೮ | ೨೭.೩ |
| ೧೧. | ಮಂಡ್ಯ | ೨೬.೦ | ೩೮.೨ | ೩೭.೬ |
| ೧೨. | ಮೈಸೂರು | ೧.೨ | ೧೨.೪ | ೨೫.೨ |
| ೧೩. | ಶಿವಮೊಗ್ಗ | ೪೧.೫ | ೪೧.೮ | ೪೪.೬ |
| ೧೪. | ತುಮಕೂರು | ೯.೬ | ೧೩.೨ | ೧೩.೬ |
| ೧೫. | ಉತ್ತರ ಕನ್ನಡ | ೨೦.೫ | ೧೯.೪ | ೨೯.೯ |
| ೧೬. | ಬಳ್ಳಾರಿ | ೩.೫ | ೨೦.೭ | ೨೭.೭ |
| ೧೭. | ಬೀದರ್ | ೨.೭ | ೭.೭ | ೧೧.೭ |
| ೧೮. | ಗುಲ್ಬರ್ಗಾ | ೧.೪ | ೨.೫ | ೧೪.೧ |
| ೧೯. | ರಾಯಚೂರು | ೧.೨ | ೧೨.೪ | ೨೫.೪ |
| | ರಾಜ್ಯ | ೭.೫ | ೧೫.೦ | ೨೧.೬ |

ಮೂಲ: ಕರ್ನಾಟಕ ಸರ್ಕಾರ: ಆರ್ಥಿಕ ಮತ್ತು ಅಂಕಿ ಸಂಖ್ಯೆಗಳ ಬ್ಯೂರೋ: ವಿವಿಧ ವರ್ಷಗಳಿಗೆ ಪಡೆದ ಅಂಕಿ ಅಂಶಗಳಿಂದ ಲೆಕ್ಕ ಹಾಕಿರುವುದು.

ಕೋಷ್ಟಕ ೧ರಲ್ಲಿ ನೀಡಲಾಗಿರುವ ನಿವ್ವಳ ಬಿತ್ತನೆ ಪ್ರದೇಶದಲ್ಲಿನ ಶೇಕಡಾ ಒಟ್ಟು ನೀರಾವರಿ ಪ್ರದೇಶವು ಈ ನಿಲುವನ್ನು ಬೆಂಬಲಿಸುತ್ತದೆ. ಇತ್ತೀಚಿನ ವರ್ಷಗಳಲ್ಲಿ ವ್ಯತ್ಯಾಸಗಳು ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತಿದ್ದರೂ, ನೀರಾವರಿ

ಅಭಿವೃದ್ಧಿಯಲ್ಲಿ ಅಂತರ್ ಜಿಲ್ಲಾ ಅಸಮತೋಲನವು ಕೋಷ್ಟಕ ೧ರಲ್ಲಿ ತೋರಿಸಿರುವಂತೆ ರಾಜ್ಯದಲ್ಲಿ ಇನ್ನೂ ಮುಂದುವರಿಯುತ್ತಿದೆಯೆಂಬುದು ಕಾಣುತ್ತದೆ. ಒಂದು ಕುತೂಹಲಕಾರಿ ಅಂಶವೆಂದರೆ, ಒಟ್ಟಾರೆ ೧೯ ಜಿಲ್ಲೆಗಳ ಪೈಕಿ ೧೦ ಜಿಲ್ಲೆಗಳಲ್ಲಿನ ನಿವ್ವಳ ಬಿತ್ತಿದ ಪ್ರದೇಶಗಳಲ್ಲಿನ ಒಟ್ಟು ನೀರಾವರಿ ಪ್ರದೇಶದ ಶೇಕಡಾವಾರು ಸಂಖ್ಯೆಯು ಉಲ್ಲೇಖಿತ ಮೂರು ಅವಧಿಗಳಲ್ಲೂ ರಾಜ್ಯದ ಸರಾಸರಿಗಿಂತ ಕಡಿಮೆಯಾಗಿದೆ. ಈ ಸಂಬಂಧ ಜಿಲ್ಲೆಗಳು ಪಡೆದಿರುವ ಸ್ಥಾನಗಳಲ್ಲಿ ಬದಲಾವಣೆ ಆಗಿವೆ. ಕೆಲವು ಜಿಲ್ಲೆಗಳಲ್ಲಿ ಅಂದರೆ ರಾಯಚೂರು ಮತ್ತು ಬಳ್ಳಾರಿಯಂತಹ ಜಿಲ್ಲೆಗಳಲ್ಲಿ ಬದಲಾವಣೆಗಳು ಮುಕ್ತವಾಗಿ ಕಾಣುವಂತೆ ಇವೆ. ಇಲ್ಲಿ ಅನುಕ್ರಮವಾಗಿ ೧೯೫೭-೫೮ರಲಲ್ಲಿ ೧.೨% ಇದ್ದ ನೀರಾವರಿ ಪ್ರದೇಶವು ೧೯೯೧-೯೨ರಲ್ಲಿ ೨೫.೪%ಕ್ಕೆ ಹಾಗೂ ೩.೫%ರಿಂದ ೨೭.೭%ಕ್ಕೆ ಏರಿದೆ. ಆ ಜಿಲ್ಲೆಗಳಲ್ಲಿ ಇಂತಹ ಗಮನಾರ್ಹ ಏರಿಕೆಯು, ಕಾಲುವೆ ನೀರಾವರಿಯನ್ನು ಸರ್ಕಾರವು ಪ್ರೋತ್ಸಾಹಿಸಿರುವ ಪ್ರಯತ್ನದಿಂದ ಆಗಿರುವಂತೆ ಕಾಣುತ್ತದೆ. ರಾಜ್ಯ ಸರಾಸರಿಗಿಂತಲೂ ಬಹಳಷ್ಟು ಕಡಿಮೆಯಿದ್ದರೂ ಗುಲಬರ್ಗಾದಲ್ಲಿನ ನಿವ್ವಳ ನೀರಾವರಿ ಪ್ರದೇಶದಲ್ಲಿನ ಏರಿಕೆಯು ಸಹ ಗಮನಾರ್ಹ. ಇನ್ನೊಂದು ಕಡೆಯಲ್ಲಿ, ಬೀದರ್‌ನಂತಹ ಜಿಲ್ಲೆಗಳಲ್ಲಿ, ಎಲ್ಲಿ ಕಾಲುವೆ ನೀರಾವರಿಗೆ ಹೆಚ್ಚಿನ ಅವಕಾಶವಿಲ್ಲವೋ, ಅಲ್ಲಿ ನೀರಾವರಿಯ ನಿವ್ವಳ ಪ್ರದೇಶಗಳಲ್ಲಿ ಹೇಳಿಕೊಳ್ಳುವಂತಹ ಬದಲಾವಣೆಗಳಿಲ್ಲ. ಸ್ಥಳೀಯವಾಗಿ ದೊರಕುವ ಜಲಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಲು ಮತ್ತು ನೀರು ಹೆಚ್ಚುವರಿಯಾಗಿ ದೊರೆಯುವ ಪ್ರದೇಶಗಳಿಂದ ಅದನ್ನು ಇತರ ಪ್ರದೇಶಗಳಿಗೆ ವರ್ಗಾಯಿಸುವಂತಹ ನ್ಯಾಯ ಸಮ್ಮತವಾದ ಕಾರ್ಯಕ್ರಮಗಳ ಸಮ್ಮಿಶ್ರದ ಅಗತ್ಯವನ್ನು ಇದು ಸಾರಿ ಹೇಳುತ್ತದೆ.

## ನದಿ ಮೂಲಯುಕ್ತ ನೀರಿನ ಹಂಚುವಿಕೆ ಮತ್ತು ಉಪಯೋಗ

ರಾಜ್ಯದ ವಾರ್ಷಿಕ ನದಿ ನೀರು ಉತ್ಪನ್ನದಲ್ಲಿ ಪಶ್ಚಿಮಕ್ಕೆ ಹರಿಯುವ ನದಿಗಳು ಗರಿಷ್ಠ (೫೮%) ನೀಡಿದರೂ, ನೀರಾವರಿಯ ಉದ್ದೇಶಕ್ಕೆ ಇದರ ಬಳಕೆಯು ಬಹಳ ಕಡಿಮೆ (೧೦ ಶೇಕಡಾಕ್ಕಿಂತನೂ ಕಡಿಮೆ). ಕೃಷ್ಣಾ ಮತ್ತು ಕಾವೇರಿ ನದಿ ತಟಗಳು ರಾಜ್ಯದ ನೀರಾವರಿಯ ಎರಡು ಮುಖ್ಯ ಮೂಲಗಳು. ಈ ಎರಡೂ ನದಿಮೂಲಗಳ ಜಲವನ್ನು ಬೇರೆ ರಾಜ್ಯಗಳೊಂದಿಗೆ ಹಂಚಿಕೊಳ್ಳುವ ಸಮಸ್ಯೆಯನ್ನೊಳಗೊಂಡಿರುವುದು ಒಂದು ದುರಾದೃಷ್ಟ ಸಂಗತಿ. ಆದುದರಿಂದ, ಈ ಎರಡೂ ನದಿಮೂಲಗಳ ನೀರಿನ ಬಳಕೆಯು ನಿಯಂತ್ರಣದಲ್ಲಿದ್ದು, ಅದು ಅಂತರ್ ರಾಜ್ಯ ನೀರು ಹಂಚಿಕೆಗಳ ಒಪ್ಪಂದದ ಮೇರೆಗೆ ನಿರ್ದಿಷ್ಟ ಮಾದರಿಯಲ್ಲಿರುತ್ತದೆ. ಬಳಕೆಯ ಸ್ಥಿತಿಗತಿಯನ್ನು ಕೋಷ್ಟಕ-೨ರಲ್ಲಿ ನೀಡಲಾಗಿದೆ.

ಕೋಷ್ಟಕ - ೨

ಕರ್ನಾಟಕದಲ್ಲಿ ನದಿ ಮೂಲಯುಕ್ತ ನೀರಿನ ಹಂಚಿಕೆ ಮತ್ತು ಉಪಯೋಗ
(ದೊಡ್ಡ ಮತ್ತು ಮಧ್ಯಮ ಪ್ರಮಾಣದ ಯೋಜನೆಗಳು)

| ನದಿ ಮೂಲ | ಕರ್ನಾಟಕಕ್ಕೆ (ಟಿ.ಎಂ.ಸಿ.ಗಳಲ್ಲಿ) | ಇಲ್ಲಿಯತನಕ ಕೈಗೊಂಡ ಬಳಕೆ ಸಂಪೂರ್ಣಗೊಂಡ ಯೋಜನೆಗಳು | ಚಾಲ್ತಿಯಲ್ಲಿರುವ ಯೋಜನೆಗಳು | ಒಟ್ಟು |
|---|---|---|---|---|
| ೧. ಕೃಷ್ಣಾ | ೭೫೭.೦೦ | ೮೫.೭೩ | ೪೩೫.೨೦ | ೫೨೦.೯೩ (೬೮.೮) |
| ೨. ಗೋದಾವರಿ | ೧೫.೨೭ | | ೧೪.೨೭ | ೧೪.೨೭ (೯೩.೪) |
| ೩. ಕಾವೇರಿ | ೩೪೫.೩೦ | ೧೨೨.೫೦ | ೧೭೦.೪೦ | ೨೯೨.೯೦ (೮೪.೮) |
| ೪. ಇತರೆ ಮೂಲಗಳು | ೪೫.೬೦ | ೦.೮೮ | | ೦.೮೮ (೧.೯) |
| ಒಟ್ಟು | ೧೨೮೭.೭೨ | ೨೦೯.೧೧ | ೬೧೯.೮೭ | ೮೨೮.೯೮ (೬೪.೪) |

ಸೂಚನೆ: ಆವರಣದ ಒಳಗಿರುವ ಸಂಖ್ಯೆಗಳು ಒಟ್ಟು ಲಭ್ಯತೆಯ ಶೇಕಡಾವಾರು ಉಪಯೋಗ.

ಮೂಲ: ಕರ್ನಾಟಕ ಸರ್ಕಾರದ ನೀರಾವರಿ ಇಲಾಖೆ: ದೊಡ್ಡ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಕಾರ್ಯಕ್ರಮಗಳ ಮೇಲೆ ಕೆಲಸ ಮಾಡುವ ತಂಡದ ಎಂಟನೇ ಪಂಚವಾರ್ಷಿಕ ಯೋಜನೆಯ ಮೇಲಿನ ವರದಿ, ೧೯೯೦-೯೫.

ಕೋಷ್ಟಕ ೨ರಲ್ಲಿ ನೀಡಲಾಗಿರುವ ಅಂಕಿ ಸಂಖ್ಯೆಗಳಲ್ಲಿ ಕಾಣುವಂತೆ ಕೃಷ್ಣ ಮತ್ತು ಕಾವೇರಿ ನದಿ ಮೂಲಗಳ ರಾಜ್ಯದ ಪಾಲಿನ ನೀರಿನ ಬಳಕೆಯು ಅಷ್ಟೇನೂ ಪ್ರೋತ್ಸಾಹದಾಯಕವಲ್ಲ. ಇದು ನಿರ್ದಿಷ್ಟವಾಗಿ ಕೃಷ್ಣ ಜಲ ಮೂಲಕ್ಕಂತೂ ಸತ್ಯ. ಯಾಕೆಂದರೆ ಇಲ್ಲಿ ನಿಯುಕ್ತಿಗೊಳಿಸಿದ ಒಟ್ಟು ನೀರಿನ ಮೂರನೇ ಒಂದು ಭಾಗದಷ್ಟು ಇನ್ನು ಉಪಯೋಗ ವಾಗಬೇಕಷ್ಟೆ. ನಿರ್ದಿಷ್ಟ ಸಮಯದ ಒಳಗೆ (ಕ್ರಿ.ಶ. ೨೦೦೦) ರಾಜ್ಯವು ತನ್ನ ಪಾಲಿನ ನೀರನ್ನು ವಶಗೊಳಿಸಬೇಕು. ಆದರೆ ಇವರ ಸಂಪೂರ್ಣ ಬಳಕೆಯ ಮೇಲೆ ಇನ್ನೂ ಸಂದೇಹಗಳು ವ್ಯಕ್ತವಾಗುತ್ತಿವೆ. ಕ್ರಿ.ಶ. ೨೦೦೦ನೇ ವರ್ಷದ ಒಳಗೆ ಈ ಉದ್ದೇಶಕ್ಕೆ ಬೇಕಾದ ಹಣವನ್ನು ಸಂಗ್ರಹಿಸಿ ರಾಜ್ಯ ತನ್ನ ಪಾಲಿನ ನೀರನ್ನು ಉಪಯೋಗಿಸದ ಹೊರತು ಬೇರೆ ದಾರಿಯಿಲ್ಲ.

## ನೀರಾವರಿಯಲ್ಲಿ ಹಣ ತೊಡಗಿಸುವುದು

ಹಿಂದುಳಿದ ಪ್ರದೇಶಗಳಿಗೆ ನೀರಾವರಿ ಸೌಲಭ್ಯಗಳನ್ನು ಹೆಚ್ಚಿಸಲು ಹಾಗೂ ರಾಜ್ಯದ ಪಾಲಿನ ನೀರನ್ನು ಬಳಕೆ ಮಾಡುವ ದೃಷ್ಟಿಯಿಂದ ಯೋಜನಾ ಅವಧಿಯಲ್ಲಿ

ನೀರಾವರಿಯ ಮೇಲೆ ಹಣ ತೊಡಗಿಸುವುದನ್ನು ಹೆಚ್ಚಿಸಲಾಯಿತು. ಕೃಷ್ಣ ಮತ್ತು ಕಾವೇರಿ ತಟಗಳಲ್ಲಿ ಹಲವಾರು ದೊಡ್ಡ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಯೋಜನೆಗಳನ್ನು ಪ್ರಾರಂಭಿಸಲಾಯಿತು. ಯೋಜನಾ ವೆಚ್ಚಗಳಲ್ಲಿ ಸುಮಾರು ೨೫ ಶೇಕಡಾದಷ್ಟು ನೀರಾವರಿ ವಲಯಕ್ಕಾಗಿ ನಿಗದಿಗೊಳಿಸಲಾಗಿತ್ತು. ಏಳನೆಯ ಯೋಜನೆಯ ಕೊನೆಗೆ, ನೀರಾವರಿಯ ಮೇಲೆ ಸುಮಾರು ೨೫,೦೦೦ ಕೋಟಿ ರೂಪಾಯಿಗಳಷ್ಟು ಹಣ ತೊಡಗಿಸಲಾಗಿತ್ತು. ಇದರಲ್ಲಿ ಸುಮಾರು ೮೫ ಶೇಕಡಾದಷ್ಟು ದೊಡ್ಡ ಮತ್ತು ಮಧ್ಯಮ ಪ್ರಮಾಣದ ಯೋಜನೆಗಳಲ್ಲಿ ತೊಡಗಿಸಲಾಗಿತ್ತು. ಇಷ್ಟು ಅಗಾಧವಾಗಿ ದೊಡ್ಡ ಮತ್ತು ಮಧ್ಯಮ ಪ್ರಮಾಣದ ಯೋಜನೆಗಳಲ್ಲಿ ಹಣ ತೊಡಗಿಸಿರುವುದು ರಾಜ್ಯದ ತಪ್ಪು ಹಾಗೂ ಪಕ್ಷಪಾತದ ಧೋರಣೆ ಎಂದು ಹಲವರು ಭಾವಿಸುತ್ತಾರೆ. ದೊಡ್ಡ ಹಾಗೂ ಮಧ್ಯಮ ಪ್ರಮಾಣದ ಯೋಜನೆಗಳಿಂದ ಆಗುವ ಲಾಭವು ನಿರೀಕ್ಷಿತ ಅಥವಾ ಇಚ್ಛಿತ ಮಟ್ಟದಲ್ಲಿ ಇರುವುದಿಲ್ಲ ಎಂದೂ ಅಪಾದಿಸಲಾಗಿದೆ. ರಾಜ್ಯದ ದೊಡ್ಡ ನದಿಗಳ ನೀರಿನ ಬಳಕೆಯ ಹಿನ್ನಲೆಯಲ್ಲಿ ನಿರ್ದಿಷ್ಟವಾಗಿ ಅಂತಹ ಅಭಿಪ್ರಾಯಗಳು ಚರ್ಚಾಸ್ಪದವಾಗಿದೆ. ಈ ಪ್ರಶ್ನೆಯ ಬಗ್ಗೆ ಇನ್ನೊಂದು ಕಡೆಯಲ್ಲಿ ನಾವು ಮಾತಾಡೋಣ.

ಸಾಮಾನ್ಯವಾಗಿ, ಸಂಪನ್ಮೂಲಗಳ ಕೊರತೆಯಿದ್ದರೂ, ರಾಜ್ಯವು ನೀರಾವರಿ ಅಭಿವೃದ್ಧಿಗಾಗಿ ಸಾಕಷ್ಟು ಗಮನವನ್ನು ಹರಿಸಿದೆ. ಯೋಜನಾ ಅವಧಿಗಳಲ್ಲಿ ಮೂರನೇ ಪಂಚವಾರ್ಷಿಕ ಯೋಜನೆಯೊಂದನ್ನು ಹೊರತು ಪಡಿಸಿ, ಕಿರು ನೀರಾವರಿಯ ಮೇಲಿನ ಹಣದ ವೆಚ್ಚವು ಸಮಾನವಾಗಿತ್ತು. ಮೂರನೆಯ ಯೋಜನೆಯಲ್ಲಿ ಒಟ್ಟು ವೆಚ್ಚಗಳಲ್ಲಿ ನೀರಾವರಿ ವಲಯದ ಮೇಲಿನ ಹೂಡಿಕೆಯು ೩೨ ಶೇಕಡಾವಾಗಿತ್ತು. ಆ ಬಳಿಕದ ಮೂರು ವಾರ್ಷಿಕ ಯೋಜನೆಗಳಲ್ಲಿ (೧೯೬೬-೬೯) ಇದು ೨೮% ಆಗಿತ್ತು. ಅಲ್ಲಿಂದ ಕಿರು ನೀರಾವರಿಯ ಪಾಲು ಸ್ಥಿರವಾಗಿ ೧೫ ಶೇಕಡಾದ ಸುತ್ತ ಮುತ್ತ ಕೇಂದ್ರೀಕೃತಗೊಂಡಿದೆ. ಕಿರು ನೀರಾವರಿಯಲ್ಲಿ ಬಹುತೇಕ ಖಾಸಗಿ ಹೂಡಿಕೆಯು ಇದ್ದು, ಇದು ಯೋಜಿತ ಖರ್ಚುಗಳಲ್ಲಿ ಪ್ರತಿಫಲನಗೊಳ್ಳುವುದಿಲ್ಲ. ಆದುದರಿಂದ ಕಿರು ನೀರಾವರಿ ಯೋಜನೆಯಡಿಯಲ್ಲಿ ಸೃಷ್ಟಿಸಿದ ನೀರಾವರಿ ಶಕ್ಯತೆಯ ಪ್ರತಿ ಹೆಕ್ಟೇರಿನ ಬೆಲೆಯು ದೊಡ್ಡ ಪ್ರಮಾಣದ ಯೋಜನೆಗಳಿಗಿಂತ ಕಡಿಮೆಯಿರುವಂತೆ ಕಾಣಿಸುವುದು. ಕಿರು ನೀರಾವರಿಯಲ್ಲಿ ಬೆಲೆಯ ಪ್ರತಿ ಪರಿಣಾಮವನ್ನು ಗಣನೆಗೆ ತೆಗುದುಕೊಳ್ಳದೆ, ದೊಡ್ಡ ಮತ್ತು ಮಧ್ಯಮ ಯೋಜನೆಗಳಲ್ಲಿ ಹಣ ತೊಡಗಿಸುವುದು ಅತೀ ಅಗತ್ಯ ಹಾಗೂ, ಈ ರೀತಿ ನದಿಯಿಂದ ದೊರೆಯುವ ನೀರಿನ ಬಳಕೆ ಮಾಡಬೇಕಾಗಿದೆ. ದೊಡ್ಡ ಮತ್ತು ಮಧ್ಯಮ ಯೋಜನೆಗಳಿಂದ ತಯಾರಾದ ನೀರಾವರಿ ಶಕ್ಯತೆಯ ಸಮರ್ಥ ಬಳಕೆಯ ಖಚಿತವಾಗಲು ಧೋರಣೆ ಮತ್ತು ಕಾರ್ಯಕ್ರಮಗಳ ರಚನೆಯು ಸಹಾ

ಅಷ್ಟೇ ಮುಖ್ಯವೆನಿಸುತ್ತದೆ. ಮುಂದಕ್ಕೆ, ದೊಡ್ಡ ಮತ್ತು ಕಿರು ನೀರಾವರಿ ಯೋಜನೆಗಳು ಪರಸ್ಪರ ಸ್ಪರ್ಧಿಗಳಲ್ಲ ಬದಲಾಗಿ ಒಂದಕ್ಕೊಂದು ಪೂರಕ ಎಂಬುದನ್ನು ಗಮನಿಸಬೇಕು.

## ಸೃಷ್ಟಿಸಿದ ನೀರಾವರಿಯ ಶಕ್ತತೆ

ನೀರಾವರಿಗೆ ಹಣ ಹೂಡಿಕೆಗಿರುವ ತೊಂದರೆಗಳನ್ನು ಗಮನಿಸಿ, ರಾಜ್ಯವು ೧೯೯೨ರ ಡಿಸೆಂಬರ್ ಕೊನೆತನಕ ೩೦.೬೯ ಲಕ್ಷ ಹೆಕ್ಟೇರ್‌ಗಳಷ್ಟು (ಇದು ೭.೬೪ ಲಕ್ಷ ಹೆಕ್ಟೇರ್‌ಗಳ ಅಂತರ್ಜಲ ನೀರಾವರಿಯನ್ನು ಒಳಗೊಂಡಿದೆ) ಶಕ್ಯತೆಯನ್ನು ಸೃಷ್ಟಿ ಮಾಡಿದ್ದು ವಿವರಗಳು ಕೆಳಗಿನಂತಿವೆ.

ಕೋಷ್ಟಕ - ೩

ಸೃಷ್ಟಿಸಿದ ನೀರಾವರಿಯ ಶಕ್ಯತೆ (ಡಿಸೆಂಬರ್, ೧೯೯೨ರ ತನಕ)

| ಮೂಲ | ಸೃಷ್ಟಿಸಿದ ಶಕ್ಯತೆ (ಹೆಕ್ಟೇರುಗಳಲ್ಲಿ) |
|---|---|
| ೧. ಪೂರ್ಣಗೊಂಡ ೭ ದೊಡ್ಡ ಹಾಗೂ ೩೪ ಮಧ್ಯಮ ಯೋಜನೆಗಳು | ೪,೨೫,೮೬೯ (೧೩.೯) |
| ೨. ಚಾಲ್ತಿಯಲ್ಲಿರುವ ೧೧ ದೊಡ್ಡ ಹಾಗೂ ೫ ಮಧ್ಯಮ ಯೋಜನೆಗಳು | ೯,೭೧,೬೧೫ (೩೧.೭) |
| ೩. ಮೇಲ್ಮೈಯ ನೀರನ್ನು ಬಳಸಿಕೊಂಡ ಕಿರು ಯೋಜನೆಗಳು | ೮,೭೬,೧೭೯ (೨೮.೫) |
| ೪. ೧೫,೭೧೩ ನಾಲ್ಕು ಹೆಕ್ಟೇರುಗಳಿಗಿಂತ ಕಡಿಮೆ ಆಯಕಟ್ಟು ಇರುವ ಸಣ್ಣ ಕೆರೆಗಳು | ೩೧,೦೦೦ (೧.೦) |
| ೫. ಅಂತರ್ಜಲ ಮೂಲಗಳು | ೭,೬೪೨೪ (೨೪.೯) |
| ಒಟ್ಟು | ೩೦,೬೯,೦೮೭ (೧೦೦.೦೦) |

ಗಮನಿಸಿ: ಆವರಣದಲ್ಲಿ ನೀಡಿರುವ ಸಂಖ್ಯೆಗಳು ಒಟ್ಟು ಸೃಷ್ಟಿಸಿದ ಶಕ್ಯತೆಯ ಶೇಕಡಾ ಪಾಲು.

ಮೂಲ: ಕರ್ನಾಟಕ ಸರ್ಕಾರ, ನೀರಾವರಿ ಇಲಾಖೆ, ಕರ್ನಾಟಕದಲ್ಲಿ ನೀರಾವರಿ, ೧೯೯೩-೯೪.

ದೊಡ್ಡ ಮತ್ತು ಮಧ್ಯಮ ಯೋಜನೆಗಳು ನೀರಾವರಿಯ ಒಟ್ಟುಹೂಡಿಕೆಯಲ್ಲಿ ಸಿಂಹಪಾಲು (೮೫ ಶೇಕಡಾ) ಪಡೆದರೂ, ಸೃಷ್ಟಿಸಿದ ನೀರಾವರಿ ಶಕ್ಯತೆಯಲ್ಲಿ ಅವುಗಳ ಪಾಲು ಇಲ್ಲಿಯ ತನಕ ಕೇವಲ ೪೫.೬ ಶೇಕಡಾ. ಇದು ತಾರ್ಕಿಕವಾಗಿ

ಹೂಡಿಕೆಯ ಹಣದ ಸಮಭಾಗವಲ್ಲ. ಇನ್ನೊಂದು ಕಡೆಯಲ್ಲಿ ಕೇವಲ ೧೫% ಹೂಡಿಕೆಯೊಂದಿಗೆ ಕಿರು ಯೋಜನೆಗಳ ಶಕ್ಯತೆಯ ಕೊಡುಗೆಯು ೩೦%. ಈ ಪರಿಸ್ಥಿತಿಯನ್ನು ಕೆಲವು ಸಲ ವಿಮರ್ಶಾಕಾರರು ರಾಜ್ಯದ ಬೆಲೆ ಪ್ರತಿ ಪರಿಣಾಮ (ಬೆಲೆಯ ಸಮರ್ಥ ಪ್ರತಿಫಲ) ಹೂಡಿಕೆ ಎಂದು ಹೇಳುತ್ತಾರೆ. ಆದರೆ ವಾಸ್ತವದಲ್ಲಿ ಇದು ಸರಿಯೆನಿಸಲಾರದು. ದೊಡ್ಡ ಮತ್ತು ಮಧ್ಯಮ ಯೋಜನೆಗಳಿಗೆ ಸಂಬಂಧಿಸಿದಂತೆ ಅವುಗಳು ಉತ್ಪಾದನೆಗೆ ಹೆಚ್ಚು ಅವಧಿ ತೆಗೆದುಕೊಳ್ಳುತ್ತದೆ. ಹಲವಾರು ಸಲ ಅಣೆಕಟ್ಟು ಕಟ್ಟಿಸಿ ನೀರನ್ನು ಸಂಗ್ರಹಿಸಲು ಆದ್ಯತೆ ನೀಡಲಾಗುವುದು, ಜಮೀನುಗಳಿಗೆ ನೀರು ಹಂಚುವ ಸಲುವಾಗಿ ಸರಿಯಾದ ವಿತರಣಾ ಜಾಲವನ್ನು ಕಟ್ಟಿಸಿರುವುದಿಲ್ಲ. ಕಾಲುವೆಗಳ ನಿರ್ಮಾಣವು ಅಣೆಕಟ್ಟಿನ ನಿರ್ಮಾಣದೊಂದಿಗೆ ಸಂಯೋಜನೆಗೊಂಡಾಗ ಹೂಡಿಕೆಯು ಶಕ್ಯತೆಯನ್ನು ಸೃಷ್ಟಿಸುವುದು. ರಾಜ್ಯದಲ್ಲಿ ಹಲವಾರು ದೊಡ್ಡ ಮತ್ತು ಮಧ್ಯಮ ಯೋಜನೆಗಳು ಪೂರ್ಣಗೊಂಡಿದ್ದರೂ ಕಾಲುವೆಗಳ ನಿರ್ಮಾಣವೂ ಇನ್ನೂ ನಡೆಯುತ್ತಲೇ ಇದೆ. ಫಲಿತಾಂಶವಾಗಿ ಬೆಲೆಯ ಹೆಚ್ಚಳಗೊಂಡಿರುವುದು ಮಾತ್ರವಲ್ಲ ಸೃಷ್ಟಿಗೊಳ್ಳಬಹುದಾದ ಶಕ್ಯತೆಯ ಮೇಲೆ ಇದು ಪ್ರತಿಕೂಲ ಪರಿಣಾಮವನ್ನು ಬೀರಿದೆ.

ಇನ್ನೊಂದು ಸಮಸ್ಯೆಯೆಂದರೆ ಈಗಾಗಲೇ ನಿರ್ಮಿತವಾಗಿರುವ ಶಕ್ಯತೆಯ ಬಳಕೆ. ದೊಡ್ಡ ಮತ್ತು ಮಧ್ಯಮ ಯೋಜನೆಗಳಿಗೆ ಸಂಬಂಧಿಸಿದಂತೆ ಸೃಷ್ಟಿಗೊಂಡ ನೀರಾವರಿ ಶಕ್ಯತೆ ಮತ್ತು ಬಳಕೆಯ ನಡುವಿನ ಅಂತರವು ದೊಡ್ಡದಿದೆ ಎಂದು ಹೇಳಲಾಗಿದೆ ಮತ್ತು ಕರ್ನಾಟಕವು ಇದಕ್ಕೆ ಹೊರತೇನಲ್ಲ. ಸೃಷ್ಟಿಸಿದ ಶಕ್ಯತೆ ಮತ್ತು ಬಳಕೆಯ ನಡುವಿನ ಅಂತರವು ದೊಡ್ಡದಿದೆ ಎಂದು ಕೆಲವು ಅಧ್ಯಯನಗಳು ತೋರಿಸಿದೆ. ಇಂತಹ ಅಂತರಕ್ಕೆ ಹಲವಾರು ಕಾರಣಗಳಿವೆ. ಜಲಾಶಯದಲ್ಲಿ ನೀರು ಶೇಖರಣೆಯಾಗಿದ್ದು, ಅಂತಹ ನೀರನ್ನು ಒಯ್ಯಲು ಕಾಲುವೆಗಳು ಜಾಲವು ನೀರು ನೀಡುವ ತೂಬಿನ ತನಕ ತಯಾರಾಗಿದ್ದರೆ ಶಕ್ಯತೆಯ ಸೃಷ್ಟಿಯಾಗಿದೆ ಎಂದು ಸಾರಬಹುದು. ನೀರು ಸರಬರಾಜು ತೂಬಿನ ತನಕ ಒದಗಿಸಲ್ಪಟ್ಟರೆ ಅಂತಹ ನೀರಿನ ಬಳಕೆಗೆ ಬರುವ ಅಡ್ಡಿ ಆತಂಕಗಳು ಏನು ಎಂಬ ಪ್ರಶ್ನೆಯನ್ನು ಅವಲೋಕಿಸುವುದು ಮುಖ್ಯ. ಇಲ್ಲಿ ಒಂದು ಊಹೆಯೇನೆಂದರೆ ರೈತರು ನೀರನ್ನು ತನ್ನಷ್ಟಕ್ಕೆ ಬಳಕೆ ಮಾಡುತ್ತಾರೆ ಮತ್ತು ಇಚ್ಛಿಸಿದ ಪ್ರದೇಶವನ್ನು ನೀರಾವರಿಗೆ ತರುತ್ತಾರೆ ಎಂದು. ಆದರೆ ವಾಸ್ತವದಲ್ಲಿ ಇದು ಹಾಗೆ ನೆಡೆಯುವುದಿಲ್ಲ. ನೀರಿನ ಬಳಕೆಗಾಗಿ ಭೂಮಿ ಸಮತಟ್ಟು ಮಾಡುವ, ಆಕಾರವನ್ನು ನೀಡುವ, ಜಮೀನಿನೊಳಗೆ ನೀರುಣಿಸುವ ಕಾಲುವೆಗಳ ರಚನೆ ಇತ್ಯಾದಿಗಳನ್ನೊಳಗೊಂಡಿರುವ ಜಮೀನಿನ ಅಭಿವೃದ್ಧಿಯನ್ನು ರೈತರು ಕೈಗೊಳ್ಳುವುದಿಲ್ಲ. ನೀರನ್ನು ಸ್ವೀಕರಿಸಲಿಕ್ಕೋಸ್ಕರ ಜಮೀನನ್ನು ತಯಾರುಗೊಳಿಸದ ವಿನಹ, ಆಶಿಸುವಷ್ಟು ಜಮೀನನ್ನು ನೀರಾವರಿಗೆ ಒಳಪಡಿಸುವುದು ಕಷ್ಟವೆನಿಸುವುದು. ಆದುದರಿಂದ ಮಣ್ಣನ್ನು ಸಮತಟ್ಟುಗೊಳಿಸುವುದು ಮತ್ತು ಅಭಿವೃದ್ಧಿಗೊಳಿಸುವುದನ್ನು

ಸಂಪೂರ್ಣಗೊಳಿಸದಿರುವುದು ಸೃಷ್ಟಿಸಿದ ನೀರಾವರಿ ಶಕ್ಯತೆ ಮತ್ತು ಬಳಕೆಯ ನಡುವಿನ ಅಂತರಕ್ಕೆ ಎಡೆ ಮಾಡುವ ಒಂದು ಕಾರಣವಾಗಿದೆ. ಇತರ ಸಮಸ್ಯೆಗಳೆಂದರೆ, ನೀರಿನ ಕರದ ಮೇಲಿನ ಊಹೆ, ಬೆಳೆಗಳ ವಿನ್ಯಾಸ, ಬೆಳೆಗೆ ನೀರಿನ ಅಗತ್ಯತೆ ಪ್ರಮಾಣ ಇತ್ಯಾದಿಗಳು ಹಾಗೂ ಕ್ಷೇತ್ರದ ನೈಜ ಪರಿಸ್ಥಿತಿಯೊಂದಿಗಿನ ಅದರ ಅನುವರ್ತನೆಯು ಸೃಷ್ಟಿಸಿದ ಶಕ್ಯತೆಯು ಬಳಕೆಯಾಗದಿರುವುದಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಹೆಚ್ಚಿನ ಮಟ್ಟಿಗೆ ವಿವರಿಸುತ್ತದೆ. ಆದುದರಿಂದ ದೊಡ್ಡ ಮತ್ತು ಮಧ್ಯಮ ಯೋಜನೆಗಳ ವಿರುದ್ಧ ಕಿರು ಯೋಜನೆಗಳು. ಇವುಗಳಲ್ಲಿ ಯಾವುದು ಸಮಂಜಸ ಎನ್ನುವ ಬಗ್ಗೆ ಒಂದು ತೀರ್ಪು ನೀಡುವುದು ಸರಿಯೆನಿಸಲಾರದು. ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ಕಾಡಾ)ಗಳನ್ನು ಇಂತಹ ಸಮಸ್ಯೆಗಳ ನಿರ್ವಹಣೆಗಾಗಿ ರಚಿಸಲಾಯಿತು. ಈ ಬಗ್ಗೆ ಅವುಗಳು ಹೆಚ್ಚೇನೂ ಕೊಡುಗೆ ನೀಡಲಾಗಿಲ್ಲ ಎಂಬುದಾಗಿ ಕಾಣುತ್ತದೆ. ಅವುಗಳ ಬಗೆಗಿನ ವಿವರಗಳು ಇಲ್ಲಿ ಸ್ಥಳಾವಕಾಶ ಪಡೆದಿಲ್ಲ.

**ಕಿರು ನೀರಾವರಿ**

ಕಿರು ನೀರಾವರಿ ಯೋಜನೆಗಳಲ್ಲಿ ಗರಿಷ್ಠ ಶಕ್ಯತೆ ೧೦ ಲಕ್ಷ ಹೆಕ್ಟೇರುಗಳು. ೧೯೯೨ರವರೆಗೆ ಲಭ್ಯವಿರುವ ಅಂಕಿ ಸಂಖ್ಯೆಗಳಂತೆ, ಕಿರು ನೀರಾವರಿಯಲ್ಲಿ ಒಟ್ಟು ಸೃಷ್ಟಿಸಿದ ಶಕ್ಯತೆಯು ೯ ಲಕ್ಷ ಹೆಕ್ಟೇರುಗಳು. ಇನ್ನು ಕೇವಲ ೧೦ ಶೇಕಡ ಬಾಕಿ ಉಳಿದಿರುವ ಶಕ್ಯತೆಯನ್ನು ಬಳಕೆ ಮಾಡಬೇಕಾಗಿದೆ. ಕಿರು ನೀರಾವರಿಯ ವಿಸ್ತರಣೆಗೆ ಹೆಚ್ಚೇನೂ ಅವಕಾಶವಿಲ್ಲದಿರುವ ಕಾರಣ, ದೊರೆಯುವ ನೀರಿನ ಸಂಪೂರ್ಣ ಬಳಕೆಗಾಗಿ ದೊಡ್ಡ ಮತ್ತು ಮಧ್ಯಮ ಯೋಜನೆಗಳಿಗೆ ಗಮನವೀಯುವುದು ಸ್ಪಷ್ಟ ಆಯ್ಕೆಯಾಗಿದೆ.

ಅಣೆಕಟ್ಟುಗಳು ಮತ್ತು ಏತ ನೀರಾವರಿ ಯೋಜನೆಗಳು, ಕೆರೆಗಳು ಕಿರು ನೀರಾವರಿ (ಭೂಮಿಯ ಮೇಲಿನ ನೀರು)ಯ ಪ್ರಧಾನ ಮೂಲಗಳು. ಕಿರು ನೀರಾವರಿಯ ಶಕ್ಯತೆಯಲ್ಲಿ ಕೆರೆಗಳ ಕಾಣಿಕೆ ಶೇಕಡಾ ೭೪.೮ ಇದೆ. ಆದರೆ ಕೆರೆಗಳಲ್ಲಿ ತುಂಬುವ ಕಾಲಾವಧಿಯಲ್ಲಿ ಶಕ್ಯತೆಯನ್ನು ಕಡಿಮೆಗೊಳಿಸುತ್ತದೆ. ಆದುದರಿಂದ, ಸೃಷ್ಟಿಸಿದ ಶಕ್ಯತೆಯನ್ನು ನಿರಂತರವಾಗಿರಿಸಿಕೊಳ್ಳಲು ನಿಗದಿತ ಸಮಯಗಳಲ್ಲಿ ಕೆರೆಗಳ ಹೂಳೆತ್ತುವುದು ಅಗತ್ಯವೆನಿಸುತ್ತದೆ. ಕೆರೆಯ ನೀರಾವರಿಯಿಂದ ಲಾಭಗಳು ಹಲವು. ನೀರಾವರಿ ಸೌಲಭ್ಯವನ್ನು ಒದಗಿಸುವುದರೊಂದಿಗೆ, ಕೆರೆಗಳು ಅಂತರ್ಜಲ ಹರಿವುಗಳನ್ನು ಪುನರುಜ್ಜೀವನಗೊಳಿಸುವುದು. ಮುಂಗಾರಿನಲ್ಲಿ ಭೂಮಿಯ ಮೇಲ್ಮೆಯಲ್ಲಿ ಹರಿದು ಹೋಗುವ ನೀರನ್ನು ಹಿಡಿದಿಟ್ಟು ಕೊಳ್ಳಲು ಹಾಗೂ, ರಾಜ್ಯದಲ್ಲಿ ಪ್ರವಾಹಗಳನ್ನು ತಡೆಗಟ್ಟಲೂ ಇದು ಸಾಧನವೆನಿಸುತ್ತದೆ. ಕೆರೆಯ ಬದಿಯಂಗಳಗಳಲ್ಲಿ ಮರಗಳನ್ನು ಬೆಳೆಸಲು ಸಾಧ್ಯವಿದ್ದು ಪ್ರಾಕೃತಿಕ ಸಮತೋಲನವನ್ನು ಇದು ಕಾಪಾಡುತ್ತದೆ.

ಕೆರೆಗಳ ವಿವಿಧ ಲಾಭಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅದರ ಕಾಪಾಡುವಿಕೆ ಹಾಗೂ ನಿರ್ವಹಣೆಗೆ ಹೆಚ್ಚಿನ ಆದ್ಯತೆ ನೀಡಬೇಕಾಗುತ್ತದೆ. ಹೂಳುಗಳಿಂದ ಕಳೆದುಕೊಂಡ ನೀರಾವರಿ ಶಕ್ಯತೆಯನ್ನು ಪುನರ್‌ಸ್ಥಾಪಿಸುವಂತಹ ಕಾರ್ಯಕ್ರಮಗಳನ್ನು ಹೊಂದಿರಬೇಕಾಗುತ್ತದೆ. ಕೆರೆ ನಿರ್ವಹಣೆಯ ಸಾಂಪ್ರಾದಾಯಿಕ ವಿಧಾನವಾದ ಕೆರೆ ಪಂಚಾಯ್ತಿಗಳನ್ನು, ಹೆಚ್ಚಿನ ರೈತರು ಭಾಗವಹಿಸುವಂತೆ ಪುನರ್‌ಸ್ಥಾಪಿಸಬೇಕು.

**ಅಂತರ್ಜಲ ನೀರಾವರಿ**

ನಮ್ಮ ರಾಜ್ಯದಲ್ಲಿ ಕೃಷಿ ಉದ್ದೇಶಗಳಿಗಾಗಿ ಅಂತರ್ಜಲವನ್ನು ಉಪಯೋಗಿಸುವುದು ಪುರಾತನ ವಿಧಗಳಲ್ಲಿ ಒಂದು. ಬರ ಪೀಡಿತ ಪ್ರದೇಶಗಳಲ್ಲಿ ಸಾಂಪ್ರದಾಯಿಕವಾಗಿ ಅಗೆದ ಬಾವಿಗಳು ನೀರಾವರಿಯ ಮುಖ್ಯ ಸಾಧನವಾಗಿತ್ತು. ಆದರೆ, ಕೊಳುವೆ ಬಾವಿಯ ಪರಿಚಯದೊಂದಿಗೆ ಆಳನೆಲದಲ್ಲಿರುವ ನೀರಿನ ಸೆಲೆಗಳನ್ನು ರೈತರು ನೀರಾವರಿ ಉದ್ದೇಶಗಳಿಗಾಗಿ ಪಡೆಯುವಂತಾಯಿತು. ಅಂತರ್ಜಲದ ಬಳಕೆಯ ತಾಂತ್ರಿಕತೆಯನ್ನು ಕಂಡು ಹಿಡಿದಿರುವುದು, ಆಳನೆಲದ ನೀರಿನ ಅತಿ ಬಳಕೆಗೆ ದಾರಿ ಮಾಡಿದೆ, ಇದರಿಂದ ಪ್ರಾಕೃತಿಕ ಮತ್ತು ಇತರ ಸಾಮಾಜಿಕ-ಆರ್ಥಿಕ ಸಮಸ್ಯೆಗಳು ಗೋಚರಿಸಿವೆ.

ಅಂತರ್ಜಲ ಶಕ್ಯತೆಯು ರಾಜ್ಯದಲ್ಲಿ ೧೦ ಲಕ್ಷ ಹೆಕ್ಟೇರುಗಳಾಗಿರುತ್ತದೆ. ಅಂತರ್ಜಲ ಯೋಜನೆಗಳಿಂದ ಈ ತನಕ ೭.೬೪ ಲಕ್ಷ ಹೆಕ್ಟೇರ್‌ಗಳ ಶಕ್ಯತೆಯು ಸೃಷ್ಟಿಯಾಗಿದೆ. ಇದರ ೨೫% ಶಕ್ಯತೆಯ ಇನ್ನು ಬಳಕೆಗೆ ಬರಬೇಕಷ್ಟೇ. ಅಂತರ್ಜಲದ ಉತ್ಪನ್ನವು ಮಳೆ ನೀರಿನ ಪ್ರಮಾಣದ ಮೇಲೆ ಅವಲಂಬಿಸಿದೆ ಎಂದು ಚೆನ್ನಾಗಿ ತಿಳಿದಿರುವ ವಿಷಯವಾಗಿದೆ. ಶಕ್ಯತೆಯನ್ನು ಅಂದಾಜಿಸುವ ತಾಂತ್ರಿಕತೆಯು ಕಾಲ್ಪನಿಕ ಗುಣಲಕ್ಷಣಗಳ ಸಮೀಪವರ್ತಿಯಾಗಿದೆ. ಆದುದರಿಂದ ಶಕ್ತತೆಯ ನಿಖರತೆಯ ಮಾಪನ ಮತ್ತು ಅದರ ವಿಶ್ವಾಸಾರ್ಹತೆಯು ಅಂಕಿಗಳ ಮೂಲ ಹಾಗೂ ಇತರ ಗುಣಲಕ್ಷಣಗಳ ಮೇಲೆ ಅವಲಂಬಿಸಿದೆ.

೧೯೮೭೮ರವರೆಗೆ ದೊರಕಿರುವ ಅಂಕಿ ಸಂಖ್ಯೆಗಳಂತೆ ೫ ಲಕ್ಷಕ್ಕೂ ಮೇಲ್ಪಟ್ಟು ತೋಡುಬಾವಿಗಳಿವೆ. ಹಾಗೂ ೮೫ ಸಾವಿರದಷ್ಟು ಕೊಳವೆಬಾವಿಗಳಿವೆ. ಹಲವಾರು ಜಿಲ್ಲೆಗಳಲ್ಲಿ ನೀರಿನ ಮಟ್ಟವು ಕಡಿಮೆಯಾಗಿರುವುದರಿಂದ ಹೆಚ್ಚುವರಿ ಬಾವಿಗಳಿಗೆ ಅವಕಾಶ ಅಷ್ಟೇನೂ ಪ್ರೋತ್ಸಾಹದಾಯಕವಾಗಿಲ್ಲ. ಕಾಲುವೆ ನೀರಾವರಿ ದೆಸೆಯಿಂದಾಗಿ ಕಾಲುವೆ ಆಧೀನ ಪ್ರದೇಶಗಳಲ್ಲಿ ಅಂತರ್ಜಲದ ಸ್ಥಿತಿಯು ಸುಧಾರಿಸುವ ಸಾಧ್ಯತೆಗಳಿವೆ. ಅಚ್ಚುಕಟ್ಟು ಪ್ರದೇಶಗಳಲ್ಲಿ ಕಾಲುವೆ ಮತ್ತು ಅಂತರ್ಜಲದ ಸಂಯುಕ್ತ ಬಳಕೆಯನ್ನು ಪ್ರೋತ್ಸಾಹಿಸುವುದು ಸಹಾಯಕವೆನಿಸ ಬಹುದು.

## ನೀತಿ ಧೋರಣೆಯ ಸಂಧಿಗ್ಧಗಳು ಮತ್ತು ಉಪಸಂಹಾರ

ಇಲ್ಲಿ ನಿರೂಪಿಸಲಾದ ರಾಜ್ಯದ ನೀರಾವರಿ ಅಭಿವೃದ್ಧಿಯ ನಿಜವಾದ ಸ್ಥಿತಿಯ ಒಂದು ಮೇಲ್ನೋಟವು, ರಾಜ್ಯದಲ್ಲಿ ಲಭ್ಯವಿರುವ ಜಲಸಂಪನ್ಮೂಲದ ಸಂಪೂರ್ಣ ಮತ್ತು ಪರಿಣಾಮಕಾರಿ ಬಳಕೆಯನ್ನು ಸಾಧ್ಯಗೊಳಿಸುವ, ನೀತಿ ಧೋರಣೆಯನ್ನು ರೂಪಿಸುವ ಸಮಯದಲ್ಲಿ ಅವಲೋಕಿಸಬೇಕಾದ ಹಲವಾರು ಸಮಸ್ಯೆಗಳನ್ನು ಮುಂದಿಟ್ಟಿವೆ. ನೀರಾವರಿಯಲ್ಲಿ ಬೃಹತ್ತಾದ ಹಣ ಹೂಡಿಕೆಯು ನಡೆದಿದೆ. ಇದರ ಫಲಿತಾಂಶವಾಗಿ ನೀರಾವರಿ ಶಕ್ಯತೆಯು ಗಮನಾರ್ಹವಾಗಿ, ಮೊದಲನೇ ಪಂಚ ವಾರ್ಷಿಕ ಯೋಜನೆಯಲ್ಲಿ ೭ ಲಕ್ಷ ಹೆಕ್ಟೇರ್‌ನಿಂದ, ೧೯೯೨ನೇ ಕೊನೆಗೆ ೩೦ ಲಕ್ಷ ಹೆಕ್ಟೇರ್‌ಗಳಷ್ಟು ಏರಿದೆ. ಯೋಜನೆಗಳ ಅವಧಿಯಲ್ಲಿ ಮಧ್ಯಮ ಮತ್ತು ದೊಡ್ಡ ಯೋಜನೆಗಳಿಗೆ ಒತ್ತು ನೀಡಿರುವುದು, ಕೆಲವರ ದೃಷ್ಟಿಯಲ್ಲಿ ತಪ್ಪು ಮತ್ತು ಪೂರ್ವಾಗ್ರಹ ಪೀಡಿತವೆಂದು ಭಾವಿಸಲ್ಪಟ್ಟಿತ್ತು. ಒಂದು ಬದಿಯಲ್ಲಿ ಅಂತರ್‌ರಾಜ್ಯ ಜಲವಿವಾದ ಹಾಗೂ ಮತ್ತೊಂದು ಬದಿಯಲ್ಲಿ ಕೃಷಿಉತ್ಪನ್ನವನ್ನು ಹೆಚ್ಚಿಸುವುದಕ್ಕಾಗಿ ನೀರಾವರಿಯ ಶಕ್ಯತೆಯನ್ನು ಹೆಚ್ಚಿಸುವುದು, ಇಂತಹ ಒತ್ತಡಗಳಿಂದಾಗಿ, ರಾಜ್ಯಕ್ಕೆ ದೊಡ್ಡ ಮತ್ತು ಮಧ್ಯಮ ಪ್ರಮಾಣದ ಯೋಜನೆಗಳ ಮೇಲೆ ಕೇಂದ್ರಿಕೃತಗೊಳ್ಳದ ವಿನಃ ಬೇರೆ ದಾರಿಗಳು ಇರಲಿಲ್ಲ. ದೊಡ್ಡ ಮತ್ತು ಮಧ್ಯಮ ಪ್ರಮಾಣದ ಯೋಜನೆಗಳನ್ನು ಪೂರ್ಣಗೊಳಿಸಲು ಹಾಗೂ ಬಾಕಿಯಿರುವ ೧೮.೨ ಲಕ್ಷ ಹೆಕ್ಟೇರ್‌ಗಳ ಶಕ್ಯತೆಯನ್ನು ಸಾಧಿಸಲು ರಾಜ್ಯಕ್ಕೆ ರೂ. ೫೨೪೦ ಕೋಟಿ ಬೇಕಾಗಿದೆ. ಬಹು ಸಂಖ್ಯೆಯಲ್ಲಿ ನೀರಾವರಿ ಯೋಜನೆಗಳು ಅಪೂರ್ಣಗೊಂಡು, ಹಲವಾರು ವರ್ಷಗಳವರೆಗೆ ಎಳೆದಾಡಿರುವುದನ್ನು ಗಮನಿಸುವುದು ಅಗತ್ಯ. ಅವುಗಳಲ್ಲಿ ಕೆಲವು ೪೦ ವರ್ಷಗಳಿಂದ ಇನ್ನೂ ನಿರ್ಮಾಣದ ಹಂತದಲ್ಲೇ ಇವೆ. ಪೂರ್ಣಗೊಳಿಸುವಲ್ಲಿ ಆಗಿರುವ ಅಂತಹ ವಿಳಂಬಗಳು, ಹೆಚ್ಚು ಸಮಯವನ್ನು ತೆಗೆದುಕೊಳ್ಳುವುದರೊಂದಿಗೆ ವೆಚ್ಚಗಳಲ್ಲಿ ಹೆಚ್ಚಳವನ್ನು ಉಂಟುಮಾಡಿದೆ. ಇದರ ಫಲಿತಾಂಶವಾಗಿ ಸೃಷ್ಟಿಸಿದ ನೀರಾವರಿ ಶಕ್ಯತೆಯ ವೆಚ್ಚ, ಪ್ರತಿ ಹೆಕ್ಟೇರ್‌ಗೆ ಹೆಚ್ಚಳವಾಗಿದೆ ಹಾಗೂ ಇದು ಹಲವಾರು ಪರಿಸರದ ಸಮಸ್ಯೆಗಳನ್ನು ಸೃಷ್ಟಿಸಿದೆ. ಉದಾಹರಣೆಗೆ, ಹಲವಾರು ಕಡೆ ಅಣೆಕಟ್ಟುಗಳನ್ನು ನಿರ್ಮಿಸಿ ನೀರಿನ ಸಂಗ್ರಹಣೆ ಮಾಡಲಾಗಿದೆ. ಆದರೆ ನೀರು ಸರಬರಾಜಿನ ಜಾಲ ಇನ್ನೂ ಪೂರ್ಣವಾಗಬೇಕಷ್ಟೆ. ಹಾಗೆ, ನೀರು ದೊರಕುವ ಪ್ರಾರಂಭಿಕ ವರ್ಷಗಳಲ್ಲಿ ರೈತರು ಬೆಳೆಸಬೇಕಾದ ಬೆಳೆ ವಿನ್ಯಾಸವನ್ನು ಉಲ್ಲಂಘಿಸಿ, ನೀರು ಹೆಚ್ಚಾಗಿ ಬೇಕಾಗಿರುವ ಭತ್ತ ಮತ್ತು ಕಬ್ಬು ಬೆಳೆಸಿ ಮಣ್ಣಿನಲ್ಲಿ ಲವಣ ಮತ್ತು ಕ್ಷಾರದಂಶ ಹೆಚ್ಚುವಂತಹ ಸಮಸ್ಯೆಗಳನ್ನು ತಂದೊಡ್ಡಿವೆ. ಆದುದರಿಂದ, ಹೊಸ ಯೋಜನೆಗಳನ್ನು ಕೈಗೊಳ್ಳುವ ಮೊದಲು ಚಾಲ್ತಿಯಲ್ಲಿ ಇರುವ ಯೋಜನೆಗಳಿಗೆ ಗಮನಕೊಟ್ಟು ಪೂರ್ಣಗೊಳಿಸುವುದು ಈ ಸಮಯದಲ್ಲಿ ಸೂಕ್ತ.

ಮಧ್ಯಮ ಮತ್ತು ದೊಡ್ಡ ಪ್ರಮಾಣದ ಯೋಜನೆಗಳಲ್ಲಿ ಸಮರ್ಥ ಮತ್ತು

ಮಿತವ್ಯಯದ ನೀರಿನ ಬಳಕೆ ಖಚಿತವಾಗಿಸಲು 'ಕೃಷಿ ಭೂಮಿಯ ಅಭಿವೃದ್ಧಿ'ಗೆ ಒತ್ತು ಕೊಡಬೇಕು. ಸೃಷ್ಟಿಸಿದ ನೀರಾವರಿ ಶಕ್ಯತೆ ಹಾಗೂ ಅದರ ಬಳಕೆಯಲ್ಲಿನ ಅಂತರವನ್ನು ಕಡಿಮೆಗೊಳಿಸಲು, ಅಣೆಕಟ್ಟು ನಿರ್ಮಾಣ, ಕಾಲುವೆಗಳ ಜಾಲ ಮತ್ತು 'ಕೃಷಿ ಭೂಮಿಯ ಅಭಿವೃದ್ಧಿ'ಯನ್ನು ಒಂದೇ ಸಮಯದಲ್ಲಿ ಕೈಗೊಳ್ಳಬೇಕಾಗುತ್ತದೆ. ರೈತರು ಜಮೀನಿಗೆ ನೀರು ಪಡೆಯುವ ಮೊದಲು ಕೃಷಿ ಭೂಮಿ ಅಭಿವೃದ್ಧಿಯ ಲಾಭಗಳನ್ನು ರೈತರಿಗೆ ತಿಳಿಸುವುದು ಹಾಗೂ, ಕನಿಷ್ಠ ಒಂದು ವರ್ಷ ಜಮೀನಿನ ಅಭಿವೃದ್ಧಿಯ ಕೆಲಸ ಕೈಗೊಳ್ಳುವಂತೆ ಪ್ರೇರೇಪಿಸುವುದು ಅಗತ್ಯವಿದೆ. ಅಂತಹ ಪ್ರೇರೇಪಣೆಯು ಈಗ ಅನಿಶ್ಚಯತೆ ತುಂಬಿರುವ, ಬೇಕೆನಿಸುವಷ್ಟು ಹಾಗೂ ಸಮಯಕ್ಕೆ ಸರಿಯಾಗಿ ಕ್ಷೇತ್ರ ಮಟ್ಟದಲ್ಲಿ ನೀರು ಸರಬರಾಜನ್ನು ನೀರಾವರಿ ಇಲಾಖೆಯಿಂದ ಖಂಡಿತಗೊಳಿಸುವುದರ ಮೇಲೆ ನಿಂತಿದೆ.

ರಾಜ್ಯದಲ್ಲಿ ಪ್ರಸ್ತುತವಿರುವ ದೊಡ್ಡ ಮತ್ತು ಮಧ್ಯಮ ಯೋಜನೆಗಳಲ್ಲಿ ಚರಂಡಿ ವ್ಯವಸ್ಥೆಯನ್ನು ಸಂಪೂರ್ಣವಾಗಿ ಕಡೆಗಣಿಸಲಾಗಿದೆ. ಇದರ ಫಲಿತಾಂಶವಾಗಿ ಸಾವಿರಾರು ಹೆಕ್ಟೇರುಗಳಷ್ಟು ಫಲವತ್ತಾದ ಜಮೀನು ಕೃಷಿಯಿಂದ ಹೊರತಾಗಿದೆ. ತುಂಗಭದ್ರಾ ಯೋಜನೆಯೊಂದರಲ್ಲೇ ೪೦ ಸಾವಿರ ಹೆಕ್ಟೇರುಗಳಷ್ಟು ನೀರು ನಿಲ್ಲುವಿಕೆ, ಲವಣ ಮತ್ತು ಕ್ಷಾರಗಳಿಂದ ಭಾಧಿತವಾಗಿದೆ. ಕೃಷ್ಣಾ ನದಿ ದಂಡೆಗಳಲ್ಲಿ ಕಪ್ಪು ಮಣ್ಣು ಹೆಚ್ಚು ಪ್ರಚೋದನಕಾರಿಯಾಗಿದೆ. ಚರಂಡಿ ಒದಗಿಸುವುದನ್ನು ಯೋಜನೆ ವಿನ್ಯಾಸದ ಮತ್ತು ನಿರ್ಮಾಣದ ಒಂದು ಅವಿಭಾಜ್ಯ ಅಂಗವೆಂದೇ ತೆಗೆದುಕೊಳ್ಳಬೇಕು. ನೀರು ನಿಲ್ಲುವಿಕೆಯಿಂದ ಈಗಾಗಲೇ ಬಾಧಿತವಾಗಿರುವ ಜಮೀನುಗಳನ್ನು ಪುನರುಜ್ಜೀವನಗೊಳಿಸಲು ನಿರ್ಮಾಣದಲ್ಲಿರುವ ಎಲ್ಲಾ ಯೋಜನೆಗಳಿಗೂ ಚರಂಡಿಯನ್ನು ನೀಡುವಂತಹ ಹೆಜ್ಜೆಯನ್ನು ತುರ್ತಾಗಿ ಇಡಬೇಕಾಗಿದೆ. ಇಲ್ಲವಾದರೆ ಭವಿಷ್ಯದ ಉತ್ಪಾದನಾ ಸಾಮರ್ಥ್ಯವು ಬಾಧಿತವಾಗುವುದು. ನೀರಾವರಿ ಆಧೀನ ಪ್ರದೇಶಗಳಲ್ಲಿ ಕೋಡಿಗಳನ್ನು ನೀಡುವುದರೊಂದಿಗೆ, ಎಲ್ಲಾ ನೀರಾವರಿ ಯೋಜನೆಗಳಲ್ಲು ಪ್ರಕೃತಿದತ್ತಾವಾಗಿ ಈಗಾಗಲೇ ಇರುವ ಕೋಡಿಗಳನ್ನು ರಕ್ಷಿಸುವ ಮತ್ತು ನಿರ್ವಹಿಸುವ ಹೆಚ್ಚಿನ ಅಗತ್ಯತೆಯೂ ಇದೆ. ನಿಸರ್ಗದತ್ತವಾದ ಕೋಡಿಗಳನ್ನು ವಶಪಡಿಸುವ ಒಂದು ಶಾಸವನ್ನು ಸರ್ಕಾರ ಜಾರಿಗೊಳಿಸಬಹುದು ಹಾಗೂ ಅವುಗಳನ್ನು ನಿರ್ವಹಿಸಲು ಆಗಾಗ್ಗೆ ಹೂಳೆತ್ತುವ ಮತ್ತು ಕಳೆಗಳನ್ನು ತೆಗೆಯುವ ಕೆಲಸಕ್ಕೆ ಕೈಹಾಕಬಹುದು. ಇದು ದೀರ್ಘಾವಧಿಯಲ್ಲಿ ಮಣ್ಣಿನ ಮೇಲಾಗಿರುವ ದುಷ್ಪರಿಣಾಮಗಳ ಸಾಂದ್ರತೆಯನ್ನು ಕಡಿಮೆಗೊಳಿಸಬಹುದು.

ರಾಜ್ಯದಲ್ಲಿ ಎಲ್ಲಾ ದೊಡ್ಡ ಮತ್ತು ಮಧ್ಯಮ ಯೋಜನೆಗಳಲ್ಲಿ ಮೇಲ್ಮೈಯ ಹಾಗೂ ಅಂತರ್ಜಲದ ಸಂಯುಕ್ತ ಬಳಕೆಯನ್ನು ಪ್ರೋತ್ಸಾಹಿಸಬೇಕು. ಇದು ನೀರು ನಿಲ್ಲುವಿಕೆಯಂತಹ ಪ್ರತಿಕೂಲ ಪರಿಣಾಮಗಳನ್ನು ತಪ್ಪಿಸುವುದಲ್ಲದೆ ಲಭ್ಯವಿರುವ ನೀರಿನ ಪರಿಣಾಮಕಾರಿ ಬಳಕೆಯನ್ನು ಖಚಿತ ಪಡಿಸುತ್ತದೆ. ಇನ್ನು, ಹೆಚ್ಚಿನ ರೈತರು

ದಿನದಲ್ಲಿ ನೀರನ್ನು ಬಳಕೆ ಮಾಡಲು ಇಚ್ಛಿಸುತ್ತಾರೆ. ಇದರಿಂದಾಗಿ ರಾತ್ರಿಯಲ್ಲಿ ಹರಿಯುವ ನೀರು ನಿರರ್ಥಕವಾಗುತ್ತದೆ. ರೈತರು ರಾತ್ರಿಯಲ್ಲಿ ನೀರನ್ನುಬಳಕೆ ಮಾಡುವಂತೆ ಪ್ರೇರಣೆ ನೀಡುವ ಸೂಕ್ತ ಹೆಜ್ಜೆಗಳನ್ನು ತೆಗೆದುಕೊಳ್ಳಬೇಕು. ಇಲ್ಲವಾದರೆ, ನೀರಾವರಿ ಅಧೀನ ಪ್ರದೇಶಗಳಲ್ಲಿ, ಜಮೀನುಗಳಲ್ಲಿ ಚಿಕ್ಕ ಕೆರೆಗಳನ್ನು ತೋಡಿ ರಾತ್ರಿ ಹರಿಯುವ ನೀರನ್ನು ಸಂಗ್ರಹಿಸಿ ದಿನದ ಹೊತ್ತಿನಲ್ಲಿ ಉಪಯೋಗಿಸಿಕೊಳ್ಳಲು ಪ್ರೋತ್ಸಾಹಿಸಬೇಕು.

ಕಾಲುವೆ ನೀರಾವರಿಯನ್ನು ನೀಡಲು ಕಡಿಮೆ ಸಾಧ್ಯತೆಯಿಂದ ಹಿಂದುಳಿದ ಜಿಲ್ಲೆಗಳಲ್ಲಿ ಅಂತರ್ಜಲವನ್ನು ಸೇರಿ ಕಿರು ನೀರಾವರಿಯನ್ನು ನೀಡಲು ಅಥವಾ ವಿಸ್ತರಿಸಲು ಆದ್ಯತೆಯನ್ನು ನೀಡಬೇಕು. ಆಳ ಅಂತರ್ಜಲವನ್ನು ಪಡೆಯುವ ಸಾಧ್ಯತೆಯಿರುವಲ್ಲಿ, ರಾಜ್ಯವು ಆಳ ಕೊಳವೆ ಬಾವಿಗಳನ್ನು ಹಾಕುವ ಬಗ್ಗೆ ಆಲೋಚಿಸಬೇಕು. ಈಗ ಈ ಜಿಲ್ಲೆಗಳಲ್ಲಿರುವ ಸಂಪೂರ್ಣ ನೀರಾವರಿ ಶಕ್ಯತೆಯನ್ನು ಒಂದು ದಶಕದೊಳಗೆ ಬಳಕೆಗೆ ಬರುವಂತಹ ವಿಶಾಲ ದೃಷ್ಟಿಕೋನದ ಒಂದು ಯೋಜನೆಯನ್ನು ತಯಾರಿಸಬಹುದು, ಇದು ಅಂತರ್ ಪ್ರಾದೇಶಿಕ ಅಸಮತೆಯನ್ನು ಕಡಿಮೆ ಮಾಡಬಹುದು. ಅಂತರ್ಜಲ ಸಾಮರ್ಥ್ಯದ ಬಳಕೆಗಾಗಿ ಹಿಂದುಳಿದ ಜಿಲ್ಲೆಗಳಲ್ಲಿ ಸಾರ್ವಜನಿಕ ಹಣ ಹೂಡಿಕೆಯು ಹೆಚ್ಚಾಗಬೇಕು. ದೊಡ್ಡ ಮತ್ತು ಮಧ್ಯಮ ಯೋಜನೆಗಳಂತೆ ಬಂಡವಾಳ ಖರ್ಚನ್ನು ಸರ್ಕಾರವು ಭರಿಸಬೇಕು. ಹಾಗೂ ಚಾಲನೆ ಮತ್ತು ನಿರ್ವಹಣೆಯ ಜವಾಬ್ದಾರಿಯನ್ನು ರೈತರಿಗೆ ನೀಡಬೇಕು. ಇದರಿಂದ ಪ್ರಯೋಜನ ಪಡೆಯುವ ರೈತರಿಂದ ಬಂಡವಾಳ ಖರ್ಚನ್ನು ಸುಲಭ ಕಂತುಗಳಲ್ಲಿ ವಾಪಾಸು ಪಡೆಯುವ ಅವಕಾಶವನ್ನು ಕಲ್ಪಿಸಬೇಕು.

ದೊಡ್ಡ ಮತ್ತು ಮಧ್ಯಮ ಯೋಜನೆಗಳಲ್ಲಿ ನೀರಿನ ನಿರ್ವಹಣೆಯ ನಿರ್ಲಕ್ಷ್ಯಕ್ಕೆ ಗುರಿಯಾಗಿರುವ ಇನ್ನೊಂದು ವಿಷಯವಾಗಿದೆ. ಇದಕ್ಕೆ ಆದ್ಯತೆ ನೀಡಬೇಕು. ನೀರಿನ ಸಮರ್ಥ ಬಳಕೆಯನ್ನು ನಿಜವಾಗಿಸಲು ನೀರು ಬಳಕೆದಾರರ ಸಂಘ ಅಥವಾ ನೀರಾವರಿ ಪಂಚಾಯತ್‌ಗಳನ್ನು ರಚಿಸುವುದು ಅತ್ಯಂತ ಅಗತ್ಯವಾಗಿದೆ. ಹಂಚುವಿಕೆಯ ವ್ಯವಸ್ಥೆಯು, ನೀರಾವರಿ ಪಂಚಾಯತನ್ನು ನಿರ್ಮಿಸುವ ಘಟಕವಾಗಬಹುದು. ಹಂಚುವಿಕೆಯ ವ್ಯವಸ್ಥೆಯ ಮಟ್ಟದಲ್ಲಿ ಸರ್ಕಾರವು ಪೂರ್ವ ನಿರ್ಧಾರಿತ ಗುಣಮಟ್ಟದ ನೀರನ್ನು ಪೂರೈಸುವ ಜವಾಬ್ದಾರಿಯನ್ನು ಹೊರಬಹುದು ಮತ್ತು ಅದರ ಹಂಚಿಕೆಯ ಆಯ್ಕೆಯನ್ನು ರೈತರಿಗೇ ಬಿಟ್ಟು ಕೊಡಬಹುದು. ಹೆಚ್ಚಿನ ಪ್ರಮಾಣದ ನೀರನ್ನು ಪೂರೈಸಿದಾಗ ರೈತರಿಗೆ ನೀರಾವರಿ ಶುಲ್ಕವನ್ನು ವಿಧಿಸಬಹುದು. ಇದನ್ನು ರಾಜ್ಯದ ಕೆಲವು ನೀರಾವರಿ ಆಧೀನ ಪ್ರದೇಶಗಳಲ್ಲಿ ಪ್ರಯೋಗಾತ್ಮಕ ನೆಲೆಯಲ್ಲಾದರೂ ಪ್ರಯತ್ನಿಸಬಹುದು. ಆರ್ಥಿಕ ಉದಾರೀಕರಣದಂತಹ ಸರ್ಕಾರದ ಸಮಕಾಲೀನ ನೀತಿಗಳ ದೃಷ್ಟಿಯಿಂದ, ರೈತರ ಭಾಗವಹಿಸುವಿಕೆ ಹಾಗೂ ಅದರ ಫಲಿತಾಂಶವಾಗಿ ಹಂತ ಹಂತವಾಗಿ ಖಾಸಗೀಕರಣವು ಅತ್ಯಂತ ಸೂಕ್ತವಾಗುತ್ತದೆ.

ಕೆರೆಗಳ ನೀರಾವರಿಗೆ ಆದ್ಯತೆ ನೀಡುವುದು ಪ್ರಾಮುಖ್ಯವೆನಿಸುತ್ತದೆ. ಕೆರೆಗಳ ನೀರಾವರಿಯಲ್ಲಿ ಶಕ್ಯತೆಯನ್ನು ಸಂರಕ್ಷಿಸಲು ಹಾಗೂ ಸ್ಥಿರವಾಗಿಸಲು ಕಾಲ ಕಾಲಕ್ಕೆ ಹೂಳೆತ್ತುವ ಕಾರ್ಯವನ್ನು ಕೈಗೊಳ್ಳಬೇಕು. ರಾಜ್ಯದಲ್ಲಿ ಹೆಚ್ಚುತ್ತಿರುವ ಜಲಾನಯನ ಕಾರ್ಯಕ್ರಮಗಳಿಂದಾಗಿ, ಪ್ರಸ್ತುತವಿರುವ ಕೆರೆಗಳ ನೀರಾವರಿ ಶಕ್ಯತೆಯು, ಮೂಲ ಪ್ರದೇಶದಲ್ಲಿ ನೀರು ಹರಿದು ಹೋಗುವ ವಿಧಾನದ ಬದಲಾವಣೆಯಿಂದಾಗಿ ಕೆಟ್ಟದಾಗಿ ಬಾಧಿತವಾಗುವುದು. ಅದೇ ಸಮಯದಲ್ಲಿ ಜಲಾನಯನ ನಿರ್ವಹಣೆಯು ಅಂತರ್ಜಲ ಪುನರುಜ್ಜೀವನಗೊಳಿಸುವಲ್ಲಿ ಸಹಕಾರಿಯಾಗಿದೆ. ಆದುದರಿಂದ ನೀರಾವರಿ ಯೋಜನೆಗಳಲ್ಲಿ ನೀರಾವರಿ ಶಕ್ಯತೆಯನ್ನು ಹೆಚ್ಚಿಸಲು, ಅಂತರ್ಜಲ ಮತ್ತು ಕೆರೆಗಳ ಮೂಲ ಪ್ರದೇಶಗಳಲ್ಲಿ ಮೇಲ್ಮೈಯಲ್ಲಿ ಹರಿಯುವ ಮಳೆ ನೀರನ್ನು ಬಳಕೆ ಮಾಡಲು ಒಂದು ಸಮಗ್ರ ಪದ್ಧತಿಯ ಅಗತ್ಯವಿದೆ.

**ಉಲ್ಲೇಖಗಳು:**

೧. ಕರ್ನಾಟಕದಲ್ಲಿ ನೀರಾವರಿ (೧೯೯೩-೯೪) ಕರ್ನಾಟಕ ಸರ್ಕಾರದ ನೀರಾವರಿ ಇಲಾಖೆ.

೨. VIIIನೇ ಪಂಚವಾರ್ಷಿಕ ಯೋಜನೆ (೧೯೯೦-೯೫)ಯ ದೊಡ್ಡ ಮತ್ತು ಮಧ್ಯಮ ನೀರಾವರಿ ಕಾರ್ಯಕ್ರಮಗಳ ಕಾರ್ಯ ತಂಡದ ವರದಿ, ಕರ್ನಾಟಕ ಸರ್ಕಾರದ ನೀರಾವರಿ ಇಲಾಖೆ.

ಅನುವಾದ : ಬಿ. ವಿಜಯಕುಮಾರ್

# ಕರ್ನಾಟಕದಲ್ಲಿ ರೇಷ್ಮೆ ಅಭಿವೃದ್ಧಿ : ಸಂಕ್ಷಿಪ್ತ ಪ್ರಸ್ತಾವನೆ

ಕೆ.ವಿ. ಗೋವಿಂದರಾಜು

## ೧. ಪೀಠಿಕೆ

ಆರ್ಥಿಕ ಪ್ರಗತಿ ಮತ್ತು ಮಾನವ ಸಂಪನ್ಮೂಲಗಳ ಅಭಿವೃದ್ಧಿ ಯೋಜನೆಯ ಮುಖ್ಯ ಗುರಿ. ವ್ಯವಸಾಯ ಮತ್ತು ಇದಕ್ಕೆ ಪೂರಕವಾದ ಚಟುವಟಿಕೆಗಳಲ್ಲಿ ದೇಶದಲ್ಲಿ ಸುಮಾರು ಶೇಕಡಾ ೭೦ರಷ್ಟು ಪ್ರಜೆಗಳು ನಿರತರಾಗಿದ್ದಾರೆ. ಇವರಲ್ಲಿ ಬಹುತೇಕ ಜನರು ಭೂಹಿಡುವಳಿ ಕಡಿಮೆಯಿರುವವರೂ, ಕೃಷಿ ಕಾರ್ಮಿಕರು ಆಗಿದ್ದಾರೆ. ಸುಮಾರು ಶೇಕಡಾ ೩೦ಕ್ಕೂ ಹೆಚ್ಚು ರಾಷ್ಟ್ರೀಯ ಆದಾಯ, ವ್ಯವಸಾಯ ಕ್ಷೇತ್ರದಿಂದ ಉತ್ಪತ್ತಿಯಾಗುತ್ತದೆ. ಜನರಿಗೆ ಉದ್ಯೋಗ ಮತ್ತು ಆದಾಯ ತರುವಲ್ಲಿ, ಗೃಹ ಕೈಗಾರಿಕೆ ಮತ್ತು ಸಣ್ಣ ಕೈಗಾರಿಕೆಗಳ ಪಾತ್ರ ಹಿರಿದು. ರೇಷ್ಮೆ ಕೈಗಾರಿಕೆ ಹೆಚ್ಚು ಉಪಯುಕ್ತ ಹಾಗೂ ಲಾಭ ತರುವ ಉದ್ಯಮ. ಈ ಉದ್ಯಮವನ್ನು ಕರ್ನಾಟಕದಲ್ಲಿ ಸುಮಾರು ಎರಡು ಲಕ್ಷಕ್ಕು ಹೆಚ್ಚು ಮಂದಿ ರೈತರು ಅವಲಂಬಿಸಿದ್ದಾರೆ. ಪರೋಕ್ಷವಾಗಿ ಸುಮಾರು ಇಪ್ಪತ್ತು ಲಕ್ಷ ಜನರು ಉದ್ಯಮದ ಹಲವಾರು ಅಂಗಗಳಲ್ಲಿ ಉದ್ಯೋಗ ನಿರತರಾಗಿದ್ದಾರೆ. ಈ ಉದ್ಯಮವು, ವ್ಯವಸಾಯವನ್ನೇ ಅವಲಂಬಿಸಿರುವ ರೈತರಿಗೆ ಮತ್ತು ರೇಷ್ಮೆ ನೂಲು ಬಿಚ್ಚಾಣಿಕೆ, ಹುರಿ ಮಾಡುವಿಕೆ, ನೇಯ್ಗೆ ಉದ್ಯಮಗಳಲ್ಲಿ ತೊಡಗಿರುವ ಕುಟುಂಬಗಳ ಪ್ರಗತಿಯಲ್ಲಿ ಗಣನೀಯ ಪಾತ್ರವನ್ನು ವಹಿಸಿದೆ.

ಪ್ರಪಂಚದಲ್ಲಿ ಆಗುತ್ತಿರುವ ರೇಷ್ಮೆ ಉತ್ಪಾದನೆಯಲ್ಲಿ ಭಾರತಕ್ಕೆ ಎರಡನೇ ಸ್ಥಾನ. ಚೀನಾ ದೇಶಕ್ಕೆ ಮೊದಲ ಸ್ಥಾನವಿದೆ. ಪ್ರಪಂಚದಲ್ಲಿ, ಪ್ರಕೃತಿದತ್ತವಾಗಿ ದೊರಕುವ ನಾಲ್ಕು ರೀತಿಯ ರೇಷ್ಮೆಯ ನೂಲನ್ನೂ ಉತ್ಪಾದಿಸುವುದು ಭಾರತ ಒಂದರಲ್ಲೇ. ಅವುಗಳು, ಹಿಪ್ಪುನೇರಳೆ (Mulberry), ಟಸ್ಸಾರ್ (Tassar), ಎರಿ (Eri) ಮತ್ತು ಮೂಗ (Muga) ರೇಷ್ಮೆ. ಅವುಗಳಲ್ಲಿ ಹಿಪ್ಪುನೇರಳೆ ನೂಲಿನ ಉತ್ಪಾದನೆ ಅತಿ ಹೆಚ್ಚು (ಶೇ. ೯೩). ಹಿಪ್ಪುನೇರಳೆ ಬೇಸಾಯ ಲಾಭದಾಯಕವಾಗಿದ್ದು ದೇಶದ ದಕ್ಷಿಣ ರಾಜ್ಯಗಳಾದ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಉತ್ತರ ರಾಜ್ಯಗಳಲ್ಲೊಂದಾದ

ಜಮ್ಮು ಕಾಶ್ಮೀರದಲ್ಲಿ ಮತ್ತು ಪೂರ್ವ ರಾಜ್ಯಗಳೊಂದಾದ ಪಶ್ಚಿಮಬಂಗಾಳಕ್ಕೆ ಸೀಮಿತವಾಗಿದೆ. ದೇಶದಲ್ಲಿ ಉತ್ಪನ್ನವಾಗುವ ರೇಷ್ಮೆಯಲ್ಲಿ, ಕರ್ನಾಟಕದ ಕೊಡುಗೆ ಶೇಕಡಾ ೬೦ರಷ್ಟು ಇದೆ. ಇತ್ತೀಚಿನ ವರ್ಷಗಳಲ್ಲಿ, ದೇಶದ ಬೇರೆ ರಾಜ್ಯಗಳಲ್ಲೂ ಸಹ, ಹಿಪ್ಪುನೇರಳೆ ವ್ಯವಸಾಯವನ್ನು ಮಾಡುವುದಕ್ಕೆ ಪ್ರೋತ್ಸಾಹ ಕೊಡಲಾಗುತ್ತಿದೆ.

೧೯೯೨-೯೩ನೇ ಸಾಲಿನಲ್ಲಿ, ದೇಶದಲ್ಲಿ ಸುಮಾರು ೫೯,೦೦೦ ಹಳ್ಳಿಗಳಲ್ಲಿ ೩.೪೫ ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಹಿಪ್ಪುನೇರಳೆ ಬೆಳೆ ಆವೃತ್ತವಾಗಿತ್ತು. ಸುಮಾರು ೫೯ ಲಕ್ಷಕ್ಕೂ ಹೆಚ್ಚು ಜನರು ಈ ಕೈಗಾರಿಕೆಯನ್ನು ಅವಲಂಬಿಸಿದ್ದಾರೆ. ಇವರಲ್ಲಿ ಶೇಕಡಾ ೪೦ರಷ್ಟು ಜನರು ಹಿಂದುಳಿದ ವರ್ಗಕ್ಕೆ ಸೇರಿದ್ದಾರೆ.

ಹಿಪ್ಪುನೇರಳೆ ಬೇಸಾಯ ಮತ್ತು ಇದನ್ನು ಅವಲಂಬಿಸಿರುವ ಕೈಗಾರಿಕೆ - ಹೆಚ್ಚು ಶ್ರಮದಾಯಕ, ವಿವಿಧ ಹಂತಗಳುಳ್ಳ ಒಂದು ಉದ್ಯಮ. ಅವುಗಳು ಹಿಪ್ಪುನೇರಳೆ ಬೇಸಾಯ ಮತ್ತು ರೇಷ್ಮೆ ಹುಳು ಸಾಕಾಣಿಕೆ, ನೂಲು ಬಿಚ್ಚುವುದು, ಹುರಿ ಮಾಡುವಿಕೆ, ನೇಯ್ಗೆ. ಈ ವಿವಿಧ ಹಂತಗಳಲ್ಲಿ ದೊರಕುವ ಉಪ ಉತ್ಪನ್ನಗಳು ಗೃಹ ಕೈಗಾರಿಕೆಗಳ ವೃದ್ಧಿಗೆ ಅನುಕೂಲ ಮಾಡಿಕೊಟ್ಟಿದೆ. ಇದರಲ್ಲಿ ಮೊದಲನೆಯ ಎರಡು ಹಂತಗಳು ಭೂ ಚಟುವಟಿಕೆಗಳಾಗಿದ್ದು ರೈತರು ನಿರತರಾಗಿದ್ದು, ಇತರೇ ಹಂತಗಳಲ್ಲಿ ಭೂರಹಿತ ಕಾರ್ಮಿಕರೂ ಮತ್ತು ಕುಶಲಕರ್ಮಿಗಳು ನಿರತರಾಗಿದ್ದು, ಅವರಿಗೆ ಈ ಉದ್ಯಮ ಒಂದು ಜೀವನಾಧಾರವಾಗಿದೆ.

ಸುಮಾರು, ೧೯೭೦ನೇ ಸಾಲಿನಿಂದ ಈಚೆಗೆ ರೇಷ್ಮೆ ಉತ್ಪಾದನೆಯಲ್ಲಿ ಜಪಾನ್ ದೇಶಕ್ಕೆ ಇದ್ದ ಸ್ವಾಮ್ಯ, ಇಳಿಮುಖವಾಗಿದ್ದು, ಭಾರತಕ್ಕೆ ಎರಡನೇ ಸ್ಥಾನ ಒದಗಿದೆ. ಪ್ರಪಂಚದ ಒಟ್ಟು ಉತ್ಪಾದನೆಯಲ್ಲಿ ಭಾರತದ ಪಾಲು ಶೇಕಡಾ ೧೬. ಸದ್ಯದಲ್ಲಿ ಸುಮಾರು ೧೩,೦೦೦ ಟನ್ನುಗಳು, ದೇಶದಲ್ಲಿ ರೇಷ್ಮೆ ಉತ್ಪತ್ತಿ ಆಗುತ್ತಿದ್ದು, ಇದರ ಜೊತೆಗೆ ಸುಮಾರು ೫,೦೦೦ ಟನ್ನುಗಳಷ್ಟು ರೇಷ್ಮೆಯನ್ನು ಆಮದು ಮಾಡಿಕೊಳ್ಳುತ್ತಿದೆ. ಇತ್ತೀಚಿನ ದಿನಗಳಲ್ಲಿ ಆಂತರಿಕ ಬೇಡಿಕೆಯು ಹೆಚ್ಚಾಗುತ್ತಿದ್ದು. ಸಾಕಷ್ಟು ಅಂತರರಾಷ್ಟ್ರೀಯ ಬೇಡಿಕೆಯೂ ಸಹ ಹೆಚ್ಚುತ್ತಿರುವುದು ಗಮನಾರ್ಹ. ದೇಶದಲ್ಲಿ ಸುಮಾರು ೧,೮೨,೦೦೦ ಕೈಮಗ್ಗಗಳು ಮತ್ತು ೩೧,೦೦೦ ವಿದ್ಯುತ್ ಆಧಾರಿತ ಮಗ್ಗಗಳು, ವಿವಿಧ ರೀತಿಯ ವಸ್ತ್ರಗಳ ನೇಯ್ಗೆಯಲ್ಲಿ ತೊಡಗಿವೆ. ಇದರಲ್ಲಿ ಶೇಕಡಾ ೮೫ರಷ್ಟು ಒಟ್ಟು ರೇಷ್ಮೆ ಉತ್ಪಾದನೆ - ಸೀರೆಗಳ ತಯಾರಿಕೆಗೆ ಮೀಸಲಾಗಿದೆ. ಕರ್ನಾಟಕ ರೇಷ್ಮೆ ಉದ್ಯಮ ೧೯೯೨-೯೩ನೇ ಸಾಲಿನಲ್ಲಿ ೧೬೪೦ ದಶಲಕ್ಷ ರೂಪಾಯಿಗಳನ್ನು ವಿದೇಶೀ ವಿನಿಮಯಗೊಳಿಸಿದೆ. ಭಾರತದಿಂದ ರಫ್ತಾದ ರೇಷ್ಮೆ ವಸ್ತುಗಳ ಒಟ್ಟು ಮೌಲ್ಯದಲ್ಲಿ ಕರ್ನಾಟಕ ರಾಜ್ಯದ ರೇಷ್ಮೆ ವಸ್ತುಗಳ ಮೌಲ್ಯ ಶೇಕಡಾ ೨೨ರಷ್ಟಿದೆ. ಇತ್ತೀಚಿನ ವರ್ಷಗಳಲ್ಲಿ ಕರ್ನಾಟಕದಿಂದ, ರಫ್ತಾಗುವ ರೇಷ್ಮೆ ವಸ್ತುಗಳು ಸಿದ್ಧ ಉಡುಪುಗಳಾಗಿದ್ದು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಸಾಮರ್ಥ್ಯವನ್ನು ಪಡೆದಿದೆ.

## ೨. ಕರ್ನಾಟಕದಲ್ಲಿ ರೇಷ್ಮೆ ಕೃಷಿ

ಕರ್ನಾಟಕ ರಾಜ್ಯದ ವಿಸ್ತೀರ್ಣ ಸುಮಾರು ೧.೯೧ ಲಕ್ಷ ಚದುರ ಕಿಲೋ ಮೀಟರುಗಳಿದ್ದು, ರಾಜ್ಯದಲ್ಲಿ ೪೪.೮ ದಶಲಕ್ಷ ಜನವಾಸಿಸುತ್ತಿದ್ದಾರೆ. ರಾಜ್ಯದ ಭೂಪ್ರದೇಶದಲ್ಲಿ ೧೨೦ ಲಕ್ಷ ಹೆಕ್ಟೇರು ಪ್ರದೇಶ, ಸಾಗುವಳಿಗೆ ಯೋಗ್ಯವಾಗಿದ್ದು, ಈಗಾಗಲೇ ೧೦೫ ಲಕ್ಷ ಹೆಕ್ಟೇರುಗಳಲ್ಲಿ, ಸಾಗುವಳಿ ಆಗುತ್ತಿದೆ. ಇದರಲ್ಲಿ ೨೮ ಲಕ್ಷ ಹೆಕ್ಟೇರು ಪ್ರದೇಶದಲ್ಲಿ ನೀರಾವರಿ ಬಳಕೆಯಲ್ಲಿದ್ದು, ಉಳಿದ ಸಾಗುವಳಿ ಪ್ರದೇಶ ಮಳೆ ಆಧಾರಿತವಾಗಿದೆ. ಸಾಗುವಳಿ ಆಗುತ್ತಿರುವ ಹಾಲೀ ೧೦೫ ಲಕ್ಷ ಹೆಕ್ಟೇರುಗಳಲ್ಲಿ, ಅರ್ಧದಷ್ಟು ಕ್ಷೇತ್ರದಲ್ಲಿ ಆಹಾರ ಪೂರಕವಾದ ಬೆಳೆಗಳನ್ನು ಬೆಳೆಯುತ್ತಿದ್ದು ಇನ್ನುಳಿದ ಅರ್ಧ ಕ್ಷೇತ್ರದಲ್ಲಿ ವಾಣಿಜ್ಯ ಬೆಳೆಗಳನ್ನು ಉತ್ಪಾದಿಸಿದೆ. ಇದರಲ್ಲಿ ಹಿಪ್ಪುನೇರಳೆ ಬೇಸಾಯ ಒಂದು ಅತಿ ಪ್ರಮುಖವಾದ ಬೆಳೆಯಾಗಿದ್ದು, ಅಧಿಕವಾಗಿ ರಾಜ್ಯದ ದಕ್ಷಿಣಕ್ಕೆ ಇರುವ ಜಿಲ್ಲೆಗಳಿಗೆ ಸೀಮಿತವಾಗಿದೆ. ಕರ್ನಾಟಕದಲ್ಲಿ ಹಿಪ್ಪುನೇರಳೆ ಬೇಸಾಯ ಮತ್ತು ರೇಷ್ಮೆ ಕೈಗಾರಿಕೆಗೆ ಸುಮಾರು ೨೦೦ ವರ್ಷಗಳ ಇತಿಹಾಸವಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ - ಸುಮಾರು ೧೭೮೦ನೇ ಇಸ್ವಿಯಲ್ಲಿ ಆಗಿನ ಆಳ್ವಿಕೆಯಲ್ಲಿದ್ದ ಟಿಪ್ಪುಸುಲ್ತಾನ್ ಕರ್ನಾಟಕದಲ್ಲಿ ಮೊದಲಿಗೆ ಹಿಪ್ಪುನೇರಳೆ ಬೇಸಾಯ ಮತ್ತು ರೇಷ್ಮೆ ಕೈಗಾರಿಕೆಯನ್ನು ಪ್ರಾರಂಭಿಸಲು ಅನುಕೂಲಗಳನ್ನು ಮಾಡಿಕೊಟ್ಟರು. ಅನಂತರ ಆಗಿನ ಮೈಸೂರು ರಾಜ್ಯದ ರಾಜರಾಳ್ವಿಕೆಯಲ್ಲಿ ರೇಷ್ಮೆ ಕೃಷಿ ಮತ್ತು ಉದ್ಯೋಗಕ್ಕೆ ಪೂರಕವಾದ ಉತ್ತೇಜನ ದೊರಕಿತು. ಅಂದಿನಿಂದ ಇಂದಿನವರೆಗೂ, ಕೆಲವು ಜಿಲ್ಲೆಗಳ ರೈತರಿಗೆ, ಭೂ ಕಾರ್ಮಿಕರಿಗೆ ಈ ಉದ್ಯಮ ಜೀವನಾಧಾರವಾಗಿದೆ.

ಭಾರತ ದೇಶದಲ್ಲಿ ಉತ್ಪಾದನೆಯಾಗುವ ಕಚ್ಚಾ ರೇಷ್ಮೆಯಲ್ಲಿ, ಶೇಕಡಾ ೬೦ರಷ್ಟು ಉತ್ಪಾದನೆ ಕರ್ನಾಟಕದ ರಾಜ್ಯದಲ್ಲಿ ಆಗುತ್ತಿದ್ದು, ದೇಶದಲ್ಲಿ ಪ್ರಥಮ ಸ್ಥಾನವನ್ನು ಪಡೆದಿದೆ. ರಾಜ್ಯದಲ್ಲಿ ಹಿಪ್ಪುನೇರಳೆ ಬೇಸಾಯಕ್ಕೆ ಹಾಗೂ ರೇಷ್ಮೆ ನೂಲಿನ ಉತ್ಪಾದನೆಗೆ ತಕ್ಕ ವಾಯುಗುಣ, ಪರಿಸರ ಇರುವುದು ಒಂದು ಗಣನೀಯ ಅಂಶ. ಈ ಉದ್ಯಮಇಷ್ಟೊಂದು ಪ್ರಾಮುಖ್ಯತೆ ಹೊಂದಲು, ಉತ್ತೇಜಕ ಪೂರಕವಾದ ಅಂಶಗಳೆಂದರೆ ಈ ಉದ್ಯಮವನ್ನು ಪ್ರಾರಂಭಿಸಲು ಮತ್ತು ಮುಂದುವರಿಸಿ ಕೊಂಡು ಹೋಗಲು, ಜನರ ಆಸಕ್ತಿ, ಮಿಗಿಲಾಗಿ, ಇದರಲ್ಲಿ ಪ್ರಾರಂಭದಲ್ಲಿ ತೊಡಗಿಸಬಹುದಾದ ಹಣ ಅತೀ ಕಡಿಮೆಯಾಗಿದ್ದು - ಎರಡು ತಿಂಗಳುಗಳಿಗೊಮ್ಮೆ ವರ್ಷದಲ್ಲಿ ಐದರಿಂದ ಆರು ಬಾರಿ ಆದಾಯ ಬರುತ್ತದೆ. ಇದರಿಂದ ಬರುವ ಆದಾಯ ಇನ್ನಿತರೇ ಬೆಳೆಗಳ ವ್ಯವಸಾಯದಿಂದ ಬರುವ ಆದಾಯಕ್ಕಿಂತ ಅಧಿಕವಾಗಿರುತ್ತದೆ. ಅತೀ ಕಡಿಮೆ ನೀರಾವರಿ ಸೌಕರ್ಯವಿದ್ದರೂ ಸಹ, ರೇಷ್ಮೆ ಕೃಷಿಯನ್ನು ಮುಂದುವರಿಸಿಕೊಂಡು ಹೋಗಬಹುದಾದ ಕಾರಣ ರೈತರು ಆಸಕ್ತಿಯಿಂದ ತಮ್ಮನ್ನು ಈ ವ್ಯವಸಾಯದಲ್ಲಿ ತೊಡಗಿಸಿಕೊಂಡಿದ್ದಾರೆ. ೧೯೯೬-೯೭ನೇ ಮಾಹಿತಿಯ ಪ್ರಕಾರ, ರಾಜ್ಯದಲ್ಲಿ ಹಿಪ್ಪುನೇರಳೆ ವಿಸ್ತೀರ್ಣ, ಸುಮಾರು ೧.೬೧ ಲಕ್ಷ ಹೆಕ್ಟೇರು ಇದ್ದು, ಇದರಲ್ಲಿ

ಶೇಕಡಾ ೬೦ರಷ್ಟು ವಿಸ್ತೀರ್ಣ, ನೀರಾವರಿ ಸೌಲಭ್ಯವನ್ನು ಒಳಗೊಂಡಿದ್ದು, ಉಳಿದ ವಿಸ್ತೀರ್ಣ ಮಳೆ ಆಧಾರವಾಗಿದೆ. ರಾಜ್ಯದ ೧೮,೦೦೦ ಹಳ್ಳಿಗಳಲ್ಲಿರುವ ೨.೬೪ ಲಕ್ಷ ಕುಟುಂಬಗಳು ಇದನ್ನು ಅವಲಂಬಿಸಿದ್ದಾರೆ. ಇದಲ್ಲದೆ, ಉತ್ಪತ್ತಿಯಾದ ರೇಷ್ಮೆ ಗೂಡನ್ನು ಸಂಸ್ಕರಣ ಮಾಡುವುದು ನೂಲು ತೆಗೆಯುವುದು, ರೇಷ್ಮೆ ಹುರಿ ಮಾಡುವುದು, ನೇಯ್ಗೆ, ಸಿದ್ದ ಉಡುಪುಗಳ ತಯಾರಿಕೆ, ಸ್ಪನ್ ಸಿಲ್ಕ್ ಸಂಸ್ಕರಣ, ಮುಂತಾದ ಅನೇಕ ವಿವಿಧ ಹಂತಗಳಲ್ಲಿ ಒದಗುವ ಉದ್ಯೋಗಗಳಲ್ಲಿ ರಾಜ್ಯದ ಜನರ ಪಾತ್ರ ಗಣನೀಯ.

**೩. ರೇಷ್ಮೆ ಕೃಷಿಯಲ್ಲಿ ಆದ ಪ್ರಗತಿ**

ಹಿಂದೆ ಉಲ್ಲೇಖಿಸಿದಂತೆ ರಾಜ್ಯದಲ್ಲಿ, ಈ ಉದ್ಯಮ ಸುಮಾರು ೨೦೦ ವರ್ಷಗಳ ಹಿಂದೆಯೇ ಪ್ರಾರಂಭವಾದರೂ ಸಹ ಸ್ವಾತಂತ್ರಾನಂತರ ಕಳೆದ ನಾಲ್ಕು ದಶಕಗಳಲ್ಲಿ ಆದ ಅಭಿವೃದ್ಧಿ ಬಹಳ ಪ್ರಾಮುಖ್ಯತೆ ಹೊಂದಿದೆ.

ರಾಜ್ಯದಲ್ಲಿ ರೇಷ್ಮೆ ಉತ್ಪಾದನೆ ಮೊದಲನೆ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ, ಅಂದರೆ ೧೯೫೬ನೇ ವರ್ಷದಲ್ಲಿ ಸುಮಾರು ೭೨೬ ಟನ್ ಇದ್ದು ಕಳೆದ ವರ್ಷದಲ್ಲಿ (೧೯೯೩- ೯೪ರಲ್ಲಿ), ಸುಮಾರು ೮೨೫೦ ಟನ್ ಉತ್ಪನ್ನ ಮಾಡಿದೆ. ಈ ದಿಸೆಯಲ್ಲಿ ಹಿಪ್ಪುನೇರಳೆ ಬೇಸಾಯದಲ್ಲಿ ಗಣನೀಯ ಅಂಶಗಳು ಉತ್ತೇಜನ ಪೂರಕವಾಗಿದ್ದು ಮುಖ್ಯವಾಗಿ ಉತ್ಪಾದನೆಯಾದ ರೇಷ್ಮೆಗೂಡಿನ ಗುಣಮಟ್ಟದಲ್ಲಿ ಆದ ಬದಲಾವಣೆ. ಪ್ರಾರಂಭದಲ್ಲಿ ಹಿಪ್ಪುನೇರಳೆ ಬೇಸಾಯ ಪೂರ್ಣವಾಗಿ ಮಳೆಯ ಆಶ್ರಯದಲ್ಲಿದ್ದು ಸಾಮಾನ್ಯ ಮಿಶ್ರ ತಳಿಯ ರೇಷ್ಮೆ ಹುಳುವಿನ ಸಾಕಾಣಿಕೆಗೆ ಸೀಮಿತವಾಗಿತ್ತು ಉತ್ಪಾದನೆಯಾದ ಗೂಡಿನ ಗುಣಮಟ್ಟವೂ ಸಹ ಕಡಿಮೆ ಇದ್ದು, ಕಚ್ಚಾ ರೇಷ್ಮೆ ಉತ್ಪಾದನೆ ಸಹ ಅದೇ ರೀತಿಯಾಗಿದ್ದು ಒಂದು ಕಿಲೋ ಗ್ರಾಂ ರೇಷ್ಮೆ ನೂಲಿನ ಉತ್ಪಾದನೆಗೆ ಸುಮಾರು ೧೬ ಕಿಲೋಗ್ರಾಮ್ ಬೇಕಿದ್ದಿತು. ಒಂದು ಹೆಕ್ಟೇರ್ ಹಿಪ್ಪುನೇರಳೆ ಪ್ರದೇಶದಲ್ಲಿ ರೇಷ್ಮೆ ನೂಲಿನ ಇಳುವರಿ ೨೫ ಕಿಲೋಗ್ರಾಮ್ ಇದ್ದು ೧೯೯೩-೯೪ರ ವೇಳೆಗೆ ೫೨ ಕಿಲೋಗ್ರಾಮ್ ಮಟ್ಟವನ್ನು ತಲುಪಿದೆ. ಈ ಅವಧಿಯಲ್ಲಿ ವಿವಿಧ ಯೋಜನೆಯಡಿಯಲ್ಲಿ ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳು, ಅವುಗಳ ಅನುಷ್ಠಾನ, ಇವುಗಳಿಗೆ ಜನರ ಸ್ಪಂದನೆ-ಗಮನೀಯವಾದುದು. ಅವುಗಳು ಮುಖ್ಯವಾಗಿ ಬೇಸಾಯದಲ್ಲಿ ಸುಧಾರಿತ ತಳಿಗಳ ಅಳವಡಿಕೆ, ಸುಧಾರಿತ ಮಿಶ್ರ ತಳಿಗಳ ಹುಳುವಿನ ಸಾಕಾಣಿಕೆ, ಮುಖ್ಯವಾದ ಅಂಶಗಳು. ಇದ್ಕಕೆ ಪೂರಕವಾಗಿ ಹಿಪ್ಪುನೇರಳೆ ಬೇಸಾಯವನ್ನು ನೀರಾವರಿ ಕ್ಷೇತ್ರಕ್ಕೆ ಅಳವಡಿಸಿದ್ದು, ಅಭಿವೃದ್ಧಿ ದಿಸೆಯಲ್ಲಿ ಆದ ಒಂದು ತೀವ್ರಕ್ರಮ. ಈ ಯೋಜನೆ ಕಾರ್ಯಗತವಾಗುವುದರಲ್ಲಿ ವಿವಿಧ ಯೋಜನೆಯ ಅಡಿಯಲ್ಲಿ ಸಂಘ ಸಂಸ್ಥೆಗಳು, ಬ್ಯಾಂಕುಗಳು ರೈತರಿಗೆ ಬೇಕಾದ ಧನಸಹಾಯವನ್ನು ಒದಗಿಸುವುದರಲ್ಲಿ ಕ್ರಿಯಾತ್ಮಕವಾಗಿ ಸಹಕರಿಸಿದವು.

## ೪. ಮಾರುಕಟ್ಟೆಯ ವ್ಯವಸ್ಥೆ

ರೈತರು ಉತ್ಪಾದನೆ ಮಾಡುತ್ತಿದ್ದ ಗೂಡನ್ನು ಮಾರಲು ಅನುಕೂಲವಾದ ಸೌಲಭ್ಯಗಳು ಇಲ್ಲದೇ ರೈತರು ಮಧ್ಯವರ್ತಿ ಜನರಿಂದ ಅನೇಕ ರೀತಿಯ ಶೋಷಣೆಗೆ ಒಳಗಾಗುತ್ತಿದ್ದರು. ಇದರಲ್ಲಿ ಮುಖ್ಯವಾಗಿ, ರೇಷ್ಮೆಗೂಡಿನ ಬೆಲೆಯನ್ನು ಗೊತ್ತುಪಡಿಸಲು ರಹಸ್ಯ ಕ್ರಮವನ್ನು ಅನುಸರಿಸುವುದು, ತೂಕದಲ್ಲಿ ಮೋಸ, ಸೋಡಿ ಪಡೆಯುವುದು, ವಿಳಂಬ ಹಣಪಾವತಿ, ದಳ್ಳಾಳಿಗಳ ನಡುವಳಿಕೆಗಳು ಮುಖ್ಯವಾಗಿದ್ದು, ರೈತರ ಅಭಿವೃದ್ಧಿಗೆ ಮಾರಕವಾಗಿತ್ತು. ಈ ಪ್ರವೃತ್ತಿಯನ್ನು ಸಂಪೂರ್ಣವಾಗಿ ನಿರ್ಮೂಲಗೊಳಿಸಲು ಸರ್ಕಾರ ಬದ್ಧವಾಗಿ ೧೯೫೯ನೇ ಇಸವಿಯಲ್ಲಿ 'ಮಾರುಕಟ್ಟೆ ಅಧಿನಿಯಮಗಳು' ಎಂಬ ಸುತ್ತೋಲೆಯನ್ನು ಹೊರಡಿಸಿತು. ಈ ನಿಯಮವನ್ನು ಅನುಷ್ಠಾನಗೊಳಿಸುವುದರ ಮೂಲಕ ರೇಷ್ಮೆ ಗೂಡು ಮಾರುಕಟ್ಟೆಯಲ್ಲಿ, ರೇಷ್ಮೆ ಗೂಡನ್ನು ಬೆಳೆದ ರೈತರು ಮತ್ತು ಗೂಡು ಖರೀದಿಸುವವರು (ನೂಲು ಬಿಚ್ಚುವವರು) ನೇರವಾಗಿ ಬೆಲೆಯ ನಿರ್ಧಾರವನ್ನು ಕೈಗೊಳ್ಳುವ ವ್ಯವಸ್ಥೆ, ಸರಿಯಾದ ತೂಕ, ಉತ್ಪನ್ನಕ್ಕೆ ಆದ ಒಟ್ಟು ಮೌಲ್ಯವನ್ನು ರೈತರಿಗೆ ನೇರವಾಗಿ ಮಾರಾಟದ ದಿನವೇ ಪಾವತಿ ಮಾಡುವ ವ್ಯವಸ್ಥೆ, ಕೆಲವು ಗಣನೀಯ ಅಂಶಗಳು. ಆದರೆ ಇದನ್ನು ಅನುಷ್ಟಾನಗೊಳಿಸಿ ಕಾರ್ಯರೂಪಕ್ಕೆ ತರಲು ಮಾರುಕಟ್ಟೆಗಳ ಅಭಾವ, ಇದ್ದ ಕೆಲವೇ ಮಾರುಕಟ್ಟೆಯ ನಿಯಮಗಳನ್ನು ಪೂರ್ಣವಾಗಿ ಅನುಷ್ಠಾನಗೊಳಿಸಲು ಸರ್ಕಾರಕ್ಕೆ ಅವಕಾಶವಾಗಲಿಲ್ಲ. ಹೆಚ್ಚಿನ ಪ್ರಮಾಣದಲ್ಲಿ ಗೂಡಿನ ಉತ್ಪಾದನೆ ಆಗುತ್ತಿದ್ದರೂ ಸಹ, ನೂಲು ಬಿಚ್ಚುವುವರಿಗೆ ಸಕಾಲದಲ್ಲಿ ಸಿಗದೆ, ದಳ್ಳಾಳಿಗಳಿಗೆ ಹೆಚ್ಚು ಬೆಲೆ ತೆರಬೇಕಾಗಿತ್ತು.

## ೫. ೧೯೮೦ರ ದಶಕದಲ್ಲಿ ಆದ ಬದಲಾವಣೆ

ರಾಜ್ಯದಲ್ಲಿ ಉತ್ಪಾದನೆಯಾಗುತ್ತಿದ್ದ ರೇಷ್ಮೆ ಗೂಡು ಮತ್ತು ನೂಲಿನ ಗುಣಮಟ್ಟ ಸ್ವಲ್ಪಮಟ್ಟಿಗೆ ಸುಧಾರಣೆ ಆದರೂ ಸಹ, ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ರಾಜ್ಯದ ರೇಷ್ಮೆ ನೂಲಿಗೆ ಗಣನೀಯ ಬೇಡಿಕೆ ಬರಲಿಲ್ಲ. ಈ ದಿಸೆಯಲ್ಲಿ ರಾಜ್ಯದಲ್ಲಿ, ಹೆಚ್ಚು ಇಳುವರಿ ಕೊಡುವ ಬೈವೋಲ್ಟೈನ್ ಸಂಕೀರ್ಣ ತಳಿಗಳ ಹುಳು ಸಾಕಾಣಿಕೆ ಅನಿವಾರ್ಯವಾಯಿತು. ಅವರೆವಿಗೂ ಹೊರಡಿಸಿದ್ದ ಕಾಯಿದೆಗಳು, ನಿಯಮಗಳನ್ನು ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರವು ನಿರ್ಧಾರ ಮಾಡಿತು.

ಇದನ್ನು ಕಾರ್ಯಗತರೂಪಕ್ಕೆ ತರಲು ವಿವಿಧ ಸವಲತ್ತುಗಳನ್ನು ಅಭಿವೃದ್ಧಿ ಹೊಂದಿಸುವುದು ಅನಿವಾರ್ಯವಾಯಿತು. ಇದರ ಸಲುವಾಗಿ, ಒಂದು ಯೋಜನೆಯನ್ನು ತಯಾರಿಸಿ ವಿಶ್ವ ಬ್ಯಾಂಕ್ ನೆರವಿನಿಂದ ಅದನ್ನು ೧೯೮೦-೮೭ರವರೆಗೆ ಜಾರಿಗೊಳಿಸಿತು. ಈ ಅವಧಿಯಲ್ಲಿ ಸುಮಾರು ೧೦೧ ಕೋಟಿ ರೂಪಾಯಿಗಳನ್ನು ತೊಡಗಿಸಲಾಯಿತು. ಈ ಯೋಜನೆ ಅಡಿಯಲ್ಲಿ ರೇಷ್ಮೆ ನೂಲಿನ ಉತ್ಪಾದನೆಯನ್ನು ೧೬೦೦ ಟನ್ನು ಹೆಚ್ಚಿಸುವುದು, ಸುಮಾರು ೧೮,೦೦೦ ಹೆಕ್ಟೇರಿನಲ್ಲಿ ಹಿಪ್ಪುನೇರಳೆ

ಬೇಸಾಯಕ್ಕೆ ಅಳವಡಿಸುವುದು ಮುಖ್ಯ ಉದ್ದೇಶ. ಈ ಉದ್ದೇಶಗಳನ್ನು ಸಾಧಿಸಲು ಉನ್ನತ ಗುಣಮಟ್ಟದ ಹೆಚ್ಚು ಇಳುವರಿ ಮೊಟ್ಟೆ ತಯಾರಿಕೆ, ವಿತರಣೆ, ರೈತರಿಗೆ ಬೇಕಾದ ತರಬೇತಿ, ತಾಂತ್ರಿಕ ಸೇವಾ ಸೌಲಭ್ಯಗಳನ್ನು ಒದಗಿಸುವುದು. ವ್ಯವಸಾಯದಲ್ಲಿ ಮತ್ತು ಹುಳು ಸಾಕಾಣಿಕೆಯಲ್ಲಿ ಆಧುನಿಕ ರೀತಿಯ ತಂತ್ರಜ್ಞಾನಗಳ ಅಳವಡಿಕೆ, ಮಾರುಕಟ್ಟೆಯ ಅಭಿವೃದ್ಧಿ ನೂತನ ಮಾರುಕಟ್ಟೆಗಳ ನಿರ್ಮಾಣ ಮುಂತಾದ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು.

ರೇಷ್ಮೆಗೂಡಿನ ಉತ್ಪಾದನೆಯು ೧೯೭೯-೮೦ರಲ್ಲಿ ೩೬,೨೪೮ ಟನ್ನುಗಳಿದ್ದು, ೧೯೮೭-೮೮ರ ವೇಳೆಗೆ ೪೭,೨೧೯ ಟನ್ನುಗಳಾಯಿತು. ಇದೇ ಅವಧಿಯಲ್ಲಿ ೨,೭೯೯ ಟನ್ನುಗಳಿಂದ ೪,೯೭೦ ಟನ್ನುಗಳು ಕಚ್ಚಾ ರೇಷ್ಮೆ ಉತ್ಪಾದನೆ ರಾಜ್ಯದಲ್ಲಿ ಆಗಿ ೧೫ ಇದ್ದ ರೆಂಡೀಟಾ ೧೨ಕ್ಕೆ ಇಳಿಯಿತು.

ಈ ಅವಧಿಯಲ್ಲಿ ಮಾರುಕಟ್ಟೆಯ ನಿರ್ವಹಣೆಯಲ್ಲಿ ಅನುಸರಿಸಿದ ಕ್ರಮಗಳು, ರೈತರಿಗೂ ಮತ್ತು ನೂಲು ಬಿಚ್ಚುವವರಿಗೂ ನೇರ ಸಂಪರ್ಕ ಕಲ್ಪಿಸಿ ರೈತರು ಉತ್ಪಾದಿಸಿದ ಗೂಡಿಗೂ ಸರಿಯಾದ ಬೆಲೆ ಹಣ ಪಾವತಿ ಮತ್ತು ಪ್ರತಿ ನಿತ್ಯವೂ ಮಾರುಕಟ್ಟೆಗೆ ಬರುವ ರೇಷ್ಮೆಗೂಡು, ನೂಲು ಬಿಚ್ಚುವವರ ಅಗತ್ಯತೆಯನ್ನು ಪೂರೈಸಲು ಅನುವು ಮಾಡಿಕೊಟ್ಟಿತು.

ಈ ಯೋಜನೆಯ ಅವಧಿಯ ಏಳು ವರ್ಷಗಳಲ್ಲಿ ಗಣನೀಯ ಅಭಿವೃದ್ಧಿ ಆದರೂ ಸಹ, ಕೆಲವು ಅಂಶಗಳಲ್ಲಿ ನಿರೀಕ್ಷಿಸಿದ ಫಲಿತಾಂಶ ದೊರಕಲಿಲ್ಲ. ಅವು. ಬೈವೋಲ್ಟ್‌ನ್ ರೇಷ್ಮೆಯಲ್ಲಿನ ಕುಂಠಿತ ಉತ್ಪಾದನೆ. ಇದಕ್ಕೆ ಅನೇಕ ಕಾರಣಗಳುಂಟು. ಉದಾಹರಣೆಗೆ, ಬೈವೋಲ್ಟ್‌ನ್ ಹುಳು ಸಾಕಾಣಿಕೆಗೆ ವರ್ಷದ ಎಲ್ಲಾ ಕಾಲದಲ್ಲಿಯೂ ದೊರೆಯದ ಅನುಕೂಲಕರ ವಾತಾವರಣ, ರೈತರ ಪರಿಶ್ರಮ ಮತ್ತು ವಿಸ್ತರಣಾ ಸಿಬ್ಬಂದಿಗಳಲ್ಲಿದ್ದ ತಾಂತ್ರಿಕ ಮಟ್ಟ ಬಹುತೇಕವಾಗಿ ಕಾರಣವಾಯಿತು.

ಈ ಅವಧಿಯಲ್ಲಿ ರಾಜ್ಯದ ಉತ್ತರ ಜಿಲ್ಲೆಗಳಲ್ಲಿ ಸುಮಾರು ರೈತರು ಹಿಪ್ಪುನೇರಳೆ ಬೇಸಾಯವನ್ನು ಕೈಗೊಂಡರು. ಪ್ರಾರಂಭದ ವರ್ಷಗಳಲ್ಲಿ, ಈ ಉದ್ಯಮದಲ್ಲಿ ಸಫಲತೆಯನ್ನು ಕಂಡರೂ ನಂತರದ ಸಾಲಿನಲ್ಲಿ ಅದೇ ರೀತಿಯ ಫಲವನ್ನು ರೈತರು ಪಡೆಯಲಾಗಲಿಲ್ಲ. ಇದಕ್ಕೆ ಮೂಲ ಕಾರಣಗಳು ಹುಳುವಿನ ಸಾಕಾಣಿಕೆಗೆ ನಿರಂತರವಾಗಿ ನೀಡಬೇಕಾಗುವ ಗಮನ, ಹಿಪ್ಪುನೇರಳೆ ಬೇಸಾಯಕ್ಕೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳುವುದರಲ್ಲಿ ನಿರ್ಲಕ್ಷ್ಯತೆ, ನೂಲು ಬಿಚ್ಚುವ ಘಟಕಗಳು, ಪ್ರಾರಂಭವಾಗದೇ ಇದ್ದುದರಿಂದ ಸ್ಥಳೀಯ ಬೇಡಿಕೆ ಇಲ್ಲವಾಗಿ ಸ್ಥಾಪಿಸಿದ ಸ್ಥಳೀಯ ಮಾರುಕಟ್ಟೆಯ ಸೌಲಭ್ಯವನ್ನು ಪಡೆಯುವುದು ಅಸಾಧ್ಯವಾಯಿತು.

**೬. ಕಚ್ಚಾ ರೇಷ್ಮೆ ನೂಲು ತಯಾರಿಕೆ**

ರಾಜ್ಯದಲ್ಲಿ ಉತ್ಪಾದಿಸುತ್ತಿರುವ ಕಚ್ಚಾ ರೇಷ್ಮೆಯಲ್ಲಿ ಶೇಕಡಾ ೬೦ರಷ್ಟು ಚರಕಾ

ಘಟಕಗಳಲ್ಲಿಯೂ, ಉಳಿದ ಉತ್ಪನ್ನವು ಕಾಟೇಜ್ ಬೇಸಿನ್ ಮತ್ತು ಫಿಲೇಚರ್ ಘಟಕಗಳಿಂದಲೂ ಬರುತ್ತದೆ. ೧೯೯೩-೯೪ರಲ್ಲಿ ೧೩,೫೪೦ ಕುಟುಂಬಗಳು ಸುಮಾರು ೩೩,೩೯೬ ಘಟಕಗಳು (ಚರಕಾ ಮತ್ತು ಕಾಟೇಜ್ ಬೇಸಿನ್ ಯುನಿಟ್ಟುಗಳು) ನೂಲು ಬಿಚ್ಚುವ ಕಾರ್ಯದಲ್ಲಿ ತೊಡಗಿದ್ದವು. ಇದರಲ್ಲಿ ಶೇಕಡಾ ೭೦ರಷ್ಟು ಚರಕಾ ಘಟಕಗಳು. ಇದಲ್ಲದೆ ಸರ್ಕಾರದ ಸ್ವಾಮ್ಯದಲ್ಲಿ ಐದು ಕಾರ್ಖಾನೆಗಳುಆಧುನಿಕ ರೀತಿಯ ತಾಂತ್ರಿಕತೆಯನ್ನು ಅಳವಡಿಸಿಕೊಂಡು, ನೂಲು ಬಿಚ್ಚುವುದು, ಹುರಿ ಮಾಡುವಿಕೆ ಮತ್ತು ನೇಯ್ಗೆಯಲ್ಲಿ ತೊಡಗಿದ್ದವು.

ಚರಕಾ ಘಟಕಗಳಲ್ಲಿ, ಅನೇಕವಾಗಿ ಕುಟುಂಬದ ಸದಸ್ಯರು, ನೂಲು ಬಿಚ್ಚುವುದರಲ್ಲಿ ತೊಡಗಿರುತ್ತಾರೆ ಇತ್ತೀಚಿನ ದಿನಗಳಲ್ಲಿ, ಹೆಚ್ಚು ಚರಕಾಗಳನ್ನು ಹೂಡಿ ಕೂಲಿಕಾರರನ್ನು ಒದಗಿಸಿಕೊಂಡು ನೂಲು ತೆಗೆಯುತ್ತಾರೆ. ಕಾಟೇಜ್ ಬೇಸಿನ್ ಘಟಕಗಳು, ಬಹಳವಾಗಿ ಕೂಲಿಕಾರರ ಮೇಲೆ ಆಧಾರಿತ, ನೂಲು ಬಿಚ್ಚುವುದರಲ್ಲಿ ಅನೇಕ ರೀತಿಯ ಚಟುವಟಿಕೆಗಳು ಇದ್ದು, ನೈಪುಣ್ಯತೆಯೂ ಪರಿಶ್ರಮವೂ ಅವಶ್ಯಕ. ಈ ಎಲ್ಲ ಚಟುವಟಿಕೆಗಳಲ್ಲಿ ಗಂಡಸರು, ಹೆಂಗಸರು ದುಡಿಯುತ್ತಾರೆ. ಈ ಘಟಕಗಳು ತಾಲ್ಲೂಕು ಕೇಂದ್ರದಲ್ಲಿ ಮತ್ತು ಕೆಲವು ಗ್ರಾಮೀಣ ಪ್ರದೇಶದಲ್ಲಿ ಕಾರ್ಯಮಾಡುತ್ತಿವೆ. ರಾಜ್ಯದಲ್ಲಿ ಈ ಕಾರ್ಯಚಟುವಟಿಕೆಯ ಸುಮಾರು ಮೂರು ಜಿಲ್ಲೆಗಳಿಗೆ (ಮೈಸೂರು, ಕೋಲಾರ ಮತ್ತು ಬೆಂಗಳೂರು) ಸೀಮಿತಗೊಂಡಿದೆ.

ಈ ಹಿಂದೆ ತಿಳಿಸಿದಂತೆ ಮಾರುಕಟ್ಟೆಯ ಅಭಿವೃದ್ಧಿ ಮತ್ತು ಸೌಲಭ್ಯಗಳು ಸಮರ್ಪಕವಾಗಿ ಉಪಯೋಗಿಸುವ ದಿಸೆಯಲ್ಲಿ (೧೯೮೦ರ ನಂತರದ ವರ್ಷಗಳಲ್ಲಿ) ನೂಲು ಬಿಚ್ಚುವುದರಲ್ಲಿ ತೊಡಗಿರುವವರಿಗೂ ಮತ್ತು ರೇಷ್ಮೆ ಗೂಡು ಉತ್ಪಾದಕರಿಗೂ (ರೈತರಿಗೆ) ಏಕರೀತಿಯಲ್ಲಿ ಅನುಕೂಲತೆಗಳನ್ನು ಕಲ್ಪಿಸಿ ಕೊಟ್ಟಿತು. ಉತ್ಪಾದನೆಯಾದ ರೇಷ್ಮೆ ಗೂಡಿನ ವಹಿವಾಟು ಪ್ರಮಾಣ ಸ್ಥಾಪಿತ ಮಾರುಕಟ್ಟೆಗಳಲ್ಲಿ ವರ್ಷಪ್ರತಿ ಅಧಿಕವಾಯಿತು. ಇದರಿಂದ ರೈತರಿಗೆ ಸರಿಯಾದ ಬೆಲೆ, ಹಣಪಾವತಿ ಸೌಲಭ್ಯಗಳನ್ನು ಕಲ್ಪಿಸಿದರೆ, ರೇಷ್ಮೆಗೂಡಿನಬಳಕೆದಾರರಾದ ನೂಲು ಬಿಚ್ಚುವವರು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಗೂಡನ್ನು ಖರೀದಿಸುವುದು ಸಾಧ್ಯವಾಯಿತು. ಗೂಡಿನ ಅಭಾವದಿಂದ ಗೂಡಿನ ಬೆಲೆಯಲ್ಲಿ ಏರಿಳಿತದ ಕಾರಣ, ಕೆಲವರು ನೂಲು ಬಿಚ್ಚುವುದನ್ನು ತಾತ್ಕಾಲಿಕವಾಗಿ ನಿಲ್ಲಿಸುತ್ತಿದ್ದರು. ಈ ಸ್ಥಿತಿಯಲ್ಲಿ ಅವರಿಗೆ ಜೀವನೋಪಾಯವು ಕಷ್ಟಸಾಧ್ಯವಿತ್ತು ೧೯೯೩-೯೪ನೇ ಸಾಲಿನಲ್ಲಿ ರಾಜ್ಯದ ಎಲ್ಲಾ ಮಾರುಕಟ್ಟೆಗಳಲ್ಲೂ ಸೇರಿ ೫೯,೦೦೬ ಟನ್ನು ರೇಷ್ಮೆಗೂಡು ವಹಿವಾಟು ಆಗಿತ್ತು.

ಇತ್ತೀಚಿನ ವರ್ಷಗಳಲ್ಲಿ, ಚರಕಾ ನೂಲು ತೆಗೆಯುವುದರಲ್ಲಿ, ಕೆಲವು ಸುಧಾರಣೆಗಳು ಆಗಿವೆ. ರೇಷ್ಮೆಗೂಡಿನ ಉತ್ಪಾದನೆಯಲ್ಲಿ ಆದ ಸುಧಾರಣೆಯ ಗುಣಮಟ್ಟವನ್ನು ಅನುಸರಿಸಿ ಕೆಲವು ಬದಲಾವಣೆ ಮಾಡಲಾಗಿದೆ. ನಾಡು

ಚರಕಾದಲ್ಲಿರುವ ಮೂಲ ನಿಯಮಗಳನ್ನು ಉಳಿಸಿಕೊಂಡು, ಉತ್ಪಾದನೆ ಸಾಮರ್ಥ್ಯವನ್ನು ಉತ್ತಮ ಮಟ್ಟಕ್ಕೆ ತರುವಲ್ಲಿ ಮಾತ್ರ ನೂತನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಇದರ ಬಳಕೆ ಸ್ವಲ್ಪವಾಗಿ ಅನುಷ್ಠಾನಕ್ಕೆ ಬಂದಿದೆ. ಈ ರೀತಿಯ ಸುಧಾರಿತ ಚರಕಾ ಘಟಕಗಳನ್ನು ತಯಾರಿಸುವ ವೆಚ್ಚ ಹೆಚ್ಚಾದುದರಿಂದ, ಬಳಕೆದಾರನಿಗೆ ಇದನ್ನು ಕೊಳ್ಳಲು ಕಷ್ಟಸಾಧ್ಯವಾಗಿದೆ. ನೂಲು ಬಿಚ್ಚುವವನ ಆರ್ಥಿಕ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಅವುಗಳಿಗೆ ತಕ್ಕಹಾಗೆ ರೇಷ್ಮೆ ನೂಲು ಬಿಚ್ಚುವ ಸುಧಾರಿತ ಉಪಕರಣಗಳು ರಚಿತವಾದ ಪಕ್ಷದಲ್ಲಿ ರೇಷ್ಮೆ ಕೈಗಾರಿಕೆಗೆ ಹಾಗೂ ಅದನ್ನು ಅವಲಂಬಿಸಿ ಜೀವನೋಪಾಯ ಮಾಡುವವರಿಗೆ ಅನುಕೂಲವಾಗುತ್ತದೆ

**೭. ರೇಷ್ಮೆ ವಿನಿಮಯ ಕೇಂದ್ರ**

ಸುಮಾರು ೩೦ ವರ್ಷಗಳ ಹಿಂದೆ ರೈತರಿಗೆ ತಾವು ಉತ್ಪಾದಿಸಿದ ರೇಷ್ಮೆ ಗೂಡುಗಳ ಮಾರಾಟಕ್ಕೆ ಇದ್ದ ತೊಂದರೆ ರೇಷ್ಮೆ ಗೂಡಿನ ಮಾರುಕಟ್ಟೆಗಳ ಸ್ಥಾಪನೆ ಮತ್ತು 'ಮಾರುಕಟ್ಟೆಯ ನಿಯಮ'ಗಳನ್ನು ಅನುಷ್ಠಾನಗೊಳಿಸುವುದರ ಮೂಲಕ ರೇಷ್ಮೆ ಗೂಡು ಉತ್ಪಾದಕರಿಗೆ ಮತ್ತು ಬಳಕೆದಾರರಿಗೆ ಬಹಳವೇ ಅನುಕೂಲವಾಯಿತು.

ಇಂತಹದೇ ಮಾರುಕಟ್ಟೆಯ ವ್ಯವಸ್ಥೆಯನ್ನು ಅಂದರೆ ರೇಷ್ಮೆನೂಲು ತಯಾರಿಸಿ ಮಾರಾಟ ಮಾಡುವವರಿಗೆ ಮತ್ತು ಗ್ರಾಹಕರಿಗೆ (ನೇಯ್ಗೆದಾರರು) ನೇರವಾಗಿ ಬಹಿರಂಗವಾಗಿ ವಹಿವಾಟು ಮಾಡುವುದಕ್ಕೆ ಅನುಕೂಲಿಸುವಂತೆ, 'ರೇಷ್ಮೆ ವಿನಿಮಯ ಕೇಂದ್ರ'ಗಳನ್ನು ಪ್ರಾರಂಭಿಸುವ ಉದ್ದೇಶ ಮಾಡಲಾಯಿತು. ಇದಕ್ಕೆ ಮುಂಚೆ ನೂಲು ಮಾರಾಟ, ಖಾಸಗೀ ವರ್ತಕರ, ದಳ್ಳಾಳಿಯವರ ಸ್ವಾಮ್ಯಕ್ಕೊಳಪಟ್ಟಿದ್ದು, ನೂಲು ಉತ್ಪಾದಿಸಿವುದರ ಅನೇಕ ಬಗೆಯ ಕಷ್ಟನಷ್ಟಗಳನ್ನು ಅನುಭವಿಸುತ್ತಿದ್ದರು. ಇದರ ಪರಿಣಾಮ, ರೈತರಿಂದ ರೇಷ್ಮೆಗೂಡನ್ನು ಖರೀದಿಸುವ ಸಮಯದಲ್ಲೂ ಪರಿಣಾಮ ಬೀಳುತ್ತಿತ್ತು. ಇದು ಒಂದು ಮುಖವಾದರೆ, ನೂಲನ್ನು ಬಳಸುವವರು ವರ್ತಕರ ಮೂಲಕವೇ ತಮಗೆ ಬೇಕಾದ ಕಚ್ಚಾ ರೇಷ್ಮೆಯನ್ನು ಖರೀದಿಸಬೇಕಿತ್ತು. ಈ ರೀತಿಯ ವ್ಯವಸ್ಥೆ ಅವರ ಮೇಲೂ ಕೆಟ್ಟ ಪರಿಣಾಮ ಬೀರಿತ್ತು ವರ್ತಕರು ನೂಲನ್ನು ಖರೀದಿಸುವಾಗ ಮತ್ತು ನೂಲನ್ನು ಮಾರಾಟ ಮಾಡುವಾಗ ಅನೇಕ ರೀತಿಯ ಅವ್ಯವಹಾರಗಳನ್ನು ಅನುಸರಿಸುತ್ತಿದ್ದರು (ಬೆಲೆ ನಿಗದಿ ಮಾಡುವಲ್ಲಿ ರಹಸ್ಯ ಕ್ರಮ, ತೂಕದಲ್ಲಿ ಸೋಡಿ ಪಡೆಯುವುದು ಮತ್ತು ಮೋಸ, ರುಸುಂ ವಸೂಲು ಮಾಡುವುದು, ಕಡಿಮೆ ಬೆಲೆ, ವಹಿವಾಟದ ಮೊತ್ತವನ್ನು ವಿಳಂಬ ಪಾವತಿ ಮಾಡುವುದು).

ರೇಷ್ಮೆ ನೂಲನ್ನು ಉತ್ಪಾದಿಸುವವರು ಮತ್ತು ಬಳಕೆದಾರರು ಯಾವ ರೀತಿಯ ಶೋಷಣೆಗೂ ಒಳಗಾಗದಂತೆ - ಮಾರಾಟಮಾಡುವುದು, ಕೊಂಡುಕೊಳ್ಳುವಿಕೆ ಸುಗಮವಾಗಿ ಆಗುವಂತೆ ಮಾಡಿರುವ ಸೌಲಭ್ಯವೇ 'ರೇಷ್ಮೆ ವಿನಿಮಯ ಕೇಂದ್ರ'.

ರೇಷ್ಮೆ ನೂಲು ಉತ್ಪಾದನೆಯಾಗುವ ಪ್ರದೇಶ ಮತ್ತು ಗುಣಮಟ್ಟ ಆಧರಿಸಿ ನೂಲನ್ನು ವರ್ಗೀಕರಿಸಿ, ಬಹಿರಂಗ ಹರಾಜು ವ್ಯವಸ್ಥೆಯನ್ನು ಮಾಡಲಾಗಿದೆ. ಅನುಜ್ಞಾ ಪತ್ರ (Licence) ಪಡೆದ ಸುಮಾರು ೧,೫೦೦ಕ್ಕೂ ಹೆಚ್ಚು ವರ್ತಕರು ರೇಷ್ಮೆ ವಿನಿಮಯ ಕೇಂದ್ರದಲ್ಲಿ ನಡೆಯುವ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ನೂಲು ಕೊಂಡು ಕೊಳ್ಳುವರು. ನೂಲು ಬಿಚ್ಚುವವರಿಗೆ ಅವರು ಉತ್ಪಾದಿಸಿದ ನೂಲಿನ ಗುಣಮಟ್ಟಕ್ಕೆ ತಕ್ಕಂತೆ ಬೆಲೆಯು ಬಹಿರಂಗ ಹರಾಜಿನಲ್ಲಿ ದೊರೆಯುತ್ತದೆ. ಈ ಕೇಂದ್ರದಲ್ಲಿ ತೂಕ, ರಸೀತಿ ತಯಾರು ಮಾಡುವುದು, ಹಣ ಪಾವತಿ ಮುಂತಾದ ಮಾರುಕಟ್ಟೆಯ ಚಟುವಟಿಕೆಗಳಲ್ಲಿ ನೂತನ ವಿಧಾನಗಳನ್ನು ಅಳವಡಿಸಲಾಗಿದೆ. ರೇಷ್ಮೆನೂಲು ಮಾರಾಟಕ್ಕೆ ತಂದವರಿಗೆ ಬೆಲೆ ಒಪ್ಪಿಗೆಯಾಗದಿದ್ದಲ್ಲಿ, ವಿನಿಮಯದ ಉಗ್ರಾಣದಲ್ಲಿ ಉಚಿತವಾಗಿ ದಾಸ್ತಾನು ಮಾಡುವ ವ್ಯವಸ್ಥೆ ಇದ್ದು ಅವರಿಗೆ ಹಣದ ಅವಶ್ಯಕತೆ ಇದ್ದರೆ, ರೇಷ್ಮೆಯನ್ನು ಒತ್ತೆ ಇಟ್ಟು ಅದರ ಮೌಲ್ಯದ ಬಹುಪಾಲನ್ನು ಮುಂಗಡವಾಗಿ ಪಡೆಯ ಬಹುದು. ರೇಷ್ಮೆನೂಲನ್ನು ಬಸ್ ನಿಲ್ದಾಣದಿಂದ, ವಿನಿಮಯ ಕೇಂದ್ರಕ್ಕೆ ಸಾಗಿಸಲು ಉಚಿತವಾಹನ ವ್ಯವಸ್ಥೆ, ಉಚಿತ ಹಮಾಲಿಗಳ ಸೇವೆ ಇತ್ಯಾದಿ ಸೌಲಭ್ಯಗಳನ್ನು ಒದಗಿಸಲಾಗಿದೆ. ರಾಜ್ಯದಲ್ಲಿ ಈವರೆವಿಗೂ ಒಂಬತ್ತು ಇಂತಹ ರೇಷ್ಮೆ ವಿನಿಮಯ ಕೇಂದ್ರಗಳನ್ನು ವಿವಿಧ ಸ್ಥಳಗಳಲ್ಲಿ ತೆರೆಯಲಾಗಿದೆ. ೧೯೯೩-೯೪ನೇ ಸಾಲಿನಲ್ಲಿ ೧೯೨೪ ಟನ್ನುಗಳಷ್ಟು ಕಚ್ಚಾ ರೇಷ್ಮೆ ನೂಲು ಈ ಕೇಂದ್ರಗಳ ಮೂಲಕ ವಹಿವಾಟು ಆಗಿದೆ. ನಗದು ಹಣಪಾವತಿ ಮತ್ತು ಮಾರುಕಟ್ಟೆಯ ಬೆಲೆ, ನೂಲಿನ ದಾಸ್ತಾನು (arrivls) ಮತ್ತು ಗ್ರಾಹಕರಿಗೆ ಬೇಕಾಗಬಹುದಾದ ರೇಷ್ಮೆನೂಲಿನ ಮಾಹಿತಿಯನ್ನು ನೇರವಾಗಿ ತಿಳಿದುಕೊಳ್ಳುವ ಮುಕ್ತ ಅವಕಾಶವಿದೆ. ಈ ರೀತಿಯ ಅವಕಾಶವನ್ನು ಕಲ್ಪಿಸಿಕೊಟ್ಟಿರುವುದರಿಂದ, ನೂಲು ಬಿಚ್ಚುವ ಘಟಕಗಳಲ್ಲಿ ಕೂಲಿಗಾಗಿ ದುಡಿಯುವ ಜನರಿಗೆ ಸಮಾನವಾದ ದಿನಗೂಲಿ (ಈ ಹಿಂದೆ ಒಂದೇ ರೀತಿಯ ಕೆಲಸಕ್ಕೆ, ಗಂಡಸರಿಗೂ ಮತ್ತು ಹೆಂಗಸರಿಗೂ ದಿನಗೂಲಿಯಲ್ಲಿ ವ್ಯತ್ಯಾಸವಿತ್ತು) ಮತ್ತು ವಿಳಂಬವಿಲ್ಲದೆ ಪಾವತಿಯನ್ನು ಮಾಡುವುದಕ್ಕೆ ಅನುಕೂಲವಾಗಿದೆ. ರೇಷ್ಮೆ ವಿನಿಮಯ ಕೇಂದ್ರದೊಂದಿಗೆ ಸರ್ಕಾರದ ಸ್ವಾಮ್ಯದಲ್ಲಿ 'ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ'ಯನ್ನು ಅಸ್ತಿತ್ವಕ್ಕೆ ತರಲಾಗಿದೆ. ಈ ಮಂಡಳಿ ರೇಷ್ಮೆ ವಿನಿಮಯ ಕೇಂದ್ರವಲ್ಲಿ ನಡೆಯುವ ಹರಾಜಿನಲ್ಲಿ ಭಾಗವಹಿಸಿ ರೇಷ್ಮೆ ವಿನಿಮಯ ಕೇಂದ್ರದಲ್ಲಿ ನಡೆಯುವ ಹರಾಜಿನಲ್ಲಿ ಭಾಗವಹಿಸಿ ರೇಷ್ಮೆಯನ್ನು ಕೊಂಡು ಅಧಿಕ ಪ್ರಮಾಣದಲ್ಲಿ ಉತ್ಪಾದನೆಯಾಗುವ ದಿನಗಳಲ್ಲಿ ಸಾಮಾನ್ಯವಾಗಿ ಎದುರಾಗುವ ಬೆಲೆ ಕುಸಿತದಿಂದ ತೊಂದರೆಯಾಗದಂತೆ ನೋಡಿ ಕೊಳ್ಳುವುದೇ ಇದರ ಮೂಲ ಉದ್ದೇಶ. ಅಂತಹ ದಿನಗಳಲ್ಲಿ ಮಂಡಳಿಯು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ನೂಲನ್ನು ಕೊಳ್ಳುತ್ತದೆ.

### ೮. ರಾಷ್ಟ್ರೀಯ ರೇಷ್ಮೆ ಅಭಿವೃದ್ಧಿ ಯೋಜನೆ

ವಿಶ್ವಬ್ಯಾಂಕ್ ಆರ್ಥಿಕ ನೆರವಿನ ೫೫೫ ಕೋಟಿ ರೂಪಾಯಿಗಳ ಅಂದಾಜು

ವೆಚ್ಚದ 'ರಾಷ್ಟ್ರೀಯ ರೇಷ್ಮೆ ಯೋಜನೆಯು' ಏಪ್ರಿಲ್ ೧೯೮೯ರಿಂದ ರಾಷ್ಟ್ರದ ರೇಷ್ಮೆ ಬೆಳೆಯುವ ಪ್ರಮುಖ ರಾಜ್ಯಗಳಾದ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಪಶ್ಚಿಮಬಂಗಾಳ, ಜಮ್ಮು ಮತ್ತು ಕಾಶ್ಮೀರ ರಾಜ್ಯಗಳಲ್ಲದೆ, ರೇಷ್ಮೆ ಉದ್ಯಮಕ್ಕೆ ಹೊಸತಾಗಿರುವ ಇತರ ೧೨ ಆಯ್ದ ರಾಜ್ಯಗಳಲ್ಲಿ ವಿವಿಧ ವಿಸ್ತೃತ ರೇಷ್ಮೆ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಕಾರ್ಯಗತವಾಗುತ್ತಲಿದೆ.

ಕರ್ನಾಟಕದಲ್ಲಿ ರೇಷ್ಮೆ ಉದ್ಯಮದ ಅಭಿವೃದ್ಧಿಗಾಗಿ ಈ ಯೋಜನೆಯಡಿಯಲ್ಲಿ ೧೧೮.೩ ಕೋಟಿ ರೂ.ಗಳು ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಈ ಯೋಜನೆಯಡಿಯಲ್ಲಿ ರೈತರಿಗೆ ಮತ್ತು ನೂಲು ಬಿಚ್ಚುವವರಿಗೆ ಸಾಲ ಸೌಲಭ್ಯಗಳನ್ನು ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳ ಮುಖಾಂತರ ಒದಗಿಸುವುದು, ಮೂಲ ತಳಿ ಉತ್ಪಾದನಾ ಸಾಮರ್ಥ್ಯವನ್ನು ಅಭಿವೃದ್ಧಿ ಪಡಿಸುವುದು, ತಾಂತ್ರಿಕ ಮತ್ತು ತರಬೇತಿ ಸೌಲಭ್ಯಗಳನ್ನು ಮಾರುಕಟ್ಟೆಗಳ ಅಭಿವೃದ್ಧಿ, ಸಂಶೋಧನೆ ಮತ್ತು ಮಹಿಳಾ ಅಭಿವೃದ್ಧಿ. ರಾಜ್ಯದಲ್ಲಿ (ಈ ಯೋಜನೆಯ ಅವಧಿಯ ೧೯೮೯ರಿಂದ ೧೯೯೭ರ ವರ್ಷಗಳಲ್ಲಿ) ರೇಷ್ಮೆ ಗೂಡಿನ ಉತ್ಪಾದನೆ ೧೯೮೯ರಲ್ಲಿ ೫೦,೫೧೫ ಟನ್ನುಗಳಿದ್ದು, ೧೯೯೩-೯೪ ರಲ್ಲಿ ೭೦,೨೦೮ ಟನ್‌ಗಳು ಉತ್ಪಾದನೆ ಆಗಿದೆ. ಇದೇ ಅವಧಿಯಲ್ಲಿ ರೇಷ್ಮೆನೂಲಿನ ಪ್ರಮಾಣ ೬೦೭೬ ಟನ್ನುಗಳಿಂದ ೮೨೫೦ ಟನ್ನುಗಳಿಗೆ ಮುಟ್ಟಿದೆ. ಈ ಯೋಜನೆಯ ಅವಧಿಯಲ್ಲಿ ಸಂಪನ್ಮೂಲ ಘಟಕಗಳನ್ನು ಕ್ರೋಡೀಕರಿಸುವುದು, ಅವುಗಳ ಉತ್ಪಾದನಾ ಸಾಮರ್ಥ್ಯದ ಪೂರ್ಣ ಬಳಕೆಗೆ ಬೇಕಾದ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಕಾರ್ಯಗತ ಮಾಡುವುದು ಮುಖ್ಯ ಉದ್ದೇಶವಾಗಿದೆ.

## ೯. ರೇಷ್ಮೆ ಉದ್ಯಮ, ಮಹಿಳೆಯರ ಅಭಿವೃದ್ಧಿ

ರೇಷ್ಮೆ ವ್ಯವಸಾಯದಿಂದ ಕೃಷಿಕರ ಕುಟುಂಬಗಳಲ್ಲಿ ಸಾಮಾನ್ಯವಾಗಿ ಮಹಿಳೆಯರು ತಮ್ಮ ಗೃಹಕೃತ್ಯಗಳ ಜೊತೆಗೆ ಹಿಪ್ಪುನೇರಳೆ ಸೊಪ್ಪು ಕೀಳುವುದು, ಚಾಕಿ ಹುಳು ಸಾಕಾಣಿಕೆ ಮಾಡುವುದು, ರೇಷ್ಮೆ ಹುಳುವಿನ ಕಸ ತೆಗೆಯುವುದು, ಹುಳುವಿಗೆ ಸೊಪ್ಪು ಕೊಡುವುದು ಮುಂತಾದ ಕೆಲಸಗಳನ್ನು ನಿರ್ವಹಿಸುತ್ತಿರುತ್ತಾರೆ. ಕೃಷಿ ಕಾರ್ಮಿಕ ಮಹಿಳೆಯರೂ ಸಹ ರೇಷ್ಮೆ ಕೃಷಿಯಲ್ಲಿ ಉದ್ಯೋಗಾವಕಾಶ ಪಡೆಯುತ್ತಾರೆ. ರೇಷ್ಮೆ ಬಿತ್ತನೆ ಮೊಟ್ಟೆ ತಯಾರಿಕೆಯಲ್ಲಿ ಸಹ ತೊಡಗಿರುತ್ತಾರೆ. ರೇಷ್ಮೆ ನೂಲು ಬಿಚ್ಚಾಣಿಕೆಯು ಕುಶಲತೆ ಹಾಗೂ ನೈಪುಣ್ಯತೆಯ ಒಂದು ಸಂಕೀರ್ಣ ಕಸುಬಾಗಿದ್ದು, ಮಹಿಳೆಯರ ಪಾತ್ರ ಪ್ರಧಾನವಾಗಿದೆ. ಒಟ್ಟಾರೆ ಹೇಳುವುದಾದರೆ, ವಿವಿಧ ಹಂತಗಳ ಕಾರ್ಯಚಟುವಟಿಕೆಗಳಲ್ಲಿ ಶೇಕಡಾ ೬೦ರಷ್ಟು ಮಹಿಳೆಯರು ಭಾಗವಹಿಸುತ್ತಿದ್ದಾರೆ. ಇವಲ್ಲದೆ, ರೇಷ್ಮೆನೂಲು ಹುರಿಮಾಡುವುದು, ರೇಷ್ಮೆಯ ನೇಯ್ಗೆಯ ಪೂರಕ ಕಾರ್ಯಗಳು, ವಸ್ತ್ರವಿನ್ಯಾಸ, ಸಿದ್ಧ ಉಡುಪುಗಳ ತಯಾರಿಕೆ

ಮುಂತಾದವುಗಳಲ್ಲೂ ಮಹಿಳಾ ಕಾರ್ಮಿಕರು ದುಡಿಯುತ್ತಿದ್ದಾರೆ. ರೇಷ್ಮೆ ಉದ್ಯಮಕ್ಕೆ ಪೂರಕವಾದ, ತಟ್ಟೆ, ಬುಟ್ಟಿ, ಚಂದ್ರಿಕೆ ಇತ್ಯಾದಿ ಉಪಕರಣಗಳ ತಯಾರಿಕೆಯಲ್ಲಿಯೂ ಸಹ ಮಹಿಳೆಯರು ನಿರತರಾಗಿದ್ದಾರೆ. ರೇಷ್ಮೆ ಕೈಗಾರಿಕೆಯಲ್ಲಿ ಉದ್ಯೋಗ ಮತ್ತು ಸ್ವಾವಲಂಬನೆ ಒದಗಿಸುವ ವಿಶೇಷ ಅವಕಾಶವಿರುವುದು ಒಂದು ಗಣನೀಯ ಅಂಶ.

ಉದ್ಯಮದಲ್ಲಿ ಪರಿಣತಿ ಹೊಂದಿದ ಮಹಿಳಾ ಸಮುದಾಯವನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಂಡಲ್ಲಿ ಉದ್ಯಮದ ಅಭಿವೃದ್ಧಿಯೊಂದಿಗೆ ಕುಟುಂಬದ ಆರ್ಥಿಕ ಆದಾಯವು ಹೆಚ್ಚುವುದಲ್ಲದೆ, ಮಹಿಳೆಯರ ಹಾಗೂ ಆ ಮೂಲಕ ಕುಟುಂಬದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯು ಸಾಧ್ಯವಾಗುತ್ತದೆ.

ಈ ಹಿಂದಿನ ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳಾ ಸಮುದಾಯವನ್ನು ಪರಿಗಣಿಸದೇ ಹೋಗಿರುವುದರಿಂದ. 'ರಾಷ್ಟ್ರೀಯ ರೇಷ್ಮೆ ಯೋಜನೆ'ಗಳಲ್ಲಿ ಉದ್ಯಮದ ಪ್ರಗತಿಗೆ ವಿಶೇಷವಾಗಿ ಕಾರಣವಾಗಿರುವ ಮಹಿಳೆಯರ ಅಭಿವೃದ್ಧಿಗಾಗಿ ಅನುಕೂಲಗಳನ್ನು ಒದಗಿಸಲು ವಿಶ್ವಬ್ಯಾಂಕ್ ಆರ್ಥಿಕ ನೆರವಿನ 'ರಾಷ್ಟ್ರೀಯ ಯೋಜನೆ'ಯಲ್ಲಿ ವಿವಿಧ ಅವಕಾಶಗಳನ್ನು ಕಲ್ಪಿಸಲಾಗಿದೆ. ಯೋಜನೆಯ ಉದ್ದೇಶಗಳನ್ನು ಸಾಧಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಸಂಕ್ಷಿಪ್ತವಾಗಿ, ಅವುಗಳು ೧) ಮಹಿಳೆಯರನ್ನು ರೇಷ್ಮೆ ಕೃಷಿಕರೆಂದು ಗುರುತಿಸುವುದು, ೨) ರೇಷ್ಮೆ ಕೃಷಿ ಮತ್ತು ಉದ್ಯಮದಲ್ಲಿ ತೊಡಗಿರುವ ಮಹಿಳೆಯರಿಗೆ ಸಾಲ ಸೌಲಭ್ಯದ ಜೊತೆಗೆ ಅವರು ನಿರತರಾಗಿರುವ ಕಾರ್ಯ ಚಟುವಟಿಕೆಗಳ ಅಗತ್ಯಕ್ಕೆ ತಕ್ಕ ತರಬೇತಿ ಮತ್ತು ವಿಸ್ತರಣಾ ಸೌಲಭ್ಯ, ೩) ರೇಷ್ಮೆ ಗೂಡಿನ ಹಾಗೂ ನೂಲಿನ ಮಾರುಕಟ್ಟೆಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹ ಕೊಡುವುದು ೪) ಉದ್ಯಮದ ವಹಿವಾಟನ್ನು ನಡೆಸಿಕೊಂಡು ಹೋಗಲು ಅನುಕೂಲವಾಗುವಂತೆ ಮೇಲ್ವಿಚಾರಣೆ, ಮುಂತಾದವುಗಳ ಬಗ್ಗೆ ಶಿಕ್ಷಣ ನೀಡುವುದು.

ಈ ಮೇಲಿನ ಯೋಜನೆಯಡಿಯಲ್ಲಿ ಗುರುತಿಸಿರುವ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಿದಲ್ಲಿ, ಈವರಿವಿಗೂ ಉದ್ಯಮದಲ್ಲಿದ್ದು ತಾಂತ್ರಿಕ ಮಾರ್ಗದರ್ಶನ, ಆರ್ಥಿಕ ಆದಾಯಕ್ಕೆ ತೀರ ಅವಕಾಶ ಹೊಂದಿರದ ಮಹಿಳೆಯರು ಮತ್ತು ಮಹಿಳಾ ಕಾರ್ಮಿಕರು, ಸ್ವಂತ ಉದ್ಯಮಿಯಾಗ ಬಯಸುವ ಮಹಿಳೆಯರು ಮತ್ತು ವಿವಿಧ ಶೋಷಣೆಗೊಳಗಾಗಿ ಸಾಮಾಜಿಕ ಜೀವನಾವಶ್ಯಕ ಸೌಲಭ್ಯಗಳು ಹಾಗೂ ಹಕ್ಕು ವಂಚಿತರಾದ ಮಹಿಳೆಯರು ಇದರ ಲಾಭವನ್ನು ಪಡೆಯುತ್ತಾರೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಈಗಾಗಲೇ ಗ್ರಾಮೀಣ ಪ್ರದೇಶದಲ್ಲಿ ಕೆಲಸ ಮಾಡುತ್ತಿರುವ ಮಹಿಳಾ ಮಂಡಳಿಗಳು, ಸರ್ಕಾರೇತರ ಸಂಘ ಸಂಸ್ಥೆಗಳನ್ನು ಗುರುತಿಸಲಾಗಿದೆ. ಈ ಉದ್ದೇಶ ಸಾಧನೆಯಲ್ಲಿ ಕೆಲವು ಕ್ಷೇತ್ರಗಳಲ್ಲಿ ಫಲಿತಾಂಶ ಉತ್ತೇಜಕವಾಗಿದೆ.

## ೧೦. ಸಾರಾಂಶ

ರಾಜ್ಯದಲ್ಲಿ ಎಂಟನೇ ಪಂಚವಾರ್ಷಿಕ ಯೋಜನೆ ಅವಧಿಯ ಕೊನೆಯ ವೇಳೆಗೆ - ಸುಮಾರು ೧೦,೦೦೦ ಟನ್ನುಗಳು ರೇಷ್ಮೆ ಉತ್ಪಾದನೆ ಆಗುವ ನಿರೀಕ್ಷೆ ಇದ್ದು ಇದೇ ಅವಧಿಯಲ್ಲಿ ನೆರೆರಾಜ್ಯಗಳಾದ ಆಂಧ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳ್ಲಲೂ, ರೇಷ್ಮೆ ಕೃಷಿ ಅಭಿವೃದ್ಧಿ ಆಗಿ - ರೇಷ್ಮೆ ಉತ್ಪಾದನೆಯೂ ಸಹ ಆಗುವ ಯೋಜನೆಗಳು ಪ್ರಾರಂಭವಾಗಿದೆ. ರಾಜ್ಯದಲ್ಲಿ, ಈಗ ಉತ್ಪತ್ತಿ ಆಗುತ್ತಿರುವ ಒಟ್ಟು ರೇಷ್ಮೆ ಉತ್ಪಾದನೆಯಲ್ಲಿ ಶೇಕಡಾ ೪೦ರಿಂದ ೪೫ರಷ್ಟು ಮಾತ್ರ ಬಳಕೆ ಇದೆ. ಇನ್ನುಳಿದ ರೇಷ್ಮೆ ನೂಲಿನ ಉತ್ಪಾದನೆ ತಮಿಳುನಾಡು ಮತ್ತು ಉತ್ತರ ಪ್ರದೇಶದಲ್ಲಿರುವ, ನೇಯ್ಗೆ ಕಸುಬಿಗೆ ಪೂರಕವಾಗಿದೆ. ಮುಂದಿನ ವರ್ಷಗಳಲ್ಲಿ ಈ ರಾಜ್ಯದಲ್ಲಿ ಅಧಿಕವಾಗಿ ಉತ್ಪತ್ತಿ ಆಗುವ ರೇಷ್ಮೆ ನೂಲಿನಿಂದ ನಮ್ಮ ರಾಜ್ಯದ ಉತ್ಪಾದನೆಗೆ ಬೇಡಿಕೆ ಕಡಿಮೆ ಆಗಬಹುದು. ಅಂದರೆ, ನಮ್ಮಲ್ಲಿ ಉತ್ಪತ್ತಿ ಆಗುತ್ತಿರುವ - ರೇಷ್ಮೆ ನೂಲನ್ನು, ಉಪಯೋಗಿಸಿ ಕೊಳ್ಳುವುದರಲ್ಲಿ ಬೇಕಾದ ಸಾಮರ್ಥ್ಯವನ್ನು ವೃದ್ಧಿಕೊಳ್ಳುವುದು ಅನಿವಾರ್ಯ.

ಈವರೆವಿಗೂ ದೊರಕಿರುವ ಪರಿಶ್ರಮ ಚಾಲನೆಯಲ್ಲಿರುವ ತಾಂತ್ರಿಕ ಪ್ರಗತಿ ಇವುಗಳನ್ನು ಗಮನಿಸಿದಲ್ಲಿ, ೨೦೦೧ನೇ ದಶಕದ ವೇಳೆಗೆ ರಾಜ್ಯದಲ್ಲಿ ಸುಮಾರು ೧೫೦೦೦ ಟನ್ನುಗಳಷ್ಟು ರೇಷ್ಮೆ ಉತ್ಪಾದನೆ ಆಗುವ ನಿರೀಕ್ಷೆ ಇದೆ. ಅಂದರೆ, ಪೂರಕವಾಗಿ, ಈ ಉತ್ಪಾದನೆಯನ್ನು ಬಳಸಿಕೊಳ್ಳಲು ನಮ್ಮ ಸಾಮರ್ಥ್ಯವನ್ನು ವೃದ್ಧಿಗೊಳಿಸುವ ಅಭಿವೃದ್ಧಿ ಯೋಜನೆಗಳಲ್ಲಿ ಗಮನ ಹರಿಸುವುದು ಸೂಕ್ತ. ಇದರ ಜೊತೆಗೆ, ಅಂತರರಾಷ್ಟ್ರೀಯ ಬೇಡಿಕೆ ಸಹ ಹೆಚ್ಚುತ್ತಿದ್ದು, ರಾಜ್ಯದಲ್ಲಿ ಉತ್ಪಾದನೆಯಾಗುತ್ತಿರುವ ರೇಷ್ಮೆನೂಲಿನ ಗುಣಮಟ್ಟವನ್ನು ಅಪೇಕ್ಷಿತ ಗುರಿಗೆ ವೃದ್ಧಿಗೊಳಿಸುವುದು ಮೊದಲನೆಯ ಗುರಿಯಾಗಬೇಕು.

ರಾಜ್ಯದಲ್ಲಿನ ಹಿಪ್ಪುನೇರಳೆ ಕ್ಷೇತ್ರ ನೂಲನ್ನು ಬಿಚ್ಚುವ ಘಟಕಗಳು, ಈ ಉದ್ಯೋಗದಲ್ಲಿ ತೊಡಗಿರುವ ಜನರಲ್ಲಿ ಅಡಗಿರುವ ಕುಶಲತೆ ಮತ್ತು ಈವರೆವಿಗೂ ವಿವಿಧ ಅಭಿವೃದ್ಧಿ ಯೋಜನೆಗಳಲ್ಲಿ ಸ್ಥಾಪಿಸಲಾಗಿರುವ ಸಂಪನ್ಮೂಲಗಳ ಪೂರ್ಣ ಸಾಮರ್ಥ್ಯದ ಬಳಕೆ ಅಗತ್ಯವಾಗಿದೆ. ರಾಜ್ಯದ ದಕ್ಷಿಣ ಜಿಲ್ಲೆಗಳಲ್ಲಿ ರೇಷ್ಮೆ ಕೈಗಾರಿಕೆಯು ಕೇಂದ್ರಿಕೃತವಾಗಿದ್ದು, ಉತ್ತರ ಜಿಲ್ಲೆಗಳಲ್ಲಿ ನಿರೀಕ್ಷಿಸಿದ ಬೆಳವಣಿಗೆ ಆಗಲಿಲ್ಲ. ಆದರೆ, ಈ ಜಿಲ್ಲೆಗಳಲ್ಲಿ ಅನೇಕ ಹಳ್ಳಿಗಳಲ್ಲಿ, ನೇಯ್ಗೆ ಚಟುವಟಿಕೆಗಳಲ್ಲಿ ಅನೇಕ ಕುಟುಂಬಗಳು ನಿರತರಾಗಿದ್ದಾರೆ. ಈ ಕುಟುಂಬಗಳಲ್ಲಿ ಈ ಚಟುವಟಿಕೆ ಸಾಂಪ್ರದಾಯಿಕವಾಗಿ ಬಂದಿದ್ದು, ಅವರವರ ಸಂಸ್ಕೃತಿಯನ್ನು ಅಳವಡಿಸಿಕೊಂಡಿದೆ. ಹೀಗೆ ಕೇಂದ್ರೀಕೃತವಾಗಿರುವ ಮಾನವ ಕುಶಲತೆಯನ್ನು ಗಮನಿಸಿ ಅದರ ಬಳಕೆಗೆ ಆದ್ಯತೆ ನೀಡುವುದು ರಾಜ್ಯದ ಗುರಿಯಾಗಬೇಕು. ಇದರಿಂದ ಮಾತ್ರ ಕೈಗಾರಿಕೆಯಲ್ಲಿ ಅಡಗಿರುವ ವಿವಿಧ ಚಟುವಟಿಕೆಗಳ ಪರಿಣಿತಿಯು ಎಲ್ಲಾ ಜನರ ಅಭಿವೃದ್ಧಿಗೂ

ಪೂರಕವಾಗುವುದರಲ್ಲಿ ಸಾಫಲ್ಯತೆಯನ್ನು ಪಡೆಯುತ್ತದೆ. ಇದರಿಂದ ಮುಖ್ಯವಾಗಿ ಅಭಿವೃದ್ಧಿ ಯೋಜನೆಯ ಮುಖ್ಯ ಗುರಿಯಾದ ಗ್ರಾಮೀಣ ಪ್ರದೇಶದ ಜನರಿಗೆ ಉದ್ಯೋಗಾವಕಾಶ, ಆರ್ಥಿಕ ವರ್ಧನೆ ಮತ್ತು ಅವರ ಜೀವನ ಸುಧಾರಿಸುವುದು. ಪ್ರಾಮುಖ್ಯವಾಗಿ, ಈ ನಿಲುವಿನಲ್ಲಿ ರಾಜ್ಯದ ಜನರಲ್ಲಿ ಅಡಗಿರುವ ಸಂಸ್ಕೃತಿಯನ್ನು ಕಾಪಾಡಿಕೊಂಡು ಹೋಗಲು ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಕ್ಕೆ ತಂದಲ್ಲಿ, ಜನರ ಸ್ಪಂದನೆಯೂ ಸಹಕಾರವೂ ಸಿಗುವುದರಲ್ಲಿ ಸಂಶಯವಿಲ್ಲ. ಕರ್ನಾಟಕ ರಾಜ್ಯ, ರೇಷ್ಮೆ ಕೈಗಾರಿಕೆಯಲ್ಲಿ ಇಲ್ಲಿಯವರೆವಿಗೂ ಇರುವ ಮೊದಲನೇ ಸ್ಥಾನವನ್ನು ಉಳಿಸಿಕೊಳ್ಳುವುದರ ಜೊತೆಗೆ, ಜನರು ಸಾಮಾಜಿಕ ಮತ್ತು ಆರ್ಥಿಕ ಮೌಲ್ಯವನ್ನು ಸಹ ಮುಂದುವರಿಸಿಕೊಂಡು ಹೋಗುವುದರಲ್ಲಿ ಸಾಧ್ಯತೆ ಇದೆ.

# ಸಾಮಾಜಿಕ ಬದಲಾವಣೆ: ಪಂಚಾಯತ್‌ರಾಜ್ ಮತ್ತು ಸ್ವಯಂಸೇವಾ ಸಂಸ್ಥೆಗಳ ಪಾತ್ರ

ಎನ್. ಶಿವಣ್ಣ

**ಪ್ರಸ್ತಾವನೆ**

ದೇಶದ ಅಥವಾ ಯಾವುದೇ ರಾಜ್ಯದ ಆರ್ಥಿಕ ಅಭಿವೃದ್ಧಿಯ ಪರಿಪೂರ್ಣತೆಯನ್ನು ಕಾಣುವುದು ಆರ್ಥಿಕ ಅಭಿವೃದ್ಧಿಯ ಜೊತೆಯಲ್ಲಿ ಸಾಮಾಜಿಕ ಬದಲಾವಣೆಯನ್ನು ಕಂಡಾಗಲೇ ಎಂದರೆ ತಪ್ಪಾಗಲಾರದು. ತಾತ್ವಿಕವಾಗಿ ನೋಡಿದಾಗ ಕೇವಲ ಆರ್ಥಿಕ ಸುಧಾರಣೆಯಾದರೆ ಸಾಲದು. ಅದರ ಜೊತೆಯಲ್ಲಿ ಒತ್ತುಕೊಡುವ ಮತ್ತು ಪೂರಕವಾದ ಸಾಮಾಜಿಕ ಬದಲಾವಣೆಯು ಕೂಡ ಅತಿ ಮುಖ್ಯವಾದದ್ದು. ಸಮಾಜದಲ್ಲಿ ಇಂತಹ ಬದಲಾವಣೆಗಳನ್ನು ತರುವುದರಲ್ಲಿ ಹಲವಾರು ಸಂಘ ಸಂಸ್ಥೆಗಳು, ಅದರಲ್ಲೂ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಇದಕ್ಕೆ ಬೇಕಾದ ಆರ್ಥಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡಿವೆ. ಈ ಸಂಸ್ಥೆಗಳ ಕಾರ್ಯವ್ಯಾಪ್ತಿ ಮುಖ್ಯವಾಗಿ ಗ್ರಾಮಗಳ ಅಭಿವೃದ್ಧಿ ಮತ್ತು ಗ್ರಾಮ ಜನತೆಯನ್ನು ಬಡತನ ರೇಖೆಯಿಂದ ಮೇಲೆ ತರುವುದು. ಈ ಲೇಖನದ ಮುಖ್ಯ ವಿಷಯವಾದ ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಪಂಚಾಯತ್ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಪಾತ್ರವೇನು ಎಂದು ಪಶ್ನಿಸಿಕೊಂಡಾಗ, ಉದ್ಭವವಾಗುವ ಪ್ರಶ್ನೆ, ಈ ಸಂಸ್ಥೆಗಳೂ ಹಾಗೂ ಸಾಮಾಜಿಕ ಬದಲಾವಣೆಯ ನಡುವಿನ ಸಂಬಂಧವೇನು ಎಂಬುದರ ಬಗ್ಗೆ ಮುಖ್ಯವಾಗಿ ನಾವು ಇಲ್ಲಿ ತಿಳಿಯಬೇಕಾಗಿದೆ.

ಸಾಮಾಜಿಕ ಬದಲಾವಣೆ ಅಂದರೆ ಸಮಾಜದಲ್ಲಿ ಆದಂತಹ ವಿವಿಧ ಮಾರ್ಪಾಟುಗಳು ಅಥವಾ ಬದಲಾವಣೆಗಳು - ಅದು ಸಾಮಾಜಿಕ ಪರಿವರ್ತನೆ ಆಗಿರಬಹುದು, ಆರ್ಥಿಕ ಅಭಿವೃದ್ಧಿ ಆಗಿರಬಹುದು, ಸಾಂಸ್ಕೃತಿಕ ಮಾರ್ಪಾಡು ಆಗಿರಬಹುದು, ಒಂದು ಗುಂಪಿನ ಅಥವಾ ಜನಾಂಗದ ಸಾಮಾಜಿಕ ಸ್ಥಾನಮಾನ ಮತ್ತು ಆರ್ಥಿಕ ಬದಲಾವಣೆ ಇರಬಹುದು, ಜನತೆಯ ದಿನನಿತ್ಯದ ಜೀವನದಲ್ಲಿ

ಸುಧಾರಣೆ ಆಗಿರಬಹುದು. ಇಂತಹ ಉದ್ದೇಶಿತ ಬದಲಾವಣೆಗಳು, ಮುಖ್ಯವಾಗಿ ಹೇಳುವುದಾದರೆ, ಆಯಾ ಕ್ಷೇತ್ರವನ್ನು ಮತ್ತು ಜನರನ್ನು ಅಭಿವೃದ್ಧಿ ಪಥದಲ್ಲಿ ಕೊಂಡೊಯ್ಯುವಂತಹ ಪ್ರಯತ್ನವಾಗಿರುತ್ತವೆ.

ಮೇಲೆ ತಿಳಿಸಿರುವ ವಿಷಯದ ಹಿನ್ನೆಲೆಯಲ್ಲಿ ಇಟ್ಟುಕೊಂಡು, ನಾವು ಈ ಲೇಖನದಲ್ಲಿ ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಪಂಚಾಯತ್ ಮತ್ತು ಸ್ವಯಂ ಸೇವಾಸಂಸ್ಥೆಗಳ ಪಾತ್ರವೇನು, ಇಂತಹ ಒಂದು ಬದಲಾವಣೆಯನ್ನು ತರುವುದಕ್ಕೆ ಈ ಸಂಸ್ಥೆಗಳು ಹಮ್ಮಿಕೊಂಡಿರುವ ಅಭಿವೃದ್ಧಿ ಕಾರ್ಯಕ್ರಮಗಳೇನು ಹಾಗೂ ಕಾರ್ಯಾಚರಣೆಗೆ ತರುವುದರಲ್ಲಿ ಯಾವ ಯಾವ ತರಹದ ಅಡಚಣೆಗಳನ್ನು ಅವು ಎದುರಿಸುತ್ತಿವೆ ಮತ್ತು ಸಾಮಾಜಿಕ ಬದಲಾವಣೆ ಜನಜೀವನದ, ಮುಖ್ಯವಾಗಿ ಬಡಜನತೆಯ ಹಾಗೂ ವಿವಿಧ ವರ್ಗ ಮತ್ತು ಜನಾಂಗಗಳ ಮೇಲೆ ಎಂತಹ ಪರಿಣಾಮ ಬೀರಿದೆ-ಇಂತಹ ಹಲವಾರು ವಿಷಯಗಳನ್ನು ಈ ಲೇಖನದಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಈ ಲೇಖವನ್ನು ಮೂರು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಪಂಚಾಯತ್‌ಗಳ ಪಾತ್ರ, ಎರಡನೇ ಭಾಗದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಮತ್ತು ಮೂರನೇ ಭಾಗದಲ್ಲಿ ಈ ಎರಡೂ ಸಂಸ್ಥೆಗಳು ವಹಿಸಿದ ಪಾತ್ರದ ಕಾರಣ ಉಂಟಾದ ಪರಿಣಾಮಗಳ ಬಗ್ಗೆ ಒಂದು ವಿಚಾರಪೂರಿತ ವಿಶ್ಲೇಷಣೆಯನ್ನು ಮಾಡಲಾಗಿದೆ.

## ಭಾಗ - ಒಂದು

**ಪಂಚಾಯತ್ ಸಂಸ್ಥೆಗಳ ಪಾತ್ರ:**

ಪಂಚಾಯತ್ ಸಂಸ್ಥೆಗಳು ನಮ್ಮ ದೇಶದಲ್ಲಿ ಅನಾದಿಕಾಲದಿಂದಲೂ ಕಾರ್ಯ ನಡೆಸುತ್ತಾ ಬಂದಿವೆ. ಇವುಗಳಿಗೆ ತಮ್ಮದೇ ಆದ ಒಂದು ಚರಿತ್ರೆ ಇದೆ. ಇತಿಹಾಸ ಸಂಶೋಧನೆ ಮೂಲಕ ಹೇಳುವುದಾದರೆ "ಪ್ರಾಚೀನ ಭಾರತದಲ್ಲಿದ್ದ ಸ್ಥಳೀಯ ಸ್ವಯಂ ಸರ್ಕಾರಗಳು ಬ್ರಿಟಿಷ್ ಆಡಳಿತ ಅಥವಾ ಇವತ್ತಿನ ಸ್ಥಿತಿಗೆ ಹೋಲಿಸಿದಾಗ ವಿಶಾಲವಾಗಿ ಹಮ್ಮಿಕೊಂಡಿದ್ದು ಹೆಚ್ಚಿನ ಮಟ್ಟದಲ್ಲಿ ಸ್ವಜತ್ವ ಹೊಂದಿದ್ದು ಆರ್ಥಿಕ ಮಟ್ಟದಲ್ಲಿ ಯಶಸ್ವಿ ಹೊಂದಿದ ಸಂಸ್ಥೆಗಳಾಗಿದ್ದವು" (ವೆಂಕಟರಾಮಯ್ಯ ಮತ್ತು ಪಟ್ಟಾಭಿರಾಮ್-೧೯೬೯). ಈ ಒಂದು ಯಶಸ್ವಿಗೆ ಮುಖ್ಯ ಕಾರಣ ಆ ದಿನಗಳಲ್ಲಿ ಇದ್ದ ಒಳ್ಳೆಯ ಪರಿಸರ, ಜಾತ್ಯಾತೀಯತೆ ಮತ್ತು ಮುಖ್ಯವಾಗಿ ಅಂದಿನ ಸಮಾಜದಲ್ಲಿದ್ದ ಸಮಗ್ರತೆಯ ಗುಣ. ಆದರೆ ಇಂತಹ ಒಂದು ಪರಿಸರ ಹಾಗೂ ಸಮಗ್ರತೆ, ಇತ್ತೀಚಿನ ಇತಿಹಾಸದಲ್ಲಿ ನೋಡಿದಾಗ ಅಷ್ಟೇನು ಕಂಡುಬರುವುದಿಲ್ಲ. ಏಕೆಂದರೆ ಇವುಗಳಿಗೆ ಬೇಕಾದ ಬಲವಾದ ರಾಜಕೀಯ ಮತ್ತು ಹಣಕಾಸಿನ ಸ್ವಾಯತ್ತತೆ ಇಲ್ಲದ್ದು ಮತ್ತು ಯಾವಾಗಲೂ ಇವುಗಳ ಆಡಳಿತ ಪಟ್ಟಭದ್ರ

ಹಿತಾಸಕ್ತಿಗಳ ಹಿಡಿತದಲ್ಲಿ ಇದ್ದದರಿಂದ ಈ ಸಂಸ್ಥೆಗಳು ಪ್ರಜಾತಂತ್ರೀಯವಾಗಿ ಕೆಲಸ ಮಾಡಲು ಸಾಧ್ಯವಾಗಲಿಲ್ಲ. ಇಂತಹ ಒಂದು ಪರಿಸ್ಥಿತಿ ಇತ್ತೀಚಿನ ವರ್ಷಗಳವರೆಗೂ ಇತ್ತು. ಹಲವಾರು ರಾಜ್ಯಗಳಲ್ಲಿ, ಮುಖ್ಯವಾಗಿ ಹೇಳಬೇಕಾದರೆ ಕರ್ನಾಟಕ ಮತ್ತು ಪಶ್ಚಿಮಬಂಗಾಳಗಳಲ್ಲಿ ಈ ಸಂಸ್ಥೆಗಳನ್ನು ಗೌರವಯುತ ಮತ್ತು ಶಕ್ತಿಯುತ ಸಂಸ್ಥೆಗಳನ್ನಾಗಿ ಮಾಡುವಂತಹ ಪ್ರಯತ್ನಗಳನ್ನು ಮಾಡಲಾಗಿದೆ. ಇದಕ್ಕೆ ಒತ್ತಾಗಿ ಇತ್ತೀಚೆಗೆ ತಂದ ಸಂವಿಧಾನದ ಎಪ್ಪತ್ತೂಮ್ರನೇ ತಿದ್ದುಪಡಿಯು ಈ ಸಂಸ್ಥೆಗಳಿಗೆ ಪರಿಪೂರ್ಣವಲ್ಲದಿದ್ದರೂ, ಅರ್ಥಪೂರ್ಣವಾದ ಸ್ವಾಯತ್ತತೆಯನ್ನು ಕೊಟ್ಟಿದೆ.

**ಕರ್ನಾಟಕದ ಪಂಚಾಯತ್ ರಾಜ್ ವ್ಯವಸ್ಥೆ**

ಕರ್ನಾಟಕದಲ್ಲಿ ಪಂಚಾಯತ್ ರಾಜ್ಯ ವ್ಯವಸ್ಥೆಯು ೧೮೬೨ರಲ್ಲಿ 'ಸ್ಥಳೀಯ ನಿಧಿ'ಯನ್ನು ಸ್ಥಾಪಿಸುವುದರ ಮೂಲಕ ಉಗಮವಾಯಿತು. ಇವುಗಳನ್ನು ಸ್ವಾಯತ್ತತೆ ಸಂಸ್ಥೆಗಳನ್ನಾಗಿ ಮಾಡಲು ಸ್ವಾತಂತ್ರೋತ್ತರದ ಸರ್ಕಾರಗಳು ಸಮಿತಿಗಳನ್ನು (ವೆಂಕಟಪ್ಪ ಸಮಿತಿ, ಚಂದ್ರಶೇಖರಯ್ಯ ಸಮಿತಿ, ಕೊಂಡಜ್ಜಿ ಬಸಪ್ಪ ಸಮಿತಿ) ರಚಿಸುವುದರ ಮೂಲಕ ಪ್ರಯತ್ನ ಮಾಡಿದವು. ಆದರೆ ಹೇಳಿಕೊಳ್ಳುವಂತಹ ಫಲ ದೊರಕಲಿಲ್ಲ. ಇವುಗಳಿಗೆ ನಿಜವಾದ ಸ್ವಾಯತ್ತತೆ ಬಂದಿದ್ದು ೧೯೮೫ರಲ್ಲಿ ಸ್ಥಾಪಿಸಲಾದ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತಿಗಳಿಂದ ಅಂದರೆ ತಪ್ಪಾಗಲಾರದು. ಅಂದರೆ ಹಿಂದೆ ಇದ್ದ ಸಂಸ್ಥೆಗಳ ಪಾತ್ರವೇನೂ ಇರಲಿಲ್ಲ ಅಂತ ವಾದವಲ್ಲ. ಆ ಸಂಸ್ಥೆಗಳು ಕೂಡ ಮುಖ್ಯವಾಗಿ ಆಗ ಇದ್ದ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಜನ ಮೆಚ್ಚುವಂತಹ ಕೆಲಸ ಮಾಡಿವೆ. ಆದರೆ ಈ ಸಂಸ್ಥೆಗಳಿಗೆ ಸರಿಯಾದ ಮತ್ತು ಸಮಂಜಸವಾದ ಅಧಿಕಾರ ಮತ್ತು ಹಣ ಇರಲಿಲ್ಲ, ಹೆಚ್ಚಿನ ರೀತಿಯಲ್ಲಿ ಇವು ರಾಜ್ಯ ಸರ್ಕಾರದ 'ಪ್ರತಿನಿಧಿ' ಸಂಸ್ಥೆಗಳಾಗಿ ಕೆಲಸ ಮಾಡಿದವು. ಆದರೂ ಸಹ ಒಂದು ರೀತಿಯಲ್ಲಿ ಹೇಳುವುದಾದರೆ, ಇವತ್ತಿನ ಸಂಸ್ಥೆಗಳ ಸ್ಥಾಪನೆಗೆ ಆಗ ಇದ್ದ ಸ್ಥಳೀಯ ಸಂಸ್ಥೆಗಳಾದ ಗ್ರಾಮ ಪಂಚಾಯಿತಿ, ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಜಿಲ್ಲಾ ಅಭಿವೃದ್ಧಿ ಸಂಘಗಳು ಒಂದು ಭದ್ರತಳಪಾಯವನ್ನು ಕೊಟ್ಟಿವೆ.

ಪಂಚಾಯತ್ ಸಂಸ್ಥೆಗಳ ಪಾತ್ರವನ್ನು ಪ್ರಮುಖವಾಗಿ ಎರಡು ರೀತಿಗಳಲ್ಲಿ ನೋಡಬಹುದಾಗಿದೆ. ಒಂದನೆಯದಾಗಿ, ಈ ಸಂಸ್ಥೆಗಳಲ್ಲಿ ಎಷ್ಟರಮಟ್ಟಿನಲ್ಲಿ ಸಮಾಜದ ವಿವಿಧ ವರ್ಗಗಳು ಭಾಗವಹಿಸಲು ಸಾಧ್ಯವಾಗಿದೆ ಹಾಗೂ ಈ ಸಂಸ್ಥೆಗಳು ಎಷ್ಟರಮಟ್ಟಿನಲ್ಲಿ ಈ ವರ್ಗಗಳಿಗೆ ಸಮೀಪದಲ್ಲಿವೆ ಮತ್ತು ಸೇವೆಗಳನ್ನು ಸಲ್ಲಿಸುತ್ತಿವೆ ಎಂಬುದು. ಏಕೆಂದರೆ, ವಿಕೇಂದ್ರೀಕರಣದ ಒಂದು ಮೂಲ ಉದ್ದೇಶ ಸ್ಥಳೀಯ ಸಂಸ್ಥೆಗಳು ಯಾವುದೇ ಗುಂಪಿನ ಅಥವಾ ವರ್ಗದ ಜನಾಂಗದ ಅಭಿವೃದ್ಧಿಗಾಗಿ ತೆಗೆದುಕೊಂಡಂತಹ ನಿರ್ಣಯಗಳ ಫಲಗಳನ್ನು ಅಂತಹ ಜನಾಂಗದವರು ಪಡೆದಾಗಲೇ ಮತ್ತು ಅನುಭವಿಸಿದಾಗಲೇ ನಿಜವಾದ

ವಿಕೇಂದ್ರೀಕರಣ ಸಾಧ್ಯ. ಎರಡನೆಯದಾಗಿ, ಈ ಪಂಚಾಯತ್ ಸಂಸ್ಥೆಗಳು ರೂಪಿಸಿ ಮತ್ತು ಅನುಷ್ಠಾನಗೊಳಿಸುತ್ತಿರುವ ಅಭಿವೃದ್ಧಿ ಕಾರ್ಯಕ್ರಮಗಳು ಹಳ್ಳಿಗಳ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಅಥವಾ ಸರ್ವತೋಮುಖ ಅಭಿವೃದ್ಧಿಗೆ ಯಾವ ತರಹದಲ್ಲಿ ಸಹಾಯವಾಗಿವೆ ಎಂದು ತಿಳಿಯುವುದರ ಮೂಲಕ ನಾವು ಈ ಸಂಸ್ಥೆಗಳು ಒಟ್ಟಾರೆ ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಎಂತಹ ಪಾತ್ರವನ್ನು ವಹಿಸುತ್ತಿವೆ ಎಂದು ತಿಳಿಯಬಹುದಾಗಿದೆ. ಈ ಎರಡು ವಿಷಯಗಳನ್ನು ವಿಶ್ಲೇಷಿಸುವುದಕ್ಕೆ ಮೊದಲು ಇಲ್ಲಿ ನಾವು ಸಂಕ್ಷಿಪ್ತವಾಗಿ ಕರ್ನಾಟಕ ಪಂಚಾಯತ್ ಸಂಸ್ಥೆಗಳ ಸ್ವರೂಪ ಮತ್ತು ರಚನೆಯ ಬಗ್ಗೆ ತಿಳಿದುಕೊಳ್ಳುವುದು ಅತ್ಯಾವಶ್ಯಕ. ಮುಖ್ಯವಾಗಿ ೧೯೮೩ರ ಮತ್ತು ೧೯೯೩ರ ಅಧಿನಿಯಮಗಳ ಬಗ್ಗೆ ವಿವರವಾಗಿ ತಿಳಿದುಕೊಳ್ಳೋಣ.

ಕರ್ನಾಟಕದ ಪಂಚಾಯತ್ ರಾಜ್ ವ್ಯವಸ್ಥೆಯ ಬಗ್ಗೆ ದೇಶ ವಿದೇಶಗಳಲ್ಲಿ ಹೆಚ್ಚಿನ ಮಟ್ಟದ ಪ್ರಾಧಾನ್ಯತೆ ಮತ್ತು ಪ್ರಾಶ್ಯಸ್ತತೆ ದೊರಕಿದೆ. ಹೊಸ ವ್ಯವಸ್ಥೆಯ (೧೯೮೩ರ ಅಧಿನಿಯಮದ) ಮೂಲಕ ಸ್ಥಳೀಯ ಮಟ್ಟದಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗಳ ರಚನೆ ಮತ್ತು ಪ್ರಕಾರ್ಯಗಳಲ್ಲಿ ತೀವ್ರತರಹದ ಸುಧಾರಣೆಗಳನ್ನು ತರಲಾಯಿತು. 'ಜನತೆಗ ಅಧಿಕಾರ' ಎಂಬ ಸರ್ಕಾರದ ಘೋಷಣೆಯನ್ನು ಯಶಸ್ವಿಯಾಗಿ ಅನುಷ್ಠಾನ ತರುವುದರಲ್ಲಿ ಹೊಸ ವ್ಯವಸ್ಥೆ ಬಹಳ ಮಟ್ಟಿನ ಯಶಸ್ಸನ್ನು ಸಾಧಿಸಿತು.

ಹೊಸದಾಗಿ ೧೯೮೩ರಲ್ಲಿ ರಚಿಸಿಕೊಂಡು ೧೯೮೭ರಲ್ಲಿ ಅನುಷ್ಠಾನಕ್ಕೆ ಬಂದ ಪ್ರಜಾಪ್ರಭುತ್ವ ವಿಕೇಂದ್ರಿಕರಣದ ವ್ಯವಸ್ಥೆಯಲ್ಲಿ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತಿಗಳು ಚುನಾಯಿತ ಸಂಸ್ಥೆಗಳಾಗಿದ್ದವು. ಜಿಲ್ಲಾ ಪರಿಷತ್ ಅಧ್ಯಕ್ಷರಿಗೆ (೧೯೮೩ರ ಅಧಿನಿಯಮದಲ್ಲಿ) ರಾಜ್ಯ ಮಂತ್ರಿ ಸ್ಥಾನವನ್ನು ಹಾಗೂ ಉಪಾಧ್ಯಕ್ಷರಿಗೆ ಉಪಮಂತ್ರಿ ಸ್ಥಾನವನ್ನು ಕೊಡಲಾಗಿತ್ತು. ಇದರ ಪರಿಣಾಮವಾಗಿ ಇವರಿಗೆ ಅಧಿಕಾರಿಗಳ ಮೇಲೆ ಆಡಳಿತ ಹಿಡಿತವನ್ನು ಕೊಡಲಾಗಿತ್ತು. ದೇಶದಲ್ಲಿ ಮೊದಲ ಬಾರಿಗೆ ಒಟ್ಟು ಸ್ಥಾನಗಳಲ್ಲಿ ಶೇ. ೨೫ರಷ್ಟು ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಾಗಿ ಇಡಲಾಗಿತ್ತು. ಇದೇ ರೀತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಒಟ್ಟು ಸ್ಥಾನಗಳಲ್ಲಿ ಶೇ. ೧೫ ಮತ್ತು ಶೇ. ೩ರಷ್ಟು ಸ್ಥಾನಗಳನ್ನು ಮೀಸಲಾಗಿಡಲಾಗಿತ್ತು. ಇದು ಒಂದು ತರಹದ 'ಕ್ರಾಂತಿಕಾರಿ ಹೆಜ್ಜೆ' ಆಗಿತ್ತು. ಯುವ ಜನತೆಯನ್ನು ಸಕ್ರಿಯವಾಗಿ ಸ್ಥಳೀಯ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸುವಂತೆ ಮಾಡಲು ಮತನೀಡುವ ವಯಸ್ಸನ್ನು ೧೮ ವರ್ಷಕ್ಕೆ ಇಳಿಸಲಾಯಿತು.

ಇಲಾಖಾವಾರು ವಿಷಯಗಳ ಆಧಾರದ ಮೇಲೆ ರಚಿತಗೊಂಡ ಸ್ಥಾಯಿ

ಸಮಿತಿಗಳ ಮೂಲಕ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತಿಗಳು ತಮಗೆ ವಹಿಸಿದ ಕಾರ್ಯ ಮತ್ತು ಜವಾಬ್ದಾರಿಗಳನ್ನು ನಡೆಸಿಕೊಂಡು ಹೋಗುತ್ತಿದ್ದವು. ಈ ಸಮಿತಿಗಳ ಕಾರ್ಯಗಳ ಮೂಲಕ ಸದಸ್ಯರುಗಳು ಆಯಾ ಕ್ಷೇತ್ರಗಳಲ್ಲಿ ವಿಶೇಷ ಜ್ಞಾನವನ್ನು ಬೆಳೆಸಿಕೊಳ್ಳುವುದಕ್ಕೆ ಬಹುಮಟ್ಟಿನ ರೀತಿಯಲ್ಲಿ ಅನುಕೂಲವಾಗಿತ್ತು. ಸದಸ್ಯರು ಆಪ್ತರೀತಿಯಲ್ಲಿ, ನಿರ್ಭಂಧವಿಲ್ಲದೆ ಮತ್ತು ಮುಚ್ಚುಮರೆ ಇಲ್ಲದೆ ಚರ್ಚೆಯನ್ನು ಮಾಡುವುದಕ್ಕೆ ಈ ಸಮಿತಿಗಳು ಅವಕಾಶ ಮಾಡಿಕೊಟ್ಟಿದ್ದವು.

ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತಿ ವ್ಯವಸ್ಥೆಯ ಪ್ರಗತಿಪರವಾದ ಸುಧಾರಣೆಗಳಲ್ಲಿ ಗಮನಿಸಬಹುದಾದಂತಹ ಸುಧಾರಣೆಯೆಂದರೆ, ಪ್ರಪ್ರಥಮಬಾರಿಗೆ ಯೋಜನೆಗಳನ್ನು ರೂಪಿಸುವಲ್ಲಿ ಮತ್ತು ಅನುಷ್ಠಾನಗೊಳಿಸುವಿಕೆಯಲ್ಲಿ ಇಲ್ಲಿಯವರೆಗೂ ಇದ್ದ 'ಮೇಲಿನಿಂದ ಕೆಳಕ್ಕೆ' ನೀತಿಯ ಬದಲು 'ಕೆಳಗಿನಿಂದ ಮೇಲಕ್ಕೆ' ಎಂಬ ನೀತಿಯನ್ನು ಪ್ರತಿಪಾದಿಸಿ ಅದನ್ನು ಕಾರ್ಯರೂಪಕ್ಕೆ ತಂದಿರುವುದು. ಈ ಕಾರ್ಯಕ್ಷೇತ್ರದಲ್ಲಿ ಮಾಡಿರುವ ಸಂಶೋಧನಾ ಅನುಭವಗಳ ಮೂಲಕ ತಿಳಿಯುವದೇನೆಂದರೆ ಸ್ವಲ್ಪಮಟ್ಟಿನಲ್ಲಿ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳು ತಮ್ಮ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರುವುದರಲ್ಲಿ ಯಶಸ್ಸನ್ನು ಸಾಧಿಸಿರುವುದು (ಅಬ್ದುಲ್ ಅಜೀಜ್, ೧೯೯೩).

ಇತ್ತೀಚೆಗೆ ತರಲಾದ ೧೯೯೩ರ ಆಧಿನಿಯಮದಲ್ಲಿ ಪಂಚಾಯತ್‌ಗಳನ್ನು ಮೂರು ಹಂತಗಳಲ್ಲಿ ಸ್ಥಾಪಿಸಲಾಗಿದೆ, ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್. ಈ ಮೂರು ಸಂಸ್ಥೆಗಳಿಗೆ ಭದ್ರತಳಪಾಯ ಕೊಟ್ಟಿರುವ ವ್ಯವಸ್ಥೆಯ ಇನ್ನೊಂದು ಅಂಗ ಎಂದರೆ 'ಗ್ರಾಮಸಭೆ', ಇದನ್ನು ಪಂಚಾಯತ್ ರಾಜ್‌ನ 'ಜೀವಾತ್ಮ' ಎಂದು ಬಣ್ಣಿಸಲಾಗಿದೆ. ಈ ಆಧಿ ನಿಯಮವು ಆದಷ್ಟು ಮಟ್ಟಿಗೆ ಸಂವಿಧಾನದ ೭೩ನೇ ತಿದ್ದುಪಡಿಯ ಪರಿವಿಧಿಯನ್ನು ಗಮನದಲ್ಲಿಟ್ಟು ಕೊಂಡು ರಚಿಸಲಾಗಿದೆ. ಈ ತಿದ್ದುಪಡಿಯಲ್ಲಿ ಗಮನಿಸಬೇಕಾದ ಮುಖ್ಯಾಂಶಗಳಾವುದೆಂದರೆ:

ಅ. ಮೂರು ಮಟ್ಟಗಳಲ್ಲೂ ಚುನಾಯಿತ ಪಂಚಾಯತ್‌ಗಳನ್ನು ಸ್ಥಾಪಿಸುವುದು.

ಆ. ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಜನಸಂಖ್ಯಾನುಗುಣವಾಗಿ ಸ್ಥಾನಗಳನ್ನು, ಮಹಿಳೆಯರಿಗೆ ಪ್ರತಿ ವರ್ಗದಿಂದಲೂ ಮೂರನೇ ಒಂದರಷ್ಟು ಸ್ಥಾನಗಳನ್ನು ಹಾಗೂ ಹಿಂದುಳಿದ ವರ್ಗದವರಿಗೆ ಆಯಾ ರಾಜ್ಯಗಳ ತೀರ್ಮಾನದಂತೆ ಸ್ಥಾನಗಳನ್ನು ಸದಸ್ಯರ ಹಾಗೂ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಮಟ್ಟದಲ್ಲಿ ಮೀಸಲಾಗಿಡುವುದು.

ಇ. ರಾಜ್ಯ ಹಣಕಾಸಿನ ಆಯೋಗ ಮತ್ತು ಚುನಾವಣಾ ಆಯೋಗಗಳನ್ನು ರಚಿಸುವುದು ಮತ್ತು

ಈ. ಐದು ವರ್ಷಗಳಿಗೊಮ್ಮೆ ಎಲ್ಲಾ ಪಂಚಾಯತ್‌ಗಳಿಗೆ ಚುನಾವಣೆಗಳನ್ನು ನಡೆಸುವಿಕೆ ಹಾಗೂ ಪಂಚಾಯತ್ ಅವಧಿಯ ೬ ತಿಂಗಳೊಳಗಾಗಿ ಈ ಪ್ರಕ್ರಿಯೆಯನ್ನು ಮುಗಿಸುವಿಕೆ.

೯೩ನೇ ಅಧಿನಿಯಮದಲ್ಲಿ ಹೆಚ್ಚು ಒತ್ತು ಕೊಟ್ಟಿರುವ ಅಂಶಗಳೆಂದರೆ ವಿಕೇಂದ್ರಿತ ಪಂಚಾಯತ್‌ಗಳ ಆಡಳಿತದಲ್ಲಿ ಜನರು ಹೆಚ್ಚು ಹೆಚ್ಚಾಗಿ ಭಾಗವಹಿಸುವುದಕ್ಕೆ ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಅತಿ ಸಮರ್ಪಕವಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಅವಕಾಶ ಮಾಡಿಕೊಟ್ಟಿರುವುದು. ಸಂವಿಧಾನದ ೭೩ನೇ ತಿದ್ದುಪಡಿಯಿಂದ ಬಂದ ಸ್ಥಿರತೆ ಮತ್ತು ಸ್ವಾಯತ್ತತೆ ಫಲವಾಗಿ ಈ ಸಂಸ್ಥೆಗಳು ತಮ್ಮದೇ ಆದ ಗೂಡನ್ನು ಕಟ್ಟಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟಂತಾಗಿದೆ. ರಾಜಕೀಯ ವಿಕೇಂದ್ರೀಕರಣ, ಆಡಳಿತ ವಿಕೇಂದ್ರೀಕರಣ ಮತ್ತು ಹಣಕಾಸಿನ ವಿಕೇಂದ್ರೀಕರಣದ ಪರಿಣಾಮವಾಗಿ ಪಂಚಾಯತಿಗಳು ಹಳ್ಳಿಗಳಲ್ಲಿ ಪ್ರಜಾಪ್ರಭುತ್ವವನ್ನು ಬಲವಾಗಿಸುವುದರಲ್ಲಿ ಬಹಳ ಮಟ್ಟಿನ ಪಾತ್ರವಹಿಸುವುದಕ್ಕೆ ಅವಕಾಶ ಮಾಡಿಕೊಟ್ಟಂತಾಗಿದೆ.

**ಸಾಮಾಜಿಕ ಸುಧಾರಣೆ**

ಹಿಂದೆ ಉಲ್ಲೇಖಿಸಿದಂತೆ, ವಿಕೇಂದ್ರೀಕೃತ ಸ್ಥಳೀಯ ಸಂಸ್ಥೆಗಳ ಅಸ್ತಿತ್ವ ಮತ್ತು ಪ್ರಾಮುಖ್ಯತೆಯ ಬೆಳಕಿಗೆ ಬರಬೇಕಾದರೆ ಸಂಸ್ಥೆಗಳು ತೆಗೆದುಕೊಂಡಂತಹ ನಿರ್ಣಯಗಳು ಸ್ಥಳೀಯ ಜನತೆಯ ಅಭಿವೃದ್ಧಿಗೆ ಪೂರಕವಾದಾಗ ಮತ್ತು ಜನತೆ ಆಡಳಿತ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದಾಗ ಮಾತ್ರ ಸಾಧ್ಯ ಎಂದರೆ ಬಹುಶಃ ತಪ್ಪಾಗಲಾರದು. ಇಂತಹ ಒಂದು ಅವಕಾಶವನ್ನು ಇತ್ತೀಚೆಗೆ ಬಂದ ೧೯೯೩ರ ಅಧಿನಿಯಮದಲ್ಲಿ ಮಾಡಿಕೊಡಲಾಗಿದೆ. ಆದರೆ ಇಂತಹ ಒಂದು ಅವಕಾಶ ಹಿಂದೆ ಇದ್ದ ಅಧಿನಿಯಮಗಳಲ್ಲಿ ಅಷ್ಟಾಗಿ ಇರಲಿಲ್ಲ. ಏಕೆಂದರೆ, ಹಿಂದೆ ಇದ್ದ ಪಂಚಾಯತಿಗಳ ಆಡಳಿತ ವ್ಯವಸ್ಥೆಯು ಪಟ್ಟಬದ್ಧ ಹಿತಾಸಕ್ತಿಗಳ ಹಿಡಿತದಲ್ಲಿ ಇದ್ದುದರ ಪರಿಣಾಮವಾಗಿ ದುರ್ಬಲ ವರ್ಗದವರು, ಹಿಂದುಳಿದ ಜನಾಂಗದವರು ರಾಜಕೀಯ ಮತ್ತು ಆಡಳಿತ ವ್ಯವಸ್ಥೆಯಲ್ಲಿ, ಮುಖ್ಯವಾಗಿ ನಿರ್ಣಯಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರಲಿಲ್ಲ. ಇದಕ್ಕೆ ಮೂಲ ಕಾರಣ ಸಾಮಾನ್ಯವಾಗಿ ದುರ್ಬಲ ಮತ್ತು ಹಿಂದುಳಿದ ಜನಾಂಗದವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಹಳ ಹಿಂದುಳಿದವರಾಗಿದ್ದಾರೆ.

ಕರ್ನಾಟಕದಲ್ಲಿ ನೋಡಿದಾಗ, ಸುಮಾರು ಮೂರುದಶಕಗಳ ಕಾಲ ಸಾಮಾಜಿಕವಾಗಿ, ಆರ್ಥಿಕವಾಗಿ ಮುಂದುವರೆದ ಜಾತಿ ಪಂಗಡಗಳಿಗೆ ಸೇರಿದ ಸದಸ್ಯರೇ ಹೆಚ್ಚಿನ ಮಟ್ಟದಲ್ಲಿ ಈ ಸಂಸ್ಥೆಗಳನ್ನು ಪ್ರತಿನಿಧಿಸುತ್ತಾ ಬಂದಿದ್ದರು. ದೃಷ್ಟಾಂತ ಮೂಲಕ ಹೇಳುವುದಾದರೆ ಹಿಂದೆ ಇದ್ದ ಗ್ರಾಮ ಪಂಚಾಯತ್‌ನ ಶೇ.

೩೦.೧೭ ಮತ್ತು ಶೇ. ೨೩.೮೨ರಷ್ಟು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳು ಲಿಂಗಾಯತ್ ಮತ್ತು ಒಕ್ಕಲಿಗರ ಜನಾಂಗಕ್ಕೆ ಸೇರಿದ ಸದಸ್ಯರ ಪಾಲಾಗಿತ್ತು, ಒಟ್ಟು ೧೭೫ ತಾಲ್ಲೂಕು ಅಭಿವೃದ್ಧಿ ಮಂಡಳಿಗಳಲ್ಲಿ ೫೪ ಅಧ್ಯಕ್ಷರ, ೨೮ ಉಪಾಧ್ಯಕ್ಷರ ಮತ್ತು ೮೦೮ ಸದಸ್ಯತ್ವ ಸ್ಥಾನಗಳು ಲಿಂಗಾಯಿತ ಜನಾಂಗಕ್ಕೆ ಸೇರಿದ ಸದಸ್ಯರ ಪಾಲಾಗಿತ್ತು. ಒಟ್ಟಾರೆ ಶೇಕಡಾದಲ್ಲಿ ಲಿಂಗಾಯತರ ಪಾಲು ೨೫.೭೨ ಮತ್ತು ಒಕ್ಕಲಿಗರ ಪಾಲು ೨೩.೧೮ ಆಗಿತ್ತು. ಅಂದರೆ ಒಟ್ಟು ಶೇ. ೪೮.೯೦ ಈ ಎರಡು ಜನಾಂಗಕ್ಕೆ ಸೇರಿದ ಸದಸ್ಯರ ಪಾಲಾಗಿತ್ತು (ಎರಡನೇ ಹಿಂದುಳಿದ ಜನಾಂಗದ ಸಮಿತಿಯ ವರದಿ, ೧೯೮೬). ಹಿಂದೆ ಇದ್ದ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತ್‌ಗಳಲ್ಲೂ ಕೂಡ ಈ ಎರಡು ಜನಾಂಗಕ್ಕೆ ಸೇರಿದ ಸದಸ್ಯರುಗಳದೇ ಹೆಚ್ಚಿನ ಬಹುಮತ ಇತ್ತು, ಉದಾಹರಣೆಗೆ ಜಿಲ್ಲಾ ಪರಿಷತ್ತಿನ ಒಟ್ಟು ೧೯ ಅಧ್ಯಕ್ಷರ ಸ್ಥಾನಗಳಲ್ಲಿ ೬ ಲಿಂಗಾಯಿತ ಮತ್ತು ೪ ಒಕ್ಕಲಿಗರ ಪಾಲಾಗಿದ್ದು, ಒಟ್ಟು ಶೇ. ೫೫ರಷ್ಟು ಇವರ ಪಾಲಾಗಿತ್ತು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪಂಚಾಯತ್ ಸಂಸ್ಥೆಗಳ ಸ್ಥಾನಗಳು ಯಾವುದೇ ರೀತಿಯಲ್ಲಿ ಆಯಾ ಜಾತಿ ಜನಾಂಗದ ಒಟ್ಟು ಜನಸಂಖ್ಯೆಯನ್ನು ಪ್ರತಿಬಿಂಬಿಸುವುದಿಲ್ಲ. ಉದಾಹರಣೆಗೆ, ಕರ್ನಾಟಕ ರಾಜ್ಯದಲ್ಲಿ ಒಕ್ಕಲಿಗ ಮತ್ತು ಲಿಂಗಾಯಿತ ಜನಸಂಖ್ಯೆಯು ಶೇ. ೧೧.೬೮ ಮತ್ತು ಶೇ. ೧೬.೯೨ರಷ್ಟು ಇದೆ. ಇದಕ್ಕೆ ಅನುಗುಣವಾಗಿ ಜಿಲ್ಲಾ ಪರಿಷತ್ ಅಧ್ಯಕ್ಷರ ಸಂಖ್ಯೆ ೪ ಮತ್ತು ೬ರಷ್ಟು ಇದೆ. ಇದೇ ರೀತಿ ರಾಜ್ಯದ ಒಟ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಶೇ. ೧೫.೮೬ರಷ್ಟು ಇದ್ದರೆ ಈ ಪಂಗಡ ಹಿಂದಿನ ಜಿಲ್ಲಾ ಪರಿಷತ್ತಿನಲ್ಲಿಗಳಿಸಿದ ಸ್ಥಾನ ಕೇವಲ ಒಂದು. ಕುರುಬ ಜನಾಂಗದ ಜನಸಂಖ್ಯೆ ಶೇ. ೬.೯೨ರಷ್ಟು ಇದೆ. ಆದರೆ ಈ ಪಂಗಡ ಗಳಿಸಿದ ಸ್ಥಾನ ಕೇವಲ ಒಂದು. ಇದಕ್ಕೆ ಮುಖ್ಯ ಕಾರಣ ಲಿಂಗಾಯುತ ಮತ್ತು ಒಕ್ಕಲಿಗ ಜನಾಂಗದವರು ಒಂದು ನಿರ್ಧಿಷ್ಟವಾದ ಸ್ಥಳದಲ್ಲಿ ವಾಸವಾಗಿರುವುದರಿಂದ ಈ ಜನಾಂಗದವರು ಹೆಚ್ಚಿನ ಮಟ್ಟದಲ್ಲಿ ಸಜ್ಜುಗೊಳ್ಳುವುದಕ್ಕೆ ಅವಕಾಶ ಇದೆ (ಅಮಲ್ ರೇ ಮತ್ತು ಜಯಲಕ್ಷ್ಮಿ ಕೆ, ೧೯೮೭).

ಇದರಿಂದ ತಿಳಿಯುವ ಮುಖ್ಯ ವಿಷಯವೇನೆಂದರೆ, ಇಲ್ಲಿಯವರಿಗೂ ಈ ಸ್ಥಳೀಯ ಸಂಸ್ಥೆಗಳಲ್ಲಿ ದುರ್ಬಲವರ್ಗದವರಿಗೆ ಹಾಗೂ ಹಿಂದುಳಿದ ಜನಾಂಗದವರಿಗೆ ಆಡಳಿತ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ಭಾಗವಹಿಸುವಂತಹ ಅವಕಾಶ ಇರಲಿಲ್ಲ, ಅವಕಾಶ ಇದ್ದರೂ ಇವರನ್ನು ಮುಂದೆ ಬರುವುದಕ್ಕೆ ಬಲಯುತ ಪಂಗಡದವರು ಉತ್ತೇಜನ ಕೊಡುತ್ತಿರಲಿಲ್ಲ. ಇವರ ಪಾತ್ರ ಬರೀ ಸದಸ್ಯತ್ವಕ್ಕೆ ಮೀಸಲಾಗಿರದೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೂ ಬೇಕಾಗಿತ್ತು. ಏಕೆಂದರೆ ಆಯಾ ಜನಾಂಗದ ಬೇಕು ಬೇಡಗಳನ್ನು ಚೆನ್ನಾಗಿ ಅರಿತುಕೊಂಡು ಅವುಗಳಿಗೆ ರೂಪ-ರೇಶೆಗಳನ್ನು ಕೊಡುವುದು ಈ ಜನಾಂಗದ ನಾಯಕರಿಂದ ಮಾತ್ರ ಸಾಧ್ಯ. ಈ ಒಂದು ದಿಕ್ಕಿನಲ್ಲಿ ನೋಡಿದಾಗ ಸಂವಿಧಾನದ ೭೩ನೇ ತಿದ್ದುಪಡಿಯು ದುರ್ಬಲ

ವರ್ಗದವರಿಗೆ ಮತ್ತು ಹಿಂದುಳಿದ ಜನಾಂಗದವರಿಗೆ ಪಂಚಾಯತ್ ಸಂಸ್ಥೆಗಳಲ್ಲಿ ಸ್ಥಾನ ಮೀಸಲಾತಿ ಕೊಡುವುದರ ಮೂಲಕ ಉನ್ನತ ಮಟ್ಟದ ಹಾಗೂ 'ಕ್ರಾಂತಿಕಾರಕ' ಸುಧಾರಣೆಯನ್ನು ತಂದಿದೆ. ಇದನ್ನು ಪೂರಕವಾಗಿ ಇಟ್ಟುಕೊಂಡು ಹಿಂದುಳಿದ ಜನಾಂಗಕ್ಕೆ ಶೇ. ೩೩ರಷ್ಟು, ಮಹಿಳೆಯರಿಗೆ ಶೇ. ೩೩ರಷ್ಟು ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಜನಸಂಖ್ಯಾನುಗುಣವಾಗಿ, ಸದಸ್ಯತ್ವ, ಅಧ್ಯಕ್ಷ ಮತ್ತು ಉಪಾಧ್ಯಕ್ಷ ಪದವಿಗಳಿಗೆ ಸ್ಥಾನಗಳನ್ನು ಮೀಸಲಾಗಿರಿಸಲಾದ ರಾಜ್ಯವೆಂದರೆ ಕರ್ನಾಟಕ. ಇದರ ಪರಿಣಾಮವಾಗಿ, ಉದಾಹರಣೆಗೆ ಹೇಳುವುದಾದರೆ, ಜಿಲ್ಲಾ ಪಂಚಾಯತ್‌ನ ಒಟ್ಟು ೯೧೯ ಸ್ಥಾನಗಳ ಪೈಕಿ ೧೯೮ ಸ್ಥಾನಗಳು ಹಿಂದುಳಿದ ಜನಾಂಗದ, ೧೨೭ ಸ್ಥಾನಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಮತ್ತು ೩೩೫ ಸ್ಥಾನಗಳು ಮಹಿಳೆಯರ ಪಾಲಾಗಿವೆ. ಜಿಲ್ಲಾ ಪರಿಷತ್ತಿನ ಒಟ್ಟು ೨೦ ಅಧ್ಯಕ್ಷ ಮತ್ತು ೨೦ ಉಪಾಧ್ಯಕ್ಷರ ಸ್ಥಾನಗಳಲ್ಲಿ ೫ ಸ್ಥಾನಗಳು (ಎರಡರಲ್ಲೂ) ಹಿಂದುಳಿದ ಜನಾಂಗದವರಿಗೆ, ೪ ಪರಿಶಿಷ್ಟ ಜಾತಿಯವರಿಗೆ ಮತ್ತು ೭ ಸ್ಥಾನಗಳು ಮಹಿಳೆಯರಿಗೆ ಹೋಗಿವೆ.

ಮೇಲಿನ ವಿಶ್ಲೇಷಣೆಯಿಂದ ತಿಳಿದುಬರುವುದೇನೆಂದರೆ ಇತ್ತೀಚಿನವರೆವಿಗೂ, ಪಂಚಾಯತ್ ಸಂಸ್ಥೆಗಳಲ್ಲಿ ಸಮಾಜದಲ್ಲಿ ಮುಂದುವರೆದ ಜನಾಂಗದವರು, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ, ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಅವುಗಳ ಆಡಳಿತ ಯಂತ್ರವನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡು ಬಂದಿದ್ದರು. ಆದರೆ ಹೊಸದಾಗಿ ತಂದ ಮೀಸಲಾತಿಯ ಪರಿಣಾಮವಾಗಿ ಸಮಾಜದಲ್ಲಿರುವ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗದ ಜನಾಂಗದವರು ಭಾಗವಹಿಸುವುದಕ್ಕೆ ಅವಕಾಶ ಮಾಡಿಕೊಟ್ಟಂತಾಗಿದೆ. ಇನ್ನು ಮುಂದೆ ಈ ವರ್ಗದ ನಾಯಕರು ಪಂಚಾಯಿತಿಗಳಂತಹ ವೇದಿಕೆಯನ್ನು ಉಪಯೋಗಿಸಿಕೊಂಡು ತಮ್ಮ ವ್ಯಕ್ತಿತ್ವ ಮತ್ತು ನಾಯಕತ್ವವನ್ನು ಬೆಳೆಸಿಕೊಳ್ಳುವುದರ ಜೊತೆಗೆ ತಮ್ಮ ತಮ್ಮ ಜನಾಂಗದ ಕುಂದು ಕೊರತೆಗಳನ್ನು ಹೋಗಲಾಡಿಸುವುದಕ್ಕೆ ಕಾರ್ಯತತ್ಪರಾಗಬೇಕಾಗಿದೆ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮುಂದೆ ಬರುವುದಕ್ಕೆ ಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಯೋಜಿಸಿ ಅನುಷ್ಠಾನಗೊಳಿಸಲಾಗಿದೆ. ಒಳ್ಳೆಯ ಶಿಕ್ಷಣ, ಆರೋಗ್ಯ ಹಾಗೂ ಹೆಚ್ಚಿನ ಉತ್ಪನ್ನ ತರುವಂತಹ ಕಾರ್ಯಕ್ರಮಗಳು ಈ ಹಿಂದುಳಿದ ಜನಾಂಗದವರು ಸಾಮಾಜಿಕವಾಗಿ ಅವರ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ಮತ್ತು ಆರ್ಥಿಕವಾಗಿ ಮುಂದುವರಿಯುವುದಕ್ಕೆ ಅವಕಾಶ ಮತ್ತು ಸಾಧ್ಯತೆ ಇದೆ ಎಂದರೆ ಉತ್ಪ್ರೇಕ್ಷೆಯಾಗಲಾರದು ಮತ್ತು ಎಲ್ಲಿಯವರೆಗೂ ಈ ಜನಾಂಗದವರೂ ತಲೆ ಎತ್ತಿ ನಿಲ್ಲುವುದಿಲ್ಲವೋ, ಆತ್ಮ ಶಕ್ತಿ, ಆತ್ಮ ಸ್ಥೈರ್ಯ ಹಾಗೂ ಸ್ವಾವಲಂಬಿಗಳಾಗುವುದಿಲ್ಲವೋ ಅಲ್ಲಿಯವರೆವಿಗೂ ನಾವು ಯಾವುದೇ ಸಮಾಜವನ್ನು ಸಮಗ್ರ ರೀತಿಯಲ್ಲಿ ಸಾಮಾಜಿಕ ಸುಧಾರಣೆಯಾಗಿದೆ ಎಂದು ಹೇಳುವುದು ಬಹಳ

ಕಷ್ಟ ಸಾಧ್ಯವಾಗುತ್ತದೆ. ಇಂತಹ ವ್ಯವಸ್ಥೆಯನ್ನು ಬದಲಾಗಿಸುವಂತಹ ಅವಕಾಶವನ್ನು ಪಂಚಾಯತ್ ಸಂಸ್ಥೆಗಳು ಸಮಾಜದ ವಿವಿಧ ವರ್ಗದ ಜನಾಂಗದವರಿಗೆ ಅವಕಾಶ ಮಾಡಿಕೊಟ್ಟಿದೆ. ಇಂತಹ ಒಂದು ಸುವರ್ಣಾವಕಾಶವನ್ನು ಉಪಯೋಗಿಸಿಕೊಂಡು ಎಲ್ಲಾ ಜನಾಂಗದ ಪ್ರತಿನಿಧಿಗಳು ಸಾಮಾಜಿಕ ಸುಧಾರಣೆಯನ್ನು ತರುವಂತಹ ಒಂದು ಗುರುತರವಾದ, ಮಹತ್ವಪೂರ್ಣವಾದ ಕಾರ್ಯವನ್ನು ಮಾಡಬೇಕಾಗಿದೆ.

**ಅಭಿವೃದ್ಧಿ ಕಾರ್ಯಕ್ರಮಗಳು**

ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕ ಪರಿಸ್ಥಿತಿ ಮತ್ತು ಸುಧಾರಣೆ ಸಾಮಾನ್ಯವಾಗಿ ಸ್ಥಗಿತವಾಗಿದ್ದು ಯಾವುದೇ ತರಹದ ಬದಲಾವಣೆಯನ್ನು ಕಂಡಿಲ್ಲ. ಇದಕ್ಕೆ ಮುಖ್ಯ ಕಾರಣ ಸ್ಥಳೀಯವಾಗಿ (ಜನರಲ್ಲಿ ಹಾಗೂ ಸಂಸ್ಥೆಗಳಲ್ಲಿ) ಸುಧಾರಣೆಯನ್ನು ತರುವುದಕ್ಕೆ ಸಮಂಜಸವಾದ ಮತ್ತು ಸರಿಯಾದ ನೇತೃತ್ವ ಮತ್ತು ಪ್ರಯತ್ನಗಳು ಇಲ್ಲದ್ದು. ಈ ಒಂದು ಹಿನ್ನೆಲೆಯಲ್ಲಿ ನೋಡಿದಾಗ ಈಗ ರಚಿತಗೊಂಡಿರುವ ವಿಕೇಂದ್ರೀಕೃತ ಪಂಚಾಯ್ತಿಗಳು ಇಂತಹ ಒಂದು ಸಾಮಾಜಿಕ ಬದಲಾವಣೆ ಮತ್ತು ಆರ್ಥಿಕ ಅಭಿವೃದ್ಧಿಯನ್ನು ತರುವಂತಹ ಸಾಧನಗಳಾಗಿವೆ (ಅಬ್ದುಲ್ ಅಜೀಜ್, ೧೯೯೪).

ಈ ಒಂದು ದಿಶೆಯಲ್ಲಿ ಗಮನಿಸಿದಾಗ ಹಿಂದೆ ಇದ್ದ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು, ಜಿಲ್ಲಾ ಪರಿಷತ್ತುಗಳು ಮತ್ತು ಮಂಡಲ ಪಂಚಾಯತಿಗಳು ಹಳ್ಳಿಗಳ ಸಮಗ್ರ ಅಭಿವೃದ್ಧಿಗೆ ಪೂರಕವಾಗಿ ಅನೇಕ ಮುಖ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದವು. ಇವುಗಳ ಸಂಕ್ಷಿಪ್ತ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ. ತಾಲ್ಲೂಕು ಅಭಿವೃದ್ಧಿ ಮಂಡಳಿಗಳ ಕಾರ್ಯವೈಖರಿಯನ್ನು ವಿಚಾರ ಮಾಡಿದಾಗ ಕಂಡುಬರುವ ಅಂಶವೆಂದರೆ ಈ ಸಂಸ್ಥೆಗಳು ಹಳ್ಳಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ಅಗತ್ಯ ಸವಲತ್ತುಗಳನ್ನು ರೂಪಿಸುವುದರಲ್ಲಿ, ಅನೇಕ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಿದವು- ರಸ್ತೆಗಳು, ಸ್ಕೂಲು, ಆಸ್ಪತ್ರೆ, ಕಟ್ಟಡಗಳು, ಸೇತುವೆ, ಕೆರೆ ಮತ್ತು ನದಿಗಳ ನಿರ್ಮಾಣ ಮತ್ತು ನಿರ್ವಹಣೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗಾಗಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸಿದ್ದವು. (ಶಿವಣ್ಣ, ೧೯೯೦).

ಜಿಲ್ಲಾ ಪಂಚಾಯತ್ ಮತ್ತು ಮಂಡಲ ಪಂಚಾಯ್ತಿಗಳ ಪ್ರಕಾರ್ಯಗಳನ್ನು ಮೌಲ್ಯಮಾಪನ ಮಾಡಿದ ಕೃಷ್ಣಸ್ವಾಮಿ ಸಮಿತಿಯ ವರದಿಯ (೧೯೮೯) ಪ್ರಕಾರ ಹಲವಾರು ಅಡಚಣೆಗಳಿದ್ದರೂ ಸಹ ಈ ಸಂಸ್ಥೆಗಳ ಕಾರ್ಯವೈಖರಿ ಪ್ರಭಾವೋತ್ಪಾದಕವಾದದ್ದು. ವಾಸ್ತವಿಕವಾಗಿ ಎಲ್ಲಾ ಜಿಲ್ಲೆಗಳಲ್ಲೂ ಶಾಲೆಗಳ ಮತ್ತು ಆಸ್ಪತ್ರೆಗಳ ಕಾರ್ಯಾಚರಣೆಯಲ್ಲಿ ಮತ್ತು ಸೇವೆಗಳನ್ನು ಕೊಡುವುದರಲ್ಲಿ ಬಹಳ ಮಟ್ಟಿನ ಸುಧಾರಣೆಯನ್ನು ಕಾಣಬಹುದಾಗಿತ್ತು. ವಿದ್ಯಾರ್ಥಿಗಳ, ಉಪಾಧ್ಯಾಯರ

ಮತ್ತು ವೈದ್ಯರ ಹಾಜರಾತಿ ಉತ್ತೇಜನಕಾರಿಯಾಗಿತ್ತು. ಅಧಿಕಾರಿಗಳ, ವೈದ್ಯರ ಮತ್ತು ಶಿಕ್ಷಕರ ಹಾಗೂ ಜನರ ನಡುವೆ ಒಳ್ಳೆಯ ಸ್ಪಂದನ ಮತ್ತು ಆದರ ಗೌರವಗಳು ಇದ್ದವು. ಇದರಿಂದ ಒಳ್ಳೆಯ 'ಕಾರ್ಯಸ್ನೇಹಿ' ಪರಿಸರವನ್ನು ಕಾಣಬಹುದಾಗಿತ್ತು.

ಅಭಿವೃದ್ಧಿ ಕಾರ್ಯಕ್ರಮಗಳು ಫಲಕಾರಿಯಾಗಬೇಕಾದರೆ ಮುಖ್ಯವಾಗಿ ಬೇಕಾದದ್ದು ಅವುಗಳನ್ನು ಸಮಯೋಚಿತವಾಗಿ ಅನುಷ್ಠಾನಗೊಳಿಸಿದಾಗ ಅಥವಾ ಜಾರಿಗೊಳಿಸಿದಾಗ ಮಾತ್ರ ಸಾಧ್ಯ. ಇಂತಹ ಯಶಸ್ಸಿಗೆ ಪೂರಕವಾಗಿ ಬೇಕಾಗಿರುವುದು ವಿವಿಧ ಇಲಾಖೆಗಳ ನಡುವೆ ಸೌಹಾರ್ದತೆ ಹಾಗೂ ಅನ್ಯೋನ್ಯ ಸಂಬಂಧ, ಸ್ಥಳೀಯ ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು ಮತ್ತು ಇರುವ ಸವಲತ್ತುಗಳನ್ನು ಸಮರ್ಪಕವಾಗಿ ಉಪಯೋಗಿಸುವುದು (ಅಬ್ದುಲ್ ಅಜೀಜ್: ೧೯೯೩). ದೃಷ್ಟಾಂತಗಳ ಮೂಲಕ ಹೇಳುವುದಾದರೆ ಜಿಲ್ಲಾ ಪರಿಷತ್ತುಗಳ ಆಡಳಿತ ವ್ಯವಸ್ಥೆಯಲ್ಲಿ ಮೇಲೆ ಹೇಳಿದ ಅಂಶಗಳು ಬಹಳ ಮಟ್ಟಿಗೆ ರೂಢಿಯಲ್ಲಿದ್ದವು. ಜಿಲ್ಲಾ ಪರಿಷತ್ ಒಂದು 'ಕೊಡೆ'ಯ ಮಾದರಿಯಲ್ಲಿ ಇತ್ತು. ಅಂದರೆ, ಜಿಲ್ಲಾ ಪರಿಷತ್ತಿನ ಆಡಳಿತದ ಚೌಕಟ್ಟಿನಲ್ಲಿ ಜಿಲ್ಲಾ ಮಟ್ಟದ ಎಲ್ಲಾ ಅಭಿವೃದ್ಧಿ ಇಲಾಖೆಗಳು ಕೆಲಸ ಮಾಡುತ್ತಿದ್ದವು. ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಜಿಲ್ಲಾ ಪರಿಷತ್ ಮತ್ತು ವಿವಿಧ ಇಲಾಖೆಗಳ ನಡುವೆ ಒಳ್ಳೆಯ ಸ್ಪಂದನ ಮತ್ತು ಬಾಂಧವ್ಯ ಇತ್ತು. ಇದರ ಪರಿಣಾಮವಾಗಿ ಮೀನುಗಾರಿಕೆ, ತೋಟಗಾರಿಕೆ ಮತ್ತು ಅರಣ್ಯಕ್ಕೆ ಸಂಬಂಧಪಟ್ಟಂತೆ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಗಮನಹರಿಸುವಂತಹ ವೃದ್ಧಿಆಗುವುದಕ್ಕೆ ಸಾಧ್ಯವಾಗಿತ್ತು. ಕಾರ್ಯಕ್ರಮಗಳನ್ನು ಜಾರಿಗೊಳಿಸುವುದರಲ್ಲಿ ಹೆಚ್ಚಿನ ಮಟ್ಟಿನ ಶೀಘ್ರತೆ ಎದ್ದು ಕಾಣುತ್ತಿತ್ತು, ಒಳ್ಳೆಯ ಮೇಲ್ವಿಚಾರಣೆ, ಕ್ಷೇತ್ರಮಟ್ಟದ ಕೆಲಸದಲ್ಲಿ ಹೊಂದಾಣಿಕೆ ಇದ್ದುದರ ಫಲವಾಗಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಜಿಲ್ಲಾ ಪರಿಷತ್ತುಗಳಿಗೆ ಅವಕಾಶ ಇತ್ತು (ಮೀನಾಕ್ಷಿ ಸುಂದರಂ, ೧೯೯೪).

ಜಿಲ್ಲಾ ಪರಿಷತ್ತುಗಳು ಈ ಕೆಳಗೆಕಂಡ ಕಾರ್ಯಕ್ರಮಗಳನ್ನು ಆದ್ಯತೆ ಅಥವಾ ಪ್ರಾಶಸ್ತ್ಯ ಕೊಡುವುದರ ಮೂಲಕ ತಮ್ಮ ತಮ್ಮ ಚೌಕಟ್ಟಿನಲ್ಲಿ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸುತ್ತಿದ್ದವು.

ಅ) ವ್ಯವಸಾಯ ಮತ್ತು ಸಂಬಂಧಿತ ಚಟುವಟಿಕೆಗಳು, ವ್ಯವಸಾಯ, ತೋಟಗಾರಿಕೆ, ಮಣ್ಣು ಮತ್ತು ನೀರಿನ ಸಂರಕ್ಷಣೆ, ಹೈನುಗಾರಿಕೆ, ಮೀನುಗಾರಿಕೆ, ಅರಣ್ಯ, ಸಣ್ಣ ನೀರಾವರಿ ಮತ್ತು ರೇಷ್ಮೆ

ಆ) ಗಣಿಗಳು ಮತ್ತು ಭೂವಿಜ್ಞಾನ

ಇ) ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳು

ಈ) ಗ್ರಾಮೀಣಾಭಿವೃದ್ಧಿ, ಸಹಕಾರ ಮತ್ತು ಗುರಿ ಆಧಾರಿತ ಯೋಜನೆಗಳು

ಉ) ಸಾಮಾಜಿಕ ಸವಲತ್ತುಗಳು - ಪ್ರಾಥಮಿಕ ಮತ್ತು ಸೆಕೆಂಡರಿ ಶಿಕ್ಷಣ, ವಯಸ್ಕರ ಶಿಕ್ಷಣ, ಆರೋಗ್ಯ ಮತ್ತು ಪೌಷ್ಠಿಕ ಆಹಾರ, ಗ್ರಾಮೀಣ ನೀರು ಸರಬರಾಜು, ಯುವಜನ ಸೇವೆಗಳು.

ಊ) ಆರ್ಥಿಕ ಸವಲತ್ತುಗಳು - ಕಟ್ಟಡಗಳು (ಗೃಹ ನಿರ್ಮಾಣ) ರಸ್ತೆಗಳು ಮತ್ತು ಸೇತುವೆಗಳು.

ಎ) ಸಾಮಾಜಿಕ ಮತ್ತು ಕುಟುಂಬ ಕಲ್ಯಾಣ - ಕುಟುಂಬ ಕಲ್ಯಾಣ, ಹಿಂದುಳಿದ ವರ್ಗದವರ ಕಲ್ಯಾಣ ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ.

ಮಂಡಲ ಪಂಚಾಯಿತ್ತಿಗಳಲ್ಲಿ ಎರಡು ವರ್ಗಗಳ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನ ಗೊಳಿಸುವುದಕ್ಕೆ ಅವಕಾಶವಿತ್ತು. ವರ್ಗ-೧ರಲ್ಲಿ ಮಂಡಲಪಂಚಾಯತಿಗಳು ತಾವೇ ಕಾರ್ಯಕ್ರಮಗಳನ್ನು ಯೋಜಿಸಿ, ಹಣವನ್ನು ರೂಢಿಸಿ ಅನುಷ್ಠಾನಗೊಳಿಸಬೇಕಾಗಿತ್ತು - ವಯಸ್ಕರ ಶಿಕ್ಷಣ, ಗ್ರಾಮೀಣ ನೀರು ಸರಬರಾಜು, ಗೃಹ ನಿರ್ಮಾಣ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ, ವ್ಯವಸಾಯ, ಗ್ರಾಮೀಣ ಅಭಿವೃದ್ಧಿ ಮತ್ತು ರಸ್ತೆ ಹಾಗೂ ಸೇತುವೆಗಳು. ವರ್ಗ-೨ರಲ್ಲಿ (ಅ) ಯೋಜಿಸುವುದು, ಫಲಾನುಭವಿಗಳನ್ನು ಮತ್ತು ಕಾಮಗಾರಿಗಳನ್ನು ಗುರುತಿಸುವುದು ಮತ್ತು (ಆ) ಮೇಲ್ವಿಚಾರಣೆ, ಉಸ್ತುವಾರಿಕೆ ಮತ್ತು ವರದಿ ಒಪ್ಪಿಸುವಿಕೆ. ಸಾಮಾನ್ಯವಾಗಿ ಈ ಕಾರ್ಯಕ್ರಮಗಳು ಕೇಂದ್ರ ಸರ್ಕಾರದಿಂದ ಅಥವಾ ರಾಜ್ಯ ಸರ್ಕಾರದಿಂದ ರೂಪಿತಗೊಂಡ ಕಾರ್ಯಕ್ರಮಗಳು - ಮುಖ್ಯವಾಗಿ ಇವು ವ್ಯವಸಾಯ, ಮೀನುಗಾರಿಕೆ, ಹೈನುಗಾರಿಕೆ, ರೇಷ್ಮೆ, ಮಣ್ಣು ಸಂರಕ್ಷಣೆ, ಅರಣ್ಯ, ಸಹಕಾರ ಮತ್ತು ಗ್ರಾಮೀಣ ಅಭಿವೃದ್ಧಿ, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಹಿಂದುಳಿದ ಜನಾಂಗದವರ ಮತ್ತು ಕುಟುಂಬ ಕಲ್ಯಾಣ ಯೋಜನೆಗಳಿಗೆ ಸಂಬಂಧಪಟ್ಟ ಕಾರ್ಯಕ್ರಮಗಳು.

ಮಂಡಲ ಪಂಚಾಯಿತಗಳು ಅಭಿವೃದ್ಧಿ ಕಾಯಕ್ರಮಗಳ ಮೇಲೆ ಮಾಡಿರುವ ಖರ್ಚಿನ ವಿವರಗಳು ಈ ಕೆಳಕಂಡಂತೆ ಇವೆ. ಇಲ್ಲಿ ನಾವು ಆಯ್ದ ಎಂಟು ಮಂಡಲ ಪಂಚಾಯಿತಿಗಳು ಮಾಡಿರುವ ಖರ್ಚಿನ ವಿವರವನ್ನು ಕೊಟ್ಟಿದ್ದೇವೆ. ಈ ಮಾಹಿತಿಯನ್ನು ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ಅಧ್ಯಯನ ಸಂಸ್ಥೆಯಲ್ಲಿ ನಡೆಸಿರುವ ಸಮೀಕ್ಷೆಯ ಆಧಾರವನ್ನು (ಅಬ್ದುಲ್ ಅಜೀಜ್: ೧೯೯೩) ಇಟ್ಟುಕೊಂಡು ಇಲ್ಲಿ ಕೊಡಲಾಗಿದೆ.

## ಪಟ್ಟಿ ಒಂದು
## ಆಯ್ದ ಮಂಡಲ ಪಂಚಾಯತಿಗಳ ಖರ್ಚಿನ ರೀತಿ ೧೯೮೭-೮೮ರಿಂದ ೧೯೮೯-೯೦

| ಖರ್ಚಿನ ಬಗೆ | ೧೯೮೭ -೮೮ | ೧೯೮೮ -೮೯ | ೧೯೮೯ -೯೦ | ೩ ವರ್ಷಗಳ ಸರಾಸರಿ |
|---|---|---|---|---|
| ೧. ನಾಗರೀಕ ಸೌಲಭ್ಯಗಳು (ಬೀದಿ ದೀಪಗಳು, ನೀರು ಸರಬರಾಜು, ಗೃಹನಿರ್ಮಾಣ, ಆರೋಗ್ಯ, ಇತ್ಯಾದಿ) | ೫೦.೯೯ | ೩೬.೭೭ | ೪೧.೫೨ | ೪೦.೭೬ |
| ೨. ಸಾರ್ವಜನಿಕ ಕಾಮಗಾರಿಗಳು (ರಸ್ತೆ, ಸೇತುವೆ, ಭೂಸ್ವಾಧೀನ) | ೮.೫೦ | ೨೬.೮೬ | ೨೭.೩೪ | ೨೪.೫೧ |
| ೩. ಶೇ. ೨೦ರ ಕಾರ್ಯಕ್ರಮಗಳಲ್ಲಿ ಪ.ಜಾತಿ ಮತ್ತು ಪ.ವರ್ಗಗಳ ಕಾರ್ಯಕ್ರಮಗಳು | ೩.೦೩ | ೭.೯೩ | ೪.೨೦ | ೫.೬೫ |
| ೪. ಸಿಬ್ಬಂದಿ ಸಂಬಳ, ಪೀಠೋಪಕರಣ, ಮುದ್ರಣ, ಲೇಖನಸಾಮಗ್ರಿಗಳು, ಇತ್ಯಾದಿ | ೨೭.೩೪ | ೧೩.೫೭ | ೧೯.೧೬ | ೧೭.೮೯ |
| ೫. ರಾಷ್ಟ್ರೀಯ ಹಬ್ಬಗಳು, ಆಟ, ವಯಸ್ಕರ ಶಿಕ್ಷಣ, ಶಿಶುವಿಹಾರ, ಇತ್ಯಾದಿ | ೪.೮೭ | ೨.೧೮ | ೧.೫೫ | ೨.೨೯ |
| ೬. ಎನ್.ಎಸ್.ಸಿ, ಐ.ಬಿ.ಪಿ. ಮತ್ತು ಉಳಿದ ಖರ್ಚುಗಳು | ೫.೨೭ | ೧೨.೬೯ | ೬.೨೩ | ೮.೯೦ |
| ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ | ೧೦೦.೦೦ |

ಮೇಲಿನ ಪಟ್ಟಿಯಿಂದ ತಿಳಿದುಬರುವ ಅಂಶಗಳೇನೆಂದರೆ, ಮಂಡಲ ಪಂಚಾಯತಿಗಳು ಹೆಚ್ಚಿನ ಮಟ್ಟದಲ್ಲಿ ಅಂದರೆ ಸುಮಾರು ಶೇ. ೪೧ರಷ್ಟು ಹಣವನ್ನು ನಮ್ಮ ನಾಗರೀಕರಿಗೆ ಬೇಕಾದ ಸೌಲಭ್ಯಗಳ ಮೇಲೆ ಖರ್ಚು ಮಾಡಿವೆ, ಸುಮಾರು ಕಾಲು ಭಾಗದಷ್ಟನ್ನು (ಶೇ. ೨೫) ಸಾರ್ವಜನಿಕ ಕಾಮಗಾರಿಗಳ ಮೇಲೆ ಮತ್ತು ಶೇ. ೧೮ರಷ್ಟನ್ನು ಸಿಬ್ಬಂದಿಯ ವೇತನ ಹಾಗೂ ಇತರೆ ವಸ್ತುಗಳ ಮೇಲೆ ಖರ್ಚು ಮಾಡಿವೆ. ಒಟ್ಟಾರೆ ಹೇಳುವುದಾದರೆ ಮಂಡಲ ಪಂಚಾಯತಿಗಳು ಶೇ. ೬೫ರಷ್ಟು ಖರ್ಚನ್ನು ನಾಗರೀಕ ಸೌಲಭ್ಯಗಳನ್ನು ಒದಗಿಸುವುದಕ್ಕೆ ಮತ್ತು ಸಾರ್ವಜನಿಕ ಕಾಮಗಾರಿಗಳ ಮೇಲೆ ಮಾಡಿವೆ. ಇದನ್ನು ವಿಂಗಡಿಸಿ (ಮೂರು ವರ್ಷಗಳಲ್ಲಿ) ನೋಡಿದಾಗ ನಾಗರಿಕ ಸೌಲಭ್ಯಗಳ ಮೇಲಿನ ಖರ್ಚು ವರ್ಷ ವರ್ಷಕ್ಕೆ ಏರುವಿಕೆಯನ್ನು ತೋರಿಸುತ್ತದೆ. ಇದರಿಂದ ತಿಳಿಯುವ ಮುಖ್ಯ ಅಂಶವೇನೆಂದರೆ ಮಂಡಲ ಪಂಚಾಯತಿಗಳು ಗ್ರಾಮಗಳಲ್ಲಿ ಅತಿ ಮುಖ್ಯವಾಗಿ ಬೇಕಾದ ನಾಗರಿಕ ಸೌಲಭ್ಯಗಳ ಬಗ್ಗೆ ಹಾಗೂ ಸಾರ್ವಜನಿಕ ಸವಲತ್ತುಗಳ ಬಗ್ಗೆ ಬಹಳಮಟ್ಟಿನ ಆದ್ಯತೆಯನ್ನು ಕೊಟ್ಟಿವೆ.

ಪಟ್ಟಿಯಿಂದ ತಿಳಿದು ಬರುವ ಮತ್ತೊಂದು ಅಂಶವೇನೆಂದರೆ ಮಂಡಲ ಪಂಚಾಯತಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮೇಲೆ ಖರ್ಚು ಮಾಡಬೇಕಾಗಿರುವ ಶೇ. ೨೦ರ ಬಾಬ್ತನ್ನು ಸರಾಸರಿ ಮಾಡಿಲ್ಲ; ಮೂರು ವರ್ಷಗಳಲ್ಲಿ ಶೇ. ೫೬.೫ರಷ್ಟನ್ನು ಮಾತ್ರ ಖರ್ಚು ಮಾಡಿವೆ. ಇದಕ್ಕೆ ಮುಖ್ಯ ಕಾರಣ ಮಂಡಲ ಪಂಚಾಯತಿಗಳು ಖರ್ಚು ಮಾಡುವುದಕ್ಕೆ ನಿಯೋಜಿಸಿದ್ದ ಮಾರ್ಗದರ್ಶನಗಳನ್ನು ಸರಿಯಾಗಿ ಪಾಲಿಸಿರಲಿಲ್ಲವಾದ್ದರಿಂದ. ಅಲ್ಲದೆ ಮಂಡಲ ಪಂಚಾಯತಿಗಳ ಖರ್ಚಿನ ರೀತಿಯನ್ನು ಕೂಲಂಕಷವಾಗಿ ಗಮನಿಸಿದಾಗ ತಿಳಿಯುವ ಅಂಶವೇನೆಂದರೆ, ಪಂಚಾಯತಿಗಳು ಹೆಚ್ಚಿನ ಮಟ್ಟದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಸವಲತ್ತುಗಳನ್ನು ಗ್ರಾಮಾಂತರ ಪ್ರದೇಶದಲ್ಲಿ ರೂಪಿಸುವುದಕ್ಕೆ ಖರ್ಚನ್ನು ಮಾಡಿ ಬಹಳ ಕಡಿಮೆ ಪ್ರಮಾಣದಲ್ಲಿ ಉತ್ಪನ್ನ ತರುವಂತಹ ಕಾರ್ಯಕ್ರಮಗಳಿಗೆ ಖರ್ಚನ್ನು ಮಾಡಿದ್ದವು. ಹಂತ ಹಂತವಾಗಿ ಸಮಾಜದ ದುರ್ಬಲ ವರ್ಗ ಮತ್ತು ಹಿಂದುಳಿದ ಜನಾಂಗದ ಏಳಿಗೆಗಾಗಿ ಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳನ್ನು, ಹಳ್ಳಿಗಳಲ್ಲಿ ಭೌಗೋಳಿಕ ಸವಲತ್ತುಗಳನ್ನು ವೃದ್ಧಿಪಡಿಸಿದ ನಂತರ, ಅನುಷ್ಠಾನಗೊಳಿಸುವಂತಹ ಕಾರ್ಯಕ್ರಮವನ್ನು ರೂಪಿಸಿಕೊಂಡಿದ್ದವು. (ಅಬ್ದುಲ್ ಅಜೀಜ್, ೧೯೯೩).

ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯಲ್ಲಿ ಹಿಂದೆ ಇದ್ದ ಮಂಡಲ ಪಂಚಾಯಿತಗಳನ್ನು 'ಹಳ್ಳಿಗಳಲ್ಲಿ ಸಾಮೂಹಿಕ ಮತ್ತು ಆರ್ಥಿಕ ಅಭಿವೃದ್ಧಿ' ತರುವಂತಹ ನಿಯೋಜಿತ ಸಂಸ್ಥೆಗಳೆಂದು ಪರಿಗಣಿಸಲಾಗಿತ್ತು. ಇದರ ಪರಿಣಾಮವಾಗಿ ಈ ಸಂಸ್ಥೆಗಳು ಹಣ ಮತ್ತು ಮಾನವ ಸಂಪನ್ಮೂಲಗಳನ್ನು ಕ್ರೋಢೀಕರಿಸುವಂತಹ, ವೃದ್ಧಿ ಹೊಂದುವಂತಹ ಸವಲತ್ತುಗಳು, ವ್ಯವಸಾಯ, ಹೈನುಗಾರಿಕೆ, ಅರಣ್ಯ ಮತ್ತು ಮೀನುಗಾರಿಕೆ ಕ್ಷೇತ್ರಗಳಲ್ಲಿ ಉತ್ಪನ್ನ ತರುವಂತಹ ಕಾರ್ಯಕ್ರಮಗಳನ್ನು ಹಮ್ಮಿಕ್ರೊಳ್ಳುವಂತಹ, ನಾಗರೀಕ ಸೌಲಭ್ಯಗಳಾದ ರಸ್ತೆದೀಪಗಳು, ಒಳ ಚರಂಡಿ, ಕುಡಿಯುವ ನೀರು, ಆರೋಗ್ಯ ಮತ್ತು ಶಿಕ್ಷಣವನ್ನು ಕೊಡುವಂತಹ ಗುರುತರವಾದ ಜವಾಬ್ದಾರಿಯನ್ನು ಹೊತ್ತು ನಿಭಾಯಿಸಬೇಕಾಗಿತ್ತು ಹಾಗೂ ಮುಖ್ಯವಾಗಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಭಾಗವಹಿಸುತ್ತಿದ್ದಾರೆ ಅಥವಾ ಇಲ್ಲವೇ ಎಂಬುದನ್ನು ಕೂಡ ನೋಡಬೇಕಾಗಿತ್ತು.

ಈ ಒಂದು ಹಿನ್ನೆಲೆಯಲ್ಲಿ ನೋಡಿದಾಗ ಮಂಡಲ ಪಂಚಾಯತಿಗಳು ಆದಷ್ಟು ಮಟ್ಟಿನ ಉತ್ತೇಜನಕಾರಿಯಾದಂತಹ ಯಶಸ್ಸನ್ನು ಸಾಧಿಸಿವೆ. ಹಳ್ಳಿಗಳಿಗೆ ಮುಖ್ಯವಾಗಿ ಬೇಕಾದ ಸೌಲಭ್ಯ, ಸವಲತ್ತುಗಳನ್ನು ಮತ್ತು ಜನರಿಗೆ ಬೇಕಾದ ಅಗತ್ಯಗಳು ಹಾಗೂ ಸೌಲಭ್ಯಗಳನ್ನು ಒದಗಿಸುವುದರಲ್ಲಿ, ಅದರಲ್ಲೂ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರು ನೆಲೆಸಿರುವ ವಾಸ ಸ್ಥಳಗಳಲ್ಲಿ, ಸಫಲವಾಗಿದ್ದವು. ಇದರ ಇನ್ನೊಂದು ಮುಖ ಎಂದರೆ ಮುಖ್ಯವಾಗಿ ನಾವು ಹಳ್ಳಿಗಳ ಆರ್ಥಿಕ ಅಭಿವೃದ್ಧಿ ಯಾವ ಮಟ್ಟದಲ್ಲಿ ಆಗಿದೆ ಎಂದು ನೋಡಬೇಕಾಗಿದೆ. ಆದರೆ ಮಂಡಲ ಪಂಚಾಯತಿಗಳು

**ರೇಖಾ ಪಟ**




ಆಧಾರ: ವನಿತಾ ವಿಶ್ವನಾಥ್: ೧೯೯೩

ಅಷ್ಟೇನು ಯಶಸ್ಸನ್ನು ಸಾಧಿಸಲಿಲ್ಲ. ಏಕೆಂದರೆ, ಪಂಚಾಯತಿಗಳು ಬಹಳ ಕಡಿಮೆ ಮಟ್ಟವಲ್ಲಿ ಉತ್ಪನ್ನ ತರುವಂತಹ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡಿದ್ದವು. ಸಾಮೂಹಿಕ ಅಭಿವೃದ್ಧಿ ತರುವಂತಹ ಕಾರ್ಯಕ್ರಮಗಳಲ್ಲಿ ಜನರ ಭಾಗವಹಿಸುವಿಕೆ ಅಷ್ಟೇನು ಇರಲಿಲ್ಲ. ಜನರ ಸಾಮರ್ಥ್ಯವನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳುವುದರಲ್ಲಿ ಪಂಚಾಯತಿಗಳ ಪ್ರಯತ್ನ ಅಷ್ಟೇನು ಫಲಕಾರಿಯಾಗಿರಲಿಲ್ಲ. ಇದಕ್ಕೆ ಮುಖ್ಯ ಕಾರಣ ಜನರಾಗಲಿ ಅಥವಾ ಅವರ ಸಂಘ ಸಂಸ್ಥೆಗಳಾಗಲಿ ಮಂಡಲ ಪಂಚಾಯತಿಗಳ ಕಾರ್ಯಾಚರಣೆಯಲ್ಲಿ ಸಕ್ರಿಯವಾಗಿ ಭಾಗವಹಿಸುವುದಕ್ಕೆ ಯಾವೊಂದು ತರಹದ ಒಲವನ್ನು ಕೂಡ ತೋರಿಸದೇ ಇದ್ದುದು (ಅಬ್ದುಲ್ ಅಜೀಜ್: ೧೯೯೪).

ಮೇಲೆ ಮಾಡಿರುವ ವಿಶ್ಲೇಷಣೆ ಮೂಲಕ ತಿಳಿದು ಬರುವುದೇನೆಂದರೆ, ಕರ್ನಾಟಕದಲ್ಲಿ ಪಂಚಾಯತ್ ಸಂಸ್ಥೆಗಳು, ಸಾಮಾಜಿಕ ಬದಲಾವಣೆ ತರುವುದರಲ್ಲಿ ಯಶಸ್ಸಿನ ಮಂಚೂಣಿಯನ್ನು ತಲುಪುವ ದಿಕ್ಕಿನಲ್ಲಿ ಮುಂದೆ ಮುಂದೆ ಹೋಗುತ್ತಿವೆ. ಇಂತಹ ಒಂದು ಸಾಧ್ಯತೆ ಉಂಟಾಗುವುದಕ್ಕೆ ಕಾರಣ ರಾಜ್ಯ ಸರ್ಕಾರ ೧೯೮೭ರಿಂದೀಚೆಗೆ ಪಂಚಾಯತ್ ಅಧಿನಿಯಮಗಳು ತಂದಿರುವ ಸುಧಾರಣೆಗಳಿಂದ ಅಂದರೆ ತಪ್ಪಾಗಲಾರದು. ಸ್ಥಳೀಯ ಸರ್ಕಾರದ ಆಡಳಿತ ವ್ಯವಸ್ಥೆಯಲ್ಲಿ ಬಹುಪಾಲು ಎಲ್ಲಾ ವರ್ಗಗಳು, ದುರ್ಬಲ ಮತ್ತು ಹಿಂದುಳಿದ ಜನಾಂಗದವರು ಭಾಗವಹಿಸುವುದಕ್ಕೆ ಮತ್ತು ಆಯಾ ವರ್ಗ ಮತ್ತು ಜನಾಂಗದವರ ಏಳಿಗೆಗೆ ಸಂಬಂಧಪಟ್ಟಂತೆ ನಿರ್ಣಯಗಳನ್ನು ತೆಗೆದುಕೊಳ್ಳುವುದಕ್ಕೆ ಪಂಚಾಯತಿಗಳು ಅಗತ್ಯವಾಗಿ ಬೇಕಾದ ವೇದಿಕೆಯನ್ನು ಕೊಟ್ಟಿವೆ. ಇಂತಹ ವೇದಿಕೆಯನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡು ಜನರ ಬೇಡಿಕೆಗಳನ್ನು ಮತ್ತು ಅಗತ್ಯಗಳನ್ನು ಪೂರೈಸುವುದಕ್ಕೆ ಹಾಗೂ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗಾಗಿ ಕಾರ್ಯವೆಸಗಲು ಜನಪ್ರತಿನಿಧಿಗಳಿಗೆ ಅವಕಾಶ ಕಲ್ಪಿಸಿಕೊಟ್ಟಿದೆ. ಇಂತಹ ಒಂದು ಕಾರ್ಯದಿಂದ ಗ್ರಾಮಗಳಲ್ಲಿ ಸಾಮಾಜಿಕ ಸುಧಾರಣೆ ತರುವುದರ ಮೂಲಕ ಮತ್ತು ಇದಕ್ಕೆ ಪೂರಕವಾದ ಆರ್ಥಿಕ ಅಭಿವೃದ್ಧಿಯನ್ನು ಕೂಡ ತರುವಂತಹ ಪ್ರಯತ್ನವಾಗಿರಬೇಕಾಗಿದೆ.

## ಭಾಗ - ಎರಡು

### ಸ್ವಯಂಸೇವಾ ಸಂಸ್ಥೆಗಳ ಪಾತ್ರ

ಗ್ರಾಮಾಂತರ ಪ್ರದೇಶಗಳಲ್ಲಿ ಸಾಮಾಜಿಕ ಬದಲಾವಣೆ ಮತ್ತು ಆರ್ಥಿಕ ಅಭಿವೃದ್ಧಿಯನ್ನು ತರುವುದರಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಕೂಡ ಮಹತ್ತರವಾದ ಪಾತ್ರವನ್ನು ವಹಿಸುತ್ತಾ ಬಂದಿವೆ. ಒಂದು ರೀತಿಯಲ್ಲಿ ಹೇಳುವುದಾದರೆ ಸರ್ಕಾರದ ಸಂಸ್ಥೆಗಳಿಗಿಂತ ಒಂದು ಪಾಲು ಹೆಚ್ಚು ಎಂದರೆ ತಪ್ಪಾಗಲಾರದು. ಇದಕ್ಕೆ ಕಾರಣ

ಸಂಸ್ಥೆಗಳಲ್ಲಿರುವ ವಿವಿಧತೆ ಹಾಗೂ ಸರ್ಕಾರದ ಸಂಸ್ಥೆಗಳಿಗೆ ಹೋಲಿಸಿದಾಗ ಕಾಣುವ ವಿಭಿನ್ನತೆ - ಮುಖ್ಯವಾಗಿ ಸಂಸ್ಥೆಗಳ ರಚನೆ, ವಿನ್ಯಾಸ ಮತ್ತು ಕಾರ್ಯಾಚರಣೆ. ಈ ಸಂಸ್ಥೆಗಳ ಸಾಮರ್ಥ್ಯತೆ ಇರುವುದು ಅವುಗಳ ಕಾರ್ಯದಕ್ಷತೆಯಲ್ಲಿ ಹಾಗೂ ಸ್ಥಳೀಯ ಹಿತಾಸಕ್ತಿಗಳನ್ನು ಪ್ರತಿಬಿಂಬಿಸುವಲ್ಲಿ. ಮುಖ್ಯವಾಗಿ ಈ ಸಂಸ್ಥೆಗಳು ಸನ್ನಿವೇಶಕ್ಕೆ ತಕ್ಕಂತೆ ಹೊಂದಿಕೊಳ್ಳುವ ಗುಣ ಮತ್ತು ಕೌಶಲ್ಯವನ್ನು ಹೊಂದಿವೆ. ಸಂಸ್ಥೆಗಳ ಗಾತ್ರ ಚಿಕ್ಕದಾಗಿರುವುದರಿಂದ ಯೋಜಿಸುವ ವಿಧಾನಗಳು ಮತ್ತು ತಜ್ಞತೆಗಳು ಅಷ್ಟೇನು ಕಠಿಣವಿರುವುದಿಲ್ಲ ಮತ್ತು ಅತಿ ಮುಖ್ಯವಾಗಿ ಅವುಗಳ ಗುರಿ ಯಾವಾಗಲೂ ಅಭಿವೃದ್ಧಿಯ ಪಥದಲ್ಲಿ ಇರುವುದರಿಂದ. ಇವೆಲ್ಲಾ ಗುಣಗಳಿರುವ ಪರಿಣಾಮವಾಗಿ ಸ್ವಯಂ ಸೇವಾ ಸಂಸ್ಥೆಗಳು ಹಳ್ಳಿಗಳಲ್ಲಿರುವ ಜನರ ಜೊತೆಗೆ ಬೆರೆತು, ಅವರುಗಳ ಸಮಸ್ಯೆಗಳನ್ನು ಅರ್ಥಮಾಡಿಕೊಂಡು, ಅವರ ಜೊತೆ ನೇರ ಸಂಪರ್ಕವನ್ನು ಇಟ್ಟುಕೊಂಡು ಅವರ ಜೀವನದಲ್ಲಿ ವಿವಿಧ ಬದಲಾವಣೆಗಳನ್ನು ತರುವುದಕ್ಕೆ ಹೆಚ್ಚಿನಮಟ್ಟಿನ ಶ್ರಮವನ್ನು ವಹಿಸುತ್ತಾ ಬಂದಿವೆ. ಇವೆಲ್ಲಾ ಕಾರಣಗಳಿಂದ ಈ ಸಂಸ್ಥೆಗಳನ್ನು 'ಸರ್ಕಾರೇತರ ಸ್ವಯಂಸೇವಾ ಸಂಸ್ಥೆಗಳು' ಎಂದು ಕರೆಯುವುದರ ಬದಲಾಗಿ 'ಸರ್ಕಾರೇತರ ಅಭಿವೃದ್ಧಿ ಸಂಸ್ಥೆಗಳೆಂದು' ಕರೆಯುವ ರೂಢಿ ವ್ಯವಸ್ಥೆಯಲ್ಲಿ ಬಂದಿದೆ.

ಸಾಮಾಜಿಕ ತಜ್ಞರ ಮತ್ತು ಆರ್ಥಿಕ ತಜ್ಞರ ಅಭಿಪ್ರಾಯದಂತೆ ಭಾರತದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಯ ಜೊತೆಗೆ ಸಮಾಜದಲ್ಲಿರುವ ಜನರ ವಿವಿಧ ಸಮಸ್ಯೆಗಳು ಕೂಡಾ ಬೆಳೆಯುತ್ತಾ ಬಂದಿವೆ. ಉದಾಹರಣೆಗೆ ಬಡತನ, ನಿರುದ್ಯೋಗ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ, ಹಿಂದುಳಿದ ಜನಾಂಗದ ಮತ್ತು ದುರ್ಬಲ ವರ್ಗದವರ ಸಮಸ್ಯೆಗಳು, ಅಸಮಾನತೆ, ಮಹಿಳೆಯರ ಶೋಷಣೆ, ಇನ್ನೂ ಅನೇಕ ಸಮಸ್ಯೆಗಳು. ಇದಕ್ಕೆ ಸಂಬಂಧಪಟ್ಟಂತಹ ಅಭಿವೃದ್ಧಿ ಯೋಜನೆಗಳನ್ನು ಹಾಗೂ ಶಾಸನಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದರಲ್ಲಿ ಸರ್ಕಾರದ ಇಲಾಖೆಗಳು ಹೇಳಿಕೊಳ್ಳುವಂತಹ ಯಶಸ್ಸನ್ನು ಸಾಧಿಸಿಲ್ಲ. ಇದಕ್ಕೆ ಹಲವಾರು ತೊಡಕುಗಳನ್ನು ನಾವು ಗಮನಿಸಬಹುದಾಗಿದೆ - ಕಾನೂನಿನ ತೊಡಕುಗಳು, ಸಿಬ್ಬಂದಿ ಕೊರತೆ, ಸಂಪರ್ಕದ ಕೊರತೆ, ಕಾರ್ಯಾಚರಣೆಯಲ್ಲಿರುವ ನಿಧಾನಗತಿ, ಮಾಹಿತಿಗಳ ಕೊರತೆ ಮತ್ತು ಅಧಿಕಾರಿಗಳ ಅನಾದರಣೆ, ಇದಕ್ಕೆ ಪೂರಕವಾಗಿ ಜನರ ತಿಳುವಳಿಕೆಯ ಮಟ್ಟ ಮತ್ತು ಕಾರ್ಯಕ್ರಮಗಳ ಬಗ್ಗೆ ಅರಿವು ಸರಿಯಾಗಿ ಇಲ್ಲದೇ ಇರುವುದರ ಪರಿಣಾಮವಾಗಿ ಸರ್ಕಾರದಿಂದ ನಿಯೋಜಿತಗೊಂಡ ಅಭಿವೃದ್ಧಿ ಕಾರ್ಯಕ್ರಮಗಳು ನಿರೀಕ್ಷಿಸಿದಂತಹ ಫಲಗಳನ್ನು ತರುವುದರಲ್ಲಿ ವಿಫಲತೆಯನ್ನು ತೋರುತ್ತಿವೆ ಎಂದರೆ ಬಹುಶಃ ತಪ್ಪಾಗಲಾರದು.

ಈ ಒಂದು ಹಿನ್ನಲೆಯಲ್ಲಿ ನೋಡಿದಾಗ ಕರ್ನಾಟಕದಲ್ಲಿ ಸರ್ಕಾರೇತರ ಅಭಿವೃದ್ಧಿ ಸಂಸ್ಥೆಗಳು ಅಭಿವೃದ್ಧಿ ಪಥದಲ್ಲಿ ಹೇಗೆ ತಮ್ಮ ಪಾತ್ರಗಳನ್ನು ವಹಿಸುತ್ತಿವೆ, ಅವುಗಳ ಕಾರ್ಯ ವಿನ್ಯಾಸ, ಕಾರ್ಯ ವೈಖರಿಯ ಬಗ್ಗೆ ಇಲ್ಲಿ ವಿಚಾರ ಮಾಡಲಾಗಿದೆ.

## ಸ್ವಯಂ ಸೇವಾ ಸಂಸ್ಥೆಗಳ ಕಾರ್ಯವಿನ್ಯಾಸ ಮತ್ತು ವೈಖರಿ

ಈ ಸಂಸ್ಥೆಗಳ ಕಾರ್ಯವಿನ್ಯಾಸ ಮತ್ತು ವೈಖರಿಯನ್ನು ಗಮನಿಸಿದಾಗ ತಿಳಿಯುವ ಅಂಶವೆಂದರೆ ಈ ಸಂಸ್ಥೆಗಳು ಸರ್ಕಾರಿ ಸಂಸ್ಥೆಗಳಿಗಿಂತ, ಹಿಂದೆ ಹೇಳಿದಂತೆ, ಹೆಚ್ಚಿನ ಮಟ್ಟದ ವಿಭಿನ್ನತೆಯನ್ನು ಹೊಂದಿವೆ. ಇವುಗಳ ಕಾರ್ಯವ್ಯಾಪ್ತಿಯನ್ನು ಮೂರು ಹಂತಗಳಲ್ಲಿ ನೋಡಬಹುದು (ರೇಖಾಪಟವನ್ನು ಗಮನಿಸಿ). ಸರ್ಕಾರದ ಸಂಸ್ಥೆಗಳ ಮತ್ತು ಜನತೆಯ ನಡುವೆ ಮಧ್ಯಸ್ತಿಕೆ ವಹಿಸುವುದು - ಮುಖ್ಯವಾಗಿ ಅಭಿವೃದ್ಧಿಕಾರ್ಯಕ್ರಮದ ಫಲಾನುಭವಿಗಳಿಗೆ ಬ್ಯಾಂಕಿನಿಂದ ಸಾಲ ಕೊಡಿಸುವುದಕ್ಕೆ ಸಹಾಯ ಮಾಡುವುದು, ತಾಂತ್ರಿಕ ಸಲಹೆ ಮತ್ತು ಸಹಾಯವನ್ನು ಕೊಡುವುದು, ಎರಡನೆಯದಾಗಿ, ಸ್ವಂತವಾಗಿ, ಜನತೆಯ (ಬಡವರ) ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಕಾರ್ಯಕ್ರಮಗಳನ್ನು ಹಮ್ಮಿಕ್ರೊಳ್ಳುವುದು, ಬಂಡವಾಳವನ್ನು ಹೂಡುವುದು, ಅನುದಾನವನ್ನು ಮತ್ತು ಸಾಲವನ್ನು ಕೊಡುವುದು. ಸಂಸ್ಥೆಗಳನ್ನು ಕಟ್ಟುವುದು, ಬಡಜನರನ್ನು ಮತ್ತು ಫಲಾನುಭವಿಗಳನ್ನು ಸಂಘಟಿಸುವುದು, ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಅರಿವು ಮೂಡಿಸುವುದು, ಸ್ಥಳೀಯ ನಾಯಕತ್ವವನ್ನು ಬೆಳೆಸುವುದು, ಸಾಮೂಹಿಕ ಕಾರ್ಯಕ್ರಮಗಳನ್ನು (ಸಾಂಸ್ಕೃತಿಕ) ನಡೆಸುವುದು, ಸಾರ್ವಜನಿಕ ಸೇವೆಗಳ ಅಡಿಯಲ್ಲಿ ಬಡಜನರಿಗೆ ಆಸ್ತಿಗಳನ್ನು ವೃದ್ಧಿ ಮಾಡುವುದಕ್ಕೆ ಸಹಾಯ ಮಾಡುವುದು, ಸಹಾಯಧನ ಒದಗಿಸುವುದು ಮತ್ತು ಸ್ಥಳೀಯ ಯುವಕ ಮತ್ತು ಯುವತಿಯರಿಗೆ ಕರಕುಶಲಗಳ ಬಗ್ಗೆ ತರಬೇತಿಯನ್ನು ಒದಗಿಸುವುದು. ಈ ಎಲ್ಲಾ ಧ್ಯೇಯ ಅಥವಾ ಗುರಿಗಳನ್ನು ಮುಟ್ಟುವುದಕ್ಕೆ ಅವು ತಮ್ಮದೇ ಆದ 'ಕಾರ್ಯವ್ಯೂಹ'ಗಳನ್ನು ರಚಿಸಿಕೊಂಡಿವೆ - ಸರ್ಕಾರದ ಸಂಸ್ಥೆಗಳ ಮೇಲೆ ಒತ್ತಡ ತರುವುದು, ಅಧಿಕಾರಿಗಳ ಗಮನ ಸೆಳೆಯುವುದು, ಸತ್ಯಾಗ್ರಹ ಹಾಗೂ ಧರಣೆ ಕೂಡುವುದು ಮತ್ತು ಸಂಪರ್ಕ ಸಭೆಗಳನ್ನು ನಡೆಸುವುದು. ಇಂತಹ ಸಭೆಗಳಲ್ಲಿ ಸಂಬಂಧಪಟ್ಟ ಅಧಿಕಾರಿಗಳನ್ನು ಜನನಾಯಕರನ್ನು ಒಂದುಗೂಡಿಸಿ ಎಲ್ಲಾ ಸಮಸ್ಯೆಗಳನ್ನು ಮುಖಾಮುಖಿ ಅಂಕಿ ಅಂಶಗಳೊಡನೆ ಚರ್ಚಿಸಿ ಜನಪರವಾದ ನಿರ್ಣಯಗಳನ್ನು ತೆಗೆದುಕೊಳ್ಳುವಂತಹ ವ್ಯವಸ್ಥೆಯನ್ನು ಈ ಸಂಸ್ಥೆಗಳು ರೂಪಿಸಿಕೊಂಡು ಕಾರ್ಯವೆಸಗುತ್ತಾ ಬಂದಿವೆ. ಇಂತಹ ಧ್ಯೇಯ ಮತ್ತು ಗುರಿಗಳನ್ನು ಇಟ್ಟುಕೊಂಡು ಹಾಗೂ ತಮ್ಮದೇ ಆದ ಕಾರ್ಯ ವೈಖರಿ ಮತ್ತು ಮಾರ್ಗಗಳನ್ನು ಅನುಸರಿಸಿ ಸಮಾಜದಲ್ಲಿ ಸಾಮಾಜಿಕ ಬದಲಾವಣೆ ಮತ್ತು ಆರ್ಥಿಕ ಅಭಿವೃದ್ಧಿಯನ್ನು ತರುವುದಕ್ಕೆ ಸರ್ಕಾರದ ಸಂಸ್ಥೆಗಳ ಜೊತೆ ಅವು ಪೂರಕ ಸಂಸ್ಥೆಗಳಾಗಿ ಕೆಲಸ ಮಾಡುತ್ತಾ ಬೆಳೆದು ಬಂದಿವೆ.

## ಸಾಮಾಜಿಕ ಸುಧಾರಣೆ

ಗ್ರಾಮಾಂತರ ಪ್ರದೇಶದ ಜನರ ಜೀವನದ ಗತಿ ವಿಧಾನಗಳಲ್ಲಿ ಸಾಮಾಜಿಕ ಸುಧಾರಣೆಯನ್ನು ತರುವುದಕ್ಕೋಸ್ಕರ ಸ್ವಯಂ ಸೇವಾ ಸಂಸ್ಥೆಗಳು ಹಲವಾರು

ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತಂದಿವೆ. ಹೆಚ್ಚಿನ ರೀತಿಯಲ್ಲಿ ಈ ಸಂಸ್ಥೆಗಳು ಕಾರ್ಯಕೈಗೊಳ್ಳುತ್ತಿರುವ ಕಾರ್ಯಕ್ಷೇತ್ರಗಳು ಯಾವುವೆಂದರೆ - ಶಿಕ್ಷಣ, ಆರೋಗ್ಯ, ನೈರ್ಮಲ್ಯ, ಕುಡಿಯುವ ನೀರು, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಜನರನ್ನು ಸಂಘಟನೆಗೊಳಿಸುವುದು, ಪರಿಸರ ಸಂರಕ್ಷಣೆ ಇತ್ಯಾದಿ.

ಶಿಕ್ಷಣ ಕ್ಷೇತ್ರದಲ್ಲಿ ದೃಷ್ಟಾಂತಗಳ ಮೂಲಕ ಹೇಳುವುದಾದರೆ ಬೆಂಗಳೂರು ಜಿಲ್ಲೆಯಲ್ಲಿ 'ಫೆಡಿನಾ' ಎಂಬ ಸಂಸ್ಥೆಯು ಜನ ವಿದ್ಯಾಲಯಗಳನ್ನು ತೆರೆಯುವುದರ ಮೂಲಕ ಮಹಿಳೆಯರಿಗೆ ಮತ್ತು ಮಕ್ಕಳಿಗೆ ಶಿಕ್ಷಣ ಕ್ಷೇತ್ರದ ಹೊಸ ಹೊಸ ಪದ್ಧತಿಗಳ ಬಗ್ಗೆ ಅರಿವು ಮೂಡಿಸುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಒಟ್ಟಾರೆ ಎಲ್ಲಾ ವರ್ಗದ ಹಾಗೂ ಜನಾಂಗದಲ್ಲಿ 'ಸಾಕ್ಷರತೆ'ಯ ಮೂಲಕ ವಿದ್ಯಾಭ್ಯಾಸವನ್ನು ಕೊಡುತ್ತಿದೆ. ಇದೇ ರೀತಿ 'ಸುಮಂಗಲಿ ಸೇವಾಶ್ರಮ' ಸಂಸ್ಥೆಯು ನಿರಾಶ್ರಿತ ಮಕ್ಕಳಿಗಾಗಿ, ಶಿಶುವಿಹಾರಗಳನ್ನು ಮತ್ತು ಶಾಲೆಗಳನ್ನು ನಡೆಸುತ್ತಾ ಬಂದಿದೆ. ಮಹಿಳೆಯರಿಗೆ ಸ್ವಯಂ-ಉದ್ಯೋಗ ಪ್ರಾರಂಭಿಸುವುದಕ್ಕೆ ಬೇಕಾದ ವೃತ್ತಿನಿರತ ಶಿಕ್ಷಣ ಮತ್ತು ತರಬೇತಿಯನ್ನು ಕೊಡುತ್ತಾ ಬಂದಿದೆ. ಮಾಹಿತಿಯ ಪ್ರಕಾರ ಶಿಶುವಿಹಾರ ಮತ್ತು ಪ್ರಾಥಮಿಕ ಶಾಲೆಗಳು ೪೦೦ ಮಕ್ಕಳಿಗೆ ವಿದ್ಯಾಭ್ಯಾಸವನ್ನು ೧೦೦ ಮಹಿಳೆಯರಿಗೆ ಹೊಲಿಗೆ ಮತ್ತು ಪರದೆ ಮುದ್ರಣ (ಸ್ಕ್ರೀನ್ ಪ್ರಿಂಟಿಂಗ್)ದಲ್ಲಿ, ೪೦ ಮಹಿಳೆಯರಿಗೆ ನೂಲಿನ ತರಬೇತಿಯನ್ನು ಕೊಡುತ್ತಾ ಬಂದಿದೆ. 'ಆಕ್ಷನ್ ಏಡ್' ಸಂಸ್ಥೆಯು ಚಿತ್ರದುರ್ಗ ಜಿಲ್ಲೆಯ ೨೭ ಹಳ್ಳಿಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ಲಂಬಾಣಿ, ಭೋವಿ ಮತ್ತು ನಾಯ್ಕ ಜನಾಂಗದ ಮಕ್ಕಳಿಗೆ ಪ್ರಾಥಮಿಕ ಶಾಲೆಗಳನ್ನು ತೆರೆಯುವುದರ ಮೂಲಕ ಶಿಕ್ಷಣವನ್ನು ಕೊಡುತ್ತಾ ಬಂದಿದೆ. ಮುಖ್ಯವಾಗಿ ಶಾಲೆಗಳಿಂದ ಹೊರಗೆ ಬಂದ ಮಕ್ಕಳಿಗೆ (ಸುಮಾರು ೧೯೦ ಮಕ್ಕಳಿಗೆ) ಹಾಗೂ ವಯಸ್ಕರಿಗೆ ರಾಜ್ಯ ಸರ್ಕಾರದ 'ಅಕ್ಷರವಾಣಿ' ಕಾರ್ಯಕ್ರಮದ ಮೂಲಕ, ಪ್ರಾಥಮಿಕ ಶಿಕ್ಷಣವನ್ನು ಮತ್ತು ಕನಿಷ್ಟ ಕಲಿಕೆ ವಿಧಾನವನ್ನು ಕಲಿಸುತ್ತಾ ಬಂದಿದೆ. ಜಿಲ್ಲಾ ಪಂಚಾಯಿತಿ ನೆರವಿನಿಂದ ಶೇ. ೨೫ರಷ್ಟು ಧನ ಸಹಾಯದಿಂದ ಮತ್ತು ರೂ. ೧೦,೦೦೦ರಷ್ಟು ಬೆಲೆಯ ಜನರ ಶ್ರಮ ಮತ್ತು ಸಾಮಗ್ರಿಗಳ ನೆರವಿನಿಂದ, ಈ ಸಂಸ್ಥೆಯು ಎರಡು ಹಳ್ಳಿಗಳಲ್ಲಿ ಎರಡು ಶಾಲಾ ಕಟ್ಟಡಗಳನ್ನು ಕಟ್ಟಿಸಿ ಶಾಲೆಗಳನ್ನು ನಡೆಸುತ್ತಿದೆ. ಈ ಶಾಲೆಗಳಲ್ಲಿ ಸುಮಾರು ಶೇ. ೨೫ರಿಂದ ೮೦ರಷ್ಟು ಹಾಜರಾತಿಯನ್ನು ಕಾಣಬಹುದಾಗಿದೆ.

ಆರೋಗ್ಯ ಕ್ಷೇತ್ರದಲ್ಲಿ ನೋಡುವುದಾದರೆ, ಉದಾಹರಣೆಗೆ, ರಾಣೆಬೆನ್ನೂರು ತಾಲ್ಲೂಕಿನ ಮೆಡ್ಲೇರಿ ಎಂಬ ಗ್ರಾಮದಲ್ಲಿ 'ಇಂಡಿಯಾ ಡೆವಲಪ್‌ಮೆಂಟ್ ಸರ್ವೀಸ್' ಸಂಸ್ಥೆಯು ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಸ್ಥಾಪಿಸುವುದರ ಮೂಲಕ ಸುತ್ತಮುತ್ತಲ್ಲಲಿರುವ ಬಡಜನರಿಗೆ ಒಳ್ಳೆಯ ಆರೋಗ್ಯ ಸೇವೆಯನ್ನು ಕೊಡುವಂತಹ ಸೇವೆಯನ್ನು ಹಿಂದೆ ಮಾಡುತ್ತಿತ್ತು. ಒಳ್ಳೆಯ ಮತ್ತು ಸುರಕ್ಷಿತ ಆಹಾರವನ್ನು ಮಕ್ಕಳಿಗೆ

ಕೊಡುವುದಕ್ಕಾಗಿ 'ಸುಮಂಗಲಿ ಸೇವಾಶ್ರಮ'ವು ೧೫ ಹಳ್ಳಿಗಳಲ್ಲಿ ಸರ್ಕಾರದ ಸಹಾಯದಿಂದ ಸುಮಾರು ೧೬೦೦ ಮಕ್ಕಳಿಗೆ ಪೌಷ್ಟಿಕ ಆಹಾರವನ್ನು ಕೊಡುತ್ತಾ ಬಂದಿದೆ. ಇದೇ ರೀತಿ ಮುಳಬಾಗಿಲು ತಾಲ್ಲೂಕಿನಲ್ಲಿರುವ 'ಗ್ರಾಮವಿಕಾಸ' ಸಂಸ್ಥೆಯು ಕೂಡ ಬಡ ಜನರಿಗಾಗಿ ಔಷಧಿಗಳನ್ನು ಕೊಳ್ಳುವುದಕ್ಕೆ ಧನಸಹಾಯ ಮಾಡುವುದು ಮತ್ತು ಮಕ್ಕಳಿಗಾಗಿ ಪೌಷ್ಟಿಕ ಆಹಾರವನ್ನು ಕೊಡುವುದರ ಮೂಲಕ ಜನರ ಕನಿಷ್ಟ ಅಗತ್ಯಗಳನ್ನು ಪೂರೈಸುತ್ತಾ ಬಂದಿದೆ. ಚಿತ್ರದುರ್ಗದ ಸೋಮನಹಳ್ಳಿಯಲ್ಲಿ 'ಆಕ್ಷನ್ ಏಡ್' ಸಂಸ್ಥೆಯು ಸರ್ಕಾರದ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ನೆರವು ಕೊಡುವುದರ ಮೂಲಕ ಆರೋಗ್ಯ ಸೇವೆಯನ್ನು ಕೊಡುತ್ತಾ ಬಂದಿದೆ. ಪ್ರಮುಖವಾಗಿ, ಆರೋಗ್ಯ ಶಿಕ್ಷಣ ಕಾರ್ಯಕರ್ತರಿಗೆ ತರಬೇತಿ, ಗರ್ಭಿಣಿ ಹೆಂಗಸರನ್ನು ಗುರುತಿಸಿ ನೊಂದಾಯಿಸುವುದು, ರೋಗಿಗಳ ಎತ್ತರ ಮತ್ತು ತೂಕವನ್ನು ದಾಖಲಾತಿ ಮಾಡುವುದು, ತೊಂದರೆಗೊಳಪಟ್ಟಿರುವ ತಾಯಂದಿರನ್ನು ಗುರುತಿಸಿ ನೆರವು ಕೊಡುವುದು, ಮಕ್ಕಳನ್ನು ಗುರುತಿಸಿ ಲಸಿಕೆ, ಪೋಲೀಯೋ ಹಾಕಿಸುವುದು. ಹೀಗೆ ಹಲವಾರು ಆರೋಗ್ಯ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುತ್ತಾ ಬಂದಿದೆ. ಜನರಲ್ಲಿ ಆರೋಗ್ಯಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಅಧಿಕಾರಿಗಳ ಗಮನಕ್ಕೆ ತರುವಂತಹ ಸೇವೆಯನ್ನು ಕೂಡ ಮಾಡುತ್ತಾ ಬಂದಿದೆ. ಅಂಕಿ ಅಂಶಗಳನ್ನು ನೋಡಿದಾಗ ಈ ಸಂಸ್ಥೆ ಮಹಿಳಾ ಮತ್ತು ಮಕ್ಕಳ ಆರೋಗ್ಯ ಕಲ್ಯಾಣಕ್ಕಾಗಿ ಶೇ. ೬೦ರಿಂದ ೧೦೦ರಷ್ಟು ಯಶಸ್ಸನ್ನು ಸಾಧಿಸುತ್ತಾ ಬಂದಿದೆ. ಬಿಳಿಗಿರಿ ರಂಗನಬೆಟ್ಟದಲ್ಲಿರುವ 'ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ'ವು ಕೂಡಾ ಸ್ಥಳೀಯ ಸೋಲಿಗ ಜನಾಂಗಕ್ಕೆ ಆರೋಗ್ಯಜ್ಞಾನದ ಬಗ್ಗೆ ಅರಿವು ಮೂಡಿಸುತ್ತಾ ಅವರುಗಳು ಆರೋಗ್ಯವಾಗಿರುವುದಕ್ಕೆ ಬೇಕಾದ ಸವಲತ್ತುಗಳನ್ನು ಒದಗಿಸುತ್ತಾ ಬಂದಿದೆ. ಈ ಕೇಂದ್ರದ ಆರೋಗ್ಯ ಪೋಷಣೆಯಿಂದ 'ಶಿಶು ಮರಣ' ಪ್ರತಿ ಸಾವಿರಕ್ಕೆ ೧೪೫ರಿಂದ ೨೪೦ಕ್ಕಿಂತ ಕಡಿಮೆಗೊಳಿಸಿರುವುದು ಈ ಸಂಸ್ಥೆಯ ಮೇರು ಸಾಧನೆ.

ಒಳ್ಳೆಯ ಆರೋಗ್ಯಕ್ಕೆ ಮುಖ್ಯವಾಗಿ ಬೇಕಾಗಿರುವುದು ಕಲ್ಮಷವಿಲ್ಲದ ಕುಡಿಯುವ ನೀರು ಹಾಗೂ ನೈರ್ಮಲ್ಯ. ಎಲ್ಲಾ ಕಾಲಗಳಲ್ಲೂ ಜನರು ತಮ್ಮ ಆರೋಗ್ಯಮಟ್ಟವನ್ನು ಉತ್ತಮಗೊಳಿಸುವುದಕ್ಕೆ ಹಾಗೂ ಪಶುಗಳಿಗೆ ಸುರಕ್ಷಿತವಾದ ಆರೋಗ್ಯವನ್ನು ಕೊಡುವುದಕ್ಕೆ ಕುಡಿಯುವ ನೀರು ಬಹಳ ಅತ್ಯಗತ್ಯ. ಇದರ ಜೊತೆಗೆ ಸುತ್ತಮುತ್ತಲಿನ (ನೀರಿನ ವ್ಯವಸ್ಥೆ ಇರುವಲ್ಲಿ) ಪರಿಸರವನ್ನು ಕೂಡ ಶುಚಿತ್ವದಿಂದ ಇಟ್ಟುಕೊಳ್ಳಬೇಕಾಗಿದೆ. ಇಂತಹ ಸೇವೆಗಳನ್ನು ಕೊಡುವುದರಲ್ಲಿ ಸ್ವಯಂ ಸೇವಾ ಸಂಸ್ಥೆಗಳಾದ 'ಡ್ಯಾನಿಡಾ', 'ಮೈರಾಡ', 'ಮಹಿಳಾ ವಿಮೋಚನೆ', 'ಅಮಲಾ ಕುಟುಂಬ ಅಭಿವೃದ್ಧಿ ಕಾರ್ಯಕ್ರಮ', ಮತ್ತು 'ಪುನರ್‌ವಸತಿ ಸಂಘ'ಗಳು ಹೆಚ್ಚಿನ ಮಟ್ಟದ ಶ್ರಮವನ್ನು ವಹಿಸುತ್ತಾ ಬಂದಿವೆ. ಸರ್ಕಾರದ 'ನಲ್ಲಿ ನೀರು ಸರಬರಾಜು',

'ಕಿರುನೀರು ಸರಬರಾಜು', 'ಕೃಪಂಪು ಸಹಿತ ಕೊಳವೆಬಾವಿ', ಯೋಜನೆಗಳನ್ನು ಅನುಷ್ಠಾನ ತರುವಿಕೆಯಲ್ಲಿ ಮೇಲಿನ ಸಂಸ್ಥೆಗಳು ಪೂರಕ ಸಂಸ್ಥೆಗಳಾಗಿ ಕೆಲಸ ಮಾಡುತ್ತಾ ಬಂದಿವೆ. ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನಲ್ಲಿ, ಮಹಿಳಾ ವಿಮೋಚನೆ, ಮೈರಾಡ ಸಂಸ್ಥೆಗಳು ಓವರ್ ಹೆಡ್ ಟ್ಯಾಂಕ್ ನಿರ್ಮಿಸಲು ಉತ್ತಮ ಸ್ಥಳದ ಆಯ್ಕೆ, ಕೊಳವೆ ಬಾವಿಗಳ ಗುರುತಿಸುವಿಕೆ, ನೀರಿರುವ ಸ್ಥಳಗಳನ್ನು ಗುರುತಿಸುವಿಕೆ ಹಾಗೂ ಕಾಮಗಾರಿಗಳನ್ನು ಪೂರ್ಣಗೊಳಿಸಲು ಮತ್ತು ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಕಷ್ಟು ಉತ್ತೇಜನವನ್ನು ಕೊಟ್ಟಿವೆ ಮತ್ತು ಕೊಡುತ್ತಾ ಬಂದಿವೆ. ಇದರ ಜೊತೆಗೆ ಪರಿಸರ ಮಾಲಿನ್ಯ ಕುರಿತಂತೆ ತಿಳುವಳಿಕೆ ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬಂದಿವೆ.

ಸ್ವಯಂ ಸೇವಾ ಸಂಸ್ಥೆಗಳು ಹೆಚ್ಚಿನ ಮಟ್ಟದಲ್ಲಿ ಹಿಂದುಳಿದ ಜನಾಂಗದವರ ಆಯಾ ವರ್ಗದವರ ಕಲ್ಯಾಣಕ್ಕಾಗಿ ಉಪಯೋಗವಾಗುವಂತಹ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಾ ಬಂದಿವೆ. ಈ ಒಂದು ದಿಶೆಯಲ್ಲಿ 'ಇಂಡಿಯಾ ಡೆವಲಪಮೆಂಟ್ ಸರ್ವೀಸ್' ಸಂಸ್ಥೆಯು ಎರಡು ತರಹದ ಫಲಾನುಭವಿಗಳ ಗುಂಪುಗಳನ್ನು ಯಾವಾಗಲೂ ತನ್ನ ಗುರಿಯಾಗಿಟ್ಟುಕೊಂಡು ಕೆಲಸ ಮಾಡುತ್ತಾ ಬಂದಿದೆ. ಎಲ್ಲಾ ಬಡಜನಾಂಗ ಮತ್ತು ಬಡಮಹಿಳೆಯರು ಹಾಗೂ ಅರಿಸುವಿಕೆಯಲ್ಲಿ ಮುಖ್ಯವಾಗಿ, ಜಮೀನು ಇಲ್ಲದವರಿಗೆ ಹೆಚ್ಚಿನ ಆದ್ಯತೆಯನ್ನು ಕೊಡುವುದು, ಇವರಿಗೆ ಕುರಿ ಸಾಕಾಣಿಕೆ ಬಗ್ಗೆ, ಹಾಲು ಉತ್ಪಾದನೆ ಬಗ್ಗೆ, ಪಶುಗಳನ್ನು ಆರೈಕೆ ಮಾಡುವ ಜವಾಬ್ದಾರಿಯ ಬಗ್ಗೆ ಗ್ರಾಮೀಣ ಮತ್ತು ಗುಡಿಕೈಗಾರಿಕೆಗಳ ಬಗ್ಗೆ ಮಾಹಿತಿ, ತರಬೇತಿ ಮತ್ತು ಹಣದ ಸಹಾಯವನ್ನು ಕೊಟ್ಟು ಇವರು ಸ್ವತಂತ್ರವಾಗಿ ಜೀವನ ನಡೆಸುವುದಕ್ಕೆ ಸಮಾಜದಲ್ಲಿ ಜವಾಬ್ದಾರಿ ಹೊತ್ತ ವ್ಯಕ್ತಿಗಳಾಗಿ ಬೆಳೆಯುವುದಕ್ಕೆ ಈ ಸಂಸ್ಥೆ ನೆರವು ಮತ್ತು ಸಹಾಯವನ್ನು ನೀಡುತ್ತಾ ಬಂದಿದೆ.

ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರವು ಡಾ|| ಸುದರ್ಶನ್ ಅವರ ನೇತೃತ್ವದಲ್ಲಿ ಕಳೆದ ೧೫ ವರ್ಷಗಳಿಂದ ಗಿರಿಜನರ ಸಾಮಾಜಿಕ ಮತ್ತು ಆರ್ಥಿಕ ಕಲ್ಯಾಣಕ್ಕಾಗಿ ತಮ್ಮ ಸೇವೆ ಮತ್ತು ಶ್ರಮವನ್ನು ನೀಡುತ್ತಾ ಬಂದಿದೆ. ಇದುವರೆವಿಗೂ ಸುಮಾರು ೨೦,೦೦೦ ಗಿರಿಜನರನ್ನು ಪೋಷಿಸಿ ಅವರಲ್ಲಿರುವ ಬಡತನದ ನಿವಾರಣೆಗಾಗಿ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು, ಜನಾಂಗದ ಸಂಸ್ಕೃತಿಯನ್ನು ಅಳವಡಿಸಿಕೊಂಡು, ಈ ಜನಗಳ ಏಳಿಗೆಗಾಗಿ ದುಡಿಯುತ್ತಾ ಬಂದಿದೆ. ಇದೇ ರೀತಿ ಫೆಡಿನಾ ಸಂಸ್ಥೆಯ ಆಶ್ರಯದ ಹೆಗ್ಗಡದೇವನ ಕೋಟೆಯಲ್ಲಿರುವ ವಿವಿಧ ಕಾಡುಕುರುಬರ ಸಂಘವು ಕುರುಬ ಜನಾಂಗದ ಪದ್ಧತಿಯಲ್ಲಿರುವ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು, ಹಬ್ಬಗಳನ್ನು ಆಚರಿಸುವ ಮೂಲಕ ಕಾಡುಕುರುಬರನ್ನು ಸಂಘಟನೆ ಮಾಡಿ ಜಮೀನಿಗಾಗಿ, ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವಂತೆ ಹುರಿದುಂಬಿಸಿ ಜನಾಂಗಕ್ಕೆ ಬೇಕಾದ ನ್ಯಾಯವನ್ನು ಒದಗಿಸಿ ಕೊಡುತ್ತಾ ತನ್ನ ಸೇವೆಯನ್ನು ಮಾಡುತ್ತಾ ಬಂದಿದೆ.

ಹಳ್ಳಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ಆಕ್ಷನ್ ಏಡ್ ಸಂಸ್ಥೆಯು ಜನರನ್ನು ಸಂಘಟನೆ ಮಾಡುವುದರ ಮೂಲಕ ಸ್ಥಳೀಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಾ ಬಂದಿದೆ. ಇದಕ್ಕಾಗಿ 'ಗ್ರಾಮಾಭಿವೃದ್ಧಿ' ಮಂಡಳಿಗಳನ್ನು ಸ್ಥಾಪಿಸಿ ಇದರಲ್ಲಿ ಫಲಾನುಭವಿಗಳು ಭಾಗವಹಿಸುವುದಕ್ಕೆ ಅವಕಾಶ ಮಾಡಿಕೊಟ್ಟಿದೆ. ಶಿಕ್ಷಣ, ಆರೋಗ್ಯ, ಆರ್ಥಿಕ ಕಾರ್ಯಕ್ರಮಗಳ ಕ್ಷೇತ್ರದಲ್ಲಿ ಉಪಸಮಿತಿಗಳನ್ನು ರಚಿಸಿ ಸದಸ್ಯರಿಗೆ ಜವಾಬ್ದಾರಿಯನ್ನು ಕೊಡುವುದರ ಮೂಲಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದಕ್ಕೆ ಸಹಕಾರ ಮತ್ತು ಪ್ರೋತ್ಸಾಹ ಕೊಡುತ್ತಾ ಬಂದಿದೆ. ದೃಷ್ಟಾಂತ ಮೂಲಕ ಹೇಳುವುದಾದರೆ, ೧೬ ಮಂದಿ ರೈತರನ್ನು ಒಂದುಗೂಡಿಸಿ 'ಸಾಮೂಹಿಕ ನೀರಾವರಿ' ಕಾರ್ಯಕ್ರಮವನ್ನು ಜಾರಿಗೊಳಿಸುವುದರ ಮೂಲಕ ಈ ಎಲ್ಲಾ ರೈತರಿಗೆ ನೀರಾವರಿ ಬೇಸಾಯ ಮಾಡುವುದಕ್ಕೆ ಅನುಕೂಲ ಮಾಡಿಕೊಡಲಾಯ್ತು. ಇದರ ಜೊತೆಗೆ ಜಿಲ್ಲಾ ಪಂಚಾಯತ್‌ನ ಅನುದಾನದ ಸಹಾಯದಿಂದ ಸಾಮೂಹಿಕ ಭವನಗಳನ್ನು ಎರಡು ಹಳ್ಳಿಗಳಲ್ಲಿ (ಸೋಮನಹಳ್ಳಿ, ರಾಜನಹಳ್ಳಿ) ಈ ಸಂಸ್ಥೆ ಕಟ್ಟಿದೆ. ಹಳ್ಳಿಗಳಲ್ಲಿ ಬೇಕಾದ ಸವಲತ್ತುಗಳನ್ನು ವೃದ್ಧಿಪಡಿಸಲು ಈ ಸಂಸ್ಥೆಯು ಜನರಲ್ಲಿ ಶ್ರಮದಾನ ಕೊಡುವಂತಹ ಪ್ರವೃತ್ತಿಯನ್ನು ಬೆಳೆಸಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಾ ಬಂದಿದೆ.

**ಅಭಿವೃದ್ಧಿ ಕಾರ್ಯಕ್ರಮಗಳು**

ಅಭಿವೃದ್ಧಿ ಕಾರ್ಯಕ್ರಮಗಳು ಮುಖ್ಯವಾಗಿ ಜನರ ಆರ್ಥಿಕ ಬೆಳವಣಿಗೆಯನ್ನು ಮತ್ತು ಸಮಗ್ರ ತರವಾದ ಸಾಮೂಹಿಕ ಅಭಿವೃದ್ಧಿಯನ್ನು ತರುವಂತಹ ಕಾರ್ಯಕ್ರಮಗಳಾಗಿವೆ. ಹೆಚ್ಚಿನ ರೀತಿಯಲ್ಲಿ ಇವು ಸರ್ಕಾರದಿಂದ ನಿಯೋಜಿತವಾದ ಕಾರ್ಯಕ್ರಮಗಳು. ಈ ಒಂದು ಪರಿವಿಧಿಯಲ್ಲಿ ನೋಡಿದಾಗ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಹೆಚ್ಚಿನ ಮಟ್ಟದಲ್ಲಿ ಸರ್ಕಾರದ ಕಾರ್ಯಕ್ರಮಗಳಿಗೆ ಮತ್ತು ಅದರ ಪ್ರಯತ್ನಗಳಿಗೆ ಬಲಕೊಡುವಂತಹ ಮತ್ತು ಸಹಕಾರ ಕೊಡುವಂತಹ ಸಂಸ್ಥೆಗಳಾಗಿವೆ. ಇಂತಹ ಕಾರ್ಯಕ್ರಮಗಳ ಅನುಷ್ಠಾನ ತರುವಿಕೆಯಲ್ಲಿ ಈ ಸಂಸ್ಥೆಗಳ ಪಾತ್ರ ಅತಿ ಮುಖ್ಯವಾದುದ್ದು.

ಈ ಒಂದು ಹಿನ್ನಲೆಯಲ್ಲಿ ನೋಡಿದಾಗ ಸ್ವಯಂ ಸೇವಾ ಸಂಸ್ಥೆಗಳು ಪ್ರಮುಖವಾಗಿ ಸಣ್ಣ ಪ್ರಮಾಣದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಾ ಬಂದಿವೆ. ದೃಷ್ಟಾಂತ ಮೂಲಕ ಹೇಳುವುದಾದರೆ 'ಗ್ರಾಮ ವಿಕಾಸ' ಸಂಸ್ಥೆಯು ಬಹಳ ಕಡಿಮೆ ಗಾತ್ರದಲ್ಲಿ ವ್ಯವಸಾಯ ಮತ್ತು ಇದಕ್ಕೆ ಸಂಬಂಧಪಟ್ಟ ಅಂದರೆ ಹೊಸ ತಳಿಯ ಬೀಜಗಳನ್ನು ಒದಗಿಸುವುದು ಮತ್ತು ವ್ಯಾಪಾರ ಕ್ಷೇತ್ರಗಳಲ್ಲಿ ವಿನಿಯೋಗಿಸುವುದಕ್ಕೆ ಬೇಕಾದ ಬಂಡವಾಳವನ್ನು ರೈತ ಜನರಿಗೆ ಕೊಡುವುದು, ಇತಂಹ ಕಾರ್ಯಗಳನ್ನು ಕೈಗೊಳ್ಳುತ್ತಾ ಬಂದಿದೆ. ಈ ಕಾರ್ಯಕ್ರಮದ ಮುಖ್ಯ ಉದ್ದೇಶ ಹಳ್ಳಿಗಳಲ್ಲಿ ಬಡತನ ನಿರ್ಮೂಲನಾ ಮಾಡುವುದು.

ಇದೇ ರೀತಿ ಇಂಡಿಯಾ ಡವೆಲಪಮೆಂಟ್ ಸರ್ವೀಸ್ ಸಂಸ್ಥೆಯು ಮಡ್ಲೂರಿ ಗ್ರಾಮದ ಹಾಗೂ ಸುತ್ತ ಮುತ್ತಲಿನ ಗ್ರಾಮಗಳಲ್ಲಿ ರೈತರಿಗೆ ಧನ ಸಹಾಯವನ್ನು ಕೊಡುತ್ತಾ ಸ್ಥಳೀಯ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಹಳ್ಳಿಗಳ ಆರ್ಥಿಕ ವ್ಯವಸ್ಥೆಯನ್ನು ಬಲ ಪಡಿಸುವುದರ ಮೂಲಕ ಸಮಗ್ರ ಗ್ರಾಮೀಣ ಅಭಿವೃದ್ಧಿ ಉಂಟು ಮಾಡುವುದಕ್ಕೆ ಶ್ರಮಿಸುತ್ತಾ ಬಂದಿದೆ. ರೈತರಿಗೆ ಹೊಸ ಹೊಸ ಬೆಳೆಗಳನ್ನು ಬೆಳೆಯುವುದಕ್ಕೆ ಬೇಕಾದ ಧನ ಸಹಾಯವನ್ನು ಕೂಡ ಮಾಡುತ್ತಾ ಬಂದಿದೆ. ಇದಲ್ಲದೆ ಕುರಿಸಾಕಾಣಿಕೆಯನ್ನು, ಉಣ್ಣೆ ಮತ್ತು ಹಾಲು ಉತ್ಪಾದನೆಯಿಂದ ಬಂದ ಉತ್ಪನ್ನಗಳಿಗೆ ಬೇಕಾದ ಮಾರುಕಟ್ಟೆ ಸೌಲಭ್ಯಗಳನ್ನು ಕೂಡ ಒದಗಿಸುತ್ತಾ ಬಂದಿದೆ. ಇದರ ಜೊತೆಗೆ ಸರ್ಕಾರದಿಂದ ನಿಯೋಜಿತ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದಕ್ಕೆ ಮಧ್ಯಸ್ಥಿಕೆಯನ್ನು ಕೂಡ ವಹಿಸುತ್ತಾ ಬಂದಿದೆ. ಗ್ರಾಮೀಣ ಯುವಕ ಮತ್ತು ಯುವತಿಯರಿಗೆ ತಮ್ಮ ಸ್ವಂತ ಉದ್ದಿಮೆ ನಡೆಸಲು ಬೇಕಾದ ಸಾಲವನ್ನು ಬ್ಯಾಂಕಿನಿಂದ ಪಡೆಯುವುದಕ್ಕೆ ಸಹಕಾರವನ್ನು ಹಾಗೂ ಇದಕ್ಕೆ ಬೇಕಾದ ತರಬೇತಿಯನ್ನು ಕೂಡ ನೀಡುತ್ತಾ ಈ ಸಂಸ್ಥೆ ತನ್ನ ಸೇವೆಯನ್ನು ಸಮಾಜಕ್ಕೆ ಧಾರೆ ಎರೆಯುತ್ತಾ ಬಂದಿದೆ.

ರೈತಾಪಿ ಜನರ ಆರ್ಥಿಕ ಬೆಳವಣಿಗೆಗಾಗಿ 'ಅಕ್ಷನ್ ಏಡ್' ಸಂಸ್ಥೆಯು ಸುಮಾರು ೧೨೫೦ ರೈತ ಫಲಾನುಭವಿಗಳನ್ನು ೨೬ ಹಳ್ಳಿಗಳಿಂದ ಆರಿಸಿ ಅವರಿಗೆ ಬೆಳೆ ಸಾಲ ಮತ್ತು ಕೃಷಿಗೆ ಸಂಬಂಧಪಟ್ಟ ಬೆಳೆಗಳನ್ನು ಉತ್ಪನ್ನ ಮಾಡುವುದಕ್ಕೆ ಬೇಕಾದ ಸಹಾಯವನ್ನು ಕೊಡುತ್ತಾ ಬಂದಿದೆ. ತಡೆ ನೀರಾವರಿ ಕಾರ್ಯಕ್ರಮದ ಮೂಲಕ ಸುಮಾರು ೨೩೨ ಎಕರೆ ಜಮೀನಿನಲ್ಲಿ ಹತ್ತಿ ಮತ್ತು ಕಡಲೆಕಾಯಿಯನ್ನು ಬೆಳೆಯುವುದಕ್ಕೆ, ರೈತರಿಗೆ ಸಹಕಾರ ಕೊಟ್ಟಿದೆ. ಇದಕ್ಕೆ ಬೇಕಾದ ಮಾರ್ಕೆಟ್ ಸೌಲಭ್ಯ ಹಾಗೂ ಸುಧಾರಿತ ಬೀಜ ಮತ್ತು ಗೊಬ್ಬರಗಳನ್ನು ಕೊಡುತ್ತಾ ಬಂದಿದೆ. ಇವರ ಜೊತೆಗೆ ಹಾಲಿನ ಕೇಂದ್ರಗಳನ್ನು ತೆರೆಯುವುದಕ್ಕೆ, ಕುರಿ ಮತ್ತು ಮೇಕೆಗಳನ್ನು ಸಾಕುವುದಕ್ಕೆ, ತೋಟಗಾರಿಕೆಯನ್ನು (೧೩ ಎಕರೆ ಒಣಭೂಮಿಯಲ್ಲಿ) ಮತ್ತು ಸಸ್ಯಕ್ಷೇತ್ರಗಳನ್ನು, ಸಣ್ಣ ಪ್ರಮಾಣದಲ್ಲಿ ವ್ಯವಹಾರ (೩೨ ಮಂದಿಗೆ) ನಡೆಸುವುದಕ್ಕೆ ಸಾಲವನ್ನು ಒದಗಿಸುವುದು ಮತ್ತು ಸ್ಥಳದ ಅವಶ್ಯಕತೆಗೆ ಅನುಗುಣವಾಗಿ ನಾರಿನ ಉದ್ದಿಮೆಯನ್ನು (ಹೆಚ್ಚಿನ ಮಟ್ಟದಲ್ಲಿ ಹೆಣ್ಣು ಮಕ್ಕಳಿಗೆ ಸಹಾಯವಾಗುವಂತೆ ನಡೆಸುವುದಕ್ಕೆ) ಬೇಕಾದ ಸಹಾಯವನ್ನು ಒದಗಿಸುವುದು. ಇಂತಹ ಅಭಿವೃದ್ಧಿ ಕಾರ್ಯಕ್ರಮಗಳಿಂದ ಚಿತ್ರದುರ್ಗ ಜಿಲ್ಲೆಯ ಹಲವಾರು ಹಳ್ಳಿಯ ಜನರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮುಂದುವರೆಯುವುದಕ್ಕೆ ಈ ಸಂಸ್ಥೆ ಸಹಾಯ ಮಾಡುತ್ತಾ ಬಂದಿದೆ.

ಮೈರಾಡಾ ಸಂಸ್ಥೆಯ ಆಶ್ರಯದಲ್ಲಿ ಹಲವಾರು ತಾಲ್ಲೂಕುಗಳಲ್ಲಿ ನಡೆಯುತ್ತಿರುವ, ಉದಾಹರಣೆಗೆ ಗುಲ್ಬರ್ಗಾ ಜಿಲ್ಲೆಯ ಕಮಲಾಪುರ ವ್ಯಾಪ್ತಿಯಲ್ಲಿ ಮತ್ತು ಮಾಗಡಿ ತಾಲ್ಲೂಕಿನ ಮಹಂತೇಶ್ವರ ಮಠದ ವ್ಯಾಪ್ತಿಯಲ್ಲಿ ತಡೆ ನೀರಾವರಿ ಯೋಜನೆಗಳು

ಸುಧಾರಿತ ಕೃಷಿಯನ್ನು ರೈತರು ಅಳವಡಿಸಿಕೊಳ್ಳುವುದಕ್ಕೆ ಸಹಾಯ ಮಾಡಿವೆ. ಇದರ ಪರಿಣಾಮವಾಗಿ ಸ್ಥಳೀಯ ಬಡರೈತರು ತಮ್ಮ ಜಮೀನಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕೃಷಿ ಉತ್ಪನ್ನ ಪಡೆಯುವುದಕ್ಕೆ ಹಾಗೂ ಮುಖ್ಯವಾಗಿ ರೈತರು, ಸಣ್ಣ ಮತ್ತು ಅತೀ ಸಣ್ಣ ರೈತರು, ತೋಟಗಾರಿಕೆಯನ್ನು ಒಂದು ಮುಖ್ಯ ಕಸುಬನ್ನಾಗಿ ಮಾಡಿಕೊಳ್ಳುವುದಕ್ಕೆ ಈ ಸಂಸ್ಥೆಗಳು ಕಾರ್ಯಕ್ರಮಗಳಲ್ಲಿ ಇಟ್ಟಿರುವ ಆಸಕ್ತಿ ಮತ್ತು ರೈತರನ್ನು ಒಂದುಗೂಡಿಸುವಂತಹ ಸಂಘಟನಾ ಶಕ್ತಿ ಈ ಯೋಜನೆಗಳು ಯಶಸ್ವಿ ಆಗುವುದಕ್ಕೆ ಕಾರಣವಾಗಿದೆ. ಇಂತಹ ಕಾರ್ಯಕ್ರಮಗಳ ಫಲವಾಗಿ ಬಡರೈತರು ಆದಷ್ಟು ಒಳ್ಳೆಯ ಬೆಳೆಗಳನ್ನು ಬೆಳೆದು ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವುದಕ್ಕೆ ಸಹಾಯ ಮತ್ತು ಉತ್ತೇಜನ ಸಿಕ್ಕಿದಂತಾಗುತ್ತದೆ.

ಮೇಲೆ ತಿಳಿಸಿದ ಕಾರ್ಯಕ್ರಮಗಳ ಜೊತೆಗೆ ಸ್ವಯಂ ಸೇವಾ ಸಂಸ್ಥೆಗಳು ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಮಟ್ಟದಲ್ಲಿ ಪರಿಸರ ಮತ್ತು ಅರಣ್ಯ ಸಂರಕ್ಷಣೆ ಸಲುವಾಗಿ ಜನಾಂದೋಲನವನ್ನು ನೆಡೆಸುವುದರಲ್ಲಿ ಯಶಸ್ಸನ್ನು ಸಾಧಿಸಿವೆ. ಸರ್ಕಾರದ ಅರಣ್ಯ ಇಲಾಖೆಯ ಅರಣ್ಯೀಕರಣ - ನೆಡುತೋಪುಗಳು, ರಸ್ತೆಬದಿ ನೆಡುತೋಪುಗಳು, ರೈತರಿಗೆ ಸಸ್ಯಗಳ ಹಂಚಿಕೆ, ಗ್ರಾಮಮಟ್ಟದಲ್ಲಿ ಸ್ಥಳೀಯ ಅರಣ್ಯ ಸಮಿತಿಗಳನ್ನು ರಚಿಸುವುದಕ್ಕೆ ಈ ಸಂಸ್ಥೆಗಳು ಸಹಕಾರವನ್ನು ಕೊಡುತ್ತಾ ಬಂದಿವೆ. ಇಂತಹ ಒಂದು ಕಾರ್ಯವನ್ನು ನಡೆಸುತ್ತಿರುವ ಸಂಸ್ಥೆಗಳೆಂದರೆ ಯುವಕಸಂಘ, ಹೊಸದುರ್ಗ; 'ಸೇವಾಸಾಗರ ಟ್ರಸ್ಟ್', ಸಾಗರ; 'ತರಳಬಾಳು ಗ್ರಾಮೀಣಾಭಿವೃದ್ಧಿ ಸಂಸ್ಥೆ', ಚಿತ್ರದುರ್ಗ; 'ಟ್ರೀ ಗ್ರೋವರ್ಸ್ ಸಹಕಾರ ಸಂಘ', ಕೋಲಾರ; 'ಹಿಂದೂ ಸೇವಾ ಪ್ರತಿಷ್ಠಾನ', ಬೆಂಗಳೂರು - ಇವೆಲ್ಲಾ ಸಂಸ್ಥೆಗಳು 'ಸಾಮಾಜಿಕ ಅರಣ್ಯ'ವನ್ನು ಮತ್ತು ಗಿಡಮೂಲಿಕೆಗಳನ್ನು ಸಂರಕ್ಷಣೆ ಮಾಡಿ ಬೆಳೆಸುವಂತಹ ಕಾರ್ಯಕ್ರಮದಲ್ಲಿ ಹಳ್ಳಿಗಳಲ್ಲಿ ಜನರನ್ನು ಸಣ್ಣ ಸಣ್ಣ ಗುಂಪುಗಳಾಗಿ ಮಾರ್ಪಡಿಸಿ ಅವರದೇ ಮುಂದಾಳತ್ವದಲ್ಲಿ ಫಲಪ್ರದವಾಗಿ ಕಾರ್ಯನಿರ್ವಹಿಸುವುದಕ್ಕೆ ಬೇಕಾದ ಸಹಕಾರ ಮತ್ತು ಉತ್ತೇಜನವನ್ನು ಕೊಡುತ್ತಾ ಬಂದಿವೆ.

ಈ ರೀತಿಯಾಗಿ ಸ್ವಯಂ ಸೇವಾ ಅಭಿವೃದ್ಧಿ ಸಂಸ್ಥೆಗಳು ಕೂಡ ಸಾಮಾಜಿಕ ಸುಧಾರಣೆ ಮತ್ತು ಆರ್ಥಿಕ ಅಭಿವೃದ್ಧಿಯನ್ನು ತರುವಂತಹ ಸರ್ಕಾರದ ಪ್ರಯತ್ನಗಳಿಗೆ ಪೂರಕ ಸಂಸ್ಥೆಗಳಾಗಿ ಕೆಲಸ ಮಾಡುತ್ತಾ ಬಂದಿವೆ. ಹೀಗೆ ಸರ್ಕಾರಿ ಸಂಸ್ಥೆಗಳು, ಸಂಘ ಸಂಸ್ಥೆಗಳು, ಪ್ರತಿಷ್ಠಿತ ವ್ಯಕ್ತಿಗಳು ಸಮಾಜದ ವಿವಿಧ ವರ್ಗಗಳ, ಜನಾಂಗಗಳ ಸಾಮಾಜಿಕ ಬೆಳವಣಿಗೆ ಮತ್ತು ಆರ್ಥಿಕ ಅಭ್ಯುದಯಕ್ಕೆ ಕೆಲಸ ಮಾಡುತ್ತಾ ತಮ್ಮ ತಮ್ಮ ಕರ್ತವ್ಯ, ಶ್ರಮ ಮತ್ತು ಸೇವೆಯನ್ನು ಧಾರೆ ಎರೆಯುತ್ತಾ ಬರುತ್ತಿವೆ ಮತ್ತು ಬರುತ್ತಿದ್ದಾರೆ. ಒಟ್ಟಾರೆ ಹೇಳುವುದಾದರೆ ಇವೆರಲ್ಲರ ಪ್ರಯತ್ನ ಸ್ಥಳದ ಮತ್ತು ಅಲ್ಲಿರುವ ಜನರ ಅಗತ್ಯಗಳನ್ನು ಸಂಪೂರ್ಣವಾಗಿ ಪೂರೈಸುವಂತಹ ಒಂದು ತರಹದ 'ಭೀಷ್ಮ ಪ್ರತಿಜ್ಞೆ' ಆಗಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

## ಭಾಗ - ಮೂರು

### ಉಪಸಂಹಾರ

ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಪಾತ್ರವನ್ನು ಅರಿತನಂತರ ಈ ಭಾಗದಲ್ಲಿ ಎರಡು ಮುಖ್ಯ ವಿಷಯಗಳ ಬಗ್ಗೆ ಚರ್ಚೆ ಮಾಡಲಾಗಿದೆ. ಒಂದು ಈ ಸಂಸ್ಥೆಗಳ ಭಾಗವಹಿಸುವಿಕೆಯಿಂದ ಸಮಾಜದಲ್ಲಿ ಆಗುತ್ತಿರುವ ಪರಿಣಾಮಗಳು ಏನೆಂಬುದು. ಎರಡನೆಯದಾಗಿ ಈ ಎರಡು ಸಂಸ್ಥೆಗಳ ನಡುವೆ ಯಾವ ರೀತಿಯ ಸಂಬಂಧ ಮತ್ತು ಸಂಪರ್ಕವನ್ನು ಕಲ್ಪಿಸಬೇಕು ಎನ್ನುವುದು. ಈ ಎರಡು ಸಂಸ್ಥೆಗಳ ಮುಖ್ಯ ಉದ್ದೇಶ ಬಡಜನರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದಕ್ಕೆ ಸಹಕರಿಸುವುದು ಮತ್ತು ಹಳ್ಳಿಗಳಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ತರುವುದು. ಆದ್ದರಿಂದ ಈ ಸಂಸ್ಥೆಗಳನ್ನು ಒಂದುಗೂಡಿಸಿದರೆ ಇನ್ನೂ ಹೆಚ್ಚಿನ ರೀತಿಯಲ್ಲಿ ವ್ಯವಸ್ಥೆಯ ಮೂಲ ಉದ್ದೇಶಗಳಲ್ಲಿ ಗುರಿಮುಟ್ಟ ಬಹುದಾಗಿದೆ ಎಂತಲೇ ಹೇಳಬಹುದು.

ಪಂಚಾಯತಿಗಳ ಪಾತ್ರವನ್ನು ಗಮನಿಸಿದಾಗ ತಿಳಿಯುವದೇನೆಂದರೆ, ಈ ಸಂಸ್ಥೆಗಳು ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಹೆಚ್ಚಿನ ಮಟ್ಟದ ಗುರಿಯನ್ನು ಸಾಧಿಸಲಿಕ್ಕಾಗಲಿಲ್ಲ. ಇದಕ್ಕೆ ಮುಖ್ಯ ಕಾರಣ ಈ ಸಂಸ್ಥೆಗಳಿಗೆ ಬೇಕಾದ ರಾಜಕೀಯ ಭದ್ರತೆ, ಅಧಿಕಾರದ ಮತ್ತು ಹಣಕಾಸಿನ ಸ್ವಾಯತ್ತತೆ ಇಲ್ಲದೆ ಇದ್ದುದು. ಮುಖ್ಯವಾಗಿ ಹೇಳುವುದಾದರೆ ಈ ಸಂಸ್ಥೆಗಳಲ್ಲಿ (೧೯೮೩ ಮತ್ತು ೧೯೯೩ ಅಧಿನಿಯಮಗಳು ಬರುವವರೆವಿಗೂ) ಹಿಂದುಳಿದ ವರ್ಗಗಳು, ಜನಾಂಗದವರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರು ಹಾಗೂ ಮಹಿಳೆಯರು ಹೆಚ್ಚಿನ ರೀತಿಯ ಭಾಗವಹಿಸುವ ಮತ್ತು ಮುಖ್ಯವಾಗಿ ನಿರ್ಣಯಗಳನ್ನು ತೆಗೆದುಕೊಳ್ಳುವಂತಹ ಅವಕಾಶ ಇರಲಿಲ್ಲ. ಆಡಳಿತದ ಹಿಡಿತ ಸಮಾಜದ ಪಟ್ಟಭದ್ರ ಹಿತಾಸಕ್ತಿಗಳ ಕೈಯಲ್ಲಿ ಇದ್ದುದರ ಪರಿಣಾಮವಾಗಿ ಈ ವರ್ಗಗಳು ಮತ್ತು ಜನಾಂಗದವರು ಸಕ್ರಿಯವಾಗಿ ಪಾತ್ರವಹಿಸುವುದಕ್ಕೆ ಸಾಧ್ಯವಾಗಲಿಲ್ಲ.

ಇತ್ತೀಚಿನ ವರ್ಷಗಳಲ್ಲಿ ಪಂಚಾಯತ್ ಅಧಿನಿಯಮಗಳಿಗೆ ತಂದ ಕ್ರಾಂತಿಕಾರಕ ಸುಧಾರಣೆಗಳಿಂದ ಈ ಸಂಸ್ಥೆಗಳಿಂದ ಎಲ್ಲಾ ವರ್ಗದವರು ಮತ್ತು ಜನಾಂಗದವರು ಭಾಗವಹಿಸಲಿಕ್ಕೆ ಅವಕಾಶ ಸಿಕ್ಕಿದೆ. ತಾತ್ವಿಕವಾಗಿ ಮತ್ತು ತಾರ್ಕಿಕವಾಗಿ ಇದೇ ನಿಜವಾದ ಸಾಮಾಜಿಕ ಬದಲಾವಣೆ ಅಂದರೆ ಬಹುಶಃ ಉತ್ಪ್ರೇಕ್ಷೆ ಆಗಲಾರದು. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲೆ ಬಂದರೆ ಈ ಎಲ್ಲಾ ವರ್ಗದವರು ಮತ್ತು ಜನಾಂಗದವರು ಸಾಮಾಜದಲ್ಲಿ ಇತರರಂತೆ ಸಮಾನಾಂತರವಾಗಿ ಬಾಳುವುದಕ್ಕೆ ಹಾಗೂ ತಮ್ಮನ್ನು ತಾವು ಗುರುತಿಸಿಕೊಳ್ಳುವುದಕ್ಕೆ ಅವಕಾಶ

ಸಿಕ್ಕಂತಾಗುತ್ತದೆ. ಇಂತಹ ಒಂದು ಅವಕಾಶವನ್ನು ಕರ್ನಾಟಕ ಪಂಚಾಯತ್ ರಾಜ್ ೧೯೯೩ರ ಅಧಿನಿಯಮವು ಕೊಟ್ಟಿದೆ. ಹೊಸ ಪಂಚಾಯತ್‌ಗಳು ಹೆಚ್ಚಿನ ಮಟ್ಟದಲ್ಲಿ ಸಾಮಾಜಿಕ ಬದಲಾವಣೆಯನ್ನು ತರುವುದಕ್ಕೆ ಕಾರ್ಯತತ್ಪರರಾಗಲು ಅಧಿಕ ಮಟ್ಟದ ಆಡಳಿತ ಮತ್ತು ಹಣಕಾಸಿನ ಸ್ವಾಯತ್ತತೆಯನ್ನು ಕೊಡಬೇಕಾಗಿದೆ. ಇಂತಹ ದಿಸೆಯಲ್ಲಿ ಕರ್ನಾಟಕವು ಹೆಜ್ಜೆ ಇಟ್ಟಿರುವುದು ಸ್ವಾಗತಾರ್ಹ. ಈ ಸಂಸ್ಥೆಗಳಿಗೆ ಬೇಕಾದ ಸ್ವಾಯತ್ತತೆಯನ್ನು ಕೊಟ್ಟರೆ ಇವು ಬಲಯುತ ಮತ್ತು ಉಪಯುಕ್ತ ಸಂಸ್ಥೆಗಳಾಗಿ ಬೆಳೆಯುವುದರಲ್ಲಿ ಎಳ್ಳಷ್ಟೂ ಅನುಮಾನವಿಲ್ಲ.

ಸ್ವಯಂ ಸೇವಾ ಸಂಸ್ಥೆಗಳಿಗೆ ಹೆಚ್ಚಿನ ಮಟ್ಟದ ಪ್ರೋತ್ಸಾಹ ಮತ್ತು ಹಣಕಾಸಿನ ಸಹಾಯವನ್ನು ಕೊಟ್ಟರೆ ಈ ಸಂಸ್ಥೆಗಳೂ ಕೂಡ ಸಾಮಾಜಿಕ ಬದಲಾವಣೆಯನ್ನು ತರುವುದರಲ್ಲಿ ಹಿಂದೆ ಬೀಳುವುದಿಲ್ಲ. ಗ್ರಾಮೀಣ ಮಟ್ಟದ ಸಂಘ ಸಂಸ್ಥೆಗಳಿಗೆ ಮುಖ್ಯವಾಗಿ ಯುವಕ ಸಂಘಗಳಿಗೆ ಮತ್ತು ಮಹಿಳಾ ಮಂಡಳಿಗಳಿಗೆ ಇಂತಹ ಉತ್ತೇಜನ ಬೇಕಾಗಿದೆ. ಈ ಸಂಘ ಸಂಸ್ಥೆಗಳು ಗ್ರಾಮೀಣ ಜನತೆಯ ಜೊತೆ ನೇರ ಸಂಪರ್ಕವನ್ನು ಇಟ್ಟುಕೊಂಡಿರುವುದರಿಂದ ಸರ್ಕಾರವು ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವುದಕ್ಕೆ, ಅನುಷ್ಠಾನಗೊಳಿಸುವುದಕ್ಕೆ ಆದಷ್ಟು ರೀತಿಯ ಉತ್ತೇಜನ ಮತ್ತು ಸಹಕಾರವನ್ನು ಕೊಡಬೇಕಾಗಿದೆ. ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರುವುದರಲ್ಲಿ ಯಾವುದೇ ತರಹದ ಆಡಳಿತ ಮತ್ತು ಹಣಕಾಸಿನ ಅಡಚಣೆಗಳು ಇರಬಾರದು ಮತ್ತು ಕಾರ್ಯಕ್ರಮಗಳ ಫಲಗಳನ್ನು ಅಥವಾ ಉಪಯೋಗಗಳನ್ನು ಜನರಿಗೆ ತಲುಪಿಸುವುದರಲ್ಲಿ ಕೂಡ ಅಡಚಣೆಗಳು ಇರಬಾರದು. ಇಂತಹ ಒಂದು ವ್ಯವಸ್ಥೆ ಕಂಡುಬರುವುದು ಸ್ವಯಂ ಸೇವಾ ಸಂಸ್ಥೆಗಳಲ್ಲಿ ಮಾತ್ರ. ಏಕೆಂದರೆ ಈ ಸಂಸ್ಥೆಗಳ ಸ್ವರೂಪ ಮತ್ತು ಕಾರ್ಯವಿನ್ಯಾಸ, ಸರ್ಕಾರದ ಸಂಸ್ಥೆಗಳಿಗೆ ಹೋಲಿಸಿದಾಗ, ವಿಭಿನ್ನವಾದುದು. ಆದುದರಿಂದ ಈ ಸಂಸ್ಥೆಗಳಿಗೆ ಹೆಚ್ಚಿನ ಮಟ್ಟದಲ್ಲಿ ಆಧ್ಯತೆಯನ್ನು ಕೊಡುವುದರಿಂದ ನಾವು ನಮ್ಮ ಗುರಿಯಾದ ಸಾಮಾಜಿಕ ಬದಲಾವಣೆಯನ್ನು ತರಬಹುದಾಗಿದೆ.

ಇಂತಹ ಒಂದು ಗುರುತರವಾದ ಧ್ಯೇಯನ್ನು ಸಾಧಿಸಬೇಕಾದರೆ ಈ ಎರಡು ಸಂಸ್ಥೆಗಳು ಜೊತೆ ಜೊತೆಯಲ್ಲಿ ಕೆಲಸ ಮಾಡಬೇಕಾಗಿದೆ. ಪ್ರಮುಖವಾಗಿ ಇವೆರಡರ ನಡುವೆ "ಜಾಲಬಂಧ" (Network)ವನ್ನು ತರಬೇಕಾಗಿದೆ. ಅಭಿವೃದ್ಧಿಗೆ ಸಂಬಂಧಪಟ್ಟ ಕಾರ್ಯಗಳನ್ನು-ಅಂದರೆ ಫಲಾನುಭವಿಗಳ ಆರಿಸುವಿಕೆ, ಸಂಪನ್ಮೂಲಗಳನ್ನು ಕ್ರೋಢೀಕರಿಸುವಿಕೆ, ಸಂಪನ್ಮೂಲಗಳ ಹಂಚಿಕೆ, ಸವಲತ್ತುಗಳು ಮತ್ತು ಸೌಕರ್ಯಗಳನ್ನು ಕೊಡುವುದಕ್ಕೆ, ಬಡವರನ್ನು ಮತ್ತು ಹಿಂದುಳಿದ ವರ್ಗದ ಮತ್ತು ಜನಾಂಗದವರನ್ನು ಒಟ್ಟುಗೂಡಿಸುವಿಕೆ- ಇವನ್ನು ರೂಪಿಸಿ ಅನುಷ್ಠಾನಗೊಳಿಸುವುದಕ್ಕೆ ನಿರ್ಧಿಷ್ಟಪಡಿಸಿದ ಒಂದು ಸಂಸ್ಥೆಯಿಂದ ಸಾಧ್ಯವಾಗುವುದಿಲ್ಲ. ಇದಕ್ಕೆ ಬದಲು ಈ ಸಂಸ್ಥೆಗೆ ಹೆಗಲುಕೊಡುವಂತಹ ಒಂದೆರಡು ಇತರೆ ಸಂಸ್ಥೆಗಳಿದ್ದರೆ ಕಾರ್ಯಕ್ರಮಗಳನ್ನು

ಯಶಸ್ವಿಯಾಗಿ ಜಾರಿಗೆ ತರುವುದರಲ್ಲಿ ಯಾವುದೇ ತರಹದ ಅಡಚಣೆಗಳಿರುವುದಿಲ್ಲ. ಇಂತಹ ಒಂದು ವ್ಯವಸ್ಥೆಯನ್ನು ಬಲಪಡಿಸುವುದಕ್ಕೋಸ್ಕರ ಕರ್ನಾಟಕ ಸರ್ಕಾರವು "ರಾಜ್ಯಮಟ್ಟದ ಸ್ವಯಂ ಸೇವಾ ಪ್ರತಿನಿಧಿಗಳ ಸಲಹಾ ಸಮಿತಿ"ಯನ್ನು ರಚಿಸಿದೆ. ಇದರ ಮುಖ್ಯ ಉದ್ದೇಶ ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಸಕ್ರಿಯವಾಗಿ ಭಾಗವಹಿಸುವುದಕ್ಕೆ ಅನುಕೂಲ ಮಾಡಿಕೊಡುವುದು. ಈ ದಿಸೆಯಲ್ಲಿ ಸ್ವಯಂ ಸೇವಾ ಅಭಿವೃದ್ಧಿ ಸಂಸ್ಥೆಗಳು ಹೆಚ್ಚಿನ ಮಟ್ಟದ ಪಾತ್ರವನ್ನು ವಹಿಸಬೇಕಾಗಿದೆ. ಇಲಾಖಾ ಕಾರ್ಯಕರ್ತರು ಮತ್ತು ಸ್ವಯಂ ಸೇವಾ ಪ್ರತಿನಿಧಿಗಳು ಒಟ್ಟಿಗೆ ಸೇರಿ, ಪರಸ್ಪರ ಹೊಂದಾಣಿಕೆ ಮತ್ತು ಒಡಂಬಡಿಕೆಯಿಂದ ಕೆಲಸ ಮಾಡಬೇಕಾಗಿದೆ. ಇಂತಹ ಒಂದು 'ಕಾರ್ಯ- ಸ್ನೇಹಿ' ಪರಿಸರದಲ್ಲಿ ಈ ಎರಡೂ ಸಂಸ್ಥೆಗಳು ಕಾರ್ಯನಡೆಸಬೇಕಾಗಿದೆ. ಹೀಗೆ ಮಾಡಿದಾಗ ಮಾತ್ರವೇ ಸಮಾಜದಲ್ಲಿ, ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಸಾಮಾಜಿಕ ಬದಲಾವಣೆ ಮತ್ತು ಇದಕ್ಕೆ ಪೂರಕವಾದ ಆರ್ಥಿಕ ಬೆಳವಣಿಗೆಯನ್ನು ತರುವುದಕ್ಕೆ ಸಾಧ್ಯ ಎಂದು ಹೇಳಬಹುದಾಗಿದೆ.

**ಉಲ್ಲೇಖಗಳು**


೧. ಅಬ್ದುಲ್ ಅಜೀಜ್ (೧೯೯೩) ಡಿಸೆಂಟ್ರಲೈಜ್ಡ್ ಪ್ಲಾನ್ನಿಂಗ್, ದಿ ಕರ್ನಾಟಕ ಎಕ್ಸ್‌ಪೀರಿಯನ್ಸ್, ಸೇಜ್ ಪಬ್ಲಿಕೇಶನ್ಸ್, ನ್ಯೂ ದೆಹಲಿ.

೨. ಅಬ್ದುಲ್ ಅಜೀಜ್ (೧೯೯೪) ಡಿಸೆಂಟ್ರಲೈಜೇಷನ್: ಮಂಡಲ್ ಪಂಚಾಯತ್ ಸಿಸ್ಟಮ್ ಇನ್ ಕರ್ನಾಟಕ, ಎನ್.ಐ.ಆರ್.ಡಿ., ಹೈದರಾಬಾದ್.

೩. ಶಿವಣ್ಣ. ಎನ್ (೧೯೯೦) ಪಂಚಾಯತಿರಾಜ್ ರಿಫಾರಮ್ಸ್ ಅಂಡ್ ರೂರಲ್ ಡೆವಲಪ್‌ಮೆಂಟ್, ಚುಗ್ ಪಬ್ಲಿಕೇಷನ್ಸ್, ಅಲಹಾಬಾದ್.

೪. ವೆಂಕಟರಂಗಯ್ಯ ಎಂ ಮತ್ತು ಎಂ ಪಟ್ಟಾಭಿರಾಮ್ (೧೯೬೯) ಲೋಕಲ್ ಗೌರ್ನಮೆಂಟ್ ಇನ್ ಇಂಡಿಯಾ ಸೆಲೆಕ್ಟ್ ರೀಡಿಂಗ್ಸ್, ಅಲೈಡ್ ಪಬ್ಲಿಷರ್ಸ್, ನ್ಯೂ ದೆಲ್ಲಿ.

೫. ರೇ, ಅಮಲ್ ಅಂಡ್ ಕೆ. ಜಯಲಕ್ಷ್ಮಿ (೧೯೮೭) "ಜಿಲ್ಲಾ ಪರಿಷತ್ ಪ್ರಸಿಡೆಂಟ್ಸ್ ಇನ್ ಕರ್ನಾಟಕ: ದೇರ್ ಸೋಷಿಯಲ್ ಬ್ಯಾಕ್‌ಗ್ರೌಂಡ್ ಅಂಡ್ ಇಂಪ್ಲಿಕೇಷನ್ ಫಾರ್ ಡೆವಲಪ್ಮೆಂಟ್" ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೭,೨೪, ಅಕ್ಟೋಬರ್.

೬. ಕರ್ನಾಟಕ ಸರ್ಕಾರ (೧೯೮೯) ರಿಪೋರ್ಟ್ (ಕೃಷ್ಣಸ್ವಾಮಿ) ಆಫ್‌ದಿ ಜಿಲ್ಲಾ ಪರಿಷತ್ ಅಂಡ್ ಮಂಡಲ ಪಂಚಾಯತ್ ಇವ್ಯಾಲುಷೇನ್ ಕಮಿಟಿ, ಬೆಂಗಳೂರು.

೭. ಕರ್ನಾಟಕ ಸರ್ಕಾರ (೧೯೯೦) ರಿಪೋರ್ಟ್ ಆಫ್ ದಿ ಸೆಕೆಂಡ್ ಬ್ಯಾಕ್‌ವರ್ಡ್ ಕ್ಲಾಸ್ ಕಮಿಷನ್, ವಾಲ್ಯೂಂ-೩, ಬೆಂಗಳೂರು.

೮. ಮೀನಾಕ್ಷಿ ಸುಂದರಂ ಎಸ್.ಎಸ್. (೧೯೯೪) ಡಿಸೆಂಟ್ರಲೈಜೇಷನ್ ಇನ್ ಡೆವಲಪ್ಪಿಂಗ್ ಕಂಟ್ರೀಸ್, ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪನಿ, ನ್ಯೂ ಡೆಲ್ಲಿ.

೯. ವಿಶ್ವನಾಥ ವನಿತಾ (೧೯೯೩) ಎನ್.ಜಿ.ಓಸ್. ಅಂಡ್ ವುಮೆನ್ಸ್ ಡೆವಲಪ್‌ಮೆಂಟ್ ಇನ್ ರೂರಲ್ ಸೌತ್ ಇಂಡಿಯಾ, ಎ ಕಂಪೇರಬಲ್ ಅನಾಲಿಸಿಸ್, ವಿಸ್ತಾರ್ ಪಬ್ಲಿಕೇಷನ್ಸ್, ನ್ಯೂ ಡೆಲ್ಲಿ.

೧೦. ಅರೋರಾ ಜಿ ಎಸ್, ವಿ.ಎಸ್. ಪಾರ್ಥಸಾರಥಿ, ವಿ ರಾಮಸ್ವಾಮಿ (ಮಾರ್ಚ್ ೧೯೯೪) ವಾಲಂಟರಿ ಆರ್ಗನೈಜೇಷನ್ ಅಂಡ್ ರೂರಲ್ ಡೆವಲಪ್‌ಮೆಂಟ್ (ಅನ ಪಬ್ಲಿಷಡ್ ರಿಪೋರ್ಟ್), ಇನ್‌ಸ್ಟಿಟೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು.

೧೧. ಆಕ್ಷನ್ ಏಡ್ ಕರ್ನಾಟಕ ಪ್ರಾಜೆಕ್ಟ್ (ಜನವರಿ-ಜೂನ್ ೧೯೯೪), ಹಾಫ್ ಇಯರ್ಲಿ ಪ್ರೊಗ್ರೆಸ್ ರಿಪೋರ್ಟ್, ಬೆಂಗಳೂರು.

# ಕರ್ನಾಟಕದಲ್ಲಿ ಕೈಗಾರಿಕಾಭಿವೃದ್ಧಿ : ಅನುಭವ, ಸಮಸ್ಯೆ ಹಾಗೂ ಅವಕಾಶಗಳು

ಎಂ. ಪ್ರಹ್ಲಾದಚಾರ್

## ಪ್ರಸ್ತಾವನೆ

ಸ್ವಾತಂತ್ರ್ಯಪೂರ್ವ ಭಾರತದ ಕೈಗಾರಿಕಾ-ಕ್ಷೇತ್ರ-ಇತಿಹಾಸದಲ್ಲಿ ಕರ್ನಾಟಕ ರಾಜ್ಯವು ತನ್ನ ದೂರದರ್ಶಿತ್ವದ ಕೈಗಾರಿಕಾ ನೀತಿ, ಕಾರ್ಯಯೋಜನೆಗಳು ಹಾಗೂ ವಿಶಿಷ್ಟ ಸಾಧನೆಗಳಿಂದಾಗಿ ಕಂಗೊಳಿಸಿದ್ದು ಸರ್ವವೇದ್ಯ. ಸ್ವಾತಂತ್ರ್ಯೋತ್ತರದಲ್ಲಿಯೂ ಸಹ ೫೦ರ ದಶಕದಲ್ಲಿ ದೇಶದ ಕೈಗಾರಿಕಾ ಮೌಲ್ಯವೃದ್ಧಿಯಲ್ಲಿ (value added from industry) ರಾಜ್ಯದ ಕೊಡುಗೆಯನ್ನು ಪರಿಗಣಿಸಿದಾಗ ನಾಲ್ಕನೆಯ ಸ್ಥಾನ ಹೊಂದಿತ್ತು. ಆದರೆ ೬೦, ೭೦ ಮತ್ತು ೮೦ರ ದಶಕಗಳಲ್ಲಿ ಈ ಮಾನದಿಂದ ರಾಜ್ಯದ ಕೊಡುಗೆ ಕಡಿಮೆಯಾಗುತ್ತಾ ಬಂದು ರಾಜ್ಯದ ಸ್ಥಾನ ಒಂಬತ್ತಕ್ಕೆ ಇಳಿಯಿತು. (೧) ಕೈಗಾರಿಕಾ ಕ್ಷೇತ್ರದಲ್ಲಿನ ರಾಜ್ಯದ ಹಿನ್ನಡೆ ಎಂಟನೇ ಪಂಚವಾರ್ಷಿಕ ಯೋಜನೆ (ಕರಡು)ಯಲ್ಲಿಯೂ ಪ್ರಸ್ತಾಪಿಸಲ್ಪಟ್ಟಿರುವುದನ್ನು ಗಮನಿಸಬಹುದು. (೨) ರಾಜ್ಯದ ನೈಜ ಆದಾಯದ ಬೆಳವಣಿಗೆಯ ಪ್ರಮಾಣವು ದೇಶದ ನೈಜ ಆದಾಯದ ಬೆಳವಣಿಗೆಯ ಪ್ರಮಾಣಕ್ಕೆ ಹೋಲಿಸಿದರೆ ಐದನೆಯ ಪಂಚವಾರ್ಷಿಕ ಯೋಜನೆಯವರೆಗೆ ಹೆಚ್ಚಾಗಿದ್ದದ್ದು ನಂತರ ತಿರುವು ಮುರುವಾಯಿತು. ಇದಕ್ಕೆ ಮುಖ್ಯವಾಗಿ ಈ ಅವಧಿಯಲ್ಲಿ ದ್ವಿತೀಯ ವಲಯ (Secondary sector)ದ ಬೆಳವಣಿಗೆಯ ಗತಿಯಲ್ಲಾದ ಹಿನ್ನಡೆಯೇ ಕಾರಣವೆಂಬುದು ಪ್ರತಿ ಕ್ಷೇತ್ರದ ಬೆಳವಣಿಗೆಯ ಗತಿಯನ್ನು ವಿಮರ್ಶಿಸಿದಾಗ ಸ್ಪಷ್ಟವಾಯಿತು. ಉತ್ಪಾದನೆಯು (Manufacturing) ದ್ವಿತೀಯ ವಲಯದ ಅತಿ ಪ್ರಮುಖ ಅಂಗವಾದುದರಿಂದ ಈ ಅಂಗದ ಊನತೆ ಅಂತಿಮವಾಗಿ ರಾಜ್ಯದ ಆದಾಯದ ಗತಿಯನ್ನು ನಿರ್ಧರಿಸುವಲ್ಲಿ ಕಾರಣವಾಯಿತೆಂಬುದು ನಿಚ್ಚಳ. ರಾಜ್ಯವು ವಿಶೇಷವಾಗಿ ೭೦ರ ದಶಕದಿಂದೀಚೆಗೆ ಕೈಗಾರಿಕಾರಂಗದಲ್ಲಿ ಅನುಭವಿಸಿದ ದುಗುಡ-ದುಮ್ಮಾನ, ಸ್ಥಿತಿ-ಗತಿ, ಸಾಧನೆಗಳ ಹಿನ್ನೆಲೆಯಲ್ಲಿ, ಮುಂಬರುವ ದಶಕಗಳಲ್ಲಿ ಹೆಚ್ಚಿನ ಪ್ರಗತಿ ಸಾಧಿಸುವ ದಿಶೆಯಲ್ಲಿ ಎದುರಿಸಬೇಕಾದ ಅಡೆ-ತಡೆಗಳು ಹಾಗೂ ಕೈಗೊಳ್ಳಬೇಕಾದ ಕ್ರಮಗಳ

ಬಗ್ಗೆ ಸ್ಥೂಲವಾಗಿ ಚರ್ಚಿಸುವ ಉದ್ದೇಶ ಈ ಲೇಖನದ್ದು. ಪಾಂಡೆ ಮತ್ತು ವಾಂಚೂ ಸಮಿತಿಗಳ ಶಿಫಾರಸ್ಸುಗಳನ್ನು ಆಧರಿಸಿ ಹಿಂದುಳಿದ ಪ್ರದೇಶಗಳ ಕೈಗಾರಿಕಾಭಿವೃದ್ಧಿಗಾಗಿ ವಿಶೇಷ ಕಾರ್ಯನೀತಿ (policy), ಎಂ.ಆರ್.ಟಿ.ಪಿ. ಆಕ್ಟ್ ಇತ್ಯಾದಿ ಮಹತ್ವದ ಕ್ರಮಗಳನ್ನು ಭಾರತ ಸರ್ಕಾರ ತೆಗೆದುಕೊಂಡದ್ದು ೭೦ರ ದಶಕದಲ್ಲಾದುದರಿಂದ ಅದನ್ನು ಭಾರತೀಯ ಕೈಗಾರಿಕಾ ಇತಿಹಾಸದಲ್ಲಿ ಒಂದು ಮೈಲಿಗಲ್ಲೆಂದು ಪರಿಗಣಿಸಬಹುದು. ಆದ್ದರಿಂದ ಪ್ರಸ್ತುತ ಚರ್ಚೆಗೆ ಸಾಧ್ಯವಾದಷ್ಟು ಮಟ್ಟಿಗೆ ೭೦ರ ದಶಕವನ್ನು ತಳಹದಿ (base)ಯಾಗಿಟ್ಟು ಕೊಳ್ಳುವುದು ಅಸಮಂಜಸವೆನಿಸಲಾರದು.

ಕೈಗಾರಿಕಾ ಕ್ಷೇತ್ರಕ್ಕೆ ಸಂಬಂಧಪಟ್ಟ ಅಂಕಿ ಸಂಖ್ಯಾಂಶಗಳು (data/ information) ಅನೇಕ ಮೂಲಗಳಿಂದ (sources) ಮುಖ್ಯವಾಗಿ ಸರ್ಕಾರಿ ಪ್ರಕಟಣೆಗಳು ಲಭ್ಯವಿರುವುದಾದರೂ ಅವು ವೈಯಕ್ತಿಕ ಕೈಗಾರಿಕೆಗಳು ಹಾಗೂ ಪ್ರಾದೇಶಿಕವಾಗಿ (industry-wise, region-wise) ನೀಡುವ ವಿವರಗಳು, ಅನುಸರಿಸುವ ವ್ಯಾಖ್ಯೆ (definitions) ಮತ್ತು ಪರಿಭಾವನೆ (concepts), ವರ್ಗೀಕೃತ ವಿವರ, (classificatory details), ಕಾಲಾವಧಿ (time period) ಇತ್ಯಾದಿ ಬೇರೆ ಬೇರೆಯಾಗಿರುವುದರಿಂದ ಒಂದು ಅವಧಿಯಿಂದ ಇನ್ನೊಂದು ಅವಧಿಯವರೆಗೆ ನಡೆಸುವ ವಿಶ್ಲೇಷಣೆ/ಅಭ್ಯಾಸಗಳಿಗೆ (Time Series Analysis / studies) ಅನೇಕ ಸಮಸ್ಯೆಗಳನ್ನುಂಟು ಮಾಡುತ್ತವೆ. ಹಾಗಾಗಿ ಅನೇಕ ಹೊಂದಾಣಿಕೆಗಳನ್ನು ಸಂಶೋಧಕರು ತಮ್ಮ ವಿಶ್ಲೇಷಣೆ/ಅಭ್ಯಾಸಗಳಲ್ಲಿ ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ಪ್ರಸ್ತುತ ಲೇಖನವು ಈ ರೀತಿಯ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು, ಆದರೆ ಅವುಗಳನ್ನು ಚರ್ಚಿಸಬಯಸದೆ. ಅನೇಕ ಮೂಲಗಳಿಂದ ಸಂಗ್ರಹಿಸಿದ ಅಂಕಿ ಸಂಖ್ಯೆಗಳನ್ನು ಸಂದರ್ಭಕ್ಕನುಸಾರವಾಗಿ ಸೂಕ್ತ ರೀತಿಯಲ್ಲಿ ಬಳಸಿಕೊಂಡು ವಿಶ್ಲೇಷಣೆ ನಡೆಸಿದೆ ಎಂಬುದನ್ನು ಮಾತ್ರ ಸೂಚಿಸಬಯಸುತ್ತದೆ. ಕೈಗಾರಿಕಾ ಕ್ಷೇತ್ರದ ಅಂಕಿ ಸಂಖ್ಯೆಗಳಿಗೆ ಈ ಕೆಳಗೆ ನಮೂದಿಸಿದ ಮೂಲಗಳು ಹೊರತರುವ ನಿಯತಕಾಲಿಕ ಪ್ರಕಟಣೆ, ವರದಿಗಳು ಹಾಗೂ ಇತ್ಯಾದಿ ಮಹತ್ವವೆಂದು ತಿಳಿಯಬಹುದು. ಅವುಗಳೆಂದರೆ (೧) ಕೈಗಾರಿಕಾ ವಾರ್ಷಿಕ ಸಮೀಕ್ಷೆ (Annual Survey of Industries), (೨) ಕೇಂದ್ರೀಯ ಸಾಂಖ್ಯಿಕ ಸಂಸ್ಥೆ (CSI) (೩) ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ, (೪) ರಾಷ್ಟ್ರೀಯ ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳ ಗಣತಿ, (೫) ಖಾದಿ ಮತ್ತು ಗ್ರಾಮೋದ್ಯೋಗ ಕೈಗಾರಿಕಾ ಮಂಡಳಿ. ಈ ಸಂದರ್ಭದಲ್ಲಿ ಅನೇಕ ಸಂಶೋಧನಾ ಸಂಸ್ಥೆಗಳು, ವಿದ್ವಾಂಸರು ಪ್ರಕಟಿಸಿರುವ ಅಧ್ಯಯನ ಲೇಖನಗಳು, ವರದಿಗಳು ಹಾಗೂ ಇತ್ಯಾದಿ ವಸ್ತುಗಳು ಪ್ರಸ್ತುತ ಅಭ್ಯಾಸಕ್ಕೆ ಸಹಕಾರಿಯಾಗಿವೆ ಎಂಬುದನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸಬಯಸುದು.

## ರಾಜ್ಯದ ಆದಾಯ ೧೯೮೦ರಿಂದ ೧೯೯೪-೯೫

ರಾಜ್ಯದ ನಿವ್ವಳ ಆದಾಯವು (Net State Domestic Product) ೧೯೮೦-೮೧ರಲ್ಲಿ ರೂ. ೫೬೧೧ ಕೋಟಿಯಿದ್ದದ್ದು. ೧೯೯೪-೯೫ಕ್ಕೆ ರೂ. ೧೧೫೧೪ ಕೋಟಿಗೆ (ನಿರೀಕ್ಷಿತ ಆದಾಯ ೧೯೮೦-೮೧ರ ಸ್ಥಿರ ಬೆಲೆಗನುಸಾರ), ಅಂದರೆ ವಾರ್ಷಿಕ ಸರಾಸರಿ ಶೇಕಡ ೫.೩ರಷ್ಟು ಪ್ರಮಾಣದಲ್ಲಿ ಏರಿತು. (೩) ಈ ಅವಧಿಯಲ್ಲಿ ರಾಜ್ಯದ ಅರ್ಥ ವ್ಯವಸ್ಥೆಯಲ್ಲಿನ ವೈಯಕ್ತಿಕ ಕ್ಷೇತ್ರದ (individual sector) ಆದಾಯ ವೃದ್ಧಿಯ ಪ್ರಮಾಣ ಬೇರೆ ಬೇರೆಯಾಗಿದ್ದುದರಿಂದ ವೈಯಕ್ತಿಕ ಕ್ಷೇತ್ರದ ಪರಸ್ಪರ ಪ್ರಾಮುಖ್ಯತೆ (relative importance) ಅಥವಾ ಪಾಲು (share) ಗಮನಾರ್ಹ ಬದಲಾವಣೆ ಹೊಂದಿತು. ರಾಜ್ಯದ ಒಟ್ಟು ಆದಾಯದಲ್ಲಿ ಪ್ರಾಥಮಿಕ ಕ್ಷೇತ್ರದ ಪಾಲು ೧೯೮೦-೮೧ರಲ್ಲಿ ಶೇಕಡ ೪೫.೮ರಿಂದ ೧೯೯೩-೯೪ರಲ್ಲಿ ಶೇಕಡ ೩೫.೯ಕ್ಕೆ ಇಳಿದರೆ ದ್ವಿತೀಯ ಮತ್ತು ತೃತೀಯ ಕ್ಷೇತ್ರಗಳ ಪಾಲು ಕ್ರಮವಾಗಿ ಶೇಕಡ ೨೧.೧ರಿಂದ ಶೇಕಡ ೨೩.೭ಕ್ಕೆ ಮತ್ತು ಶೇಕಡ ೩೩.೧ರಿಂದ ೪೦.೫ಕ್ಕೆ ಏರಿದವು. (೪) ದ್ವಿತೀಯ ಕ್ಷೇತ್ರದಲ್ಲಿ ಈ ಮೊದಲು ಉಲ್ಲೇಖಿಸಿದಂತೆ ಉತ್ಪಾದನೆ (manufacturing) ಅತಿ ಪ್ರಮುಖ ಉಪ ಕ್ಷೇತ್ರ (sub-sector)ವಾದುದರಿಂದ ಅದರ ಆದಾಯದಲ್ಲಾದ ಬದಲಾವಣೆ, ಅಭಿವೃದ್ಧಿಗಳು ಆ ಕ್ಷೇತ್ರದ ಆದಾಯದ ಮೇಲಷ್ಟೇ ಅಲ್ಲದೆ ರಾಜ್ಯದ ಇಡೀ ಆದಾಯದ ಮೇಲೂ ಸಾಕಷ್ಟು ಪ್ರಭಾವ ಬೀರಿದವು.

## ಉತ್ಪಾದನಾ ಕ್ಷೇತ್ರ ಹಾಗೂ ಉದ್ಯೋಗ

೧೯೮೧ ಮತ್ತು ೧೯೯೧ರ ಜನಗಣತಿಯ ಪ್ರಕಾರ, ರಾಜ್ಯದ ಒಟ್ಟು ಕೆಲಸಗಾರರಲ್ಲಿ ಪ್ರತಿಶತ ೧೦ ಹಾಗೂ ೧೨ರಷ್ಟು ಕೆಲಸಗಾರರು ಉತ್ಪಾದನೆಯಲ್ಲಿ ನಿರತರಾಗಿದ್ದರು. ಈ ದಶಕಗಳ ಮಧ್ಯೆ ಉತ್ಪಾದನೆ ಕ್ಷೇತ್ರದಲ್ಲಿ ಆಂತರಿಕವಾಗಿ ಸಂಭವಿಸಿದ ಕುತೂಹಲಕಾರಿ ಬೆಳವಣಿಗೆಯನ್ನು ನಾವು ವಿಶೇಷವಾಗಿ ಗಮನಿಸಬೇಕು. ೧೯೮೧ರಲ್ಲಿ ಉತ್ಪಾದನೆಯಲ್ಲಿ ತೊಡಗಿದ ಕೆಲಸಗಾರರಲ್ಲಿ ಸುಮಾರು ೧/೩ ಭಾಗದಷ್ಟು 'ಗೃಹ ಕೈಗಾರಿಕೆ ಇತ್ಯಾದಿ' ಉಪ ವಲಯದಲ್ಲಿ ಹಾಗೂ ೨/೩ ಭಾಗದಷ್ಟು 'ಗೃಹೇತರ ಕೈಗಾರಿಕೆ'ಯಲ್ಲಿ ತೊಡಗಿದ್ದಾರೆ, ೧೯೯೧ರಲ್ಲಿ ಇವುಗಳು ಕ್ರಮವಾಗಿ ೧/೫ ಭಾಗ ಹಾಗೂ ೪/೫ ಭಾಗದಷ್ಟಿದ್ದವು. ಅಂದರೆ ಉದ್ಯೋಗ ದೃಷ್ಟಿಯಿಂದ 'ಗೃಹಕೈಗಾರಿಕೆ' ಸ್ಥಾನ ಸಾಕಷ್ಟು ಪ್ರಮಾಣದಲ್ಲಿ ಕ್ಷೀಣಿಸಿತು (೧/೩ನೇ ಭಾಗದಿಂದ ೧/೫ ಭಾಗಕ್ಕೆ). ಈ ಬೆಳವಣಿಗೆ ಅರ್ಥಶಾಸ್ತ್ರದಲ್ಲಿ ಪ್ರಚಲಿತವಿರುವ ಸಿದ್ಧಾಂತಕ್ಕನುಸಾರವಾಗಿದೆಂಬುದನ್ನು ಇಲ್ಲಿ ಸ್ಮರಿಸಬಹುದು.

## ಕೈಗಾರಿಕೋತ್ಪನದ ಸೂಚ್ಯಂಕ

(೫) ೧೯೮೧-೮೨ರಿಂದ ೧೯೯೨-೯೩ರ ಅವಧಿಯಲ್ಲಿ ರಾಜ್ಯದ

ಕೈಗಾರಿಕೋತ್ಪನ್ನದ ಸೂಚ್ಯಂಕವು (೧೯೮೦-೮೧)=೧೦೦ ಸರಾಸರಿ ೬.೨೯%ರಿಂದ ಹೆಚ್ಚಿನ ಪ್ರಮಾಣದಲ್ಲಿ ಏರಿತು. (೬) ಕೈಗಾರಿಕೋತ್ಪನ್ನ ಕ್ಷೇತ್ರವನ್ನು ಉಪಕ್ಷೇತ್ರಗಳಾಗಿ ವರ್ಗೀಕರಿಸಿ-ಉತ್ಪಾದನೆ (Manufacturing), ವಿದ್ಯುಚ್ಛಕ್ತಿ (Electricity), ಗಣಿ (Mining) - ಅವುಗಳ ವಾರ್ಷಿಕ ಸರಾಸರಿ ಬೆಳವಣಿಗೆಯ ಪ್ರಮಾಣಗಳನ್ನು ಅಂದಾಜು ಮಾಡಿದಾಗ, ಉತ್ಪಾದನಾ ಉಪ ಕ್ಷೇತ್ರವು ಉಳಿದೆರಡು ಉಪ ಕ್ಷೇತ್ರಗಳಿಗಿಂತ ಹೆಚ್ಚು ವೇಗದ ಪ್ರಗತಿ ತೋರಿತು.

**ಅನುಭೋಗಾಧಾರಿತ ಕೈಗಾರಿಕೋತ್ಪಾದನೆ ವಿವರಗಳು (Use-based Groups of Manufacturing Industries):**

೧೯೮೧-೮೨ರಿಂದ ೧೯೯೨-೯೩ರ ಅವಧಿಯಲ್ಲಿ ಬಂಡವಾಳಯುಕ್ತ ಕೈಗಾರಿಕೆಗಳು (ಶೇಕಡ ೯.೮), ಬಳಕೆ ವಸ್ತುಗಳ ಕೈಗಾರಿಕೆಗಳು (ಶೇಕಡ ೮.೧೬) ಮತ್ತು ಮೂಲವಸ್ತು ತಯಾರಿಕಾ ಕೈಗಾರಿಕೆಗಳಿಗಿಂತ (ಶೇಕಡ ೫.೫) ಹೆಚ್ಚು ಪ್ರಮಾಣದಲ್ಲಿ ಬೆಳೆದವು.

**ದೊಡ್ಡ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು**

೧೯೯೫ರ ಮಾರ್ಚ್ ಅಂತ್ಯದಲ್ಲಿ ಒಟ್ಟು ೭೪೬ ದೊಡ್ಡ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳಿದ್ದು ಇವುಗಳಲ್ಲಿ ಹೂಡಿದ ಬಂಡವಾಳ (Investment) ರೂ. ೬೨೯೮ ಕೋಟಿ ಹಾಗೂ ಸೃಷ್ಟಿಸಿದ ಉದ್ಯೋಗ ಅವಕಾಶ ೨.೮೦ ಲಕ್ಷವಾಗಿತ್ತು. ಈ ಕೈಗಾರಿಕೆಗಳ ಪ್ರಾದೇಶಿಕ ಹಂಚಿಕೆ (Regional distribution) ತೀವ್ರ ಅಸಮಾನವಾಗಿರುವುದು ಅಂಕಿ ಸಂಖ್ಯೆಗಳಿಂದ ಎದ್ದು ತೋರುತ್ತದೆ (ಕೋಷ್ಟಕ ೧). ಈ ಕೈಗಾರಿಕೆಗಳು ಸುಮಾರು ಶೇಕಡ ४५.೨ರಷ್ಟು ಬೆಂಗಳೂರು ಜಿಲ್ಲೆಯೊಂದರಲ್ಲಿಯೇ (ಅದರಲ್ಲೂ ಬೆಂಗಳೂರು ಸುತ್ತ ಮುತ್ತ) ಕೇಂದ್ರೀಕೃತವಾಗಿದ್ದು, ನಂತರ ಕ್ರಮವಾಗಿ ಮೈಸೂರು, ಧಾರವಾಡ, ದಕ್ಷಿಣ ಕನ್ನಡ ಮತ್ತು ಬೆಳಗಾವಿ ಜಿಲ್ಲೆಗಳಿಗೆ ಬಹುತೇಕ ಸೀಮಿತವಾಗಿವೆ. ಆದರೆ ಈ ಕೈಗಾರಿಕೆಗಳಲ್ಲಿ ಹೂಡಿದ ಒಟ್ಟು ಬಂಡವಾಳ ಹಾಗೂ ಒದಗಿಸಿದ ಒಟ್ಟು ಉದ್ಯೋಗ ಸಂಖ್ಯೆಗಳು ಮಾತ್ರ ಈ ಐದು ಜಿಲ್ಲೆಗಳಲ್ಲಿ ಕೇಂದ್ರೀಕೃತವಾಗಿಲ್ಲದಿರುವುದು (ಬೆಂಗಳೂರು ಹೊರತುಪಡಿಸಿ) ಸ್ವಲ್ಪ ಸಮಾಧಾನದ ಸಂಗತಿ. ಈ ಸಂದರ್ಭದಲ್ಲಿ ಒಂದೆರಡು ವಿಪರ್ಯಾಸಗಳನ್ನು ಗಮನಿಸಬಹುದು. ಗುಲ್ಬರ್ಗಾದಲ್ಲಿ ಈ ಕೈಗಾರಿಕೆಗಳು ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಇವುಗಳಲ್ಲಿ ಹೂಡಿದ ಬಂಡವಾಳ ಹೆಚ್ಚಾಗಿದ್ದು (ಒಟ್ಟಾಗಿಯಾಗಲೀ ಅಥವಾ ತಲಾ ಘಟಕ ದೃಷ್ಟಿಯಿಂದಾಗಲೀ), ಬೆಂಗಳೂರಿನ ಇವುಗಳ ಸಂಖ್ಯೆ ಹೆಚ್ಚಾಗಿದ್ದರೂ ಘಟಕವಾರು ಬಂಡವಾಳ ದೃಷ್ಟಿಯಿಂದ ಅಷ್ಟೊಂದು ಪ್ರಾಶಸ್ತ್ಯ ಪಡೆಯುವುದಿಲ್ಲ. ಒಟ್ಟು ಉದ್ಯೋಗಾವಕಾಶಗಳ ದೃಷ್ಟಿಯಿಂದ ಈ ಕೈಗಾರಿಕೆಗಳ ಮಹತ್ವ ಬೆಂಗಳೂರು, ಕೋಲಾರ, ಮಂಡ್ಯ, ಬೆಳಗಾವಿ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ

ಸೀಮಿತವಾಗಿದೆಯೆನ್ನಬಹುದು. ಆದರೆ ತಲಾಘಟಕ ಉದ್ಯೋಗ ನಿರ್ಮಿತ ಮಾನದಿಂದ ಕೋಲಾರಕ್ಕೆ ಅಗ್ರಸ್ಥಾನ, ನಂತರದ ಸ್ಥಾನಗಳು ಕ್ರಮವಾಗಿ ಶಿವಮೊಗ್ಗ, ಗುಲ್ಬರ್ಗಾ, ಬೆಳಗಾವಿ, ಮಂಡ್ಯ, ಚಿತ್ರದುರ್ಗ, ಉತ್ತರ ಕನ್ನಡ, ಬಿಜಾಪುರ, ರಾಯಚೂರು, ಬಳ್ಳಾರಿ ಮತ್ತು ಬೆಂಗಳೂರು ಜಿಲ್ಲೆಗಳಿಗೆ.

**ಸಣ್ಣ ಪ್ರಮಾಣದ ಕೈಗಾರಿಕೆಗಳು**

೧೯೯೫ ಮಾರ್ಚ್ ಅಂತ್ಯದಲ್ಲಿ ಒಟ್ಟು ೧.೬೪ ಲಕ್ಷ ಘಟಕಗಳಿದ್ದು ಇವುಗಳಲ್ಲಿ ಹೂಡಿದ ಬಂಡವಾಳ ಒಟ್ಟು ರೂ. ೧೯೩೬ ಕೋಟಿ ಹಾಗೂ ಇವು ೧೦.೭೭ ಲಕ್ಷ ಜನಕ್ಕೆ ಉದ್ಯೋಗಾವಕಾಶ ಸೃಷ್ಟಿಸಿದವು. ಬೆಂಗಳೂರು ಜಿಲ್ಲೆಯೊಂದರಲ್ಲೇ ಸುಮಾರು ೪೦ ಸಾವಿರ ಘಟಕಗಳಿದ್ದು ಅಗ್ರಸ್ಥಾನದಲ್ಲಿತ್ತು ನಂತರ ಇವುಗಳು ಮುಖ್ಯವಾಗಿ ಬೆಳಗಾವಿ, ಮೈಸೂರು, ಧಾರವಾಡ, ದಕ್ಷಿಣ ಕನ್ನಡ ಮತ್ತು ತುಮಕೂರುಗಳಲ್ಲಿ ಸ್ಥಾಪಿತಗೊಂಡಿವೆ - ಇವುಗಳಲ್ಲಿ ಹೂಡಿದ ಬಂಡವಾಳ ಹಾಗೂ ಉದ್ಯೋಗ ಪ್ರಮಾಣಗಳ ದೃಷ್ಟಿಯಿಂದಲೂ ಈ ಜಿಲ್ಲೆಗಳೇ ಹೆಚ್ಚು ಕಡಿಮೆ ಪ್ರಾಮುಖ್ಯತೆ ಪಡೆದಿವೆ. (ಕೋಷ್ಟಕ ೨).

ತಲಾಘಟಕ ಹೂಡಿದ ಬಂಡವಾಳ ಪ್ರಮಾಣ ಅತಿ ಹೆಚ್ಚು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಂತರ ಬೆಂಗಳೂರು, ಬೀದರ್, ರಾಯಚೂರು, ಚಿತ್ರದುರ್ಗ, ಕೋಲಾರ, ಇತ್ಯಾದಿ ಜಿಲ್ಲೆಗಳಲ್ಲಿರುವುದನ್ನು ಗಮನಿಸಬಹುದು. ಜಿಲ್ಲೆಯಲ್ಲಿನ ತಲಾ ಘಟಕ ಉದ್ಯೋಗ ಪ್ರಮಾಣ ಸರಾಸರಿ ೪ರಿಂದ ೯ರವರೆಗಿತ್ತು.

ಅಖಿಲ ಭಾರತ ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳ ಜನಗಣತಿ (Census) ೧೯೭೦ ಹಾಗೂ ೧೯೮೮ರಿಂದ ಅನೇಕ ಮಾಹಿತಿಗಳು ಲಭ್ಯವಿದ್ದು, ಅದರಂತೆ ಇವುಗಳ ಸಂಖ್ಯೆ ೭ ಪಟ್ಟು, ಇವುಗಳಲ್ಲಿ ಹೂಡಿದ ನೈಜ ಬಂಡವಾಳ (Real Investment) ಮತ್ತು ಉದ್ಯೋಗ ಸಂಖ್ಯೆಗಳೆರಡೂ ೪ ಪಟ್ಟು ಹಾಗೂ ಉತ್ಪನ್ನ ೯ ಪಟ್ಟು ಹೆಚ್ಚಿತು. ಅಲ್ಲದೆ ಇವು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿತಗೊಂಡಿದ್ದರಿಂದ ಒಟ್ಟು ಸಣ್ಣ ಪ್ರಮಾಣದ ಕೈಗಾರಿಕೆಗಳ ಸಂಖ್ಯೆಯಲ್ಲಿ ಹಿಂದುಳಿದ ಪ್ರದೇಶಗಳ ಪಾಲು ೧೯೭೨ರಲ್ಲಿ ಶೇಕಡ ೪೨ ಇದ್ದದ್ದು ೧೯೮೭-೮೮ರಲ್ಲಿ ಶೇಕಡ ೭೯ಕ್ಕೆ ಉತ್ತಮಗೊಂಡಿತು.

**ಗ್ರಾಮೀಣ ಕೈಗಾರಿಕೆಗಳು**

ರಾಜ್ಯದ ಅರ್ಥ ವ್ಯವಸ್ಥೆಯಲ್ಲಿ ಉದ್ಯೋಗಾವಕಾಶಗಳ ದೃಷ್ಟಿಯಿಂದ ಗ್ರಾಮೀಣ ಕೈಗಾರಿಕೆಗಳ ಪಾತ್ರ ಅತ್ಯಂತ ಅಲ್ಪವಾದ್ದು. ೧೯೭೧ರಲ್ಲಿ ಗ್ರಾಮೀಣ ಕೈಗಾರಿಕೆಗಳು ರಾಜ್ಯದ ಒಟ್ಟು ಜನ ಸಂಖ್ಯೆಯಲ್ಲಿ ಶೇಕಡ ೧ ಭಾಗ ಜನರಿಗೆ ಅಥವಾ ಗ್ರಾಮೀಣ ಜನಸಂಖ್ಯೆಯನ್ನು ಮಾತ್ರ ಪರಿಗಣಿಸಿದಾಗ ಶೇಕಡ ೧.೨ ಭಾಗ ಜನರಿಗೆ ಉದ್ಯೋಗ

ಒದಗಿಸಿದ್ದರೆ, ಈ ಶೇಕಡವಾರು ಸಂಖ್ಯೆಗಳು ೧೯೮೦ರಲ್ಲಿ ಕ್ರಮವಾಗಿ ೨ ಮತ್ತು ೨.೮ಕ್ಕೆ ಮಾತ್ರ ಮುಟ್ಟಲು ಸಾಧ್ಯವಾಯಿತು. (೮) ಒಟ್ಟು ಕೆಲಸಗಾರರನ್ನಷ್ಟೇ (Total workers) ಇಲ್ಲವೇ ಗ್ರಾಮೀಣ ಕೆಲಸಗಾರರನ್ನಷ್ಟೇ ಗಣನೆಗೆ ತೆಗೆದುಕೊಂಡರೂ ಗ್ರಾಮೀಣ ಕೈಗಾರಿಕೆಗಳಿಂದ ೧೯೭೧ರಲ್ಲಿ ಕ್ರಮವಾಗಿ ಶೇಕಡ ೨.೬ ಹಾಗೂ ೩.೩ ಭಾಗದ ಕೆಲಸಗಾರರಿಗೆ ಮಾತ್ರ ಉದ್ಯೋಗ ಸೃಷ್ಟಿಸಲು ಸಾಧ್ಯವಾಯಿತು. ೧೯೮೮ರಲ್ಲಿ ಇವುಗಳ ಶೇಕಡವಾರು ಸಂಖ್ಯೆಗಳು ಕ್ರಮವಾಗಿ ೫.೪ ಮತ್ತು ೭ಕ್ಕೆ ಮಾತ್ರ ಏರಿದವು.

ರಾಜ್ಯದ ಸಮಗ್ರ ಅರ್ಥ ವ್ಯವಸ್ಥೆಯಲ್ಲಿ ಉದ್ಯೋಗದ ದೃಷ್ಟಿಯಿಂದ ಗ್ರಾಮೀಣ ಕೈಗಾರಿಕೆಗಳ ಪಾತ್ರ ಅಲ್ಪವಾದದ್ದಾದರೂ ಇವು ೧೯೭೦-೮೦ರ ದಶಕದಲ್ಲಿ ಸಾಧಿಸಿದ ತೀವ್ರ ಬೆಳವಣಿಗೆ (growth)ಯಿಂದಾಗಿ ಉತ್ಪಾದನೆ ಕ್ಷೇತ್ರದಲ್ಲಿನ ಉದ್ಯೋಗಗಳಲ್ಲಿ ಮಾತ್ರ ಇವುಗಳ ಪಾಲು ಶೇಕಡ ೩೭.೩ರಿಂದ ೫೫ಕ್ಕೆ ಜಾಸ್ತಿಯಾಯಿತು. ಅಷ್ಟೇ ಅಲ್ಲದೆ ಗ್ರಾಮೀಣ ಕೈಗಾರಿಕಾ ಕ್ಷೇತ್ರದ ಎರಡೂ ಉಪ ವಲಯಗಳು - ಗೃಹ (household) ಹಾಗೂ ಗೃಹೇತರ (non-household) - ಉತ್ಪಾದಕ ಘಟಕಗಳ ಸಂಖ್ಯೆ ಹಾಗೂ ಉದ್ಯೋಗ ಮಟ್ಟಗಳೆರಡರಲ್ಲೂ ಗಮನಾರ್ಹ ಪ್ರಗತಿ ಸಾಧಿಸಿದವು (ಕೋಷ್ಟಕ ೩). ಆದರೆ ಗ್ರಾಮೀಣ ಕೈಗಾರಿಕಾ ಕ್ಷೇತ್ರದಲ್ಲಿ ಆಂತರಿಕವಾಗಿ ಸಂಭವಿಸಿದ ಕುತೂಹಲಕಾರಿ ಬದಲಾವಣೆಯನ್ನು ಮರೆಯುವಂತಿಲ್ಲ. ಅದೆಂದರೆ ಗೃಹ ಕೈಗಾರಿಕೆಗಳ ಘಟಕಗಳು ಹೆಚ್ಚಿದ್ದರೂ ಅವು ಕಲ್ಪಿಸಿಕೊಟ್ಟ ಉದ್ಯೋಗಗಳು ಮಾತ್ರ ಇಳಿಮುಖಗೊಂಡದ್ದು. ಅದಕ್ಕೆ ಪರ್ಯಾಯವಾಗಿ ಗೃಹೇತರ ಕೈಗಾರಿಕೆಗಳ ಘಟಕಗಳು ಕಡಿಮೆಯಾದರೂ ಅವುಗಳಿಂದ ದೊರೆತ ಉದ್ಯೋಗ ಸಂಖ್ಯೆ ಜಾಸ್ತಿಯಾಯಿತು.

ರಾಜ್ಯದ ಗ್ರಾಮೀಣ ಕೈಗಾರಿಕೆಗಳು ಬಹುತೇಕವಾಗಿ ೬ ಜಿಲ್ಲೆಗಳಲ್ಲಿ (ದಕ್ಷಿಣ ಕನ್ನಡ, ಮೈಸೂರು, ಬೆಳಗಾವಿ, ಧಾರವಾಡ, ತುಮಕೂರು ಮತ್ತು ಬಿಜಾಪುರ) ಮಾತ್ರ ಕೇಂದ್ರೀಕೃತವಾಗಿವೆ. ಅಲ್ಲದೆ ಇವುಗಳು ಕೆಲವು ಸೀಮಿತ ಪರಂಪರಾಗತ ಗ್ರಾಹಕ ಬಳಕೆ ವಸ್ತುಗಳ ಉತ್ಪಾದನೆಯಲ್ಲಿ ಮಾತ್ರ ತೊಡಗಿರುವುದರಿಂದ ವೈವಿಧ್ಯತೆಯನ್ನಿನ್ನೂ ಸಾಧಿಸಬೇಕಾಗಿದೆ.

**ರೋಗಗ್ರಸ್ತ ಕೈಗಾರಿಕೆಗಳು**

ರೋಗಗ್ರಸ್ತ ಕೈಗಾರಿಕೆಗಳ ಸಮಸ್ತ ರಾಜ್ಯದಲ್ಲಿ ಉಳಿದ ರಾಜ್ಯಗಳಿಗೆ ಹೋಲಿಸಿದರೆ (ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಗುಜರಾತ್, ತಮಿಳುನಾಡು ಇತ್ಯಾದಿ) ಅಷ್ಟೊಂದು ತೀವ್ರತರ ವಾಗಿರದಿದ್ದರೂ, ಇಂತಹ ಕೈಗಾರಿಕಾ ಘಟಕಗಳ ಸಂಖ್ಯೆ ೧೯೭೮-೯೦ರ ಅವಧಿಯಲ್ಲಿ ೯ ಪಟ್ಟು ಹೆಚ್ಚಿತೆಂಬುದು ಹಾಗೂ ಇವುಗಳಲ್ಲಿ ಸಾಕಷ್ಟು ಹೂಡಿದ ಬಂಡವಾಳ ಅಪಕವಾಗಿದೆಯೆಂಬುದು (೯) ಕಳವಳಕಾರಿಯೆನ್ನದೆ

ವಿಧಿಯಿಲ್ಲ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಈ ಕೈಗಾರಿಕಾ ಘಟಕಗಳು ರೋಗಗ್ರಸ್ತವಾಗಲು ಕಾರಣವಾದ ಸನ್ನಿವೇಶಗಳು ಇತ್ಯಾದಿ ವಿಷಯಗಳ ಬಗ್ಗೆ ಅಧ್ಯಯನಗಳು ಸಾಲದೆನ್ನಬೇಕು. ಈ ಕಾರಣಗಳು ಒಂದು ಕೈಗಾರಿಕೆಯಿಂದ ಇನ್ನೊಂದು ಕೈಗಾರಿಕೆಗೆ, ಒಂದು ಪ್ರದೇಶದಿಂದ ಮತ್ತೊಂದಕ್ಕೆ ಬದಲಾಗುವ ಸಾಧ್ಯತೆಗಳಿರುವುದರಿಂದ, ಇವುಗಳ ಬಗ್ಗೆ ಕೂಲಂಕಷ ವಿಮರ್ಷೆ ಇನ್ನೂ ಆಗಬೇಕಾಗಿದೆ.

**ಸಣ್ಣ ಪ್ರಮಾಣದ ಕೈಗಾರಿಕೆಗಳ ಸಾಪೇಕ್ಷ ಕಾರ್ಯದಕ್ಷತೆ (Relative efficiency)**

ಸಣ್ಣ ಪ್ರಮಾಣದ ಕೈಗಾರಿಕೆಗಳು ಸಾಮಾನ್ಯವಾಗಿ ತಮ್ಮ ಉತ್ಪಾದನೆಯಲ್ಲಿ ಕೆಳಮಟ್ಟದ ತಂತ್ರಜ್ಞಾನವನ್ನು ಬಳಸಿಕೊಳ್ಳುವುದರಿಂದ ಅವುಗಳ ಉತ್ಪತ್ತಿ (Productivity) ಮತ್ತು ಲಾಭ (Profitability)ದ ಮಟ್ಟಗಳು, ದೊಡ್ಡ ಹಾಗೂ ಮಧ್ಯಮ ಪ್ರಮಾಣದ ಕೈಗಾರಿಕೆಗಳಿಗೆ ಹೋಲಿಸಿದಾಗ ಕಡಿಮೆ ಪ್ರಮಾಣದಲ್ಲಿರುವುದೆಂಬ ಅಭಿಪ್ರಾಯ ಪ್ರಚಲಿತವಿದೆ. ಈ ಅಬಿಪ್ರಾಯವನ್ನು ಪರೀಕ್ಷಿಸಲು ಕರ್ನಾಟಕದಲ್ಲಿನ ಸಣ್ಣ ಪ್ರಮಾಣದ ಕೈಗಾರಿಕೆಗಳ ಬಗ್ಗೆ ಕೈಗೊಂಡ ಅಧ್ಯಯನವೊಂದು ಸಹಕಾರಿಯಾಗಿದೆ. (೧೦)

ಈ ಅಧ್ಯಯನದಂತೆ ೧೯೭೯-೮೦ರಲ್ಲಿ ಒಟ್ಟು ಪರಿಶೀಲನೆಗೆ ಎತ್ತಿಕೊಂಡು ೧೭ ಕೈಗಾರಿಕಾ ವರ್ಗಗಳಲ್ಲಿ ೧೩ ಸಂದರ್ಭಗಳಲ್ಲಿ ಸಾಪೇಕ್ಷ ದುಡಿಮೆ ಉತ್ಪತ್ತಿ (Relative labour Productivity) ಸಣ್ಣ . ಕೈಗಾರಿಕೆಗಳಲ್ಲಿ ಒಂದಕ್ಕಿಂತ ಕಡಿಮೆಯಾಗಿತ್ತು. ಅಂದರೆ ಈ ಕೈಗಾರಿಕಾ ವರ್ಗಗಳಲ್ಲಿ ಸಣ್ಣ ಕೈಗಾರಿಕೆಯ ತಲಾ ದುಡಿಮೆಗಾರನ ಉತ್ಪಾದನೆ (Output per worker). ದೊಡ್ಡ ಕೈಗಾರಿಕೆಗಳಿಗೆ ಹೋಲಿಸಿದರೆ ಕಡಿಮೆಯಾಗಿತ್ತು. ಅದೇ ರೀತಿ ಸಾಪೇಕ್ಷ ಬಂಡವಾಳ ಉತ್ಪತ್ತಿ (Relative Capital Productivity) ಸಣ್ಣ ಕೈಗಾರಿಕೆಗಳ ೬ ವರ್ಗಗಳಲ್ಲಿ ಒಂದಕ್ಕಿಂತ ಕಡಿಮೆಯಾಗಿತ್ತು. ಅಂದರೆ ತಲಾ ಬಂಡವಾಳ ಉತ್ಪಾದನೆ ಈ ವರ್ಗಗಳಲ್ಲಿ ದೊಡ್ಡ ಕೈಗಾರಿಕೆಗಳಿಗಿಂತ ಕಡಿಮೆಯಾಗಿತ್ತು.

ಒಟ್ಟು ಸಾಪೇಕ್ಷ ಕಾರ್ಯದಕ್ಷತೆಯ ಸೂಚ್ಯಂಕ (Total Relative Efficiency Index), ೫ ಕೈಗಾರಿಕಾ ವರ್ಗಗಳನ್ನು ಹೊರತುಪಡಿಸಿ, ಉಳಿದ ವರ್ಗಗಳಲ್ಲಿ ಸಣ್ಣ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ - ಒಂದಕ್ಕಿಂತ ಕಡಿಮೆಯಾಗಿತ್ತು. ಅಂದರೆ ಹೆಚ್ಚು ಸಂದರ್ಭಗಳಲ್ಲಿ ಸಣ್ಣ ಕೈಗಾರಿಕೆಗಳು ದೊಡ್ಡ ಕೈಗಾರಿಕಗೆಳ ಕಾರ್ಯದಕ್ಷತೆಯ ಮಟ್ಟ ಪಡೆಯಲು ಅಸಮರ್ಥವಾದವು. ಇದಕ್ಕೆ ಅನೇಕ ಕಾರಣಗಳಿದ್ದು ಅವನ್ನು ಇಲ್ಲಿ ಚರ್ಚಿಸಲು ಸಮಯವಕಾಶವಿಲ್ಲ.

ಸರ್ಕಾರದಿಂದ ಸಣ್ಣ ಕೈಗಾರಿಕೆಗಳಿಗೆ ಸಿಕ್ಕುವ ವಿಶೇಷ ಸೌಲಭ್ಯ, ಸವಲತ್ತುಗಳು

ಒಂದು ರೀತಿಯಲ್ಲಿ ಇವುಗಳ ಪ್ರಗತಿ ಕುಂಠಿತವಾಗಲು ಕಾರಣವಾಗಿವೆ ಎಂಬ ಅಭಿಪ್ರಾಯ ಅನೇಕ ಅಧ್ಯಯನಗಳಲ್ಲಿ ಮೂಡಿಬಂದಿದೆ. ಇತ್ತೀಚಿನ ಆರ್ಥಿಕ ಹಾಗೂ ಕೈಗಾರಿಕಾ ಧೋರಣೆಗಳು, ಕಾರ್ಯದಕ್ಷತೆಯ ಮೇಲೆ ಹೆಚ್ಚು ವಿಶ್ವಾಸ, ಗಮನ, ಒತ್ತು ತಂದಿರುವುದರಿಂದ, ಸಣ್ಣ ಕೈಗಾರಿಕೆಗಳೂ ಸಹಾ ಸರ್ಕಾರದ ಸೌಲಭ್ಯ ಹಾಗೂ ಸವಲತ್ತುಗಳ ಮೇಲೆ ಅವಲಂಬಿತವಾಗದೆ, ಸ್ವಸಾಮರ್ಥ್ಯ, ಸ್ಪರ್ಧಾತ್ಮಕ ಶಕ್ತಿಗಳನ್ನು ಬೆಳೆಸಿಕೊಳ್ಳುವುದೇ ಅವುಗಳ ಪ್ರಗತಿ ಪಥವನ್ನು ನಿರ್ಧರಿಸುವಂತಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ರಾಜ್ಯದ ಕೈಗಾರಿಕಾಭಿವೃದ್ಧಿ ಕುರಿತು ಈವರೆಗೆ ನಡೆಸಿದ ಚರ್ಚೆಯಿಂದ ಹೊರಹೊಮ್ಮುವ ಒಂದೆರಡು ಮುಖ್ಯ ಅಂಶಗಳನ್ನು ಇಲ್ಲಿ ಮೇಲಕುಹಾಕುವುದು ಅಪ್ರಸ್ತುತವಾಗಲಾರದು: ೧) ರಾಜ್ಯದ ಕೈಗಾರೀಕರಣದ ಗತಿಯಲ್ಲಿ ಹಿನ್ನಡೆ, ೨) ಪ್ರಾದೇಶಿಕ ಅಸಮತೋಲನ. ಈ ಎರಡು ಅಂಶಗಳಿಗೆ ಹೊಣೆಯಾದ ಮುಖ್ಯ ಕಾರಣಗಳನ್ನು ವಿಶ್ಲೇಷಿಸುವುದು, ಕೈಗಾರಿಕಾ ನೀತಿ, ಕಾರ್ಯಯೋಜನೆಗಳನ್ನು ರೂಪಿಸವಲ್ಲಿ, ಸೂಕ್ತ ಮಾರ್ಪಾಡುಗಳನ್ನು ಮಾಡುವುದರಲ್ಲಿ ಸಹಕಾರಿ ಯಾಗುವುದೆಂಬುದು ಪ್ರಶ್ನಾತೀತ.

### ಕೈಗಾರಿಕಾ ಹಣಕಾಸು (Industrial Finance)

೮೦ರ ದಶಕದಿಂದೀಚೆಗೆ ರಾಜ್ಯದ ಕೈಗಾರೀಕರಣದಲ್ಲಿ ಹಣಕಾಸು ಸಂಸ್ಥೆಗಳು ತೋರಿದ ಆಸಕ್ತಿ, ಹಣಕಾಸು ಸೌಲಭ್ಯ ಇತ್ಯಾದಿ ರೂಪಗಳಲ್ಲಿ ವಹಿಸಿದ ಪಾತ್ರ ಶ್ಲಾಘನೀಯವೇ ಸರಿ. ಇವುಗಳಿಂದ ರಾಜ್ಯಕ್ಕೆ ದೊರೆತ ಹಣಕಾಸು ಸೌಲಭ್ಯ ಸುಮಾರು ರೂ. ೨೦೨ ಕೋಟಿಯಿಂದ (೧೯೮೦-೮೧) ರೂ. ೧೩೪೯ ಕೋಟಿಗೆ ಜಾಸ್ತಿಯಾದದ್ದು ಸಮಾಧಾನಕರವಾದರೂ, ರಾಜ್ಯದ ಪಾಲು ರಾಷ್ಟ್ರದ ಸರ್ವ ಹಣಕಾಸು ಸಂಸ್ಥೆಗಳ ಒಟ್ಟು ಮಂಜೂರು ಹಣ (Total Sanctions)ದಲ್ಲಿ ಉತ್ತಮಗೊಳ್ಳುವುದರ ಬದಲು ಕಡಿಮೆಯಾಯಿತೆಂಬುದನ್ನು ನಾವು ಅಲಕ್ಷಿಸುವಂತಿಲ್ಲ. ಇಷ್ಟಲ್ಲದೆ ಯಾವುದೇ ವೈಯಕ್ತಿಕ ಹಣಕಾಸು ಸಂಸ್ಥೆಯಲ್ಲೂ ರಾಜ್ಯದ ಪಾಲು ಸುಮಾರು ಶೇಕಡ ೩ರಿಂದ ೮ ಮಾತ್ರವಿತ್ತೆಂಬುದು ರಾಜ್ಯದ ಕೈಗಾರೀಕರಣಕ್ಕೆ ಹಣಕಾಸು ಸೌಲಭ್ಯ ಸಾಕಷ್ಟು ಪ್ರಮಾಣದಲ್ಲಿ ಲಭ್ಯವಾಗಲಿಲ್ಲವೆಂಬ ಅಂಶವನ್ನು ಪ್ರತಿಫಲಿಸುತ್ತದೆ. (೧೧)

### ಸಂಪನ್ಮೂಲಗಳು

ಯಾವುದೇ ಪ್ರದೇಶದ ಕೈಗಾರಿಕಾಭಿವೃದ್ಧಿ, ಅದರ ವೈವಿಧ್ಯಮಯ ಸಂಪನ್ಮೂಲಗಳ ಮೇಲೆ (ಕೃಷಿ, ಖನಿಜ, ಅರಣ್ಯ, ಕಡಲು) ಅವಲಂಬಿತವಾಗುತ್ತದೆಂಬ ಮಾತು ಅರ್ಧಸತ್ಯ. ಏಕೆಂದರೆ ಪ್ರದೇಶವೊಂದರಲ್ಲಿ ಸಂಪನ್ಮೂಲಗಳು ಲಭ್ಯವಿದ್ದರೂ, ಅವುಗಳ ಆರ್ಥಿಕ ಬಳಕೆಗೆ ಬೇಕಾದ ಪೂರಕ ಸೌಲಭ್ಯಗಳು, ಸನ್ನಿವೇಶಗಳು,

ಉದಾಹರಣೆಗೆ: ಸಾಧನ ಸಂಪತ್ತು, ತಂತ್ರಜ್ಞಾನ, ಉದ್ಯಮಶೀಲತೆ, ಇತ್ಯಾದಿ) ಇಲ್ಲದೆ ಹೋದರೆ ಅವು ನಿರರ್ಥಕವೆನಿಸುತ್ತವೆ. ಸಂಪನ್ಮೂಲಗಳ ಕೊರತೆಯಿರುವ ಅನೇಕ ರಾಷ್ಟ್ರಗಳು (ಮುಖ್ಯವಾಗಿ ಜಪಾನ್) ಕೈಗಾರಿಕಾ ಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿಯನ್ನು ಗಮನಿಸಿದಾಗ ಆಗಾಧವೆನಿಸುತ್ತದೆ. ಇಂತಹ ಅನುಭವಗಳು ಸಂಪನ್ಮೂಲಭರಿತವಾದ ನಮ್ಮ ರಾಜ್ಯ ಕೈಗಾರಿಕಾರಂಗದಲ್ಲಿ ಏನೆಲ್ಲಾ ಸಾಧಿಸಬಹುದೆಂಬ ಬಗ್ಗೆ ನಿರೀಕ್ಷೆಗಳನ್ನು ಹುಟ್ಟಿಸುತ್ತದೆ. ಇದರಿಂದಾಗಿ ಇಲ್ಲಿಯ ಸಂಪನ್ಮೂಲಗಳನ್ನು ಕೈಗಾರಿಕಾಭಿವೃದ್ಧಿಗಾಗಿ ಬಳಸಿಕೊಳ್ಳು ಬಕಾದ ವ್ಯವಲಸ್ಥೆಗಳನ್ನು ಪೂರೈಸುವಲ್ಲಿ ರಾಜ್ಯದ ಮೇಲೆ ಗುರುತರ ಹೊಣೆಯಿದೆ ಎಂಬುದು ನಿರ್ವಿವಾದ.

ಸಂಪನ್ಮೂಲ ಕೈಗಾರಿಕೆಗಳ (agro-based, forest-based, mineral based ಇತ್ಯಾದಿ) ಜಿಲ್ಲಾವಾರು ವಿಶ್ಲೇಷಣೆಯಿಂದ ಕೈಗಾರಿಕಾಭಿವೃದ್ಧಿಯಲ್ಲಿ ಅಸಮಾನತೆ, ಅಸಮತೋಲನವಿರುವುದನ್ನು ಸಂಶೋಧನಾ ವರದಿಯೊಂದರಲ್ಲಿ ಕಾಣಬಹುದು (೧೨). ಅಲ್ಲದೆ ಇವು ಹೆಚ್ಚಾಗಿ ಪ್ರಾಥಮಿಕ ಪದಾರ್ಥಗಳ ಉತ್ಪಾದನೆಯಲ್ಲಿ ತೊಡಗಿದ್ದು, ತರುವಾಯದ ಸಂಸ್ಕರಣೆಗೆ ವಿಶೇಷ ಗಮನ ಕೊಡದಿರುವುದರಿಂದ ಮೌಲ್ಯವೃದ್ಧಿ ಚಟುವಟಿಕೆಗಳು ಇನ್ನೂ ಹೆಚ್ಚು ಮಹತ್ವ ಹಾಗೂ ಬಲ ಪಡೆಯಬೇಕಾಗಿದೆ.

### ಸಾಧನ ಸಂಪತ್ತು (Infrastructure)

ಕೈಗಾರೀಕರಣದಲ್ಲಿ ಸಾಧನ ಸಂಪತ್ತುಗಳ ಪಾತ್ರ ಬಹು ಮಹತ್ವದ್ದೆಂಬುದು ನಿರ್ವಿವಾದ.ಈ ಪದದಡಿಯಲ್ಲಿ ಸಾರಿಗೆ (ರೈಲು, ರಸ್ತೆ, ಜಲ), ಅಂಚೆ, ದೂರ ಸಂಪರ್ಕ, ಇಂಧನ, ಇತ್ಯಾದಿ ಸೌಲಭ್ಯಗಳ ಸರಪಳಿಯೇ ಇದೆ ಎಂಬುದನ್ನು ನೆನಪಿಸಿಕೊಳ್ಳಬಹುದು. ಈ ವೈಯಕ್ತಿಕ ಸೌಲಭ್ಯಗಳನ್ನು Principal Component Analysis ಎಂಬ ಸಂಖ್ಯಾ ಶಾಸ್ತ್ರದ ತಂತ್ರ (Technique)ದ ಮೂಲಕ ಒಂದುಗೂಡಿಸಿ, ರಾಜ್ಯದ ಪ್ರತಿಯೊಂದು ಜಿಲ್ಲೆಯ ಸಾಧನ ಸಂಪತ್ತಿನ ಸೂಚ್ಯಂಕವನ್ನು ಕಂಡುಹಿಡಿಯಲಾಯಿತು. ಈ ಮಾಹಿತಿಯನ್ನು ಕೋಷ್ಟಕ ೪ರಲ್ಲಿ ಕೊಡಲಾಗಿದೆ.

ಈ ಸೂಚ್ಯಂಕಗಳು ಒಂದುಕಡೆ ಕೈಗಾರಿಕಾ ಕ್ಷೇತ್ರದಲ್ಲಿ ಮುಂದುವರೆದ ಬೆಂಗಳೂರು, ಮೈಸೂರು, ಧಾರವಾಡ, ದಕ್ಷಿಣ ಕನ್ನಡ, ಬೆಳಗಾವಿಗಳಲ್ಲಿರುವ ಮಟ್ಟ ಮತ್ತು ಇನ್ನೊಂದು ಕಡೆ ಉಳಿದ ಜಿಲ್ಲೆಗಳಲ್ಲಿರುವ ಮಟ್ಟ ಎಷ್ಟೊಂದು ಭಿನ್ನವಾಗಿವೆ ಎಂಬ ಕಟುಸತ್ಯವನ್ನು ಪರಿಣಾಮಕಾರಿಯಾಗಿ ಬಿಂಬಿಸುವುದರ ಜೊತೆಗೆ ತೀವ್ರ ಕಳವಳವನ್ನುಂಟು ಮಾಡುತ್ತವೆ. ಈ ಪ್ರದೇಶಿಕ ಅಸಮಾನತೆ ಹಾಗೂ ಅಂತರ ೧೯೭೬ರಿಂದಲೂ ಮುಂದುವರೆಯುತ್ತಿದೆ ಎಂಬುದು ಸಮಸ್ಯೆಯ ಗಂಭೀರತೆಯನ್ನು ಮತ್ತಷ್ಟು ಹೆಚ್ಚಿಸುತ್ತದೆ.

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೆರಡೂ ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಪುಟಕೊಡುವುದು ತಮ್ಮ ನಿಲುವೆಂದು ಆಗಾಗ್ಗೆ ಘೋಷಿಸುತ್ತಿದ್ದರೂ, ಅದಕ್ಕೆ ಸಹಾಯಕವಾಗುವಂತೆ ಈ ಪ್ರದೇಶಗಳ (Infrastructure) ಅಭಿವೃದ್ಧಿ ಸಾಕಷ್ಟು ಪ್ರಮಾಣದಲ್ಲಿ ಆಗದಿರುವುದರಿಂದ ಇವು ಬರೀ ಘೋಷಣೆಗಳಾಗಿಯೇ ಉಳಿದಿವೆ ಎನ್ನಿಸುತ್ತದೆ.

**ಸರ್ಕಾರದ ನೀತಿ (Government Policy)**

ಪ್ರದೇಶ-ಪ್ರದೇಶಗಳ ಮಧ್ಯೆ ಇರುವ ಆರ್ಥಿಕ ಅಸಮಾನತೆಯನ್ನು ತೊಡೆದುಹಾಕುವ ಉನ್ನತ ಗುರಿ ನಮ್ಮ ಯೋಜನೆಯಲ್ಲಿ ಮತ್ತೆ ಮತ್ತೆ ಪ್ರಸ್ತಾಪಿಸಲ್ಪಟ್ಟಿರುವುದು ಸರಿಯಷ್ಟೆ. ಈ ಗುರಿ ಸಾಧನೆಗಾಗಿ ಸರ್ಕಾರ (ಕೇಂದ್ರ ಹಾಗೂ ರಾಜ್ಯಗಳೆರಡೂ) ಹಾಕಿಕೊಂಡ ಅನೇಕ ಕಾರ್ಯ ಯೋಜನೆಗಳಲ್ಲಿ ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಇಂಬು ಕೊಡುವುದೂ ಒಂದು. ಆ ದೃಷ್ಟಿಯಿಂದ (೧) ಬೇರೆ ಬೇರೆ ಪ್ರದೇಶಗಳನ್ನು ಅವುಗಳ ಅಭಿವೃದ್ಧಿಯ ಹಂತದ ಮೇಲೆ ವಲಯಗಳಾಗಿ ವಿಂಗಡಿಸಿ, ಅವುಗಳಿಗೆ ಪ್ರತ್ಯೇಕವಾದ ವಿಶೇಷ ಸೌಲಭ್ಯ-ಸವಲತ್ತುಗಳನ್ನು ಕೊಟ್ಟಿರುವುದು, (೨) ಕೈಗಾರಿಕಾರಹಿತ ಜಿಲ್ಲೆಗಳನ್ನು ಗುರುತಿಸಿ ಅವುಗಳ ಅಭಿವೃದ್ಧಿಗೆ ಅನುವು ಮಾಡಿಕೊಟ್ಟಿರುವುದು, (೩) ಬೆಳವಣಿಗೆ ಕೇಂದ್ರ (Growth Centres)ಗಳನ್ನು ಸ್ಥಾಪಿಸಿರುವುದನ್ನು ಉದಾಹರಿಸಬಹುದು. ಆದರೂ ರಾಜ್ಯ ಸರ್ಕಾರದ ಅನೇಕ ನೀತಿ ನಿಯಮಗಳು - ಅದರಲ್ಲೂ ತೆರಿಗೆ ಕ್ಷೇತ್ರದಲ್ಲಿ (Tax Regime) ಕೈಗಾರಿಕಾಭಿವೃದ್ಧಿ ಕುಂಠಿತವಾಗಲು ಕಾರಣವಾಯಿತೆಂಬ ಅಭಿಪ್ರಾಯ, ಟೀಕೆಗಳಲ್ಲಿ ಸಾಕಷ್ಟು ಸತ್ಯವಿದೆ ಎಂಬುದನ್ನು ಒಪ್ಪಲೇ ಬೇಕು. Turnover Tax, Entry Tax (ನಿಯಮಿತ ಆದರೆ ಪ್ರಮುಖ ಅತ್ಯವಶ್ಯ ಸಾಮಗ್ರಿಗಳ ಮೇಲೆ) ಬಹಳಷ್ಟು ಸಾಮಗ್ರಿಗಳ ಮೇಲೆ ಅತಿಹೆಚ್ಚಿನ ಮಾರಾಟಕರ, ದೊಡ್ಡ ಹಾಗೂ ಮಧ್ಯಮ ಪ್ರಮಾಣದ ಕೈಗಾರಿಕೆಗಳಲ್ಲಿ ಹೂಡಿದ ಬಂಡವಾಳಕ್ಕೆ ಸಿಗುತ್ತಿದ್ದ ಸಹಾಯಧನ ಹಾಗೂ ಮಾರಾಟ ತೆರಿಗೆ ಮೇಲಿನ ಸೌಲಭ್ಯಗಳನ್ನು ಹಿಂತೆಗೆದುಕೊಂಡದ್ದು ರಾಜ್ಯದ ಕೈಗಾರಿಕಾಭಿವೃದ್ಧಿಗೆ ಮಾರಕವಾಗಿವೆಯೆನ್ನಬಹುದು. ಅಲ್ಲದೆ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ಗೊತ್ತುಪಡಿಸಿದ ಅನೇಕ ತೆರಿಗೆ ಸೌಲಭ್ಯ, ಸವಲತ್ತುಗಳನ್ನು ಜಾರಿಗೊಳಿಸುವುದರಲ್ಲಿ ರಾಜ್ಯ ಸರ್ಕಾರದ ವಿಫಲತೆ ಕೈಗಾರಿಕಾಭಿವೃದ್ಧಿಗೆ ಹಿತಕರವಾದ ವಾತಾವರಣವನ್ನು ಸೃಷ್ಟಿಸುವಲ್ಲಿ ಬಾಧಕವಾಗಿವೆ. ಮುಂಬರುವ ವರ್ಷಗಳಲ್ಲಿ ಸರ್ಕಾರದ ಕೈಗಾರಿಕಾ ನೀತಿ ಉದಾರೀಕರಣ (Liberalisation) ಮತ್ತು ಖಾಸಗೀಕರಣ (Privatisation)ಕ್ಕೆ ಒತ್ತು ಕೊಡುವುದಷ್ಟಕ್ಕೇ ಸಮಾಧಾನಗೊಳ್ಳದೇ, ಪ್ರಾಶಸ್ತ್ಯ (Priority)ಗಳನ್ನು ರೂಪಿಸಿಕೊಳ್ಳುವುದರಲ್ಲಿ, ಅವುಗಳನ್ನು ಕಾರ್ಯಾಚರಣೆಗೆ ತರಲು ಬೇಕಾದ ಅನುಕೂಲಕರ ವಾತಾವರಣ, ಸಾಂಸ್ಥಿಕ ಸುಧಾರಣೆಗಳು, ವಿರ್ಪಾಡುಗಳು,

ಕೋಷ್ಟಕ ೧. ಕರ್ನಾಟಕದಲ್ಲಿ ದೊಡ್ಡ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು: ೧೯೯೫ ಮಾರ್ಚ್

| ಜಿಲ್ಲೆ | ಘಟಕಗಳು (ಸಂಖ್ಯೆ) | ಹೂಡಿದ ಬಂಡವಾಳ (ರೂ ಲಕ್ಷಗಳಲ್ಲಿ) | ಉದ್ಯೋಗ (ಸಂಖ್ಯೆ) | ತಲಾ ಘಟಕ ಹೂಡಿದ ಬಂಡವಾಳ (ರೂ. ಲಕ್ಷಗಳಲ್ಲಿ) | ಶ್ರೇಣಿ | ತಲಾ ಘಟಕ ಉದ್ಯೋಗ (ಸಂಖ್ಯೆ) | ಶ್ರೇಣಿ |
|---|---|---|---|---|---|---|---|
| ಬೆಂಗಳೂರು | ೩೩೭ | ೧೨೯೧೫೮.೧೫ | ೧೨೪೧೯೨ | | | | |
| | (೪೫.೧೭) | (೨೦.೫೧) | (೪೪.೩೨) | ೩೮೩.೨೬ | ೧೫ | ೩೬೮ | ೧೧ |
| ಬೆಳಗಾವಿ | ೩೦ | ೨೧೮೮೫.೩೨ | ೧೬೯೬೦ | | | | |
| | (೪.೦೨) | (೩.೪೭) | (೬.೦೫) | ೭೨೯.೫೧ | ೯ | ೫೬೫ | ೪ |
| ಬಳ್ಳಾರಿ | ೨೧ | ೧೯೩೩೩.೫೮ | ೮೪೨೧ | | | | |
| | (೨.೮೨) | (೩.೦೭) | (೩.೦೦) | ೨೯೨.೫ | ೧೭ | ೧೫೯ | ೧೭ |
| ಬೀದರ್ | ೧೭ | ೪೯೭೨.೪೫ | ೨೬೯೭ | | | | |
| | (೨.೨೮) | (೦.೭೯) | (೦.೯೬) | ೪೫೧.೯೨ | ೧೩ | ೪೭೦ | ೮ |
| ಬಿಜಾಪುರ | ೧೦ | ೧೫೪೫೧೯.೨೩ | ೪೬೯೭ | | | | |
| | (೧.೩೪) | (೦.೭೩) | (೧.೬೮) | ೨೬೦೫.೫೦ | ೩ | ೧೨೪ | ೧೯ |
| ಚಿತ್ರದುರ್ಗ | ೨೬ | ೨೩೪೬.೪೯ | ೩೨೧೧ | | | | |
| | (೩.೪೮) | (೧೦.೭೬) | (೧.೧೬) | ೪೬೯.೩ | ೧೨ | ೫೨೮ | ೬ |
| ಚಿಕ್ಕಮಗಳೂರು | ೫ | ೬೭೭೪೩.೨೪ | ೨೬೩೮ | | | | |
| | (೦.೬೭) | (೦.೩೭) | (೦.೯೪) | ೭೦೨.೭೬ | ೧೦ | ೨೦೯ | ೧೪ |
| ದಕ್ಷಿಣ ಕನ್ನಡ | ೩೪ | ೨೩೮೯೩.೬೯ | ೭೧೦೬ | | | | |
| | (೪.೫೬) | (೩.೭೯) | (೨.೫೪) | ೨೩೫.೫೮ | ೧೮ | ೧೫೩ | ೧೮ |
| ಧಾರವಾಡ | ೬೮ | ೧೬೦೧೯.೨೭ | ೧೦೩೮೦ | | | | |
| | (೯.೧೧) | (೨.೫೪) | (೩.೭೦) | ೧೩೮೨೧.೬೩ | .೧ | ೭೫೧ | ೩ |
| ಗುಲ್ಬರ್ಗಾ | ೧೪ | ೧೯೩೫೦೨.೯೦ | ೧೦೫೦೮ | | | | |
| | (೧.೮೮) | (೩೦.೭೨) | (೩.೭೫) | ೨೯೯.೫೨ | ೧೬ | ೨೦೫ | ೧೫ |
| ಹಾಸನ | ೫ | ೧೪೯೭.೬೧ | ೧೦೨೭ | | | | |
| | (೦.೬೭) | (೦.೨೪) | (೦.೩೭) | ೮೭.೦೦ | ೧೯ | ೧೮೮ | ೧೬ |
| ಕೊಡಗು | ೨ | ೧೭೪.೦೦ | ೩೭೫ | | | | |
| | (೦.೨೭) | (೦.೦೪) | (೦.೧೩) | ೧೦೮೨.೬೦ | ೫ | ೨೧೨೫ | ೧ |
| ಕೋಲಾರ | ೧೩ | ೧೪೦೭೩.೮೨ | ೨೭೬೩೦ | | | | |
| | (೧.೭೪) | (೨.೨೩) | (೯.೮೬) | ೭೩೦.೦೫ | ೮ | ೫೫೭ | ೫ |
| ಮಂಡ್ಯ | ೯ | ೬೫೭೦.೪೫ | ೫೦೧೫ | | | | |
| | (೧.೨೧) | (೧.೦೪) | (೧.೭೯) | ೩೯೧.೩೯ | ೧೪ | ೨೨೮ | ೧೩ |
| ಮೈಸೂರು | ೮೮ | ೩೪೪೪೨.೦೮ | ೨೦೦೨೦ | | | | |
| | (೧೧.೮೦) | (೫.೪೭) | (೭.೧೪) | ೧೨೮೦.೧೩ | ೪ | ೪೩೫ | ೯ |
| ರಾಯಚೂರು | ೨೨ | ೨೮೧೬೨.೮೬ | ೯೫೭೬ | | | | |
| | (೨.೯೫) | (೪.೪೭) | (೩.೪೨) | ೨೬೨೨.೦೪ | ೩ | ೯೯೧ | ೨ |

| | | | | | | | |
|---|---|---|---|---|---|---|---|
| ಶಿವಮೊಗ್ಗ | ೧೫ | ೩೯೩೩೦.೬೩ | ೧೪೮೬೪ | | | | |
| | (೨.೦೧) | (೬.೨೪) | (೫.೩೦) | ೨೬೨೨.೦೪ | ೩ | ೯೯೧ | ೨ |
| ತುಮಕೂರು | ೧೯ | ೧೦೬೧೨.೦೭ | ೫೧೯೯೦ | | | | |
| | (೨.೫೫) | (೧.೬೮) | (೧.೮೬) | ೫೫೮.೫೩ | ೧೧ | ೨೭೪ | ೧೨ |
| ಉತ್ತರ ಕನ್ನಡ | ೧೧ | ೧೧೫೬೪.೫೮ | ೫೬೮೯ | | | | |
| | (೧.೪೭) | (೧.೮೪) | (೨.೦೩) | ೧೦೫೧.೩೩ | ೬ | ೫೧೭ | ೭ |
| ಕರ್ನಾಟಕ | ೭೪೬ | ೬೨೯೮೦೨.೪೨ | ೨೮೦೨೦೫ | | | | |
| | (೧೦೦.೦೦) | (೧೦೦.೦೦) | (೧೦೦.೦೦) | | | | |

ಟಿಪ್ಪಣಿ: ಕಂಸದಲ್ಲಿರುವ ಅಂಕಿಗಳು ರಾಜ್ಯದ ಒಟ್ಟು ಅಂಕಿಗಳ ಶೇಕಡಾವಾರು

ಆಧಾರ: ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು

**ಕೋಷ್ಟಕ ೨: ಕರ್ನಾಟಕದಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳು ೧೯೯೫ ಮಾರ್ಚ್**

| ಜಿಲ್ಲೆಯ ಹೆಸರು | ಘಟಕಗಳು (ಸಂಖ್ಯೆ) | ಹೂಡಿದ ಬಂಡವಾಳ (ರೂ. ಲಕ್ಷಗಳಲ್ಲಿ) | ಉದ್ಯೋಗ (ಸಂಖ್ಯೆ) | ತಲಾ ಘಟಕ ಹೂಡಿದ ಬಂಡವಾಳ | ಶ್ರೇಣಿ | ತಲಾ ಘಟಕ ಉದ್ಯೋಗ ಪ್ರಮಾಣ (ರೂ.ಗಳಲ್ಲಿ) |
|---|---|---|---|---|---|---|
| ಬೆಂಗಳೂರು (ಗ್ರಾಮಾಂತರ) | ೬೪೮೯ | ೫೬೪೪.೮೨ | ೩೩೭೦೪ | ೮೬೯೯೦.೬೦ | ೧೬ | ೫ |
| ಬೆಂಗಳೂರು (ನಗರ) | ೩೨೫೩೮ | ೫೪೪೯೨.೯೫ | ೨೮೮೬೫೬ | ೧೬೭೪೭೪.೮೦ | ೨ | ೯ |
| ಬೆಳಗಾವಿ | ೧೪೧೬೮ | ೧೩೦೨೪.೮೭ | ೬೩೧೧೮ | ೯೧೯೩೧.೬೧ | ೧೩ | ೪ |
| ಬಳ್ಳಾರಿ | ೬೩೦೦ | ೪೪೨೮.೯೮ | ೩೦೧೧೮ | ೭೦೩೦೧.೨೭ | ೧೯ | ೫ |
| ಬೀದರ್ | ೩೫೭೮ | ೫೨೪೨.೩೪ | ೨೧೪೫೧ | ೧೪೬೫೧೬.೯೩ | ೩ | ೬ |
| ಬಿಜಾಪುರ್ | ೬೦೩೩ | ೪೫೩೫.೭೬ | ೩೪೫೯೭ | ೭೫೧೮೨.೫೦ | ೧೮ | ೬ |
| ಚಿತ್ರದುರ್ಗ | ೫೯೮೮ | ೮೫೬೦.೧೫ | ೩೩೨೭೫ | ೧೪೨೯೭೭.೬೨ | ೫ | ೬ |
| ಚಿಕ್ಕಮಗಳೂರು | ೨೯೨೧ | ೨೨೮೭.೬೧ | ೧೩೨೮೭ | ೭೮೩೧೫.೯೯ | ೧೬ | ೫ |
| ದಕ್ಷಿಣ ಕನ್ನಡ | ೧೧೧೧೫ | ೨೦೪೦೪.೧೫ | ೭೩೯೦೩ | ೧೮೩೫೭೩.೧೦ | ೧ | ೭ |
| ಧಾರವಾಡ | ೧೩೯೪೦ | ೧೩೭೭೦.೪೧ | ೧೨೧೦೯೩ | ೯೮೭೦೩.೪೩ | ೧೦ | ೯ |
| ಗುಲ್ಬರ್ಗಾ | ೫೨೪೦ | ೪೭೧೧.೬೬ | ೨೯೩೦೪ | ೮೯೯೧೭.೧೭ | ೧೪ | ೬ |
| ಹಾಸನ | ೩೫೫೪ | ೩೧೬೬.೯೨ | ೧೮೧೪೩ | ೮೯೧೦೮.೬೧ | ೧೫ | ೫ |
| ಕೋಲಾರ | ೫೮೯೫ | ೮೦೩೨.೯೫ | ೪೨೪೪೦ | ೧೩೬೨೬೭.೧೮ | ೬ | ೭ |
| ಕೊಡಗು | ೧೭೩೩ | ೧೭೫೯.೮೧ | ೧೬೧೪೫ | ೧೦೧೫೪೭.೦೩ | ೯ | ೯ |
| ಮಂಡ್ಯ | ೩೫೯೦ | ೩೩೬೩.೪೦ | ೧೯೪೪೮ | ೯೩೬೮೮.೦೨ | ೧೨ | ೫ |
| ಮೈಸೂರು | ೧೪೦೬೦ | ೧೦೬೨೦.೫೯ | ೮೦೮೮೮ | ೭೫೫೩೭.೬೨ | ೧೭ | ೬ |
| ರಾಯಚೂರು | ೫೩೨೭ | ೭೭೬೨.೭೭ | ೩೯೫೪೨ | ೧೪೫೭೨೪.೯೯ | ೪ | ೭ |
| ಶಿವಮೊಗ್ಗ | ೭೯೨೬ | ೭೫೧೩.೭೧ | ೩೫೬೯೫ | ೯೪೭೯೮.೨೬ | ೧೧ | ೫ |
| ತುಮಕೂರು | ೧೦೧೫೨ | ೧೧೦೨೪.೫೯ | ೫೯೯೭೧ | ೧೦೮೫೯೫.೨೫ | ೮ | ೬ |
| ಉತ್ತರ ಕನ್ನಡ | ೨೯೭೭ | ೩೨೪೮.೩೪ | ೨೧೧೯೪ | ೧೦೯೧೧೪.೫೪ | ೭ | ೭ |
| ಕರ್ನಾಟಕ | ೧,೬೩,೫೨೪ | ೧,೯೩,೫೯೬.೭೮ | ೧೦,೭೫,೯೭೨ | ೧೧೮೩೯೦.೪೪ | ೭ | ೭ |

ಆಧಾರ: ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು

## ಕೋಷ್ಟಕ ೩: ಕರ್ನಾಟಕದ ಗ್ರಾಮೀಣ ಕೈಗಾರಿಕೆಗಳ ಸಂರಚನೆ

| ಉತ್ಪಾದನೆ ಮತ್ತು ರಿಪೇರಿ ವಲಯ | ಘಟಕಗಳು (ಸಂಖ್ಯೆ) | ಉದ್ಯೋಗ (ಸಂಖ್ಯೆ) | ಉತ್ಪಾದನೆ ಮತ್ತು ರಿಪೇರಿ ವಲಯ | ಘಟಕಗಳು (ಸಂಖ್ಯೆ) | ಉದ್ಯೋಗ (ಸಂಖ್ಯೆ) |
|---|---|---|---|---|---|
| ನೋಂದಾಯಿತ ಕಾರ್ಖಾನೆಗಳು | ೧೪೭೩<br>(೧.೩%) | ೫೩೩೮೦೨<br>(೨೩.೪%) | ಸ್ಥಾಪಿತ ಘಟಕಗಳು | ೪೫೯೯೧<br>(೧೭.೦%) | ೩೩೧೧೪೭<br>(೪೫.೦%) |
| ನೋಂದಾಯಿಸದ ಕಾರ್ಖಾನೆಗಳು | ೨೮೦೭೧<br>(೨೪.೯%) | ೫೩೮೫೯<br>(೨೦.೫%) | ಸ್ವಯಂ ಖಾತಾ ಉದ್ದಿಮೆಗಳು | ೨೪೧೧೪೨<br>(೮೩.೦%) | ೧೦೯೯೯೪೯<br>(೫೫.೦%) |
| ಗೃಹಾವಲಂಬಿ ಕೈಗಾರಿಕೆಗಳು | ೮೩೩೯೧<br>(೭೩.೮%) | ೧೫೫೭೨೭<br>(೫೯.೧%) | | | |
| ಒಟ್ಟು | ೧೧೨೯೨೫<br>(೧೦೦%) | ೨೭೩೨೯೫<br>(೧೦೦%) | ಒಟ್ಟು | ೨೮೭೧೩೩<br>(೧೦೦%) | ೭೪೧೦೯೫<br>(೧೦೦%) |

ಆಧಾರ: ಆರ್ಥಿಕ ಗಣತಿ, ಕರ್ನಾಟಕ ೧೯೮೦

## ಕೋಷ್ಟಕ ೪: ಕರ್ನಾಟಕದಲ್ಲಿ ಸಾಧನ ಸಂಪತ್ತಿನ ಅಭಿವೃದ್ಧಿಯ ಸೂಚ್ಯಂಕ - ಜಿಲ್ಲಾವಾರು

| ಜಿಲ್ಲೆಗಳು | ಸೂಚ್ಯಂಕ (೧೯೭೬) | ಶ್ರೇಣಿ | ಸೂಚ್ಯಂಕ (೧೯೯೧) | ಶ್ರೇಣಿ |
|---|---|---|---|---|
| ಬೆಂಗಳೂರು | ೪೪೮೧೨ | ೧ | ೩೩೧೪೦ | ೧ |
| ಬೆಳಗಾವಿ | ೮೧೪೩ | ೩ | ೬೮೬೦ | ೩ |
| ಬಳ್ಳಾರಿ | ೩೩೩೮ | ೮ | ೨೬೧೬ | ೧೨ |
| ಬೀದರ್ | ೧೦೦೦ | ೧೯ | ೧೩೦೬ | ೧೯ |
| ಬಿಜಾಪುರ | ೪೬೮೬ | ೬ | ೩೧೮೬ | ೮ |
| ಚಿಕ್ಕಮಗಳೂರು | ೨೨೯೨ | ೧೭ | ೨೩೧೦ | ೧೫ |
| ಚಿತ್ರದುರ್ಗ | ೩೮೦೨ | ೭ | ೩೩೮೪ | ೬ |
| ಧಾರವಾಡ | ೭೨೯೧ | ೪ | ೬೦೪೫ | ೫ |
| ದಕ್ಷಿಣ ಕನ್ನಡ | ೯೪೬೦ | ೨ | ೧೦೨೨೬ | ೨ |
| ಗುಲ್ಬರ್ಗಾ | ೨೫೩೩ | ೧೧ | ೨೬೬೦ | ೧೦ |
| ಹಾಸನ | ೨೪೧೬ | ೧೬ | ೨೫೦೨ | ೧೪ |
| ಕೊಡಗು | ೧೪೭೧ | ೧೮ | ೧೭೪೮ | ೧೮ |
| ಕೋಲಾರ | ೨೫೦೯ | ೧೩ | ೨೬೫೯ | ೧೧ |
| ಮಂಡ್ಯ | ೨೫೧೯ | ೧೨ | ೨೦೮೧ | ೧೬ |
| ಮೈಸೂರು | ೬೩೯೧ | ೫ | ೬೧೫೧ | ೪ |
| ರಾಯಚೂರು | ೨೪೭೧ | ೧೫ | ೨೦೫೮ | ೧೭ |
| ಶಿವಮೊಗ್ಗ | ೩೨೮೭ | ೯ | ೩೨೦೨ | ೭ |
| ತುಮಕೂರು | ೨೫೬೦ | ೧೦ | ೨೫೩೧ | ೧೩ |
| ಉತ್ತರ ಕನ್ನಡ | ೨೪೮೦ | ೧೪ | ೨೬೬೮ | ೯ |

ಆಧಾರ: ಕರ್ನಾಟಕದಲ್ಲಿ ಕೈಗಾರಿಕಾ ಸಾಮರ್ಥ್ಯ, ಐ.ಎಸ್.ಇ.ಸಿ. (ಮಿ.ಮಿ.ಯೊ) ಪುಟ ಸಂಖ್ಯೆ, ೧೯೩.

ಪ್ರಗತಿಪರ ತೆರಿಗೆನೀತಿ, ನಿಗದಿತ ವೇಳಾಪಟ್ಟಿಯನ್ನು ಹಾಕಿಕೊಂಡು ಸಾಧನ ಸಂಪತ್ತುಗಳ ಅಭಿವೃದ್ಧಿ ಮುಂತಾದ ಅಂಶಗಳ ಕಡೆ ತೀವ್ರ ಗಮನ ಹರಿಸಬೇಕಾಗಿದೆ. ರಾಜ್ಯದ ಎಲ್ಲಾ ಭಾಗಗಳನ್ನೂ ಕೈಗಾರಿಕಾ ದೃಷ್ಟಿಯಿಂದ ಒಂದೇ ರೀತಿಯಲ್ಲಿ, ಉಸಿರಿನಲ್ಲಿ ಅಭಿವೃದ್ಧಿಗೊಳಿಸುವುದು ಅಸಂಭವವಾಗಿರುವುದರಿಂದ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿನ ಕೈಗಾರಿಕಾ ಸಾಮರ್ಥ್ಯ ಹೊಂದಿರುವ 'ಗೊಂಚಲು ಸ್ಥಲ' (clusters)ಗಳನ್ನು ಗುರುತಿಸಿ ಅವುಗಳ ಕೈಗಾರಿಕಾಭಿವೃದ್ಧಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಡುವುದು ಬಹು ಮುಖ್ಯ. ಈ ರೀತಿಯ ಕಾರ್ಯಯೋಜನೆ ರಾಜ್ಯದ ಎಂಟನೆಯ ಪಂಚವಾರ್ಷಿಕ ಯೋಜನೆ (ಕರಡು)ಯಲ್ಲಿ ಮೂಡಿ ಬಂದಿರುವುದು ಸಂತೋಷದ ಸಂಗತಿ.

ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕಿಂತ, ಕೈಗಾರೀಕರಣದ ಕಾರ್ಯ ವಿಧಾನ (Process)ಕ್ಕೆ ಗಮನ ಹರಿಸುವುದು ಮುಖ್ಯ. ಈ ಕಾರ್ಯ ವಿಧಾನದ ವ್ಯಾಪ್ತಿ ಅನೇಕ ವಿಷಯಗಳಿಗೆ, ಕ್ಷೇತ್ರಗಳಿಗೆ ವಿಸ್ತರಿಸುತ್ತದೆ ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಉದಾಹರಣೆಗೆ ಸಾಂಸ್ಥಿಕ ಮಾರ್ಪಾಡುಗಳು, ಸುಧಾರಣೆಗಳು, ತಂತ್ರಜ್ಞಾನ ಇತ್ಯಾದಿ ಕೈಗಾರೀಕರಣಕ್ಕೆ ಸಹಾಯಕವಾದ ಪೂರ್ವಭಾವೀ ಕ್ರಮಗಳನ್ನು ದಕ್ಷತೆಯಿಂದ ನಿರ್ವಹಿಸಿದರೆ, ಕೈಗಾರಿಕಾಭಿವೃದ್ಧಿಯ ಕನಸು ನನಸಾಗುವುದರಲ್ಲಿ ಸಂದೇಹವಿಲ್ಲ. ಹಲವಾರು ಪ್ರಾಮುಖ್ಯ ಕೈಗಾರಿಕೆ (Thurst sectors)ಗಳನ್ನು ಗುರುತಿಸಿ ಕೈಗಾರಿಕಾಭಿವೃದ್ಧಿಗೆ ಅನುವು ಮಾಡಿಕೊಡುವುದರಲ್ಲಿ ರಾಜ್ಯ ವಹಿಸಿದ ಪಾತ್ರ ಶ್ಲಾಘನೀಯವಾದದ್ದು. ಎಂಜಿನಿಯರಿಂಗ್, ಟೆಲಿಕಮ್ಯೂನಿಕೇಶನ್ಸ್, ಮತ್ತಷ್ಟು ಪ್ರಾಮುಖ್ಯತೆ ಪಡೆಯುವುದರಲ್ಲಿ ಸಂದೇಹವಿಲ್ಲ. ಇದಲ್ಲದೆ ಇನ್ನೂ ವೈವಿಧ್ಯಮಯ ಕೈಗಾರಿಕಾ ಉತ್ಪಾದನೆಗೆ ವಿಶೇಷ ಪ್ರಯತ್ನ ನಡೆಯಬೇಕಾಗಿದೆ. ಇವುಗಳಲ್ಲಿ ಹಣ್ಣು ಮತ್ತು ತರಕಾರಿಗಳಿಗೆ ಸಂಬಂಧಿಸಿದ ಕೈಗಾರಿಕೆಗಳು. ರೇಷ್ಮೆ ಪೋಷಾಕು ವಸ್ತುಗಳು, ಚರ್ಮ, ಮೂಲ ರಾಸಾಯನಿಕ ತಯಾರಿಕೆಗಳು ಇತ್ಯಾದಿ ಕೈಗಾರಿಕೆಗಳನ್ನು ಹೆಸರಿಸಬಹುದು. ಎಲ್ಲಕ್ಕಿಂತ ಹೆಚ್ಚಾಗಿ ಕೈಗಾರಿಕೆಗಳ ಮೌಲ್ಯಾಭಿವೃದ್ಧಿಯ ಚಟುವಟಿಕೆಗಳ ಬಗ್ಗೆ ಹೆಚ್ಚಾದ ಗಮನ ಕೊಡಬೇಕು. ಒಟ್ಟಿನಲ್ಲಿ ಕೈಗಾರಿಕಾಭಿವೃದ್ಧಿಗೆ ರಾಜ್ಯದಲ್ಲಿ ಹಲವು ಹತ್ತಾರು ಅವಕಾಶಗಳು, ಸಾಧ್ಯತೆಗಳು ಇದ್ದರೂ ಅವರ ಸಾಕ್ಷಾತ್ಕಾರವು ಕೈಗಾರೀಕರಣದ ಮಾರ್ಗದಲ್ಲಿರುವ ಅನೇಕ ಸವಾಲುಗಳನ್ನು ಪರಿಣಾಮಕಾರಿಯಾಗಿ ಎದುರಿಸುವುದರ ಮೇಲೆ ಅವಲಂಬಿಸಿದೆ. ಅಲ್ಲದೆ ಈಗಿನ ಹೊಸ ಆರ್ಥಿಕ ಕೈಗಾರಿಕಾ ನೀತಿಯ ಕಾರಣಗಳಿಂದಾಗಿ ಕೈಗಾರಿಕೆಗಳು ತಮ್ಮ ಕಾರ್ಯಕ್ಷಮತೆ ಸ್ಪರ್ಧಾತ್ಮಕ ಮನೋಭಾವವನ್ನು ಬೆಳೆಸಿಕೊಳ್ಳುವುದರ ಮೇಲೆ ಅವಲಂಬಿಸಿದೆ.

## ಅಡಿಟಿಪ್ಪಣಿ ಮತ್ತು ಆಕರ ಗ್ರಂಥಗಳು

೧. ಕರ್ನಾಟಕದಲ್ಲಿ ಕೈಗಾರಿಕಾ ಸಾಮರ್ಥ್ಯ, ಐ.ಎಸ್.ಇ.ಸಿ. (ಮಿ.ಮಿ.ಯೊ), ಪುಟ ಸಂಖ್ಯೆ ೩.

೨. ಎಂಟನೇ ಪಂಚವಾರ್ಷಿಕ ಯೋಜನೆಗಳು ಕರಡು ಪ್ರತಿ, ಕರ್ನಾಟಕ ಸರ್ಕಾರ.

೩. ಆರ್ಥಿಕ ಸಮೀಕ್ಷೆ, ಕರ್ನಾಟಕ ಸರ್ಕಾರ, ಮಾರ್ಚ್ ೧೯೯೫.

೪. ಅದೇ ಗ್ರಂಥದ ಕೋಷ್ಟಕ ೫.೨, ಪುಟ - ೧೨೩.

೫. ಅಂಡ್ರ್ಯೂಸನ್ ಡೆನ್ನಿಸ್: ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸಣ್ಣ ಕೈಗಾರಿಕೆಗಳು: ಒಂದು ವಿಚಾರ, ವಿಶ್ವಬ್ಯಾಂಕ್, ಸಮೂಹಕಾರ್ಯ ಪತ್ರಿಕೆ ನಂ. ೫೧೮, ವಾಷಿಂಗ್ಟನ್ - ೧೯೮೨.

೬. ಆರ್ಥಿಕ ಸಮೀಕ್ಷೆ, ಮಾರ್ಚ್, ೧೯೯೫, ಕರ್ನಾಟಕ ಸರ್ಕಾರ, ಪುಟ - ೫೨.

೭. ಅದೇ ಗ್ರಂಥ, ಪುಟ - ೫೬.

೮. ಎಂ.ಹೆಚ್. ಬಾಲಸುಬ್ರಹ್ಮಣ್ಯ: ಕರ್ನಾಟಕದಲ್ಲಿ ಗ್ರಾಮೀಣ ಕೈಗಾರಿಕೆಗಳು: ರಚನೆ ಹಾಗೂ ಬೆಳವಣಿಗೆ, "ಮಾರ್ಜಿನ್", ಜನವರಿ-ಮಾರ್ಚ್, ೧೯೮೯.

೯. ಕರ್ನಾಟಕದಲ್ಲಿ ಕೈಗಾರಿಕಾ ಸಾಮರ್ಥ್ಯ - ಐ.ಎಸ್.ಇ.ಸಿ. - ಪುಟ ೧೪-೧೫.

೧೦. ಭಾರತದಲ್ಲಿ ಗ್ರಾಮೀಣ ಕೈಗಾರೀಕರಣ: ಭಾರತದ ಸಣ್ಣ ಕೈಗಾರಿಕಾ ಸಾಪೇಕ್ಷ ಉತ್ಪಾದನಾ ದಕ್ಷತೆ. ಬಿ.ಪಿ. ವಾಣಿಯವರು ಮಾಡಿರುವ ಅಧ್ಯಯನದ ಸಂವಾದದಲ್ಲಿರುವಂತೆ. ಐ.ಎಸ್.ಇ.ಸಿ. (ಮಿ.ಮಿ.ಯೊ), ಬೆಂಗಳೂರು.

೧೧. ಈ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಕೈಗಾರಿಕಾ ಸಾಮರ್ಥ್ಯ - ಅಧ್ಯಾಯ ೩ರಲ್ಲಿ ಸವಿಸ್ತಾರವಾದ ಮಾಹಿತಿ ನೋಡಬಹುದು.

೧೨. ಅದೇ ಗ್ರಂಥದ ನಾಲ್ಕನೇ ಅಧ್ಯಾಯ ಗಮನಿಸಿ.

# ಕರ್ನಾಟಕದ ಸಾರ್ವಜನಿಕ ಉದ್ಯಮಗಳು: ಬೆಳವಣಿಗೆ ಮತ್ತು ಕಾರ್ಯನಿರ್ವಹಣೆ

ಬಿ.ಎಸ್. ಶ್ರೀಕಂಠಾರಾಧ್ಯ

## ಪೀಠಿಕೆ

ಖಾಸಗೀಕರಣದ ಹೊಸ ಅಲೆ ಎದ್ದಿರುವ ಇಂದಿನ ದಿನಗಳಲ್ಲಿ ಸಾರ್ವಜನಿಕ ಉದ್ಯಮಗಳ ಕಾರ್ಯನಿರ್ವಹಣೆಯನ್ನು ಕುರಿತು ವಿಪುಲವಾದ ಚರ್ಚೆ ನಡೆಯುತ್ತಿದೆ. ಬಹುತೇಕ ಸಾರ್ವಜನಿಕ ಉದ್ಯಮಗಳು ನಷ್ಟ ಅನುಭವಿಸುತ್ತಿರುವುದರಿಂದ ಸರ್ಕಾರದ ಹಣಕಾಸು ಪರಿಸ್ಥಿತಿ ಹದಗೆಡುತ್ತಿದೆ. ಸರ್ಕಾರಕ್ಕೆ ಭಾರಿ ಹೊರೆಯಾಗಿರುವ ಸಾರ್ವಜನಿಕ ಉದ್ಯಮಗಳು ಕೋಶೀಯ ಕೊರತೆ ಹೆಚ್ಚಿರುವುದಕ್ಕೆ ಕಾರಣವಾಗಿವೆ. ದೊಡ್ಡ ಪ್ರಮಾಣದಲ್ಲಿ ಸರ್ಕಾರ ಇವುಗಳಲ್ಲಿ ಬಂಡವಾಳ ಹೂಡಿ ನಿರೀಕ್ಷಿತ ಲಾಭ ಪಡೆಯದಿದ್ದರೆ ಹಣಕಾಸು ಪರಿಸ್ಥಿತಿ ಹದಗೆಡುವುದು ಸಹಜ. ಕೋಶೀಯ ಕೊರತೆಯನ್ನು ಗಣನೀಯವಾಗಿ ಕಡಿಮೆಮಾಡುವುದರ ಅಗತ್ಯವಿರುವ ಇಂದಿನ ಪರಿಸ್ಥಿತಿಯಲ್ಲಿ ಸಾರ್ವತ್ರಿಕ ವಲಯದ ಪಾತ್ರವನ್ನೇ ಕಡಿಮೆಮಾಡಬೇಕೆಂಬ ವಾದಕ್ಕೆ ಪುಷ್ಟಿ ದೊರೆಯುತ್ತಿದೆ. ಸಾರ್ವಜನಿಕ ಉದ್ಯಮಗಳು ಸರ್ಕಾರಕ್ಕೆ ಆಸ್ತಿಯಾಗುವ ಬದಲು ಹೊರೆಯಾಗಿವೆ ಎಂಬ ಅಭಿಪ್ರಾಯವನ್ನು ಅನೇಕರು ವ್ಯಕ್ತಪಡಿಸುತ್ತಿದ್ದಾರೆ (ಜಲನ್, ೧೯೯೨). ಅವುಗಳ ಪುನಶ್ರಚನೆ ತ್ವರಿತವಾಗಿ ಆಗಬೇಕೆಂಬುದನ್ನು ಹೊಸ ಆರ್ಥಿಕ ನೀತಿಯ ಕಾರ್ಯಕ್ರಮಗಳ ಒಂದು ಪ್ರಮುಖ ಅಂಶವೆಂದು ಪರಿಗಣಿಸಲಾಗಿದೆ. ರಾಜ್ಯಮಟ್ಟದ ಆರ್ಥಿಕ ಸುಧಾರಣಾ ಕ್ರಮಗಳ ಪೈಕಿ ಇದಕ್ಕೆ ಪ್ರಮುಖ ಸ್ಥಾನ ಕೊಡಬೇಕಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಸಾರ್ವಜನಿಕ ಉದ್ಯಮಗಳ ಬೆಳವಣಿಗೆ ಮತ್ತು ಕಾರ್ಯನಿರ್ವಹಣೆಯನ್ನು ಸಮೀಕ್ಷಿಸುವುದು ಅಗತ್ಯವಾಗಿದೆ.

## ಕರ್ನಾಟಕದ ಸಾರ್ವಜನಿಕ ಉದ್ಯಮಗಳ ಬೆಳವಣಿಗೆ

ಸಾರ್ವಜನಿಕ ಉದ್ಯಮಗಳ ವಿಷಯದಲ್ಲಿ ಕರ್ನಾಟಕ ಒಂದು ಮಾರ್ಗದರ್ಶಕ ಪಾತ್ರ ವಹಿಸಿತ್ತೆಂಬುದರಲ್ಲಿ ಅತಿಶಯೋಕ್ತಿ ಏನೂ ಇಲ್ಲ. ಸ್ವತಂತ್ರಪೂರ್ವ ಕಾಲದಲ್ಲೇ

ಮೈಸೂರಿನ ಅರಸರು ಕೈಗಾರಿಕೀಕರಣದ ಅಗತ್ಯವನ್ನು ಮನಗಂಡು ಸಾರ್ವಜನಿಕ ಉದ್ಯಮಗಳನ್ನು ಸ್ಥಾಪಿಸುವುದರ ಮೂಲಕ ಆ ಉದ್ದೇಶವನ್ನು ಸಫಲಗೊಳಿಸಲು ಯತ್ನಿಸಿದರು. ಸರ್ಕಾರವೇ ಕೆಲವು ಕ್ಷೇತ್ರಗಳಲ್ಲಿ ಉದ್ಯಮ ಶೀಲತೆಯನ್ನು ಬೆಳೆಸುವುದರ ಅಗತ್ಯವನ್ನು ಮನಗಂಡಿತ್ತು. ಆರ್ಥಿಕ ಪ್ರಾಮುಖ್ಯದ ದೃಷ್ಟಿಯಿಂದ ಕಬ್ಬಿಣ ಮತ್ತು ಉಕ್ಕಿನ ಉತ್ಪಾದನೆಯನ್ನು ಸಾರ್ವಜನಿಕ ವಲಯದಲ್ಲಿ ಕೈಗೊಳ್ಳಲಾಯಿತು. ಕೆಲವು ಕಚ್ಚಾವಸ್ತುಗಳನ್ನು ಬಳಕೆಮಾಡಲು ಮತ್ತು ಖಾಸಗಿ ಉದ್ಯಮಿಗಳು ಯಾವ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂದೆ ಬರುವುದಿಲ್ಲವೋ ಅಂತಹ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರವೇ ಮುಂದೆ ಬರಬೇಕಾಯಿತು. ಸಾಬೂನು ಮತ್ತು ಪಿಂಗಾಣಿ ವಸ್ತುಗಳ ತಯಾರಿಕೆಯನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಸರ್ಕಾರಕ್ಕೆ ಆದಾಯ ಪಡೆಯುವ ಉದ್ದೇಶದಿಂದಲೇ ಸ್ಥಾಪಿತವಾದ ಸಾರ್ವಜನಿಕ ಉದ್ಯಮವೆಂದರೆ ಯಥೇಚ್ಛವಾಗಿ ದೊರಕುತ್ತಿದ್ದ ಗಂಧದಮರದಿಂದ ಎಣ್ಣೆ ತಯಾರಿಸುವ ಸಲುವಾಗಿ ಸ್ಥಾಪಿಸಲ್ಪಟ್ಟ ಸರ್ಕಾರಿ ಗಂಧದಎಣ್ಣೆ ಕಾರ್ಖಾನೆ. (ಬಾಲಕೃಷ್ಣ ಆರ್, ೧೯೪೦; ಹೆಟ್ನೆ, ಬಿ. ೧೯೭೮). ಗಂಧದ ಎಣ್ಣೆ ಕಾರ್ಖಾನೆಗಳು ಮೈಸೂರಿನಲ್ಲಿ ೧೯೧೬ರಲ್ಲಿಯೂ, ಬೆಂಗಳೂರಿನಲ್ಲಿ ೧೯೧೭ರಲ್ಲಿಯೂ ಮತ್ತು ಶಿವಮೊಗ್ಗೆಯಲ್ಲಿ ೧೯೪೪ರಲ್ಲಿಯೂ ಸ್ಥಾಪಿತವಾದವು. ಸರ್ಕಾರಿ ಸಾಬೂನು ಕಾರ್ಖಾನೆ ೧೯೧೯ರಲ್ಲೂ, ಮೈಸೂರು ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ (ಭದ್ರಾವತಿ) ೧೯೨೩ರಲ್ಲೂ, ಸರ್ಕಾರಿ ಪಿಂಗಾಣಿ ಕಾರ್ಖಾನೆ ೧೯೩೨ರಲ್ಲೂ ಮತ್ತು ಸರ್ಕಾರಿ ವಿದ್ಯುತ್ ಕಾರ್ಖಾನೆ ೧೯೩೫ರಲ್ಲೂ ಪ್ರಾರಂಭಗೊಂಡವು. ಇವಷ್ಟೇ ಅಲ್ಲದೆ ಅರೆ ಸರ್ಕಾರಿ ಉದ್ಯಮಗಳಾಗಿ ಮೈಸೂರು ಕಾರ್ಖಾನೆ ೧೯೨೩ರಲ್ಲೂ ಮತ್ತು ಮೈಸೂರು ಸಕ್ಕರೆ ಕಂಪೆನಿ ೧೯೩೯ರಲ್ಲೂ ಸ್ಥಾಪಿತವಾದುವು. ಖಾಸಗಿ ಸಂಸ್ಥೆಗಳೊಡನೆ ಭಾಗಶಃ ಒಡೆತನದ ವ್ಯವಸ್ಥೆ ಮಾಡಿದ್ದುದು ಖಾಸಗಿ ಸಂಸ್ಥೆಗಳ ಬೆಳವಣಿಗೆಗೆ ಸರ್ಕಾರ ಒತ್ತಾಸೆ ನೀಡಿರುವ ದೃಷ್ಟಿಯಿಂದಲೇ ಹೊರತು ಲಾಭ ಸಂಪಾದಿಸುವ ದೃಷ್ಟಿಯಿಂದಲ್ಲ. ಒಟ್ಟಿನಲ್ಲಿ ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಕೇವಲ ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಿಂದ ಸಾರ್ವಜನಿಕ ಉದ್ಯಮಗಳನ್ನು ಸ್ಥಾಪಿಸಲಾಯಿತು.

ಸ್ವಾತಂತ್ರ್ಯನಂತರದ ಕಾಲದಲ್ಲಿ ಜಾರಿಗೆ ತಂದ ಕೈಗಾರಿಕಾ ನೀತಿಯಲ್ಲಿ ಸಾರ್ವಜನಿಕ ವಲಯಕ್ಕೆ ಹೆಚ್ಚಿನ ಸ್ಥಾನ ಕೊಡುವ ಅವಶ್ಯಕತೆಯನ್ನು ಒತ್ತಿ ಹೇಳಲಾಯಿತು. ಸಮತಾವಾದಿ ಸಮಾಜ ಸೃಷ್ಟಿಯ ಉದ್ದೇಶವನ್ನು ಈಡೇರಿಸುವ ಉದ್ದೇಶಕ್ಕಾಗಿ ಸಾರ್ವಜನಿಕ ವಲಯದ ಬೆಳವಣಿಗೆಯನ್ನು ಪ್ರೋತ್ಸಾಹಿಸಲಾಯಿತು. ಅಂದರೆ ಸ್ವಾತಂತ್ರ್ಯಾನಂತರದ ಕಾಲದಲ್ಲಿ ಕೇವಲ ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಷ್ಟೇ ಅಲ್ಲದೆ ಭಾವನಾವಾದವೂ ಸಾರ್ವಜನಿಕ ವಲಯದ ಬೆಳವಣಿಗೆಗೆ ಕಾರಣವಾಯಿತು. ಸ್ವಾತಂತ್ರ್ಯ ದೊರಕಿದ ಸ್ವಲ್ಪ ಕಾಲದಲ್ಲೇ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ

ಬಂದ ಸಾರ್ವಜನಿಕ ಉದ್ಯಮಗಳೆಂದರೆ ಮೈಸೂರು ಅರಗು ಮತ್ತು ಬಣ್ಣದ ಕಾರ್ಖಾನೆ (೧೯೪೭) ಮತ್ತು ರೇಡಿಯೋ ಮತ್ತು ಇಲೆಕ್ಟ್ರಾನಿಕ್ಸ್ ಲಿಮಿಟೆಡ್ (೧೯೪೯).

ತಯಾರಿಕಾ ಉದ್ಯಮಗಳಷ್ಟೇ ಅಲ್ಲದೆ ವಿವಿಧ ರೀತಿಯ ಇತರ ಉದ್ಯಮಗಳು ಅಸ್ತಿತ್ವಕ್ಕೆ ಬಂದದ್ದು ಸ್ವಾತಂತ್ರ್ಯಾನಂತರದ ಕಾಲದ ಸಾರ್ವಜನಿಕ ಉದ್ಯಮಗಳ ಬೆಳವಣಿಗೆಯಲ್ಲಿ ಕಂಡುಬರುವ ಒಂದು ಗಮನಾರ್ಹ ಅಂಶ. ಇವುಗಳನ್ನು ಕೆಳಕಂಡ ಏಳು ವರ್ಗಗಳಾಗಿ ವಿಂಗಡಿಸಲಾಗಿದೆ:

೧. ಸಾರ್ವಜನಿಕ ಉಪಯುಕ್ತತೆಯ ಉದ್ಯಮಗಳು
೨. ಹಣಕಾಸು ಸಂಸ್ಥೆಗಳು
೩. ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯೇತರ)
೪. ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯ)
೫. ಸೇವಾ ಉದ್ಯಮಗಳು
೬. ತಯಾರಿಕಾ ಉದ್ಯಮಗಳು
೭. ಮಾರುಕಟ್ಟೆ ಮತ್ತು ಜಾಹಿರಾತು ಉದ್ಯಮಗಳು

ರಾಜ್ಯದ ಒಟ್ಟಾರೆ ಅಭಿವೃದ್ಧಿಗೆ ನೆರವು ನೀಡುವ ದೃಷ್ಟಿಯಿಂದ ವಿವಿಧ ಬಗೆಯ ಸಾರ್ವಜನಿಕ ಉದ್ಯಮಗಳ ಸ್ಥಾಪನೆಯನ್ನು ಸಮರ್ಥಿಸಲಾಗಿದೆ. ಖಾಸಗಿ ವಲಯದ ಅಭಿವೃದ್ಧಿಗೆ ಹಣಕಾಸು ಒದಗಿಸುವ, ಹಿಂದುಳಿದ ಪ್ರದೇಶಗಳ ಹಾಗೂ ದುರ್ಬಲ ವರ್ಗಗಳ ಅಭಿವೃದ್ಧಿಗೆ ನೆರವು ನೀಡುವ, ಖಾಸಗಿ ವಲಯದಲ್ಲಿ ಉತ್ಪಾದನೆಯಾದ ವಸ್ತುಗಳ ಮಾರಾಟಕ್ಕೆ ನೆರವು ನೀಡುವ, ಸಾರ್ವಜನಿಕ ಉಪಯುಕ್ತತೆಯ ಸೌಲಭ್ಯ ಒದಗಿಸುವ ಮತ್ತಿತರೆ ಚಟುವಟಿಕೆಗಳಲ್ಲಿ ಇವು ತೊಡಗಿವೆ. ಹೀಗಾಗಿ ಸಾರ್ವಜನಿಕ ಉದ್ಯಮಗಳು ಹಲವು ಕ್ಷೇತ್ರಗಳನ್ನು ಪ್ರವೇಶಿಸಿವೆ. ಇವೆಲ್ಲವೂ ಸಾರ್ವಜನಿಕ ಉದ್ಯಮಗಳ ಮೂಲ ಉದ್ದೇಶಕ್ಕೆ ಅನುಗುಣವಾಗಿವೆಯೇ ಎಂಬ ಸಂದೇಹಕ್ಕೆ ದಾರಿಯಾಗಿದೆ. ೧೯೪೪ರ ಮಾರ್ಚ್ ಅಂತ್ಯದ ವೇಳೆಗೆ ಇವುಗಳ ಸಂಖ್ಯೆ ೭೦ಕ್ಕೆ ಏರಿದ್ದು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕ ಉದ್ಯಮಗಳನ್ನು ಹೊಂದಿರುವ ರಾಜ್ಯಗಳ ಪೈಕಿ ಕರ್ನಾಟಕ ಒಂದಾಗಿದೆ. ಸಾರ್ವಜನಿಕ ಉದ್ಯಮಗಳ ಈ ರೀತಿಯ ಸಂಖ್ಯಾಭಿವೃದ್ಧಿ, ರಾಜಕಾರಣಿಗಳಿಗೆ ಮತ್ತು ಸರ್ಕಾರಿ ಅಧಿಕಾರಿಗಳಿಗೆ ಸ್ಥಾನಗಳನ್ನು ಕಲ್ಪಿಸುವುದಕ್ಕಾಗಿ ಆಗುತ್ತಿದೆ ಎಂಬ ಟೀಕೆಗೆ ಕಾರಣವಾಗಿದೆ.

ಸಾರ್ವಜನಿಕ ಉದ್ಯಮಗಳ ಬೆಳವಣಿಗೆಯನ್ನು ಕೇವಲ ಸಂಖ್ಯೆಯ ದೃಷ್ಟಿಯಿಂದಲ್ಲದೆ, ಒಟ್ಟು ಬಂಡವಾಳ ಹೂಡಿಕೆಯ ದೃಷ್ಟಿಯಿಂದಲೂ ನೋಡಬೇಕಾಗುತ್ತದೆ. ಅನುಬಂಧ ೧ರಲ್ಲಿ ತೋರಿಸಿರುವಂತೆ ೧೯೮೦-೮೧ ರಲ್ಲಿ ಒಟ್ಟು ಬಂಡವಾಳ ಹೂಡಿಕೆ ೧೪೧೫.೭೭ ಕೋಟಿ ರೂಪಾಯಿಗಳಾಗಿದ್ದುದು

೧೯೯೩-೯೪ರಲ್ಲಿ ೬೯೪೮.೬೩ ಕೋಟಿ ರೂಪಾಯಿಗಳಿಗೆ ಹೆಚ್ಚಿತು. ಅಂದರೆ ಈ ಅವಧಿಯಲ್ಲಿ ಒಟ್ಟು ಬಂಡವಾಳ ಹೂಡಿಕೆ ಸುಮಾರು ಐದುಪಟ್ಟು ಹೆಚ್ಚಿತು. ಶೇಕಡಾವಾರು ವಾರ್ಷಿಕ ಹೆಚ್ಚಳ ೧೯೮೮-೮೯ರಲ್ಲಿ ಕಡಿಮೆಯದೂ (೪.೦೭) ಮತ್ತು ೧೯೮೨- ೮೩ರಲ್ಲಿ ಅತ್ಯಂತ ಹೆಚ್ಚಿನದೂ (೨೩.೯೦) ಆಗಿತ್ತು. ಒಟ್ಟು ಬಂಡವಾಳ ಹೂಡಿಕೆಯಲ್ಲಿ ಕರ್ನಾಟಕ ಸರ್ಕಾರದ ಪಾಲು ಸುಮಾರು ಅರ್ಧದಷ್ಟಾಗುತ್ತದೆ. ಸಾರ್ವಜನಿಕ ಉದ್ಯಮಗಳಿಗೆ ಸರ್ಕಾರ ಒದಗಿಸುವ ಬಂಡವಾಳ ಕಡಿಮೆಯಾಗಬೇಕೆಂಬ ಅಭಿಪ್ರಾಯವಿರುವ ಇಂದಿನ ದಿನಗಳಲ್ಲೂ ಅದು ಹೆಚ್ಚುತ್ತಿರುವುದು ಗಮನಿಸಬೇಕಾದ ಅಂಶ. ೧೯೯೩-೯೪ನೇ ವರ್ಷದಲ್ಲಿ ಅದರ ಹಿಂದಿನ ವರ್ಷಕ್ಕಿಂತ ೨೮೯.೧೩ ಕೋಟಿ ರೂಪಾಯಿ ಹೆಚ್ಚು ಬಂಡವಾಳವನ್ನು ಸರ್ಕಾರ ಒದಗಿಸಿದೆ.

ಕರ್ನಾಟಕದ ಸಾರ್ವಜನಿಕ ಉದ್ಯಮಗಳಲ್ಲಿ ತೊಡಗಿಸಿರುವ ಬಂಡವಾಳ ಭಾರಿ ಮೊತ್ತದ್ದಾದರೂ, ಇದರ ಶೇಕಡ ೮೬.೪೨ರಷ್ಟು ಕೇವಲ ೬ ಉದ್ಯಮಗಳಲ್ಲಿ ಕೇಂದ್ರೀಕೃತವಾಗಿದೆ. ೧೯೯೩-೯೪ರಲ್ಲಿ ೬೮ ಉದ್ಯಮಗಳಲ್ಲಿ ಹೂಡಿದ್ದ ಒಟ್ಟು ೬೯೪೮.೬೩ ಕೋಟಿ ರೂಪಾಯಿ ಬಂಡವಾಳದಲ್ಲಿ ಕರ್ನಾಟಕ ವಿದ್ಯುತ್ ನಿಗಮ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಕರ್ನಾಟಕ ರಾಜ್ಯ ಹಣಕಾಸು ನಿಗಮ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಕೆಎಸ್ಐಐಡಿಸಿ (ಕರ್ನಾಟಕ ಸಣ್ಣ ಕೈಗಾರಿಕಾ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ) ಮತ್ತು ಮೈಸೂರು ಕಾಗದದ ಕಾರ್ಖಾನೆ ಈ ಆರು ಸಂಸ್ಥೆಗಳಲ್ಲಿ ಹೂಡಿದ್ದ ಒಟ್ಟು ಬಂಡವಾಳ ೬೦೦೪.೮೧ ಕೋಟಿ ರೂಪಾಯಿಗಳಾಗಿದ್ದು ಇನ್ನುಳಿದ ೬೨ ಉದ್ಯಮಗಳಲ್ಲಿ ಹೂಡಿದ ಬಂಡವಾಳ ಕೇವಲ ೯೪೩.೮೨ ಕೋಟಿ ರೂಪಾಯಿಗಳಾಗಿದ್ದುವು. ಅಂದರೆ ೬೨ ಉದ್ಯಮಗಳಲ್ಲಿ ಹೂಡಿದ ಬಂಡವಾಳ ಒಟ್ಟು ಬಂಡವಾಳ ಹೂಡಿಕೆಯ ಶೇಕಡ ೧೩.೫೮ ರಷ್ಟಿದ್ದು ಬಹುತೇಕ ಉದ್ಯಮಗಳಲ್ಲಿ ಹೂಡಿದ ಬಂಡವಾಳ ಅತ್ಯಲ್ಪ ಪ್ರಮಾಣದ್ದಾಗಿದ್ದು ಅವುಗಳ ಕಾರ್ಯಚಟುವಟಿಕೆಗಳು ಬಹಳ ಸೀಮಿತವಾದ ವುಗಳಾಗಿವೆ. ಒಟ್ಟಿನಲ್ಲಿ ಸಂಖ್ಯಾಬಾಹುಳ್ಯ ಮತ್ತು ಸೀಮಿತ ಬಂಡವಾಳ ಹೂಡಿಕೆಯಿಂದಾಗಿ ಸಾರ್ವಜನಿಕ ಉದ್ಯಮಗಳು ರಾಜ್ಯಕ್ಕೆ ವರದಾನವಾಗುವ ಬದಲು ಒಂದು ಹೊರೆಯಾಗಿರುವುದು ಅವುಗಳ ಕಾರ್ಯನಿರ್ವಹಣೆಯ ಸಮೀಕ್ಷೆಯಿಂದ ಸ್ಪಷ್ಟವಾಗುತ್ತದೆ.

### ೨. ಸಾರ್ವಜನಿಕ ಉದ್ಯಮಗಳ ಕಾರ್ಯನಿರ್ವಹಣೆ

ಸಾರ್ವಜನಿಕ ಉದ್ಯಮಗಳ ಕಾರ್ಯನಿರ್ವಹಣೆಯನ್ನು ವಿಮರ್ಶಿಸಿದಾಗ ಎರಡು ವರ್ಗಗಳ ಮಾನದಂಡಗಳನ್ನು ಅನುಸರಿಸಬೇಕಾಗುತ್ತದೆ: ೧. ಹಣಕಾಸು ಫಲಿತಾಂಶಗಳು ಮತ್ತು ೨. ಇತರೆ ಮಾನದಂಡಗಳು. ಮೊದಲನೆ ಗುಂಪಿನ ಮಾನದಂಡಗಳಲ್ಲಿ ಮುಖ್ಯವಾದವು ಈಕ್ವಿಟಿ ಬಂಡವಾಳದ ಮೇಲಿನ ಆದಾಯ,

ಒಟ್ಟು ಹೂಡಿಕೆಯ ಮೇಲಿನ ಆದಾಯ, ನಿಯೋಜಿಸಿದ ಬಂಡವಾಳದ ಮೇಲಿನ ಆದಾಯ ಮತ್ತು ನಿವ್ವಳ ಲಾಭ: ನಷ್ಟ. ಎರಡನೆಯ ಗುಂಪಿನ ಮಾನದಂಡಗಳಲ್ಲಿ ಸೇವೆಗಳ ಗುಣಮಟ್ಟ, ಮೊದಲೇ ನಿಗದಿಪಡಿಸಿರುವ ಗುರಿಗಳನ್ನು ಎಷ್ಟರಮಟ್ಟಿಗೆ ಮುಟ್ಟಲಾಗಿದೆ ಎಂಬುದು, ಉತ್ಪಾದಕತೆ, ಸಾಮರ್ಥ್ಯ ಬಳಕೆ, ಉದ್ಯೋಗ ಸೃಷ್ಟಿ ಮುಂತಾದವುಗಳಿರುತ್ತವೆ.

ಹಣಕಾಸಿನ ಮಾನದಂಡಕ್ಕೆ ಸಂಬಂಧಿಸಿದಂತೆ ಇರುವ ವಿವಾದವೆಂದರೆ, ಸಾರ್ವಜನಿಕ ಉದ್ಯಮಗಳ ಗುಣವಿಮರ್ಶೆಯನ್ನು ಕೇವಲ ಲಾಭದ ದೃಷ್ಟಿಯಿಂದ ಮಾಡಬಹುದೆ ಎಂಬುದು. ಸಾಮಾಜಿಕ ಪ್ರಯೋಜನ ಮುಖ್ಯವೇ ಹೊರತು ಉದ್ಯಮ ಸಂಪಾದಿಸುವ ಲಾಭವಲ್ಲ ಎಂಬುದು ಒಂದು ಅಭಿಪ್ರಾಯ. ಲಾಭ ಅಥವಾ ನಷ್ಟ ಎರಡೂ ಇಲ್ಲದ ರೀತಿಯಲ್ಲಿ ಕಾರ್ಯನಿರ್ವಹಣೆ ಮಾಡಿದರೆ ಸಾಕೆಂಬುದು ಮತ್ತೊಂದು ಅಭಿಪ್ರಾಯ. ನಷ್ಟ ಅನುಭವಿಸುವುದಕ್ಕಿಂತ ಲಾಭ-ನಷ್ಟ ಎರಡೂ ಇಲ್ಲದ ರೀತಿಯಲ್ಲಿ ಕೆಲಸಮಾಡುವುದು ಉತ್ತಮವೇನೋ ಹೌದು. ಅಷ್ಟೇ ಅಲ್ಲದೆ ಪ್ರತಿಯೊಂದು ಬಗೆಯ ಉದ್ಯಮವೂ ಲಾಭ ಗಳಿಸಲೇಬೇಕೆ ಅಥವ ಲಾಭ-ನಷ್ಟಗಳಿಲ್ಲದೆ ಕಾರ್ಯ ನಿರ್ವಹಿಸಬೇಕೆ ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ವಾಣಿಜ್ಯೇತರ ಅಭಿವೃದ್ಧಿಶೀಲ ಉದ್ಯಮಗಳು ಮತ್ತು ಸೇವಾ ಉದ್ಯಮಗಳು ಲಾಭ ಗಳಿಸಬೇಕೆಂದು ಹೇಳುವುದು ಸಮಂಜಸವಾಗಿ ಕಾಣದಿರ ಬಹುದು. ಆದರೆ ಇನ್ನುಳಿದ ಉದ್ಯಮಗಳು ಲಾಭಗಳಿಸಬೇಕೆಂದು ನಿರೀಕ್ಷಿಸುವುದು ತಪ್ಪಾಗಲಾರದು.

ಸಾರ್ವಜನಿಕ ಉದ್ಯಮಗಳ ಮುಖ್ಯಗುರಿ ಲಾಭ ಗಳಿಕೆಯಾಗಿರಬೇಕಾಗಿಲ್ಲದಿದ್ದರೂ, ಅವು ಲಾಭಗಳಿಸದಿದರೆ ಅಥವಾ ಒಂದೇ ಸಮನೆ ನಷ್ಟಕ್ಕೆ ಒಳಗಾಗುತ್ತಿದ್ದರೆ ಅದರಿಂದ ಸರ್ಕಾರದ ಹಣಕಾಸು ಪರಿಸ್ಥಿತಿಯ ಮೇಲೆ ಉಂಟಾಗುವ ಪ್ರತಿಕೂಲ ಪರಿಣಾಮವನ್ನು ಗಣನೆಗೆ ತೆಗೆದುಕೊಳ್ಳ ಬೇಕು. ಸರ್ಕಾರ ತಾನು ಹೂಡಿರುವ ಬಂಡವಾಳಕ್ಕೆ ಪ್ರತಿಫಲ ಪಡೆಯದಿದ್ದರೆ ಮತ್ತು ಸಾರ್ವಜನಿಕ ಉದ್ಯಮಗಳು ಅನುಭವಿಸುವ ನಷ್ಟವನ್ನು ತುಂಬಿಕೊಡಬೇಕಾದರೆ, ಸರ್ಕಾರದ ಹಣಕಾಸು ಪರಿಸ್ಥಿತಿ ಹದಗೆಡುತ್ತದೆ. ಸಾರ್ವಜನಿಕ ಉದ್ಯಮಗಳಲ್ಲಿ ಹೂಡಿರುವ ಬಂಡವಾಳದಿಂದ ಸರ್ಕಾರ ಪಡೆಯುವ ಪ್ರತಿಫಲ ಅದರ ತೆರಿಗೇತರ ಆದಾಯ ಮೂಲಗಳಲ್ಲೊಂದು. ಕೋಶೀಯ ಕೊರತೆಯನ್ನು ಗಣನೀಯವಾಗಿ ಕಡಿಮೆ ಮಾಡಬೇಕಾದ ಅಗತ್ಯವಿರುವ ಇಂದಿನ ಪರಿಸ್ಥಿತಿಯಲ್ಲಿ ಸಾರ್ವಜನಿಕ ಉದ್ಯಮಗಳು ನಷ್ಟ ಅನುಭವಿಸುತ್ತಿರುವುದನ್ನು ತಪ್ಪಿಸುವುದು ಅನಿವಾರ್ಯ ಮತ್ತು ರಾಜ್ಯದ ಬೊಕ್ಕಸಕ್ಕೆ ಅವು ಆದಾಯ ತರುವಂತೆ ಮಾಡುವುದು ಅಗತ್ಯ. ಈ ದೃಷ್ಟಿಯಿಂದ ಸಾರ್ವಜನಿಕ ಉದ್ಯಮಗಳ ಹಣಕಾಸು ಫಲಿತಾಂಶಗಳನ್ನು ವಿಶ್ಲೇಷಿಸಬೇಕಾಗುತ್ತದೆ.

## ಹಣಕಾಸು ಫಲಿತಾಂಶ

ಹಣಕಾಸು ಫಲಿತಾಂಶವನ್ನು ವಿಶ್ಲೇಷಿಸಲು ಹಿಂದೆ ಹೇಳಿರುವಂತೆ ವಿವಿಧ ಮಾನದಂಡಗಳು ಇರುವುವಾದರೂ ಅವೆಲ್ಲವುಗಳ ಮಾಹಿತಿ ಲಭ್ಯವಿಲ್ಲದಿರುವುದರಿಂದ ಇಲ್ಲಿ ನಿವ್ವಳ ಲಾಭ: ನಷ್ಟಕ್ಕೆ ಸಂಬಂಧಿಸಿದಂತೆ ಮಾತ್ರ ಹಣಕಾಸು ಫಲಿತಾಂಶವನ್ನು ವಿಶ್ಲೇಷಿಸಬೇಕಾಗಿದೆ. ಪ್ರತಿಯೊಂದು ಉದ್ಯಮದ ಲಾಭ: ನಷ್ಟದ ವಿವರಗಳನ್ನು ಕೊಡುವ ಬದಲು ವರ್ಗ ಪ್ರಕಾರವಾಗಿ ವಿಶ್ಲೇಷಿಸಬಹುದು. ಕೋಷ್ಟಕ ೧ರಲ್ಲಿ ಸಾರ್ವಜನಿಕ ಉದ್ಯಮಗಳ ೭ ಗುಂಪುಗಳ ವಿವರ ಕೊಡಲಾಗಿದೆ.

ಕೋಷ್ಟಕ - ೧

ಸಾರ್ವಜನಿಕ ಉದ್ಯಮಗಳ ನಿವ್ವಳ ಲಾಭ : ನಷ್ಟ

(ಲಕ್ಷ ರೂ.ಗಳಲ್ಲಿ)

| ವರ್ಗ | ೧೯೯೧-೯೨ | ೧೯೯೨-೯೩ | ೧೯೯೩-೯೪ |
|---|---|---|---|
| ಸಾರ್ವಜನಿಕ ಉಪಯುಕ್ತತೆ ಉದ್ಯಮಗಳು | ೧೦೬೮೪.೫೭ | ೪೦೩೨.೧೬ | ೩೧೨೦.೧೭ |
| ಹಣಕಾಸು ಸಂಸ್ಥೆಗಳು | ೧೧೯೫.೮೭ | ೧೫೨೪.೨೧ | ೧೦೪೭.೦೯ |
| ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯೇತರ) | ೪೪.೭೫ | ೩೫.೦೦ | ೪೩.೨೧ |
| ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯ) | ೮೩೧.೭೩ | ೮೯೧.೧೭ | ೧೯೬.೦೬ |
| ಸೇವಾ ಉದ್ಯಮಗಳು | ೪೨.೦೨ | ೩೮೫.೭೬ | ೪೪೭.೭೫ |
| ತಯಾರಿಕಾ ಉದ್ಯಮಗಳು | ೪೬.೯೭ | ೩೨೯೭.೨೧ | ೧೫೫೭.೨೫ |
| ಮಾರುಕಟ್ಟೆ ಮತ್ತು ಜಾಹಿರಾತು ಉದ್ಯಮಗಳು | ೧೪೪೮.೦೫ | ೨೯೫.೪೫ | ೧೪೪.೬೫ |
| ಒಟ್ಟು | ೧೧೦೬೩.೦೨ | ೬೫೭೧.೦೨ | ೩೨೭೭.೨೦ |

ಆಧಾರ: ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ಯಮಗಳ ಮಹೋದ್ಯಮ, ಸಾರ್ವಜನಿಕ ಉದ್ಯಮಗಳ ಸಮೀಕ್ಷೆ, ೧೯೯೩-೯೪.

ಕರ್ನಾಟಕ ವಿದ್ಯುತ್ ನಿಗಮ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿ ಮತ್ತು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗಳನ್ನು ಒಳಗೊಂಡ ಸಾರ್ವಜನಿಕ ಉಪಯುಕ್ತತೆ ಉದ್ಯಮಗಳ ವರ್ಗ ೧೯೯೧-೯೨ರಲ್ಲಿ ೧೦೬೮೪.೫೭ ಲಕ್ಷ ರೂಪಾಯಿ ಗಳಿಸಿದೆ, ೧೯೯೨-೯೩ರಲ್ಲಿ ೪೦೩೨.೧೬ ಲಕ್ಷ ರೂಪಾಯಿ ಮತ್ತು ೧೯೯೩-೯೪ರಲ್ಲಿ ೩೧೨೦.೧೭ ಲಕ್ಷ ರೂಪಾಯಿ ನಷ್ಟ ಅನುಭವಿಸಿತು. ಮೂರೂ ವರ್ಷಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ಲಾಭ ಗಳಿಸಿದೆ. ಕಳೆದಬಾರಿ ವಿದ್ಯುತ್ ದರಗಳು ಪರಿಷ್ಕೃತಗೊಂಡ ಮೇಲೆ ಮಂಡಳಿಯ ಹಣಕಾಸು ಪರಿಸ್ಥಿತಿ ತಕ್ಕಮಟ್ಟಿಗೆ

ಉತ್ತಮಗೊಂಡಿತು. ಕರ್ನಾಟಕ ವಿದ್ಯುತ್ ನಿಗಮ ೧೯೯೧-೯೨ರಲ್ಲಿ ೧೦೧೬೫.೦೩ ಲಕ್ಷ ರೂಪಾಯಿ ಲಾಭ ಪಡೆಯಿತು; ೧೯೯೨-೯೩ರಲ್ಲಿ ೧೧೨೪.೪೭ ಲಕ್ಷ ರೂಪಾಯಿ ನಷ್ಟ ಅನುಭವಿಸಿತು ಮತ್ತು ೧೯೯೩-೯೪ರಲ್ಲಿ ೨೭೬೫.೩೯ ಲಕ್ಷ ರೂಪಾಯಿ ಲಾಭ ಗಳಿಸಿತು. ಈ ಗುಂಪಿನ ಉದ್ಯಮಗಳ ಪೈಕಿ ಭಾರಿ ನಷ್ಟ ಅನುಭವಿಸುತ್ತಿರುವ ಉದ್ಯಮವೆಂದರೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ. ಇದರ ನಷ್ಟ ೧೯೯೧-೯೨ರಲ್ಲಿ ೧೯೦೯.೪೬ ಲಕ್ಷ ರೂಪಾಯಿಗಳಿದ್ದದ್ದು ೧೯೯೨-೯೩ರಲ್ಲಿ ೬೧೨೮.೬೯ ಲಕ್ಷ ರೂಪಾಯಿಗಳಿಗೂ, ೧೯೯೩-೯೪ರಲ್ಲಿ ೯೨೭೨.೫೬ ಲಕ್ಷ ರೂಪಾಯಿಗಳಿಗೂ ಹೆಚ್ಚಿತು. ಒಟ್ಟಿನಲ್ಲಿ ಸಾರ್ವಜನಿಕ ಉಪಯುಕ್ತತೆ ಉದ್ಯಮಗಳ ವರ್ಗ ಅತಿ ಹೆಚ್ಚಿನ ನಷ್ಟ ಅನುಭವಿಸುತ್ತಿರುವ ವರ್ಗವಾಗಿದೆ.

ಕರ್ನಾಟಕ ರಾಜ್ಯ ಹಣಕಾಸು ನಿಗಮ ಮತ್ತು ಕೆ.ಎಸ್.ಐ.ಐ.ಡಿ.ಸಿ.ಗಳನ್ನೊಳಗೊಂಡ ಹಣಕಾಸು ಸಂಸ್ಥೆಗಳ ಗುಂಪು ಲಾಭ ಗಳಿಸುತ್ತಿದೆ. ಈ ಗುಂಪಿನ ಲಾಭ ೧೯೯೧-೯೨ರಲ್ಲಿ ೧೧೯೫.೮೭ ಲಕ್ಷ ರೂಪಾಯಿಗಳಿದ್ದದ್ದು ೧೯೯೨-೯೩ರಲ್ಲಿ ೧೫೨೪.೨೧ ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ಆದರೆ ೧೯೯೩-೯೪ರಲ್ಲಿ ೧೦೪೭.೦೯ ಲಕ್ಷ ರೂಪಾಯಿಗಳಿಗೆ ಇಳಿಯಿತು. ಸಾಲ ವಿತರಣೆ ಮತ್ತು ಸಾಲ ವಸೂಲಿ ಇವುಗಳ ವಿಷಯದಲ್ಲಿಯೂ ಈ ಸಂಸ್ಥೆಗಳ ಕೆಲಸ ತೃಪ್ತಿಕರವಾಗಿದೆ.

ವಾಣಿಜ್ಯೇತರ ಅಭಿವೃದ್ಧಿಶೀಲ ಉದ್ಯಮಗಳ ವರ್ಗ, ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಕರ್ನಾಟಕ ರಾಜ್ಯ ಪೋಲೀಸ್ ಗೃಹನಿರ್ಮಾಣ ನಿಗಮ ನಿಯಮಿತ ಮತ್ತು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ ಇವುಗಳನ್ನೊಳಗೊಂಡಿದೆ. ಇವುಗಳ ಪೈಕಿ, ಕರ್ನಾಟಕ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ ಮಾತ್ರ ೧೯೯೧-೯೨, ೧೯೯೨-೯೩ ಮತ್ತು ೧೯೯೩-೯೪ ಮೂರು ವರ್ಷಗಳಲ್ಲೂ ಲಾಭ ಗಳಿಸಿದೆ. ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ ೧೯೯೨-೯೩ರಲ್ಲಿ ಲಾಭ ಗಳಿಸಿದೆ. ಈ ಗುಂಪಿನ ಇನ್ನುಳಿದ ನಿಗಮಗಳೆಲ್ಲವೂ ನಷ್ಟ ಅನುಭವಿಸಿವೆ. ಈ ಗುಂಪನ್ನು ಒಟ್ಟಾರೆಯಾಗಿ ತೆಗೆದು ಕೊಂಡರೆ ೧೯೯೧-೯೨ರಲ್ಲಿ ೪೪.೭೫ ಲಕ್ಷ ರೂಪಾಯಿಗಳ ನಷ್ಟ, ೧೯೯೨-೯೩ರಲ್ಲಿ ೩೫ ಲಕ್ಷ ರೂಪಾಯಿಗಳ ಲಾಭ ಮತ್ತು ೧೯೯೩-೯೪ರಲ್ಲಿ ೪೩.೨೧ ಲಕ್ಷ ರೂಪಾಯಿಗಳ ನಷ್ಟ ಕಂಡುಬಂದಿದೆ.

ವಾಣಿಜ್ಯೇತರ ಅಭಿವೃದ್ಧಿಶೀಲ ಉದ್ಯಮಗಳಿಂದ ಲಾಭ ನಿರೀಕ್ಷಿಸಲಾಗದು. ಅವು ಲಾಭ ತರುವ ಚಟುವಟಿಕೆಗಳಲ್ಲಿ ತೊಡಗಿಲ್ಲದಿರುವುದೇ ಇವಕ್ಕೆ ಕಾರಣ. ಈ ನಿಗಮಗಳನ್ನು ಸ್ಥಾಪಿಸಿರುವುದು ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳು, ಅಲ್ಪ ಸಂಖ್ಯಾತರು ಮತ್ತು ಮಹಿಳೆಯರು ಇವರುಗಳಿಗೆ ಸ್ವಂತ ಉದ್ಯೋಗವಲ್ಲಿ ತೊಡಗಲು

ಸಹಾಯ ಮಾಡುವುದಕ್ಕಾಗಿ. ಇವು ಸಬ್ಸಿಡಿ ಮತ್ತು ಮಾರ್ಜಿನ್ ಹಣವನ್ನು ಒದಗಿಸುತ್ತವೆ ಮತ್ತು ಉಳಿದ ಹಣವನ್ನು ಬ್ಯಾಂಕುಗಳು ಸಾಲರೂಪದಲ್ಲಿ ಕೊಡಲು ವ್ಯವಸ್ಥೆ ಮಾಡುತ್ತವೆ. ಇವು ಮುಖ್ಯವಾಗಿ ಸಂಯೋಜನಾ ಕಾರ್ಯವನ್ನು ನಿರ್ವಹಿಸುತ್ತವೆ. ಮಾರ್ಜಿನ್ ಹಣದ ಮೇಲೆ ದೊರಕುವ ಬಡ್ಡಿಯೊಂದೇ ಈ ನಿಗಮಗಳು ಮಾಡುವ ಸಂಪಾದನೆ ಯಾದ್ದರಿಂದ ಇವುಗಳ ಲಾಭಗಳಿಕೆ ಸಾಮರ್ಥ್ಯ ಅತ್ಯಲ್ಪವೆಂದೇ ಹೇಳಬೇಕು. ಆದ್ದರಿಂದ ಇವು ನಷ್ಟ ಅನುಭವಿಸದಿದ್ದರೂ ಸಾಕು. ನಿರ್ದಿಷ್ಟ ಗುಂಪುಗಳಿಗೆ ನೆರವು ನೀಡಲು ಈ ರೀತಿಯ ನಿಗಮಗಳ ಸ್ಥಾಪನೆ ಅಗತ್ಯವೆ? ಈಗ ಇರುವ ಆಡಳಿತ ಯಂತ್ರವನ್ನೇ ಉಪಯೋಗಿಸಿಕೊಂಡು ನೆರವು ದೊರಕಿಸಲು ಸಾಧ್ಯವಿಲ್ಲವೆ? ಎಂಬುದು ಇಲ್ಲಿನ ಮುಖ್ಯ ಪ್ರಶ್ನೆಗಳಾಗುತ್ತವೆ. ಪ್ರತ್ಯೇಕ ನಿಗಮಗಳ ಸ್ಥಾಪನೆಯಿಂದ ಮೇಲಾಡಳಿತ ವೆಚ್ಚ ಹೆಚ್ಚಾಗಿ ಸರ್ಕಾರಕ್ಕೆ ಹೊರೆಯಾಗುತ್ತದೆ. ಅವುಗಳ ಅಸ್ತಿತ್ವ ಅಗತ್ಯವೆಂದಾದರೆ ಕಡೇಪಕ್ಷ ಅವು ನಷ್ಟವನ್ನನುಭವಿಸುವುದನ್ನಾದರೂ ತಪ್ಪಿಸಬೇಕಾಗುತ್ತದೆ. ಹಾಲಿ ಅವು ನಷ್ಟವನ್ನನುಭವಿಸುತ್ತಿರುವುದಷ್ಟೇ ಅಲ್ಲದೆ, ಫಲಾನುಭವಿಗಳ ಸಂಖ್ಯೆ ಮತ್ತು ನೆರವಿನ ಮೊತ್ತ ಇವುಗಳ ದೃಷ್ಟಿಯಿಂದಲೂ ಅವುಗಳ ಕಾರ್ಯನಿರ್ವಹಣೆ ಸಮರ್ಪಕವಾಗಿ ಕಂಡುಬರುವುದಿಲ್ಲ.

ಅಭಿವೃದ್ಧಿಶೀಲ ಉದ್ಯಮಗಳ (ವಾಣಿಜ್ಯ) ವರ್ಗದಲ್ಲಿ ೧೨ ಉದ್ಯಮಗಳು ಸೇರಿವೆ (ಅನುಬಂಧ ೨). ಇವುಗಳ ಪೈಕಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ೧೯೯೧-೯೨ ರಲ್ಲಿ ಮತ್ತು ೧೯೯೩-೯೪ರಲ್ಲಿ ಲಾಭಗಳಿಸಿದೆ. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ ೧೯೯೧-೯೨, ೧೯೯೨-೯೩ ಮತ್ತು ೧೯೯೩-೯೪ ಮೂರು ವರ್ಷಗಳಲ್ಲೂ ಲಾಭ ಸಂಪಾದಿಸಿದೆ. ಕರ್ನಾಟಕ ಗೋಡಂಬಿ ಅಭಿವೃದ್ಧಿ ನಿಗಮ ನಿಯಮಿತ ೧೯೯೧-೯೨ರಲ್ಲಿ ಮತ್ತು ೧೯೯೩-೯೪ರಲ್ಲಿ ಲಾಭಗಳಿಸಿದೆ ಮತ್ತು ಕರ್ನಾಟಕ ಒಳನಾಡು ಮೀನುಗಾರಿಕೆ ಅಭಿವೃದ್ಧಿ ನಿಗಮ ನಿಯಮಿತ ೧೯೯೨-೯೩ ಮತ್ತು ೧೯೯೩-೯೪ರಲ್ಲಿ ಲಾಭ ಗಳಿಸಿದೆ. ಇನ್ನುಳಿದವುಗಳು ಎಲ್ಲಾ ಮೂರು ವರ್ಷಗಳಲ್ಲೂ ನಷ್ಟ ಅನುಭವಿಸಿದೆ. ಈ ವರ್ಗ ಒಟ್ಟಾರೆಯಾಗಿ ೧೯೯೧-೯೨ರಲ್ಲಿ ೮೩೧.೭೩ ಲಕ್ಷ ರೂಪಾಯಿಗಳ, ೧೯೯೨-೯೩ರಲ್ಲಿ ೪೯.೧೭ ಲಕ್ಷ ರೂಪಾಯಿಗಳ ಮತ್ತು ೧೯೯೩-೯೪ರಲ್ಲಿ ೧೯೬.೦೬ ಲಕ್ಷ ರೂಪಾಯಿಗಳ ನಷ್ಟ ಅನುಭವಿಸಿದೆ. ಈ ಉದ್ಯಮಗಳು ಅಭಿವೃದ್ಧಿಶೀಲ ಉದ್ಯಮಗಳಾದರೂ, ಅವು ವಾಣಿಜ್ಯ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ಅವುಗಳ ನಷ್ಟವನ್ನು ಸಮರ್ಥಿಸಲಾಗುವುದಿಲ್ಲ. ಈ ಗುಂಪಿನಲ್ಲಿ ಸೇರಿರುವ ಕರ್ನಾಟಕ ಕಾಂಪೋಸ್ಟ್ ಗೊಬ್ಬರ ಅಭಿವೃದ್ಧಿ ನಿಗಮ ನಿಯಮಿತ ಸಾಕಷ್ಟು ಮುನ್ನೆಚ್ಚರಿಕೆ ವಹಿಸಿದೆ ಸ್ಥಾಪಿಸಲ್ಪಟ್ಟಿರುವ ಉದ್ಯಮಗಳಿಗೆ ಒಂದು ಒಳ್ಳೆಯ ಉದಾಹರಣೆಯಾಗಿದೆ. ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ಯಮಗಳ

ಮಹೋದ್ಯಮ ತಯಾರಿಸಿದ ಒಂದು ವರದಿಯಲ್ಲಿ ಹೇಳಿರುವಂತೆ ಸ್ಥಾಪಿತ ಸಾಮರ್ಥ್ಯದ ಪೂರ್ಣ ಬಳಕೆಯಾಗದಿರುವುದು ಈ ನಿಗಮದ ನಷ್ಟಕ್ಕೆ ಒಂದು ಕಾರಣವಾಗಿದೆ. (ಇಸ್ಟಾರ್ ಟಿ.ಪಿ. ೧೯೮೪). ಬೆಂಗಳೂರು ನಗರದ ಕಸದಿಂದ ಕಾಂಪೋಸ್ಟ್ ಗೊಬ್ಬರವನ್ನು ತಯಾರಿಸುವುದು ಮತ್ತು ಅದನ್ನು ಮಾರಾಟ ಮಾಡುವುದು ಇವರ ಕೆಲಸ. ಬೆಂಗಳೂರು ನಗರಪಾಲಿಕೆ ಒಂದು ದಿನಕ್ಕೆ ೨೦೦ ಮೆಟ್ರಿಕ್ ಟನ್ ಕಸ ಒದಗಿಸಲು ಒಪ್ಪಿದ್ದು ವಾಸ್ತವವಾಗಿ ೫೦ ಮೆಟ್ರಿಕ್ ಟನ್ ಮಾತ್ರ ಒದಗಿಸುತ್ತಿರುವುದರಿಂದ ಸ್ಥಾಪಿತ ಸಾಮರ್ಥ್ಯದ ಪೂರ್ಣ ಬಳಕೆಯಾಗದೆ ಉದ್ಯಮ ನಷ್ಟ ಅನುಭವಿಸುತ್ತಿರುವುದಾಗಿ ಮೇಲಿನ ವರದಿ ತಿಳಿಸಿದೆ. ನಗರ ಪಾಲಿಕೆಯೇ ಕಸದಿಂದ ಗೊಬ್ಬರ ತಯಾರಿಸುವ ಘಟಕವನ್ನು ಸ್ಥಾಪಿಸಬಹುದಾಗಿತ್ತು; ಇದಕ್ಕೆ ಪ್ರತ್ಯೇಕವಾಗಿ ಸಾರ್ವಜನಿಕ ಉದ್ಯಮ ಬೇಕಾಗಿತ್ತೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹತ್ತು ವರ್ಷಗಳಿಂದ ಆರ್ಥಿಕ ಮುಗ್ಗಟ್ಟಿನಿಂದಾಗಿ ಮುಖ್ಯ ಕಾಂಪೋಸ್ಟ್ ಯಂತ್ರವು ರಿಪೇರಿಯಾಗದಿರುವುದು ಈ ಸ್ಥಾವರವು ಪೂರ್ಣ ಪ್ರಮಾಣದಲ್ಲಿ ಕಾರ್ಯನಿರ್ವಹಿಸದಿರುವುದಕ್ಕೆ ಕಾರಣವೆಂದು ಈಗ ಹೇಳಲಾಗುತ್ತಿದೆ. (ಕೆ.ಎಸ್.ಬಿ.ಪಿ.ಇ. ೧೯೯೫)

ಸೇವಾ ಉದ್ಯಮಗಳ ವರ್ಗದಲ್ಲಿ ೧೩ ಉದ್ಯಮಗಳಿವೆ (ಅನುಬಂಧ ೨). ಇವುಗಳ ಪೈಕಿ ೬ ಉದ್ಯಮಗಳು ಲಾಭ ಗಳಿಸುತ್ತಿವೆ ಮತ್ತು ಉಳಿದವು ನಷ್ಟ ಅನುಭವಿಸುತ್ತಿವೆ. ಈ ವರ್ಗ ಒಟ್ಟಾರೆಯಾಗಿ ೧೯೯೧-೯೨ರಲ್ಲಿ ೪೨.೦೨ ಲಕ್ಷ ರೂಪಾಯಿ ನಷ್ಟ ಅನುಭವಿಸಿದೆ ಮತ್ತು ೧೯೯೨-೯೩ರಲ್ಲಿ ೩೮೫.೭೬ ಲಕ್ಷ ರೂಪಾಯಿ ಮತ್ತು ೧೯೯೩-೯೪ರಲ್ಲಿ ೪೪೭.೭೫ ಲಕ್ಷ ರೂಪಾಯಿ ಲಾಭ ಗಳಿಸಿದೆ. ಈ ವರ್ಗಕ್ಕೆ ಸೇರಿದ ಕರ್ನಾಟಕ ರಾಜ್ಯ ನಿರ್ಮಾಣ ನಿಗಮ ನಿಯಮಿತ ಅಲ್ಪ ಪ್ರಮಾಣದ ಲಾಭ ಸಂಪಾದಿಸುತ್ತಿದೆಯಾದರೂ, ಅದರ ಮೂಲ ಉದ್ದೇಶ ಸಫಲವಾಗಿಲ್ಲದಿರುವುದು ಒಂದು ಕೊರತೆ. ನಿರ್ಮಾಣ ವೆಚ್ಚದಲ್ಲಿ ಸರ್ಕಾರಕ್ಕೆ ಮಿತವ್ಯಯವನ್ನು ಸಾಧಿಸಲು, ಖಾಸಗಿ ಗುತ್ತಿಗೆದಾರರಿಗೆ ಬದಲಾಗಿ ಈ ಉದ್ಯಮ ನಿರ್ಮಾಣಕಾರ್ಯಗಳನ್ನು ನಿರ್ವಹಿಸಲು ಅವಕಾಶ ಮಾಡುವ ಸಲುವಾಗಿ ಇದನ್ನು ಸ್ಥಾಪಿಸಲಾಯಿತು. ಆದರೆ ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ಯಮಗಳ ಮಹೋದ್ಯಮದ ಒಂದು ವರದಿಯಂತೆ, ಈ ಉದ್ಯಮದ ಮಧ್ಯ ಪ್ರವೇಶದಿಂದ ಸರ್ಕಾರ ಟೆಂಡರಿಗಿಟ್ಟ ಕೆಲಸಗಳಿಗೆ ಸ್ಪರ್ಧಾತ್ಮಕ ಕೊಟೇಷನ್‌ಗಳು ಬಂದ ಒಂದೇ ಒಂದು ನಿದರ್ಶನವೂ ಇಲ್ಲ (ಇಸ್ಟಾರ್, ಟಿ.ಪಿ. ೧೯೮೪). ಈ ಗುಂಪಿಗೆ ಸೇರಿದ ಮತ್ತೊಂದು ಉದ್ಯಮವಾದ ಕರ್ನಾಟಕ ಭೂಸೇನಾ ನಿಗಮ ನಿಯಮಿತ ಸಹ ನಿರ್ಮಾಣ ಕಾರ್ಯದಲ್ಲೇ ತೊಡಗಿದೆ. ಗುತ್ತಿಗೆದಾರರನ್ನು ಹೊರತುಪಡಿಸಿ ಗ್ರಾಮೀಣ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವುದು ಮತ್ತು ತನ್ಮೂಲಕ ಗ್ರಾಮೀಣ ಕಾರ್ಮಿಕರಿಗೆ ನೇರ ಉದ್ಯೋಗ ಒದಗಿಸುವುದು ಇವರ ಉದ್ದೇಶ. ಈ ಉದ್ದೇಶ

ಬಹಳ ಮಟ್ಟಿಗೆ ಸಫಲವಾಗಿದೆ ಎಂಬ ಅಭಿಪ್ರಾಯವಿದೆ (ಇಸ್ಲಾರ್, ಟಿ.ಪಿ. ೧೯೮೪). ಆದರೆ ಇದರ ಹಣಕಾಸು ಫಲಿತಾಂಶ ಮಾತ್ರ ಆತಂಕಕಾರಿಯಾಗಿದೆ. ೧೯೯೧-೯೨ರಲ್ಲಿ ೮೫.೯೪ ಲಕ್ಷ ರೂಪಾಯಿ, ೧೯೯೨-೯೩ರಲ್ಲಿ ೯೭.೯೭ ಲಕ್ಷ ರೂಪಾಯಿ ಮತ್ತು ೧೯೯೩-೯೪ರಲ್ಲಿ ೬೨.೬೯ ರೂಪಾಯಿ ನಷ್ಟ ಉಂಟಾಗಿದೆ. ಆಡಳಿತ ನಿರ್ವಹಣೆ ವೆಚ್ಚ ಭರಿಸಲು ಸಾಕಾಗುವಷ್ಟು ಕಾಮಗಾರಿಗಳು ದೊರಕದೇ ಇರುವುದು ಇದಕ್ಕೆ ಒಂದು ಮುಖ್ಯ ಕಾರಣವೆಂದು ಹೇಳಲಾಗಿದೆ. (ಕೆ.ಎಸ್.ಬಿ.ಪಿ.ಇ, ೧೯೯೫). ಕರ್ನಾಟಕ ರಾಜ್ಯ ನಿರ್ಮಾಣ ನಿಗಮ ನಿಯಮಿತ ಮತ್ತು ಕರ್ನಾಟಕ ಭೂಸೇನಾ ನಿಗಮ ನಿಯಮಿತ ಎರಡೂ ಹೆಚ್ಚು ಕಡಿಮೆ ಒಂದೇ ತೆರನಾದ ಕೆಲಸದಲ್ಲಿ ತೊಡಗಿರುವುದರಿಂದ ಇವೆರಡನ್ನೂ ಒಟ್ಟುಗೂಡಿಸಿ ಮೇಲಾಡಳಿತ ವೆಚ್ಚವನ್ನು ಕಡಿಮೆ ಮಾಡಿಕೊಳ್ಳಬಹುದೆಂಬ ಸಲಹೆ ಇದ್ದರೂ ಈ ದಿಕ್ಕಿನಲ್ಲಿ ಯಾವ ಪ್ರಯತ್ನವೂ ನಡೆದಿಲ್ಲ.

ತಯಾರಿಕಾ ಉದ್ಯಮಗಳ ವರ್ಗ ಒಟ್ಟು ೨೯ ಉದ್ಯಮಗಳನ್ನು ಒಳಗೊಂಡಿದೆ (ಅನುಬಂಧ ೨). ಈ ಬಗೆಯ ಉದ್ಯಮಗಳಿಂದ ಸಾಕಷ್ಟು ಲಾಭ ನಿರೀಕ್ಷಿಸುವುದು ಸಹಜ. ಇವುಗಳ ಪೈಕಿ ೧೯೯೧-೯೨ರಲ್ಲಿ ೧೩ ಉದ್ಯಮಗಳು ಹಾಗೂ ೧೯೯೨-೯೩ ಮತ್ತು ೧೯೯೩-೯೪ ಎರಡು ವರ್ಷಗಳಲ್ಲೂ ೧೬ ಉದ್ಯಮಗಳು ನಷ್ಟ ಅನುಭವಿಸಿದವು. ಈ ವರ್ಗದ ನಷ್ಟ ೧೯೯೧-೯೨ರಲ್ಲಿ ೪೬.೯೭ ಲಕ್ಷ ರೂಪಾಯಿಗಳಿದ್ದದ್ದು ೧೯೯೨-೯೩ರಲ್ಲಿ ೩೨೯೭.೨೧ ಲಕ್ಷ ರೂಪಾಯಿಗಳಿಗೆ ಹೆಚ್ಚಿತು ಮತ್ತು ೧೯೯೩-೯೪ರಲ್ಲಿ ೧೫೫೭.೨೫ ಲಕ್ಷ ರೂಪಾಯಿಗಳಿಗೆ ಇಳಿಯಿತು.

ಮಾರುಕಟ್ಟೆ ಮತ್ತು ಜಾಹೀರಾತು ಉದ್ಯಮಗಳ ವರ್ಗದಲ್ಲಿ ೬ ಉದ್ಯಮಗಳಿವೆ (ಅನುಬಂಧ ೨). ಇವುಗಳಲ್ಲಿ ಬಹುತೇಕ ಉದ್ಯಮಗಳು ಲಾಭ ಗಳಿಸುತ್ತಿವೆ. ೧೯೯೨-೯೩ ಮತ್ತು ೧೯೯೩-೯೪ ಎರಡು ವರ್ಷಗಳಲ್ಲೂ ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ ಮತ್ತು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗಳು ನಷ್ಟ ಅನುಭವಿಸಿವೆ. ಈ ವರ್ಗ ಒಟ್ಟಾರೆಯಾಗಿ ೧೯೯೧-೯೨ರಲ್ಲಿ ೧೪೮.೦೫ ಲಕ್ಷ ರೂಪಾಯಿ ಲಾಭ ಗಳಿಸಿತು, ೧೯೯೨-೯೩ರಲ್ಲಿ ೨೯೫.೪೫ ಲಕ್ಷ ರೂಪಾಯಿ ನಷ್ಟ ಅನುಭವಿಸಿತು ಮತ್ತು ೧೯೯೩-೯೪ರಲ್ಲಿ ೧೪೪.೬೫ ಲಕ್ಷ ರೂಪಾಯಿ ಲಾಭಗಳಿಸಿತು.

ಎಲ್ಲಾ ೭ ವರ್ಗಗಳ ಉದ್ಯಮಗಳು ಸೇರಿ ೧೯೮೭-೮೮, ೧೯೯೩-೯೪ರ ಅವಧಿಯಲ್ಲಿ ಪಡೆದ ಲಾಭ: ನಷ್ಟವನ್ನು ಕೋಷ್ಟಕ ೨ ರಲ್ಲಿ ಕೊಡಲಾಗಿದೆ.

ಕೋಷ್ಟಕ ೨

ಕರ್ನಾಟಕದ ಸಾರ್ವಜನಿಕ ಉದ್ಯಮಗಳ ಒಟ್ಟು ಲಾಭ : ನಷ್ಟ

| ವರ್ಷ | ಒಟ್ಟು ಲಾಭ (+): ನಷ್ಟ (-) (ಕೋಟಿ ರೂ.ಗಳಲ್ಲಿ) |
|---|---|
| ೧೯೮೭-೮೮ | (-) ೧೩೪.೨೫ |
| ೧೯೮೮-೮೯ | (-) ೧೫೩.೨೧ |
| ೧೯೮೯-೯೦ | (+) ೧೦೭.೬೨ |
| ೧೯೯೦-೯೧ | (+) ೭೪.೭೭ |
| ೧೯೯೧-೯೨ | (+)೧೧೦.೬೩ |
| ೧೯೯೨-೯೩ | (-) ೬೫.೭೧ |
| ೧೯೯೩-೯೪ | (-) ೩೨.೭೭ |

ಆಧಾರ: ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ಯಮಗಳ ಮಹೋದ್ಯಮ, ಸಾರ್ವಜನಿಕ ಉದ್ಯಮಗಳ ಸಮೀಕ್ಷೆ ೧೯೯೩-೯೪, ಪು. ೫

೧೯೮೭-೮೮ ಮತ್ತು ೧೯೮೮-೮೯ರಲ್ಲಿ ಅಪಾರ ನಷ್ಟ ಅನುಭವಿಸಿದ ಕರ್ನಾಟಕ ಸಾರ್ವಜನಿಕ ಉದ್ಯಮಗಳು ಮುಂದಿನ ಮೂರು ವರ್ಷಗಳಲ್ಲಿ ಸತತವಾಗಿ ಲಾಭ ಗಳಿಸಿದವು. ಆದರೆ ಮತ್ತೆ ನಷ್ಟಕ್ಕೊಳಗಾಗುವುದು ಪ್ರಾರಂಭವಾಗಿ ೧೯೯೨-೯೩ ಮತ್ತು ೧೯೯೩- ೯೪ರಲ್ಲಿ ನಷ್ಟ ಅನುಭವಿಸಿದವು. ೧೯೯೩-೯೪ರ ನಷ್ಟ ಅದರ ಹಿಂದಿನ ವರ್ಷದ ನಷ್ಟದ ಅರ್ಧದಷ್ಟಿತ್ತೆಂಬುದು ಸ್ವಲ್ಪ ಸಮಾಧಾನ ತರುವ ಅಂಶವಾಗಿದೆ.

**ಸಂಚಿತ ನಷ್ಟ**

ವರ್ಷದಿಂದ ವರ್ಷಕ್ಕೆ ಆಗುತ್ತಿರುವ ನಷ್ಟದ ಒಟ್ಟಾರೆ ಪರಿಣಾಮವನ್ನು ಅರಿಯಬೇಕಾದರೆ ಸಂಚಿತ ನಷ್ಟದ ಮೊತ್ತವೇನೆಂಬುದನ್ನು ತಿಳಿಯಬೇಕು. ಕೋಷ್ಟಕ ೩ರಲ್ಲಿ ಇದರ ವಿವರವನ್ನು ನೋಡಬಹುದು.

### ಕೋಷ್ಟಕ - ೩
### ಸಂಚಿತ ನಷ್ಟ

(ರೂ. ಕೋಟಿಗಳಲ್ಲಿ)

| | ವರ್ಗ | ಸಂಚಿತ ನಷ್ಟ ೩೧.೩.೯೪ರಲ್ಲಿ ಇದ್ದಂತೆ |
|---|---|---|
| ೧. | ಸಾರ್ವಜನಿಕ ಉಪಯುಕ್ತತೆ ಉದ್ಯಮಗಳು | ೫೨೫.೫೫ |
| ೨. | ಹಣಕಾಸು ಸಂಸ್ಥೆಗಳು | |
| ೩. | ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯೇತರ) | ೪.೯೦ |
| ೪. | ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯ) | ೬೨.೭೦ |
| ೫. | ಸೇವಾ ಉದ್ಯಮಗಳು | ೧೩.೧೩ |
| ೬. | ತಯಾರಿಕಾ ಉದ್ಯಮಗಳು | ೨೪೧.೪೯ |
| ೭. | ಮಾರುಕಟ್ಟೆ ಮತ್ತು ಜಾಹಿರಾತು ಉದ್ಯಮಗಳು | ೫.೦೨ |
| | ಒಟ್ಟು | ೮೫೨.೭೯ |

೧೯೯೪ರ ಮಾರ್ಚ್ ಅಂತ್ಯದಲ್ಲಿದ್ದಂತೆ ಎಲ್ಲಾ ಏಳು ವರ್ಗಗಳ ಉದ್ಯಮಗಳ ಒಟ್ಟು ಸಂಚಿತ ನಷ್ಟ ೮೫೨.೭೯ ಕೋಟಿ ರೂಪಾಯಿಗಳು. ಇದರಲ್ಲಿ ಸಾರ್ವಜನಿಕ ಉಪಯುಕ್ತತೆ ಉದ್ಯಮಗಳ ಪಾಲು ಶೇಕಡ ೬೧.೬೩ ಸಾರ್ವಜನಿಕ ಉಪಯುಕ್ತತೆ ಉದ್ಯಮಗಳ ಪೈಕಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯದೇ ಸಿಂಹಪಾಲು (ಶೇಕಡ ೪೩.೧೦) ಒಟ್ಟು ೨೨ ಉದ್ಯಮಗಳ ಸಂಚಿತ ನಷ್ಟ, ಷೇರು ಬಂಡವಾಳ, ಮೀಸಲು ಹಣ ಮತ್ತು ಮಿಗುತಾಯಗಳಿಗಿಂತ ಅಧಿಕವಾಗಿದ್ದಿತು. ಹೆಚ್ಚು ಗಮನ ಸೆಳೆಯುವ ಕೆಲವು ಉದಾಹರಣೆಗಳೆಂದರೆ, ಕರ್ನಾಟಕ ಭೂಸೇನಾ ನಿಗಮ ಮತ್ತು ಮೈಸೂರು ಕ್ರೋಮ್ ಟ್ಯಾನಿಂಗ್ ಕಂಪನಿ. ಮೊದಲನೆಯದರಲ್ಲಿ ಸಂಚಿತ ನಷ್ಟ ಷೇರು ಬಂಡವಾಳ, ಮೀಸಲು ಹಣ ಮತ್ತು ಮಿಗುತಾಯಗಳಿಗಿಂತ ೨೪ ಪಟ್ಟು ಹೆಚ್ಚಾಗಿದ್ದರೆ ಎರಡನೆಯದರಲ್ಲಿ ೧೦ ಪಟ್ಟು ಹೆಚ್ಚಾಗಿತ್ತು. ಈ ರೀತಿಯ ನಷ್ಟ ರಾಜ್ಯದ ಹಣಕಾಸು ಪರಿಸ್ಥಿತಿಯ ಮೇಲೆ ಬೀರುವ ಪರಿಣಾಮ ಯಾರ ಊಹೆಗಾದರೂ ನಿಲುಕುವಂತಹದಾಗಿದೆ.

## ತೃಪ್ತಿಕರವಲ್ಲದ ಫಲಿತಾಂಶಕ್ಕೆ ಕಾರಣಗಳು

ಕರ್ನಾಟಕದ ಸಾರ್ವಜನಿಕ ಉದ್ಯಮಗಳ ಹಣಕಾಸು ಫಲಿತಾಂಶ ತೃಪ್ತಿಕರವಾಗಿಲ್ಲದಿರುವುದು ಮೇಲಿನ ವಿವರಣೆಯಿಂದ ಸ್ಪಷ್ಟಗೊಂಡಿದೆ. ಪ್ರತಿಯೊಂದು ಉದ್ಯಮವೂ ಬೇರೆ ಬೇರೆ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿರುವಾಗ ಅವೆಲ್ಲವನ್ನೂ ವಿಶ್ಲೇಷಿಸುವುದು ಇಲ್ಲಿ ಸಾಧ್ಯವಿಲ್ಲ. ಆದ್ದರಿಂದ ಸಾರ್ವಜನಿಕ ಉದ್ಯಮಗಳು ಒಟ್ಟಾರೆ ವಿಫಲಗೊಂಡಿರುವುದಕ್ಕೆ ಕಾರಣವಾಗಿರುವ ಕೆಲವು

ಅಂಶಗಳನ್ನು ಮಾತ್ರ ಪರಿಗಣಿಸಬಹುದು. ಮೊದಲನೆಯದಾಗಿ, ಸಂಖ್ಯಾಬಾಹುಳ್ಯದಿಂದ ಮತ್ತು ಅಗತ್ಯಕ್ಕಿಂತ ಹೆಚ್ಚು ಉದ್ಯೋಗಿಗಳನ್ನು ನೇಮಕ ಮಾಡಿಕೊಂಡಿರುವುದರಿಂದ ಮತ್ತು ಪ್ರತಿಯೊಂದು ಉದ್ಯಮವೂ, ಅದರ ಕಾರ್ಯಚಟುವಟಿಕೆ ಏನೇ ಇದ್ದರೂ, ಒಬ್ಬ ಅಧ್ಯಕ್ಷ, ಒಬ್ಬ ಮ್ಯಾನೇಜಿಂಗ್ ಡೈರೆಕ್ಟರ್ ಮತ್ತು ಇತರೆ ನಿರ್ದಿಷ್ಟ ಸಿಬ್ಬಂದಿ ವರ್ಗವಿರಬೇಕೆಂಬ ವ್ಯವಸ್ಥೆ ಇರುವುದರಿಂದ ಮೇಲಾಡಳಿತ ವೆಚ್ಚ ಅಧಿಕವಾಗಿ ಲಾಭಗಳಿಕೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗಿದೆ. (ತಿಮ್ಮಯ್ಯ ಜಿ. ೧೯೮೯). ಎರಡನೆಯದಾಗಿ, ಸಾರ್ವಜನಿಕ ಉದ್ಯಮಗಳ ಸರಕು ಮತ್ತು ಸೇವೆಗಳಿಗೆ ಬೆಲೆ ನಿರ್ಧರಿಸುವಾಗ ಕೇವಲ ವಾಣಿಜ್ಯ ನಿಯಮಗಳನ್ನು ಅನುಸರಿಸುತ್ತಿಲ್ಲ. ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಸಬ್ಸಿಡಿ ಅಂಶ ಬೆಲೆಯಲ್ಲಿ ಸೇರಿಕೊಳ್ಳುವಂತೆ ಮಾಡಲಾಗಿರುತ್ತದೆ. ವಿದ್ಯುಚ್ಛಕ್ತಿ ದರದಲ್ಲಿ ವ್ಯವಸಾಯದ ಉದ್ದೇಶಕ್ಕೆ ರಿಯಾಯಿತಿ ಕೊಡುವುದು, ರಸ್ತೆ ಸಾರಿಗೆ ಸಂಸ್ಥೆ ಸಾರಿಗೆ ದರದಲ್ಲಿ ಕೆಲವು ವರ್ಗಗಳಿಗೆ ರಿಯಾಯಿತಿ ಕೊಡುವುದು ಮುಂತಾದವನ್ನು ಉದಾಹರಣೆಗಳಾಗಿ ಕೊಡಬಹುದು. ಮೂರನೆಯದಾಗಿ, ಸಾರ್ವಜನಿಕ ಉದ್ಯಮಗಳನ್ನು ನಿರ್ವಹಿಸುವುದಕ್ಕಾಗಿ ಉನ್ನತ ಹುದ್ದೆಗಳಿಗೆ ಸಾಮಾನ್ಯವಾಗಿ ನಿರ್ವಹಣಾ ತಜ್ಞರಿಗೆ ಬದಲು ಭಾರತ ಆಡಳಿತ ಸೇವೆ ಅಧಿಕಾರಿಗಳನ್ನು ನೇಮಿಸುವುದರಿಂದ ಕಾರ್ಯನಿರ್ವಹಣೆ ಸರಿಯಾಗಿ ಆಗುತ್ತಿಲ್ಲವೆಂಬ ಅಭಿಪ್ರಾಯವನ್ನು ಕೆಲವರು ವ್ಯಕ್ತಪಡಿಸುವುದುಂಟು. ಇವಕ್ಕೆ ಸಾಕಷ್ಟು ಪುರಾವೆ ಇದ್ದ ಹಾಗಿಲ್ಲ. ಆದರೆ ಅವರ ಕಾರ್ಯಾವಧಿ ಬಹಳ ಕಡಿಮೆಯಿದ್ದು ಒಳ್ಳೆಯ ಫಲಿತಾಂಶ ಕೊಡಲು ಸಾಧ್ಯವಾಗುತ್ತಿಲ್ಲವೆಂಬುದರಲ್ಲಿ ಸತ್ಯಾಂಶವಿದೆ. ನಾಲ್ಕನೆಯದಾಗಿ, ಒಂದು ಉದ್ಯಮದ ದೈನಂದಿನ ಚಟುವಟಿಕೆಗಳಲ್ಲಿ ಸರ್ಕಾರದ ಹಸ್ತಕ್ಷೇಪ ಮತ್ತು ಅಧಿಕಾರಿಗಳಿಗೆ ಅಗತ್ಯವಿರುವಷ್ಟು ಸ್ವಾತಂತ್ರ್ಯವಿಲ್ಲದಿರುವುದು ಕಾರ್ಯನಿರ್ವಹಣೆ ಸರಿಯಾಗಿ ಆಗಲು ಅಡ್ಡಿಯನ್ನುಂಟುಮಾಡುತ್ತಿದೆ. ಕಡೆಯದಾಗಿ, ಫಲಿತಾಂಶದ ಬಗ್ಗೆ ಹೊಣೆಗಾರಿಕೆ ಯಾರ ಮೇಲೆಯೂ ಬೀಳದಿರುವುದೂ ಸಹ ಅದಕ್ಷತೆ ಹೆಚ್ಚಲು ಕಾರಣವಾಗಿದೆ. ಸ್ವಾತಂತ್ರ್ಯ ಮತ್ತು ಹೊಣೆಗಾರಿಕೆ ಎರಡನ್ನೂ ಸರಿಯಾದ ರೀತಿಯಲ್ಲಿ ಅಳವಡಿಸಿಕೊಳ್ಳದೆ ಒಳ್ಳೆಯ ಫಲಿತಾಂಶ ನಿರೀಕ್ಷೆ ಮಾಡಲಾಗುವುದಿಲ್ಲ.

### ಭವಿಷ್ಯ ಸ್ಥಿತಿ

ಸಾರ್ವಜನಿಕ ಉದ್ಯಮಗಳು ಒಂದೇ ಸಮನೆ ನಷ್ಟಕ್ಕೊಳಗಾಗುತ್ತಿರುವುದರಿಂದ ಅವು ಸರ್ಕಾರಕ್ಕೆ ಹೊರೆಯಾಗಿರುವುದು ಮೇಲಿನ ವಿಶ್ಲೇಷಣೆಯಿಂದ ಸ್ಪಷ್ಟಗೊಂಡಿದೆ. ಸರ್ಕಾರದ ಹಣಕಾಸಿನ ಮೇಲೆ ಆಗುತ್ತಿರುವ ಪ್ರತಿಕೂಲ ಪರಿಣಾಮವನ್ನು ತಪ್ಪಿಸುವ ದೃಷ್ಟಿಯಿಂದ ಸಾರ್ವಜನಿಕ ಉದ್ಯಮಗಳ ಸುಧಾರಣೆ ಅಗತ್ಯವಾಗಿ ಆಗಬೇಕಾಗಿದೆ. ರಾಜ್ಯಮಟ್ಟದಲ್ಲಿ ಆಗಬೇಕಾದ ಆರ್ಥಿಕ ಸುಧಾರಣೆಗಳ ಪೈಕಿ ಸಾರ್ವಜನಿಕ ಉದ್ಯಮಗಳ ಸುಧಾರಣೆ ಬಹುಮುಖ್ಯವಾದುದು. ಸರ್ಕಾರ ಇದನ್ನು ಒಪ್ಪಿದೆ.

ಸಾರ್ವಜನಿಕ ಉದ್ಯಮಗಳ ೧೯೯೩-೯೪ರ ಸಮೀಕ್ಷೆ ಹೇಳುವಂತೆ, "ಕೆಲವು ಸಾರ್ವಜನಿಕ ಉದ್ದಿಮೆಗಳ ಆರ್ಥಿಕ ಸಾಮರ್ಥ್ಯದ ಬಗ್ಗೆ ಮತ್ತು ಸರ್ಕಾರದ ಬಂಡವಾಳ ಹೂಡಿಕೆಗೆ ಪ್ರತಿಯಾಗಿ ಸಿಗುತ್ತಿರುವ ಪ್ರತಿಫಲದ ಬಗ್ಗೆಯೂ ಸರ್ಕಾರವು ತೀವ್ರತರವಾಗಿ ಕಳಕಳಿಯನ್ನು ಹೊಂದಿದೆ. ಸತತವಾಗಿ ನಷ್ಟ ಅನುಭವಿಸುತ್ತಿರುವ ರಾಜ್ಯ ಸರ್ಕಾರಿ ವಲಯದ ಉದ್ಯಮಗಳ ಬಗ್ಗೆ, ಇನ್ನೊಂದು ಉದ್ಯಮದೊಂದಿಗೆ ವಿಲೀನಗೊಳಿಸುವುದು ಅಥವಾ ಮುಚ್ಚುವುದು ಅಥವಾ ಖಾಸಗೀಕರಣ ಗೊಳಿಸುವುದು ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ" (ಕೆ.ಎಸ್.ಬಿ.ಪಿ.ಇ. ೧೯೯೫). ಆರ್ಥಿಕ ಸುಧಾರಣೆ ಪ್ರಾರಂಭವಾಗಿ ನಾಲ್ಕು ವರ್ಷಗಳು ಕಳೆದಿದ್ದರೂ ಸಾರ್ವಜನಿಕ ಉದ್ಯಮಗಳನ್ನು ಸುಧಾರಿಸುವುದು ಇನ್ನೂ ಪರಿಶೀಲನೆಯಲ್ಲೇ ಇರುವುದು ವಿಷಾದನೀಯ. ಸಂಕಲ್ಪದ ಕೊರತೆಯಿಂದಾಗಿ ಇದುವರೆಗೆ ದಿಟ್ಟ ಕ್ರಮ ಯಾವುದನ್ನೂ ತೆಗೆದುಕೊಂಡಿಲ್ಲ.

ಆದ್ಯಂತವಾದ ಅಧ್ಯಯನದ ನಂತರ ಯಾವ ಉದ್ಯಮಗಳನ್ನು ಸಾರ್ವತ್ರಿಕ ವಲಯದಲ್ಲೇ ಉಳಿಸಿಕೊಂಡು ಬೆಳೆಸಬೇಕು, ಯಾವ ಉದ್ಯಮಗಳನ್ನು ಇತರ ಉದ್ಯಮಗಳೊಂದಿಗೆ ವಿಲೀನ ಗೊಳಿಸಬೇಕು ಮತ್ತು ಯಾವ ಉದ್ಯಮಗಳನ್ನು ಮುಚ್ಚಬೇಕು ಅಥವಾ ಖಾಸಗೀಕರಣಗೊಳಿಸಬೇಕು ಎಂಬುದರ ಬಗ್ಗೆ ಶೀಘ್ರವಾಗಿ ನಿರ್ಧಾರ ಕೈಗೊಳ್ಳಬೇಕು. ಲಾಭದಾಯಕವಾಗಿ ಕೆಲಸ ಮಾಡುತ್ತಿರುವ ಮತ್ತು ಸಾರ್ವಜನಿಕ ವಲಯದ ಉದ್ದೇಶಕ್ಕೆ ನಿಜವಾಗಿಯೂ ಅನುಗುಣವಾಗಿರುವ ಉದ್ಯಮಗಳನ್ನು ಹಾಗೆಯೇ ಉಳಿಸಿಕೊಂಡು ಅವುಗಳ ದಕ್ಷತೆಯನ್ನು ಹೆಚ್ಚಿಸಲು ಪ್ರಯತ್ನಿಸಬೇಕು. ಅಸಮರ್ಪಕ ಫಲಿತಾಂಶಕ್ಕೆ ಕಾರಣವಾಗಿರುವ ಕೊರತೆಗಳ ಬಗ್ಗೆ ಈಗಾಗಲೇ ತಿಳುವಳಿಕೆ ಇರುವುದರಿಂದ, ಆ ಕೊರತೆಗಳನ್ನು ನೀಗಿಸಿ ಉತ್ತಮ ಫಲಿತಾಂಶ ಪಡೆಯಲು ತೀವ್ರ ಪ್ರಯತ್ನ ನಡೆಯಬೇಕು.

ಹೆಚ್ಚು ಕಡಿಮೆ ಒಂದೇ ತೆರನಾದ ಕಾರ್ಯಚಟುವಟಿಕೆಗಳಲ್ಲಿ ತೊಡಗಿರುವ ಮತ್ತು ಈ ಕಾರಣದಿಂದಾಗಿ ಒಂದು ಉದ್ಯಮ ಮತ್ತೊಂದರ ಪ್ರತಿರೂಪ ಆಗಿರುವ ಸಂದರ್ಭಗಳಲ್ಲಿ ಅವನ್ನು ವಿಲೀನಗೊಳಿಸಿ ಉದ್ಯಮಗಳ ಸಂಖ್ಯೆಯನ್ನು ಕಡಿಮೆಗೊಳಿಸಿದರೆ ಮೇಲಾಡಳಿತ ವೆಚ್ಚವನ್ನು ಕಡಿಮೆ ಮಾಡುವುದರ ಮೂಲಕ ಉದ್ಯಮಗಳು ಲಾಭದಾಯಕವಾಗಿ ನಡೆಯುವಂತೆ ಮಾಡಬಹುದು. ಉದಾಹರಣೆಗೆ, ಕರ್ನಾಟಕ ನಿರ್ಮಾಣ ನಿಗಮ ಮತ್ತು ಕರ್ನಾಟಕ ಭೂಸೇನಾ ನಿಗಮಗಳನ್ನು ವಿಲೀನಗೊಳಿಸಬಹುದು.

ಕೆಲವು ಸಾರ್ವಜನಿಕ ಉದ್ಯಮಗಳನ್ನು ಸಂಪೂರ್ಣವಾಗಿ ಖಾಸಗೀಕರಣ ಮಾಡಬಹುದು; ಅಂದರೆ ಖಾಸಗಿಯವರಿಗೆ ಮಾರಾಟಮಾಡಬಹುದು. ಕೆಲವು ಉದ್ಯಮಗಳ ಷೇರುಗಳನ್ನು ಖಾಸಗಿಯವರಿಗೆ ಮಾರಾಟಮಾಡಿ ಖಾಸಗಿ ಪಾತ್ರವನ್ನು ಹೆಚ್ಚಿಸಿ ತನ್ಮೂಲಕ ದಕ್ಷತೆಯನ್ನು ಉತ್ತಮ ಪಡಿಸಬಹುದು. ಸತತವಾಗಿ

ನಷ್ಟದಲ್ಲಿರುವ ಕರ್ನಾಟಕ ಸೋಪ್ಸ್ ಮತ್ತು ಡಿಟರ್ಜೆಂಟ್ಸ್ ನಿಯಮಿತದಂತಹ ಉದ್ಯಮ ಇನ್ನೂ ಸಾರ್ವಜನಿಕ ವಲಯದಲ್ಲಿರುವುದಕ್ಕೆ ಯಾವ ಸಮರ್ಥನೆಯೂ ಇಲ್ಲ. ೧೯೧೮ರಲ್ಲಿ ಸರ್ಕಾರಿ ಸಾಬೂನು ಕಾರ್ಖಾನೆಯನ್ನು ಪ್ರಾರಂಭಿಸಿದುದು ಸೋಪು ತಯಾರಿಕೆಯ ಸಾಧ್ಯತೆಯನ್ನು ಖಾಸಗಿಯವರಿಗೆ ತೋರಿಸಿಕೊಡುವ ಸಲುವಾಗಿ. ಆ ಕಾರ್ಯ ಯಶಸ್ವಿಯಾಗಿ ಆಯಿತಷ್ಟೇ ಅಲ್ಲದೆ ಈ ಉದ್ಯಮ ಅನೇಕ ವರ್ಷಗಳ ಕಾಲ ಲಾಭದಾಯಕವಾಗಿಯೇ ಕೆಲಸ ಮಾಡುತ್ತಿತ್ತು. ಮೂಲ ಉದ್ದೇಶ ಈಡೇರಿದ ಮೇಲೆ ೧೯೪೦ ರಷ್ಟು ಹಿಂದೆಯೇ ಸಾಬೂನು ಕಾರ್ಖಾನೆಯನ್ನು ಖಾಸಗಿಯವರಿಗೆ ವಹಿಸಿಕೊಡುವ ಉದ್ದೇಶವಿತ್ತೆಂದು ಹೇಳಲಾಗಿದೆ. ೧೯೪೦ (ಬಾಲಕೃಷ್ಣ, ಆರ್. ೧೯೪೦). ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಕರ್ನಾಟಕ ಸೋಪ್ಸ್ ಮತ್ತು ಡಿಟರ್ಜೆಂಟ್ಸ್ ನಿಯಮಿತವನ್ನು ಖಾಸಗೀಕರಣ ಮಾಡುವುದು ಸಮರ್ಥನೀಯ.

ಯಾವ ಉದ್ಯಮಗಳನ್ನು ಪುನರುಜ್ಜೀವನಗೊಳಿಸುವ ಸಾಧ್ಯತೆ ಕಡಿಮೆ ಇದೆಯೋ ಅಂತಹವನ್ನು ಮುಚ್ಚಲೂ ಸರ್ಕಾರ ಹಿಂದೆಗೆಯಬಾರದು. ಆದರೆ ಉದ್ಯೋಗಿಗಳಿಗೆ ಸೂಕ್ತ ಪರಿಹಾರ ನೀಡುವ ಮೂಲಕ ಅವರ ಹಿತವನ್ನು ರಕ್ಷಿಸಬೇಕಾಗುತ್ತದೆ. ಉದಾರ ನಿವೃತ್ತಿ ವೇತನ ಅಥವಾ ಮರುತರಬೇತಿಯ ನಂತರ ಇತರ ಉದ್ಯಮಗಳಲ್ಲಿ ನೇಮಕ ಮಾಡಿಕೊಳ್ಳುವುದು ಮುಂತಾದ ಕ್ರಮಗಳ ಮುಖಾಂತರ ಅವರ ಹಿತರಕ್ಷಣೆ ಮಾಡಬೇಕಾಗುತ್ತದೆ.

**ಉಪಸಂಹಾರ**

ಕರ್ನಾಟಕದಲ್ಲಿ ಸಾರ್ವಜನಿಕ ಉದ್ಯಮಗಳ ಸಂಖ್ಯೆ ಅಗಾಧವಾಗಿ ಬೆಳೆದಿದೆ. ಸಂಖ್ಯಾಭಿವೃದ್ಧಿಯ ಜೊತೆಯಲ್ಲಿ ಅದಕ್ಷತೆಯೂ ಹೆಚ್ಚಿದೆ. ಬಹುತೇಕ ಉದ್ಯಮಗಳು ನಷ್ಟವನ್ನನುಭವಿಸುತ್ತಿರುವುದರಿಂದ ಸರ್ಕಾರಕ್ಕೆ ಹೊರೆಯಾಗಿವೆ. ಸಂಚಿತ ನಷ್ಟ ಸ್ಥೈರ್ಯಗೆಡಿಸುವ ಮಟ್ಟ ತಲುಪಿದೆ. ಸರ್ಕಾರದ ಹಣಕಾಸು ಪರಿಸ್ಥಿತಿ ಸುಧಾರಿಸಬೇಕಾದರೆ ಸಾರ್ವಜನಿಕ ಉದ್ಯಮಗಳ ಸುಧಾರಣೆ ಅಗತ್ಯವಾಗಿ ಆಗಬೇಕು. ಹಿಂದೆ ಯಾವುದೋ ಸನ್ನಿವೇಶದಲ್ಲಿ ಸಾರ್ವಜನಿಕ ವಲಯದಲ್ಲಿ ಸ್ಥಾಪಿತವಾದ ಉದ್ಯಮಗಳು ಇಂದಿನ ಸನ್ನಿವೇಶದಲ್ಲಿ ಸಾರ್ವಜನಿಕ ವಲಯದಲ್ಲೇ ಮುಂದುವರಿಯಬೇಕಾದ ಅಗತ್ಯವಿಲ್ಲ. ಆದ್ದರಿಂದ ಸಾರ್ವಜನಿಕ ಉದ್ಯಮಗಳ ಪಾತ್ರದ ಬಗ್ಗೆ ಪುನರ್‌ಪರಿಶೀಲನೆ ಅಗತ್ಯ. ಆಮೂಲಾಗ್ರ ಪರಿಶೀಲನೆಯ ನಂತರ ಯಾವ ಉದ್ಯಮಗಳನ್ನು ಸಾರ್ವಜನಿಕ ವಲಯದಲ್ಲೇ ಉಳಿಸಿಕೊಂಡು ಬೆಳೆಸಬೇಕು, ಯಾವುದನ್ನು ಮುಚ್ಚಬೇಕು ಎಂಬ ಬಗ್ಗೆ ನಿರ್ಧಾರ ತೆಗೆದುಕೊಂಡು ಸಾರ್ವಜನಿಕ ವಲಯದ ಸುಧಾರಣೆಗೆ ಶೀಘ್ರಕ್ರಮ ಕೈಗೊಳ್ಳದಿದ್ದರೆ ರಾಜ್ಯದ ಹಿತಕ್ಕೆ ಧಕ್ಕೆಯಾಗುತ್ತದೆ. ಇದಕ್ಕೆ ಬೇಕಾದ ರಾಜಕೀಯ ಸಂಕಲ್ಪವನ್ನು ರೂಢಿಸಿಕೊಂಡು ಸರ್ಕಾರ ಕಾರ್ಯಪ್ರವೃತ್ತವಾಗುವುದು ಅನಿವಾರ್ಯ.

## ಅನುಬಂಧ - ೧

### ಕರ್ನಾಟಕದ ಸಾರ್ವಜನಿಕ ಉದ್ಯಮಗಳಲ್ಲಿ ಬಂಡವಾಳ ಹೂಡಿಕೆ

| ವರ್ಷ | ಒಟ್ಟು ಬಂಡವಾಳ ಹೂಡಿಕೆ (ಷೇರು ಬಂಡವಾಳ ಮತ್ತು ಸಾಲಗಳು) (ಕೋಟಿ ರೂ.ಗಳಲ್ಲಿ) | ಹಿಂದಿನ ವರ್ಷಕ್ಕಿಂತ ಶೇಕಡಾವಾರು ಹೆಚ್ಚಳ | ಕರ್ನಾಟಕ ಸರ್ಕಾರದ ಪಾಲು (ರಾಜ್ಯ ಸರ್ಕಾರದ ಇತರ ಉದ್ಯಮಗಳು ಸೇರಿದಂತೆ) (ಕೋಟಿ ರೂ.ಗಳಲ್ಲಿ) | ಹಿಂದಿನ ವರ್ಷಕ್ಕಿಂತ ಶೇಕಡವಾರು ಹೆಚ್ಚಳ |
|---|---|---|---|---|
| ೧೯೮೦-೮೧ | ೧೪೧೫.೭೭ | | ೭೭೬.೯೩ | |
| ೧೯೮೧-೮೨ | ೧೫೪೦.೭೫ | ೮.೮೨ | ೮೪೯.೩೨ | ೯.೩೨ |
| ೧೯೮೨-೮೩ | ೧೯೦೯.೦೫ | ೨೩.೯೦ | ೧೦೪೦.೯೯ | ೨೨.೫೭ |
| ೧೯೮೩-೮೪ | ೨೧೩೬.೯೧ | ೧೧.೯೪ | ೧೧೫೭.೯೪ | ೧೧.೨೩ |
| ೧೯೮೪-೮೫ | ೨೪೫೦.೦೭ | ೧೪.೬೫ | ೧೩೫೪.೫೭ | ೧೬.೯೮ |
| ೧೯೮೫-೮೬ | ೨೮೨೦.೭೯ | ೧೫.೧೩ | ೧೪೮೯.೩೪ | ೯.೯೪ |
| ೧೯೮೬-೮೭ | ೩೨೬೩.೧೫ | ೧೫.೬೮ | ೧೬೯೬.೧೦ | ೧೩.೮೮ |
| ೧೯೮೭-೮೮ | ೩೮೨೧.೦೨ | ೧೭.೦೯ | ೧೯೨೩.೪೮ | ೧೩.೪೦ |
| ೧೯೮೮-೮೯ | ೩೯೭೬.೫೭ | ೪.೦೭ | ೨೧೧೭.೦೯ | ೧೦.೦೬ |
| ೧೯೮೯-೯೦ | ೪೨೫೫.೬೦ | ೭.೦೨ | ೨೧೭೯.೫೬ | ೨.೯೫ |
| ೧೯೯೧-೯೨ | ೫೧೭೦.೦೨ | ೧೪.೦೦ | ೨೫೭೧.೨೭ | ೧೦.೨೮ |
| ೧೯೯೨-೯೩ | ೫೯೬೩.೮೦ | ೧೫.೩೫ | ೩೦೪೯.೫೮ | ೧೮.೬೦ |
| ೧೯೯೩-೯೪ | ೬೯೪೮.೬೩ | ೧೬.೫೧ | ೩೩೩೮.೭೧ | ೯.೪೮ |

ಆಧಾರ: ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ಯಮಗಳ ಮಹೋದ್ಯಮ, ಸಾರ್ವಜನಿಕ ಉದ್ಯಮಗಳ ಸಮೀಕ್ಷೆ ೧೯೯೩-೯೪, ಪು. ೩.

## ಅನುಬಂಧ - ೨

### ಕರ್ನಾಟಕದ ಸಾರ್ವಜನಿಕ ಉದ್ಯಮಗಳು (೩೧-೩-೯೪ರಲ್ಲಿ ಇದ್ದಂತೆ)

**೧. ಸಾರ್ವಜನಿಕ ಉಪಯುಕ್ತತೆಯ ಉದ್ಯಮಗಳು**

೧. ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ

೨. ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ

೩. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ

**೨. ಹಣಕಾಸು ಸಂಸ್ಥೆಗಳು**

೪. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ

೫. ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತ

**೩. ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯೇತರ)**

೬. ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಅಭಿವೃದ್ಧಿ ನಿಗಮ ನಿಯಮಿತ

೭. ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ
೮. ಕರ್ನಾಟಕ ರಾಜ್ಯ ಪೋಲೀಸ್ ಗೃಹನಿರ್ಮಾಣ ನಿಗಮ ನಿಯಮಿತ
೯. ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ
೧೦. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ

೪. ಅಭಿವೃದ್ಧಿಶೀಲ ಉದ್ಯಮಗಳು (ವಾಣಿಜ್ಯ)

೧೧. ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ
೧೨. ಕರ್ನಾಟಕ ಅಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ನಿಯಮಿತ
೧೩. ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ
೧೪. ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ
೧೫. ಕರ್ನಾಟಕ ಅರಣ್ಯಾಭಿವೃದ್ಧಿ ನಿಗಮ ನಿಯಮಿತ
೧೬. ಕರ್ನಾಟಕ ಕಾಂಪೋಸ್ಟ್ ಗೊಬ್ಬರ ಅಭಿವೃದ್ಧಿ ನಿಗಮ ನಿಯಮಿತ
೧೭. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ
೧೮. ಕರ್ನಾಟಕ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತ
೧೯. ಕರ್ನಾಟಕ ರಾಜ್ಯ ಎಲೆಕ್ಟ್ರಾನಿಕ್ಸ್ ಅಭಿವೃದ್ಧಿ ನಿಗಮ ನಿಯಮಿತ
೨೦. ಕರ್ನಾಟಕ ಗೋಡಂಬಿ ಅಭಿವೃದ್ಧಿ ನಿಗಮ ನಿಯಮಿತ
೨೧. ಕರ್ನಾಟಕ ಒಳನಾಡು ಮೀನುಗಾರಿಕೆ ಅಭಿವೃದ್ಧಿ ನಿಗಮ ನಿಯಮಿತ
೨೨. ಕರ್ನಾಟಕ ರಾಜ್ಯ ತೆಂಗಿನನಾರು ಅಭಿವೃದ್ಧಿ ನಿಗಮ ನಿಯಮಿತ

೫. ಸೇವಾ ಉದ್ಯಮಗಳು

೨೩. ಕರ್ನಾಟಕ ಗೃಹ ಮಂಡಳಿ
೨೪. ಕರ್ನಾಟಕ ರಾಜ್ಯ ಉಗ್ರಾಣ ನಿಗಮ
೨೫. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ
೨೬. ಶ್ರೀ ಕಂಠೀರವ ಸ್ಟುಡಿಯೋಸ್ ನಿಯಮಿತ
೨೭. ಕರ್ನಾಟಕ ರಾಜ್ಯ ನಿರ್ಮಾಣ ನಿಗಮ ನಿಯಮಿತ
೨೮. ಕರ್ನಾಟಕ ನಗರಾಭಿವೃದ್ಧಿ ಕಾರ್ಪೋರೇಷನ್
೨೯. ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ
೩೦. ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ
೩೧. ಕರ್ನಾಟಕ ಭೂಸೇನಾ ನಿಗಮ ನಿಯಮಿತ
೩೨. ಅರಣ್ಯ ವಸತಿ ಗೃಹಗಳು ಮತ್ತು ವಿಹಾರಧಾಮಗಳು ನಿಯಮಿತ
೩೩. ಡಿ. ದೇವರಾಜ್ ಅರಸ್ ಟ್ರಸ್ಟ್ ಟರ್ಮಿನಲ್ಸ್ ನಿಯಮಿತ
೩೪. ಕೃಷ್ಣ ಏತ ನೀರಾವರಿ ನಿಗಮ
೩೫. ಕಾವೇರಿ ಏತ ನೀರಾವರಿ ನಿಗಮ

೬. ತಯಾರಿಕಾ ಉದ್ಯಮಗಳು

೩೬. ಮೈಸೂರು ಸಕ್ಕರೆ ಕಂಪನಿ ನಿಯಮಿತ

೩೭. ಮೈಸೂರು ಕಾಗದದ ಕಾರ್ಖಾನೆ ನಿಯಮಿತ
೩೮. ಮೈಸೂರು ಲ್ಯಾಂಪ್ ವರ್ಕ್ಸ್ ನಿಯಮಿತ
೩೯. ಮೈಸೂರು ತಂಬಾಕು ಕಂಪನಿ ನಿಯಮಿತ
೪೦. ಮೈಸೂರು ಪೇಂಟ್ಸ್ ಮತ್ತು ವಾರ್ನಿಷ್ ನಿಯಮಿತ
೪೧. ಮೈಸೂರು ಮ್ಯಾಚ್ ಕಂಪನಿ ನಿಯಮಿತ
೪೨. ಮೈಸೂರು ಕ್ರೋಮ್ ಟ್ಯಾನಿಂಗ್ ಕಂಪನಿ ನಿಯಮಿತ
೪೩. ಮೈಸೂರು ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ ನಿಯಮಿತ
೪೪. ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ
೪೫. ಎನ್.ಜಿ.ಇ.ಎಫ್. ನಿಯಮಿತ
೪೬. ಮೈಸೂರು ಅಸಿಟೇಟ್ಸ್ ಮತ್ತು ಕೆಮಿಕಲ್ಸ್ ಕಂಪನಿ ನಿಯಮಿತ
೪೭. ಮೈಸೂರು ಮಿನರಲ್ಸ್ ನಿಯಮಿತ
೪೮. ಮೈಸೂರು ಕಾಸ್ಮೆಟಿಕ್ಸ್ ನಿಯಮಿತ
೪೯. ಕರ್ನಾಟಕ ರಾಜ್ಯ ಆಗ್ರೋ ಪ್ರಾಡಕ್ಟ್ಸ ನಿಯಮಿತ
೫೦. ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ
೫೧. ಕರ್ನಾಟಕ ರಾಜ್ಯ ಪೆನೀರ್ಸ್ ನಿಯಮಿತ
೫೨. ಚಾಮುಂಡಿ ಮೇಷೀನ್ ಟೂಲ್ಸ್ ನಿಯಮಿತ
೫೩. ಕರ್ನಾಟಕ ಇಂಪ್ಲಿಮೆಂಟ್ಸ್ ಮತ್ತು ಮಿಷನರೀಸ್ ಕಂಪನಿ ನಿಯಮಿತ
೫೪. ಕರ್ನಾಟಕ ಆಗ್ರೋ ಪ್ರೋಟೀನ್ಸ್ ನಿಯಮಿತ
೫೫. ಕರ್ನಾಟಕ ವಿದ್ಯುತ್ ಕಾರ್ಖಾನೆ ನಿಯಮಿತ
೫೬. ಕರ್ನಾಟಕ ರೇಷ್ಮೆ ಕೈಗಾರಿಕಾ ನಿಗಮ ನಿಯಮಿತ
೫೭. ಕರ್ನಾಟಕ ಸೋಪ್ಸ್ ಮತ್ತು ಡಿಟರ್ಜೆಂಟ್ಸ್ ನಿಯಮಿತ
೫೮. ಕರ್ನಾಟಕ ಮಿಲ್ಕ್ ಪ್ರಾಡಕ್ಟ್ಸ ನಿಯಮಿತ
೫೯. ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಲ ನಿಯಮಿತ
೬೦. ಕರ್ನಾಟಕ ರಾಜ್ಯ ಟೆಕ್ಸ್‌ಟೈಲ್ಸ್ ನಿಯಮಿತ
೬೧. ಕರ್ನಾಟಕ ಟೆಲಿಕಾಂ ನಿಯಮಿತ
೬೨. ಕರ್ನಾಟಕ ಪಲ್ಸ್‌ಪುಡ್ ನಿಯಮಿತ
೬೩. ಕರ್ನಾಟಕ ಟಂಗ್‌ಸ್ಟನ್ ಮೋಲಿ ನಿಯಮಿತ
೬೪. ಎನ್.ಜಿ.ಇ.ಎಫ್. (ಹುಬ್ಬಳ್ಳಿ) ನಿಯಮಿತ

೭. **ಮಾರುಕಟ್ಟೆ ಮತ್ತು ಜಾಹೀರಾತು ಉದ್ಯಮಗಳು**

೬೫. ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ನಿಯಮಿತ
೬೬. ಮಾರ್ಕೆಟಿಂಗ್ ಕನ್ಸಲ್‌ಟೆಂಟ್ಸ್ ಅಂಡ್ ಏಜೆನ್ಸೀಸ್ ನಿಯಮಿತ
೬೭. ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ
೬೮. ಕರ್ನಾಟಕ ಮಾಂಸ ಮತ್ತು ಕೋಳಿ ಮಾರಾಟ ನಿಗಮ ನಿಯಮಿತ

೧೯. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮಿತ
೨೦. ಕರ್ನಾಟಕ ಸಣ್ಣ ಕೈಗಾರಿಕಾ ಮಾರುಕಟ್ಟೆ ನಿಗಮ ನಿಯಮಿತ

## ಉಲ್ಲೇಖಗಳು


Balakrishna. R. (1940) : Industrial Development of Mysore, Bangalore Press, Bangalore.

Hettne. B. (1978) : The Political Economy of Indirect Rule, Ambika Publications, New Delhi.

Issar. T.P. (1984) : Public Sector undertakings of Karnataka - A Report, Karnataka State Bureau of Public Enterprises.

Jalan, Bimal (1992) : The Indian Economy : Problems and Prospects, Viking.

Karanatak State Bureau Public Enterprises (1995) : Public Enterprises Survey 1993-94

Thimmaiah, G. (1989) : "State Government Public Enterprises in Karnataka: A Macro Perspective, in (Ed) Abdul Aziz, Management Problems of State Public undertakings, Printwell Publishers, Jaipur.

# ಕರ್ನಾಟಕ ರಾಜ್ಯ ಹಣಕಾಸು

ಕೆ. ಗಾಯತ್ರಿ

## ೧. ಪರಿಚಯ

ಅಭಿವೃದ್ಧಿ, ವಿತರಣೆ ಮತ್ತು ಸ್ಥಿರತೆಯಂತಹ ಆರ್ಥಿಕತೆಯ ಪ್ರಕ್ರಿಯೆಯಲ್ಲಿ ರಾಜ್ಯದ ಹಣಕಾಸು ಪ್ರಧಾನ ಪಾತ್ರವನ್ನು ವಹಿಸುತ್ತದೆ. ಕೇಂದ್ರ ಮತ್ತು ರಾಜ್ಯ ಸರ್ಕಾರದ ಜವಾಬ್ದಾರಿಗಳ ಹಂಚಿಕೆಯ ಹಿನ್ನೆಲೆಯಲ್ಲಿ ಸಹ ರಾಜ್ಯ ಹಣಕಾಸು ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಭಾರತದಲ್ಲಿ ಜನತೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ಜವಾಬ್ದಾರಿಯು ರಾಜ್ಯ ಸರ್ಕಾರದ್ದಾಗಿದೆ. ಈ ಸುಧಾರಣೆಯು ಶಿಕ್ಷಣ, ಕೃಷಿ, ಕೈಗಾರಿಕೆ, ಆರೋಗ್ಯ ಇತ್ಯಾದಿಗಳಾಗಿವೆ. ಈ ಜವಾಬ್ದಾರಿಗಳನ್ನು ನಿಭಾಯಿಸಲು ರಾಜ್ಯ ಸರ್ಕಾರಗಳು ವಿವಿಧ ಮೂಲಗಳಿಂದ ಸಂಪನ್ಮೂಲಗಳನ್ನು ಕ್ರೋಢೀಕರಿಸುತ್ತವೆ; ಈ ಮೂಲಗಳು ತೆರಿಗೆ ಮತ್ತು ತೆರಿಗೆಯೇತರ, ಸಾಲ ಪಡೆಯುವುದು, ಹಾಗೆಯೇ ಅದನ್ನು ಸಾಮಾಜಿಕ ಹಾಗೂ ಆರ್ಥಿಕ, ಸಮುದಾಯ ಅಭಿವೃದ್ಧಿ ಹಾಗೂ ಆರ್ಥಿಕ ಸೇವೆಗಳ ಮೇಲೆ ಖರ್ಚು ಮಾಡುವುದು - ಈ ವಿಷಯಗಳ ಮೇಲೆ ಸರ್ಕಾರಿ ವೆಚ್ಚದಲ್ಲಿ ಒಂದು ವೇಗವಾದ ಹೆಚ್ಚಳವಿದೆ. ಇದು ಆಧುನಿಕ ಸರ್ಕಾರಗಳು ಆರ್ಥಿಕ ಚಟುವಟಿಕೆಯಲ್ಲಿ ಭಾಗವಹಿಸುವುದು ಹೆಚ್ಚಳವಾಗಿರುವುದರಿಂದ ಆಗಿದೆ. ಈ ಭಾಗವಹಿಸುವಿಕೆಯು ಪ್ರಾಮುಖ್ಯ ವಲಯಗಳಾದ ಸಾಮಾಜಿಕ ಮತ್ತು ಆರ್ಥಿಕ ಸವಲತ್ತುಗಳ ನಿರ್ಮಾಣದ ಮೇಲಿನ ಹೂಡಿಕೆಯಾಗಿರುತ್ತದೆ. ಒಂದು ಕಡೆಯಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ ಸರ್ಕಾರದ ಭಾಗವಹಿಸುವಿಕೆಯ ಹೆಚ್ಚಳದ ಅಗತ್ಯವಿದೆ. ಇನ್ನೊಂದು ಕಡೆಯಲ್ಲಿ ಸಂವಿಧಾನದ ನಿರ್ದೇಶಕ ತತ್ವಗಳ ಅಡಿಯಲ್ಲಿ ಜನತೆಯ ಅಗತ್ಯತೆಗಳಿಗೆ ಸ್ಪಂದಿಸುವ ಉದ್ದೇಶವಿದೆ. ಈ ಎಲ್ಲಾ ಕಾರಣಗಳ ಫಲಿತಾಂಶವಾಗಿ ರಾಜ್ಯ ಹಣಕಾಸಿನಲ್ಲಿ ಬೃಹತ್ ಪ್ರಮಾಣದ ಹೆಚ್ಚಳವಾಗಿದೆ.

ಒಟ್ಟಾರೆ ಆರ್ಥಿಕತೆಯಲ್ಲಿ ಸರ್ಕಾರದ ಭಾಗವಹಿಸುವಿಕೆಯ ಪಾಲು, ಇದು ರಾಜ್ಯ ಆಂತರಿಕ ಉತ್ಪಾದನೆಯಲ್ಲಿ ಸರಕಾರದ ವೆಚ್ಚಗಳ ಸರಿಸಮಾನ ಪ್ರಮಾಣ ಮತ್ತು ಅದರ ಅನುವರ್ತನೆಯು ಒಂದು ಸೀಮಿತ ಅವಧಿಯಲ್ಲಿ ಸರ್ಕಾರಿ

ಚಟುವಟಿಕೆಯ ಹೆಚ್ಚಳಿಕೆ ಅಥವಾ ಕಡಿಮೆಯಾಗುವಿಕೆಯ ವಿವರಣೆಯೊಂದಿಗೆ ಪ್ರತಿಫಲಿತವಾಗಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಸರ್ಕಾರದ ಚಟುವಟಿಕೆಗಳನ್ನು ರಾಜ್ಯದ ಆಂತರಿಕ ಉತ್ಪಾದನೆಯಲ್ಲಿ ಸರ್ಕಾರದ ಶೇಕಡಾ ವೆಚ್ಚದ ಪಾಲಿನ ದೃಷ್ಟಿಯಿಂದ ನೋಡಿದಾಗ ೧೯೭೪-೭೫ ರಿಂದ ೧೯೮೯-೯೦ರ ಅವಧಿಯಲ್ಲಿ ಇದು ದ್ವಿಗುಣಗೊಂಡಿದೆ. ಇದು ಶೇ. ೧೬.೨೦ರಿಂದ ೩೨.೨೩ ಶೇಕಡಕ್ಕೆ ಏರಿದೆ. ೧೯೭೪-೭೫ ರಿಂದ ೧೯೮೯-೯೦೦ರ ಅವಧಿಯಲ್ಲಿ ಸರ್ಕಾರಿ ಪಾಲು ರಾಜ್ಯ ಅಂತರಿಕ ಉತ್ಪಾದನೆಯ ಕಾಲುಭಾಗದಷ್ಟು ಇತ್ತು. ಅಂದರೆ ಶೇ. ೨೫.೭೯ ಆಗಿತ್ತು. ಈ ಅಂಶಗಳು ಸರ್ಕಾರಿ ಚಟುವಟಿಕೆಯ ಗಣನೀಯ ಹೆಚ್ಚಳವನ್ನು ಲೆಕ್ಕಹಾಕುತ್ತವೆ. ಅರ್ಥಾತ್ ಕರ್ನಾಟಕ ಸರ್ಕಾರದ ವತಿಯಿಂದ ನೀಡುವ ಸರಕುಗಳು ಹಾಗೂ ಸೇವೆಗಳು ಗಣನೀಯವಾಗಿ ಏರಿವೆ ಎಂಬುದನ್ನು ಸೂಚಿಸುತ್ತದೆ. ಹಾಗೇಯೇ log linear regression ನ ಫಲಿತಾಂಶಗಳಲ್ಲಿ ತಿಳಿಸಿರುವಂತೆ ವೆಚ್ಚಗಳು ಬಹುವಾಗಿ ಆದಾಯದ ಸ್ಥಿತಿ ಸ್ಥಾಪಕತೆ ಎಂದು ಗಮನಿಸಲಾಗಿದೆ. ನಿಜವಾದ ತಲಾ ರಾಜ್ಯ ಅಂತರಿಕ ಉತ್ಪಾದನೆಯ ಪ್ರತಿ ಘಟಕದ ಹೆಚ್ಚಳದೊಂದಿಗೆ ವೆಚ್ಚಗಳು ೧.೬೭ ಶೇಕಡಾದೊಂದಿಗೆ ಹೆಚ್ಚಳವಾಗಿದ್ದು, ಸಂಖ್ಯಾ ಶಾಸ್ತ್ರಾಧಾರವಾಗಿ ೧ ಶೇಕಡಾ ಮಟ್ಟದಲ್ಲಿ ಇದು ಬಹು ಪ್ರಾಮುಖ್ಯ ಎಂದು ಪರಿಗಣಿಸಲಾಗಿದೆ. ಕರ್ನಾಟಕದ ಹೆಚ್ಚಿನ ಆದಾಯ ಸ್ಥಿತಿ ಸ್ಥಾಪಕತೆಯು, ಆಡೋಲ್ಫ್ ವಾಗ್ನರ್‌ರ "ಹೆಚ್ಚುತ್ತಿರುವ ರಾಜ್ಯ ಚಟುವಟಿಕೆಯ ನೀತಿ"ಯ ಸಮುಸ್ಥಿತಿಯಲ್ಲಿದೆ. ಈ ತತ್ವವು ಒಂದು ಗುಣಲಕ್ಷಣವನ್ನು ಉಲ್ಲೇಖಿಸುತ್ತದೆ. ಅದೇನೆಂದರೆ ಆರ್ಥಿಕ ಅಭಿವೃದ್ಧಿಯು ಹೆಚ್ಚಿನ ಸ್ಥಾನವನ್ನು ಪಡೆಯುತ್ತಿರುವಂತೆ, ಪೂರಕವಾಗಿ ಒಟ್ಟಾರೆ ಆರ್ಥಿಕ ಚಟುವಟಿಕೆಯಲ್ಲಿ ಸರ್ಕಾರಿ ವಲಯದ ಪ್ರಾಮುಖ್ಯತೆಯು ಹೆಚ್ಚುವುದು. ಅದರಂತೆ ಸರ್ಕಾರೀ ವೆಚ್ಚಗಳು, ತಲಾ ಆದಾಯಕ್ಕಿಂತಲೂ ಹೆಚ್ಚಿನ ವೇಗದ ದರದಲ್ಲಿ ಹೆಚ್ಚಳವಾಗುವುವು.* ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧದಲ್ಲಿ ಸರಕಾರಿ ವೆಚ್ಚಗಳ ಬೆಳವಣಿಗೆ ಮತ್ತು ಅದರ ಮಾದರಿಯಲ್ಲಿ ಪ್ರತಿಬಿಂಬವಾಗಿರುವ ಸರಕಾರಿ ಚಟುವಟಿಕೆ ಹಾಗೂ ಬೆಳೆಯುತ್ತಿರುವ ವೆಚ್ಚಗಳಿಗೆ ಆಗುತ್ತಿರುವ ಹಣಕಾಸು ಪೂರೈಕೆಯನ್ನು ಅಭ್ಯಸಿಸುವ ಒಂದು ಪ್ರಯತ್ನ ಮಾಡಲಾಗಿದೆ. ಈ ಬಗ್ಗೆ ಒಟ್ಟಾರೆ ಮುಂಗಡ ಪತ್ರದ ಹೆಚ್ಚುವರಿ ಕೊರತೆ ಸ್ಥಿತಿಯ ಬಗ್ಗೆ ವಿಶೇಷ ಗಮನ ನೀಡಲಾಗಿದೆ. ಹಾಗೂ ಎರಡನೇ ಭಾಗದಲ್ಲಿ ಆದಾಯ ತಖ್ತೆಯನ್ನು ನೀಡಲಾಗಿದೆ. ಮೂರನೇ ಭಾಗದಲ್ಲಿ, ಆದಾಯ/ಬಂಡವಾಳ ತೆರಿಗೆಗಳು ಮತ್ತು ಅಭಿವೃದ್ಧಿಯೇತರ ಶೀರ್ಷಿಕೆಯಡಿಯಲ್ಲಿ ಸರಕಾರಿ ವೆಚ್ಚಗಳ

---

* ಹೆಚ್ಚು ವಿವರಗಳಿಗೆ, ಗಾಯತ್ರಿ. ಕೆ. ಅವರ 'ಬೆಳವಣಿಗೆ ಮತ್ತು ರಾಜ್ಯ ವೆಚ್ಚದ ನೀತಿ' ಕರ್ನಾಟಕದ ಅಧ್ಯಯನ - ೧೯೯೦, ಪಿ.ಎಚ್.ಡಿ. ಸಂಶೋಧನೆ ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ ಹಾಗೂ ಗಾಯತ್ರಿ.ಕೆ., ೧೯೯೧ 'ಕರ್ನಾಟಕದ ಸಾರ್ವಜನಿಕ ವ್ಯಯದ ನೀತಿ', ಒಂದು ಅಪ್ರಕಟಿತ ಸಂಶೋಧನಾ ವರದಿ, ಐ.ಎಸ್.ಇ.ಸಿ., ಬೆಂಗಳೂರು.

ವಿಶ್ಲೇಷಣೆಯ ಮೇಲೆ ಕೇಂದ್ರೀಕೃತಗೊಳಿಸಲಾಗಿದೆ. ನಾಲ್ಕನೆಯ ಭಾಗವು ವೆಚ್ಚಗಳಿಗೆ ಹಣಕಾಸು ಪೂರೈಕೆಯ ಹಾಗೂ ತೆರಿಗೆ, ತೆರಿಗೆಯೇತರ ಮತ್ತು ಸಾಲಗಳಿಗೆ ಸಂಬಂಧಿಸಿದೆ. ಕೊನೆಯ ಭಾಗದಲ್ಲಿ ಉಪ ಸಂಹಾರವನ್ನು ನೀಡಲಾಗಿದೆ.

## ೨. ರಾಜ್ಯ ಸರ್ಕಾರದ ಮುಂಗಡ ಪತ್ರದ ಸ್ಥಿತಿ

ರಾಜ್ಯ ಹಣಕಾಸಿನ ಒಟ್ಟಾರೆ ತಖ್ತೆಯು ಸರ್ಕಾರದ ಮುಂಗಡ ಪತ್ರದ ಸ್ಥಿತಿಯಿಂದ ನಿರ್ವಹಿಸಲ್ಪಟ್ಟಿದೆ. ಸರಕಾರದ ಹಣಕಾಸಿನ ಮಿಗತೆ ಅಥವಾ ಕೊರತೆಯನ್ನು ಕಂಡುಕೊಳ್ಳಲು ಸರಕಾರದ ಸಂಪನ್ಮೂಲಗಳನ್ನು ವೆಚ್ಚದೊಂದಿಗೆ ತುಲನೆ ಮಾಡಲಾಗಿದೆ. ಆದಾಯ ಮತ್ತು ಬಂಡವಾಳ ತಖ್ತೆಯನ್ನು ಕೋಷ್ಟಕ ೧ ರಲ್ಲಿ ನೀಡಲಾಗಿದೆ ಹಾಗೂ ಇದು ಮುಂಗಡ ಪತ್ರದ ಸ್ಥಿತಿಯನ್ನು ಹೇಳುತ್ತದೆ.

ಕರ್ನಾಟಕದಲ್ಲಿ (ಕ್ರೋಢೀಕರಿಸಿದ ನಿಧಿ) ಸರಕಾರಿ ಆದಾಯ ಮತ್ತು ಸರ್ಕಾರಿ ವೆಚ್ಚವನ್ನು ಕಳೆದ ಮೂರು ದಶಕಗಳಿಗೆ ಹೋಲಿಸಲಾಗಿದೆ ಹಾಗೂ, ಇದು ಸರಕಾರಿ ವೆಚ್ಚವು ಸಾಮಾನ್ಯವಾಗಿ ಸರ್ಕಾರಿ ಆದಾಯವನ್ನು ದಾಟುತ್ತದೆ ಎಂದು ಸ್ಪಷ್ಟಪಡಿಸುತ್ತದೆ. ಅದೇ ರೀತಿ ಜಮೆಗಿಂತ ಬಹಳ ಹೆಚ್ಚಿನ ವೇಗದಲ್ಲಿ ವೆಚ್ಚವು ಬೆಳೆದಿದೆ, ವೆಚ್ಚಗಳ ಸಂಚಿತ ದರದ ಬೆಳವಣಿಗೆಯು ೧೩.೨೭ ಶೇಕಡಾವಾಗಿದ್ದು ಇದರ ವಿರುದ್ಧ ಆದಾಯದ ಬೆಳವಣಿಗೆಯು ೧೨.೭೭ ಶೇಕಡಾವಾಗಿದೆ. ಫಲಿತಾಂಶವಾಗಿ ಕೊರತೆಯ ಪ್ರಮಾಣವು ೧೯೬೧-೬೨ರಲ್ಲಿ ೬.೦೧ ಕೋಟಿ ರೂಪಾಯಿಗಳಿಂದ ೧೯೮೯-೯೦ರಲ್ಲಿ ೧೭೨.೩ ಕೋಟಿ ರೂಪಾಯಿಗಳಿಗೆ ಏರಿದೆ. ಜಮೆಗಿಂತ ವ್ಯಯವು ಹೆಚ್ಚಾಗಿರುವ ಈ ಸ್ಥಿತಿಯು ಹೊರನೋಟಕ್ಕೆ ಎಚ್ಚರಿಕೆಯನ್ನು ನೀಡಬಹುದು. ನೆನಪಿಡಬೇಕಾದ ಅಂಶವೆಂದರೆ ಸ್ವಲ್ಪಮಟ್ಟಿನ ಹೆಚ್ಚಿನ ವ್ಯಯವು ಆರ್ಥಿಕತೆಗೆ ಹಾನಿ ಮಾಡುವುದಕ್ಕಿಂತ ಸಹಾಯವನ್ನು ಮಾಡುತ್ತದೆ. ಏಕೆಂದರೆ ಹೆಚ್ಚುವರಿ ಖರ್ಚನ್ನು ಸರಿಯಾಗಿ ಯೋಜಿಸಿದಲ್ಲಿ ಆರ್ಥಿಕತೆಯಲ್ಲಿ ಉತ್ಪಾದನೆಯನ್ನು ಸಮೃದ್ಧಿಸಲು ಹಾಗೂ ಇದರಿಂದ ಆರ್ಥಿಕ ಚಟುವಟಿಕೆಯನ್ನು ಹೆಚ್ಚಿಸಲು ಸಾಧ್ಯವಿದೆ. ಹಾಗಿದ್ದರೂ, ಸಂಪನ್ಮೂಲಗಳು ಅಭಿವೃದ್ಧಿ ಚಟುವಟಿಕೆಗಳಿಗೆ ಹರಿಯುವಂತೆ ಬೇಕಾದ ನಿಗಾವನ್ನು ವಹಿಸಬೇಕು. ಆಗ ಮಾತ್ರ ಆರ್ಥಿಕ ಅಭಿವೃದ್ಧಿಗೆ ಅದು ಸಹಾಯ ಮಾಡುವುದು. ಸಂಪನ್ಮೂಲಗಳು ಒಂದು ವೇಳೆ ಉತ್ಪಾದನೇತರ ಉದ್ದೇಶಗಳಿಗೆ ಹರಿದರೆ ಇದು ಹಣದುಬ್ಬರ ಉಂಟುಮಾಡುವುದು ಹಾಗೂ ಇದು ಆರ್ಥಿಕ ಬೆಳವಣಿಗೆಗೆ ಮಾರಕವೆನಿಸಬಹುದು. ಕೊರತೆಗೆ ಎಡೆಮಾಡುವ ಒಂದು ನಿಗಾ ವಹಿಸಿದ ಅಧ್ಯಯನವು ಏನನ್ನು ತೋರಿಸುತ್ತದೆ ಎಂದರೆ ೧೯೮೪-೮೫ರ ವರೆಗಿನ ಕೊರತೆಯು ಬಂಡವಾಳ ತಖ್ತೆಯ ಕೆಳಗಿನ ಅತಿಯಾದ ವೆಚ್ಚದಿಂದ ಉಂಟಾಗಿದೆ. ಅಲ್ಲಿಂದ ಮುಂದಿನ ಒಟ್ಟಾರೆ ಕೊರತೆಯು ಆದಾಯದ ಮೇಲಿನ ಹೆಚ್ಚಿದ ವ್ಯಯದಿಂದ ಪ್ರಭಾವಿತಗೊಂಡಿದೆ. ಹಾಗೂ ಫಲಿತಾಂಶವಾಗಿ ಆದಾಯದ

ಕೊರತೆಯ ಪ್ರಮಾಣವು ಹೆಚ್ಚುತ್ತಿದೆ ಎಂದು ತಿಳಿಸುತ್ತದೆ. ವಾರ್ಷಿಕ ಸಂಚಿತ ಬೆಳವಣಿಗೆ ದರವು ಸಹ ಈ ಲೆಕ್ಕದಲ್ಲಿ ಬರುತ್ತದೆ. ೧೯೭೦-೭೧ರಿಂದ ೧೯೮೦-೮೧ನೇ ಹಂತದಲ್ಲಿ ರಾಜಸ್ವ ಜಮೇಗಿಂತ (೧೪.೪೮ ಶೇಕಡಾ) ಹೆಚ್ಚಾಗಿತ್ತು. ಇದಕ್ಕೆ ವಿರುದ್ಧವಾಗಿ ಬಂಡವಾಳ ಜಮೆಯು (೧೪.೫೦ ಶೇಕಡಾ) ಬಂಡವಾಳ ವೆಚ್ಚಕ್ಕಿಂತ ಕಡಿಮೆಯಾಗಿದೆ. ಈ ಪರಿಸ್ಥಿತಿಯು ೧೯೮೦-೮೧ರಿಂದ ೧೯೯೦-೯೧ರಲ್ಲಿ ತದ್ವಿರುದ್ಧವಾಗಿದೆ. ಈ ಅವಧಿಯಲ್ಲಿ ಆದಾಯ ವ್ಯಯವು (೧೬.೦೭ ಶೇಕಡಾ) - ರಾಜಸ್ವ ಜಮೆ (೧೫.೧೭ ಶೇಕಡಾ) ಗಿಂತ ವೇಗವಾಗಿ ಬೆಳೆದಿದೆ ಮತ್ತು ಬಂಡವಾಳ ಜಮೆಯು (೧೫.೧೧ ಶೇಕಡಾ) ಬಂಡವಾಳ ವ್ಯಯಕ್ಕಿಂತ (೧೪.೩೨ ಶೇಕಡಾ) ಹೆಚ್ಚಾಗಿದೆ. ಹಾಗೂ ಇದು ಈ ಹಿಂದಿನ ನೀತಿಗೆ ವಿರುದ್ಧವಾಗಿದೆ. ಕರ್ನಾಟಕ ರಾಜ್ಯದಲ್ಲಿ ಆದಾಯ ಕೊರತೆಯು ಒಂದು ಹೊಸ ವಿಷಯವೆಂದು ಎನಿಸಿದರೂ ನಿರಂತರ ನಿರ್ವಹಣಾ ವೆಚ್ಚವನ್ನು ಸಾಲದ ನಿಧಿಗಳಿಂದ ಹಣಕಾಸು ಹೊಂದಿಸಿಕೊಳ್ಳುವುದು ಒಂದು ಒಳ್ಳೆಯ ಸಂಪ್ರದಾಯವಲ್ಲ. ಬಂಡವಾಳ ತಖ್ತೆಯಲ್ಲಿ ಕೊರತೆಯನ್ನು ಮೆಚ್ಚಿಕೊಳ್ಳಬೇಕು. ಏಕೆಂದರೆ ಇದು ಸಂಪನ್ಮೂಲಗಳ ನಿರ್ಮಾಣ ಹಾಗೂ ಆದಾಯ ಉತ್ಪಾದನೆಗೆ ಸಹಕಾರಿ ಎನಿಸುವುದು, ಆದರೆ ಅದೇ ಸನ್ನಿವೇಶ ಆದಾಯ ತಖ್ತೆಯಲ್ಲಿ ಸಾಲದ ನಿಧಿಯನ್ನು ಸೇವನೆ ಹಾಗೂ ನಿರ್ವಹಣೆ ಉದ್ದೇಶಗಳಿಗಾಗಿ ದಿಕ್ಕು ಬದಲಿಸುವುದು. ಈ ಪ್ರಕ್ರಿಯೆಯಲ್ಲಿ ಸೇವನೆಯ ರೀತಿಯ ವ್ಯಯವನ್ನು ನಿರ್ಬಂಧಿಸುತ್ತದೆ. ಏರುತ್ತಿರುವ ಬಡ್ಡಿ ನೀಡುವಂತಹ ಹೊಸದಾದ ಭಾರವೊಂದನ್ನು ಇದು ನಿರ್ಮಿಸುತ್ತದೆ.

ಇಂತಹ ಪರಿಸ್ಥಿತಿಗಳನ್ನು ಸರಿಗೊಳಿಸಲು ೧೯೯೧ನೇ ವರ್ಷದಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ಥಿರತೆಯ ಹೆಜ್ಜೆ ಪರಿಚಯಿಸಿವೆ. ಇವುಗಳ ಕೊರತೆಯ ಪ್ರಮಾಣವನ್ನು ಕೆಲವು ಸಮಯದೊಳಗೆ ಕಡಿಮೆಗೊಳಿಸುವ ಗುರಿಯನ್ನು ಹೊಂದಿರುತ್ತದೆ. ೧೯೯೧-೯೨ನೇ ವರ್ಷದಿಂದ ಮಾಡಿರುವ ಕರ್ನಾಟಕ ಸರ್ಕಾರದ ಕೊರತೆಯ ವಿಶ್ಲೇಷಣೆಯು ಈ ಕೆಳಗಿನ ವಿಷಯವನ್ನು ಸೂಚಿಸುತ್ತದೆ. ಒಟ್ಟಾರೆ ಕೊರತೆಯ ಅಸ್ತಿತ್ವವು ಮುಂದುವರಿದರೂ ಸಹ ಆದಾಯ ತಖ್ತೆಯಲ್ಲಿ ಮಿಗತೆಯು ಕಂಡು ಬಂದಿರುವುದು ವಿಶೇಷತಃ ೧೯೯೩-೯೪ ಮತ್ತು ೧೯೯೪-೯೫ರಲ್ಲಿ ಇದು ಕಂಡು ಬಂದಿದೆ. ಇದು ಸ್ವಾಗತಾರ್ಹ ಲಕ್ಷಣವಾಗಿದೆ. ಇದೇ ರೀತಿಯ ಲಕ್ಷಣವು ಇನ್ನೂ ಕೆಲವು ವರ್ಷ ಮುಂದುವರಿದರೆ ರಾಜ್ಯದ ಆರ್ಥಿಕ ಸ್ಥಿತಿಯು ಗಮನಾರ್ಹವಾಗಿ ಸುಧಾರಣೆಯಾಗುವುದು ಹಾಗೂ ಸರ್ಕಾರೀ ಮೂಲಗಳಿಂದ ಅಭಿವೃದ್ಧಿಗೆ ಹೆಚ್ಚು ಖರ್ಚು ಮಾಡಲು ಸಾಧ್ಯವಾಗುವುದು.

### ೩. ಕರ್ನಾಟಕದಲ್ಲಿ ಬೆಳವಣಿಗೆ ಮತ್ತು ಸರ್ಕಾರೀ ವೆಚ್ಚಗಳ ವಿಧಾನ

ಸರ್ಕಾರಿ ವೆಚ್ಚವನ್ನು ಸ್ಥೂಲವಾಗಿ ಆದಾಯ ಮತ್ತು ಬಂಡವಾಳ ಶೀರ್ಷಿಕೆಗಳು ಎಂದು ವಿಂಗಡಿಸಲಾಗಿದೆ. ಆದಾಯ ಶೀರ್ಷಿಕೆ ಮುಖ್ಯವಾಗಿ ಪುನರಾವರ್ತಿಸುವ

ಹಾಗೂ ನಿರ್ವಹಣೆಯ ಸರ್ಕಾರಿ ವೆಚ್ಚಕ್ಕೆ ಸಂಬಂಧಿಸಿದೆ. ಬಂಡವಾಳ ಶೀರ್ಷಿಕೆಯು ಸರ್ಕಾರದ ಆದಾಯ ಆಸ್ತಿ/ಉತ್ಪಾದನೆಯ ಚಟುವಟಿಕೆಗಳಿಗೆ, ತೊಡಗಿಸುವ ಹಣದ ಬಗ್ಗೆ ಉಲ್ಲೇಖಿಸುತ್ತದೆ. ಹೀಗೆ ತೊಡಗಿಸುವ ಹಣದ ಮಿತಿಯು ಒಂದು ಲಕ್ಷ ಹಾಗೂ ಅದಕ್ಕಿಂತ ಹೆಚ್ಚು. ಈ ವಿಂಗಡಿಸಿದ ವೆಚ್ಚಗಳ ರೀತಿಯ ಪ್ರಕಾರ ಹೋದರೆ ಬಂಡವಾಳ ವೆಚ್ಚದಲ್ಲಾಗುವ ಯಾವುದೇ ಹೆಚ್ಚಳವು ಆರ್ಥಿಕ ಅಭಿವೃದ್ಧಿಗೆ ಪ್ರೋತ್ಸಾಹದಾಯಕವಾಗಿದೆ ಎಂದು ಮತ್ತು ಆದಾಯ ವ್ಯಯವು ಇದಕ್ಕೆ ವ್ಯತಿರಿಕ್ತವಾಗಿದೆಯೆಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಆದರೆ ಅಂತಹ ತೀರ್ಪುಗಳನ್ನು ನೀಡುವ ಮೊದಲು ಯಾವುದೇ ವ್ಯಕ್ತಿ ಈ ಕೆಳಗಿನ ವಿಷಯಗಳನ್ನು ಗಮನದಲ್ಲಿಡಬೇಕಾಗುತ್ತದೆ. ಉನ್ನತ ಮಟ್ಟದ ಅಭಿವೃದ್ಧಿಯನ್ನು ಸಾಧಿಸಲು ಹೊಸ ಹಣ ಹೂಡಿಕೆಯು ಎಷ್ಟು ಮುಖ್ಯವೊ, ಅದೇ ರೀತಿ ಪ್ರಸ್ತುತವಿರುವ ಹೂಡಿಕೆಯನ್ನು ಸರಿಯಾಗಿ ನಿರ್ವಹಿಸುವುದು ಅಷ್ಟೇ ಮುಖ್ಯವಾಗಿದೆ. ಯೋಜಿತ ಉದ್ದೇಶಗಳನ್ನು ಈಡೇರಿಸುವ ಪ್ರಕ್ರಿಯೆಯಲ್ಲಿ ಇವು ಮುಖ್ಯವಾಗುತ್ತವೆ. ವೆಚ್ಚಗಳ ವಿವರಗಳನ್ನು ಪ್ರತಿ ವಿಂಗಡನೆಯಲ್ಲೂ ವಿಶ್ಲೇಷಿಸುವ ಒಂದು ಯತ್ನವನ್ನು ಇಲ್ಲಿ ಮಾಡಲಾಗಿದೆ.

**ಆದಾಯ ಮತ್ತು ಬಂಡವಾಳ ವೆಚ್ಚಗಳು**

ಆದಾಯದಲ್ಲಿನ ಬೆಳವಣಿಗೆ ಮತ್ತು ಬಂಡವಾಳ ವೆಚ್ಚದ ಒಂದು ತುಲನೆಯು, ಆದಾಯವು ಒಟ್ಟಾರೆ ವೆಚ್ಚದಲ್ಲಿ ದೊಡ್ಡ ಭಾಗವನ್ನು ಪಡೆದು ಹೆಚ್ಚಿನ ವೇಗದಲ್ಲಿ ಬೆಳವಣಿಗೆಯನ್ನು ಪಡೆದಿದೆ ಎಂದು ಸೂಚಿಸುತ್ತದೆ. ಬಂಡವಾಳ ವೆಚ್ಚವು ೪೧ ಪಟ್ಟು ಬೆಳೆದಿದ್ದರೆ, ಆದಾಯ ವೆಚ್ಚವು ೮೨ ಪಟ್ಟು ಬೆಳೆದಿದೆ. ಅಂದರೆ ಇದು ಬಂಡವಾಳ ವೆಚ್ಚದ ಸರಿ ಎರಡು ಪಟ್ಟು ಆಗಿರುತ್ತದೆ. ವಾರ್ಷಿಕ ಸಂಚಿತ ರೀತಿಯ ಬೆಳವಣಿಗೆ ದರಗಳ ಲೆಕ್ಕದಲ್ಲಿ, ಆದಾಯ ವೆಚ್ಚವು ವಾರ್ಷಿಕ ೧೩.೪೬ ಶೇಕಡಾದಲ್ಲಿ ಬೆಳೆದಿದೆ ಹಾಗೂ ಬಂಡವಾಳ ವೆಚ್ಚ ವಾರ್ಷಿಕ ೮.೪೧ ಶೇಕಡಾ ದರದಲ್ಲಿ ಬೆಳೆದಿದೆ. ಇನ್ನೊಂದು ಮುಖ್ಯ ವಿಷಯ ಗಮನಿಸಬೇಕಾಗಿರುವುದು ಏನೆಂದರೆ ಒಟ್ಟಾರೆ ವ್ಯಯಗಳಲ್ಲಿ ಆದಾಯ ವ್ಯಯವು ದೊಡ್ಡ ಪಾಲನ್ನು ಪಡೆದಿರುತ್ತದೆ ಹಾಗೂ ಇದು ೧೯೬೧-೬೨ರಲ್ಲಿ ೭೪.೩೨ ಶೇಕಡಾದಿಂದ ೧೯೯೪-೯೫ರಲ್ಲಿ ೮೫.೧೩ ಶೇಕಡಾಕ್ಕೆ ಹೆಚ್ಚಳವಾಗಿದೆ (ಕೋಷ್ಟಕ - ೨). ಇನ್ನೊಂದು ಲೆಕ್ಕದಲ್ಲಿ ಬಂಡವಾಳ ವೆಚ್ಚದ ಪಾಲು ಇಳಿಮುಖವಾಗಿದೆ. ಇದು ೧೯೬೧-೬೨ರಲ್ಲಿ ೨೪.೬೮ ಶೇಕಡಾದಿಂದ ೧೯೯೪-೯೫ರಲ್ಲಿ ೧೬.೮೭ ಶೇಕಡಾಕ್ಕೆ ಇಳಿದಿದೆ.

ಸರ್ಕಾರಿ ವೆಚ್ಚಗಳ ಈ ಮಾದರಿಯು ಒಂದು ಸತ್ಯ ವಿಷಯವನ್ನು ಲೆಕ್ಕ ಹಾಕುತ್ತದೆ. ಏನೆಂದರೆ ಕರ್ನಾಟಕದಲ್ಲಿ ಸರಕಾರಿ ವೆಚ್ಚವು ನಿರ್ವಹಣಾ ಮತ್ತು ಪುನರಾವರ್ತಿಸುವ ರೀತಿಯ ಖರ್ಚುಗಳಿಗೆ ವ್ಯಯವಾಗುತ್ತಿದ್ದು ಆದಾಯೋತ್ಪನ್ನಗಳಿಗೆ ಅಲ್ಲ. ಆದರೆ ಈ ಹಿಂದೆ ವಾದಿಸಿರುವಂತೆ ಈ ವೆಚ್ಚಗಳ ರೀತಿಯ ಬಗ್ಗೆ ಹೆಚ್ಚೇನು ತಿಳಿಸುವುದಿಲ್ಲ. ಏಕೆಂದರೆ ನಿವ್ವಳ ವೆಚ್ಚವು ಸರಿ ಸಮಾನವಾಗಿ ಮುಖ್ಯವಾಗಿರುತ್ತದೆ.

ಹಾಗಿದ್ದರೂ ಬಂಡವಾಳ ನಿರ್ಮಾಣ ಅಥವಾ ಆದಾಯೋತ್ಪನ್ನಗಳಿಗೆ ಬಳೆಯುತ್ತಿರುವ ಸರ್ಕಾರಿ ವೆಚ್ಚದ ದೇಣಿಗೆಯೇನು ಎಂಬ ಹೆಚ್ಚಿನ ವಿವರವನ್ನು ತಸಿಲೆ ಮಾಡಿದಾಗ ಸರ್ಕಾರಿ ವೆಚ್ಚಗಳ ಉಪಯೋಗದ ಒಂದು ಸ್ಪಷ್ಟ ಚಿತ್ರಣ ದೊರೆಯುತ್ತದೆ. ಕರ್ನಾಟಕದಲ್ಲಿ ಬಂಡವಾಳ ನಿರ್ಮಾಣದ ರೀತಿಯು ಚಿಂತನೆಗೆ ಎಡೆ ಮಾಡುತ್ತದೆ. ಮುಂಗಡ ಪತ್ರವನ್ನು ಮೊದಲಿನಿಂದ ಗಮನಿಸಿದಾಗ ಬಂಡವಾಳ ನಿರ್ಮಾಣವು ಪ್ರಮಾಣದಲ್ಲಿ ಬಹಳಷ್ಟು ಚಿಕ್ಕದಿದೆ ಮಾತ್ರವಲ್ಲ ಒಂದು ಕಾಲಾವಧಿಯಲ್ಲಿ ಗಣನೀಯವಾಗಿ ಇಳಿದಿದೆ. ಇದಕ್ಕೆ ವಿರುದ್ಧವಾಗಿ ವರ್ಗಾವಣೆ ಮಾದರಿ ವೆಚ್ಚಗಳಲ್ಲಿ ತೀವ್ರವಾಗಿ ಹೆಚ್ಚಳವಾಗಿದೆ. ಒಟ್ಟಾರೆ ವ್ಯಯದಲ್ಲಿ ನಿವ್ವಳ ಬಂಡವಾಳ ರಚನೆಯ ಪಾಲು ೧೯೭೫ ರಲ್ಲಿ ೨೧.೫೨ ಶೇಕಡಾದಿಂದ ೧೯೮೯ ರಲ್ಲಿ ೯.೭೩ ಶೇಕಡಾಕ್ಕೆ ಇಳಿದಿದೆ. ೧೯೯೦-೯೧ ರಲ್ಲಿ ಅಲ್ಪ ಮಟ್ಟದ ಸುಧಾರಣೆಯೊಂದಿಗೆ ೧೯೯೪-೯೫ ರಲ್ಲಿ ೧೪.೭೯ ಶೇಕಡಾ ಹೆಚ್ಚಳವಾಗಿದೆ. ಇನ್ನೊಂದು ಕಡೆಯಲ್ಲಿ ವರ್ಗಾವಣೆ ಪಾವತಿಗಳ ಪಾಲು ೧೯೭೫ ರಲ್ಲಿ ೨೩.೨೮ ಶೇಕಡಾದಿಂದ ೧೯೮೯ ರಲ್ಲಿ ೫೪.೫೯ಕ್ಕೆ ಹೆಚ್ಚಳವಾಗಿದೆ. ಹಾಗೆ ೧೯೯೪-೯೫ ರಲ್ಲಿ ೫೩.೪೫ ಶೇಕಡಾಕ್ಕೆ ಅಲ್ಪ ಪ್ರಮಾಣದಲ್ಲಿ ಇಳಿಕೆಯಾಗಿದೆ. ೧೯೯೦-೯೧ ರಿಂದ ಇರುವ ರೀತಿಯು ಆರ್ಥಿಕತೆಗೆ ಅನುಕೂಲಕರವಾಗಿ ಬದಲಾಯಿಸುತ್ತಿದೆ.

ಬಂಡವಾಳ ನಿರ್ಮಾಣದ ಹೆಚ್ಚುತ್ತಿರುವ ಪಾಲು ಮುಖ್ಯವಾಗಿ ಈ ಅವಧಿಯಲ್ಲಿ ಸರಕಾರದವತಿಯಿಂದ ಬಂಡವಾಳ ವೆಚ್ಚದ ಗಣನೀಯ ಏರಿಕೆಯಿಂದಾಗಿದೆ. ಇವುಗಳ ಆರ್ಥಿಕ ಅಭಿವೃದ್ಧಿಯನ್ನು ಉದ್ದೀಪನಗೊಳಿಸಲು ಸೂಕ್ತವಾದ ಸನ್ನಿವೇಶಗಳಾಗಿವೆ ಹಾಗೂ ಈ ಪರಿಸ್ಥಿತಿಯನ್ನು ಇನ್ನಷ್ಟು ಸುಧಾರಿಸಲು ಹೆಚ್ಚಿನ ಯತ್ನವನ್ನು ಮಾಡಬೇಕಾಗಿದೆ. ಈ ಬದಲಾವಣೆಗಳು ಸುಧಾರಣೆ ಪ್ರಕ್ರಿಯೆಯಿಂದಾಗಿ ಉಂಟಾಗುವುದಾದರೆ ಅಂತಹ ಬದಲಾವಣೆಗಳು ರಾಜ್ಯ ಹಣಕಾಸಿಗೆ ಒಂದು ಸ್ವಾಗತಾರ್ಹ ಅಂಶವಾಗಿವೆ.

## ಅಭಿವೃದ್ಧಿ ಹಾಗೂ ಅಭಿವೃದ್ಧಿಯೇತರ ವೆಚ್ಚಗಳು

ಸರಕಾರಿ ವೆಚ್ಚಗಳ ಬೆಳವಣಿಗೆ ಮತ್ತು ಅದರ ರೀತಿಯ ಇಲ್ಲಿಯತನಕದ ವಿಶ್ಲೇಷಣೆಯು ಸರ್ಕಾರಿ ವೆಚ್ಚಗಳ ಆದಾಯ ಮತ್ತು ಬಂಡವಾಳ ಗುಣದ ಬಗ್ಗೆ ಹೇಳುತ್ತದೆ. ಆದರೂ ಸರ್ಕಾರಿ ಚಟುವಟಿಕೆಯ ರೀತಿಯು ಸರ್ಕಾರವು ನಿರ್ವಹಿಸಿದ ಅವಧಿ ಕಾರ್ಯಗಳಲ್ಲಿ ಹಾಗೂ ಅದರ ಮೇಲೆ ಮಾಡಿರುವ ಖರ್ಚುಗಳಲ್ಲಿ ಪ್ರತಿಫಲಿತಗೊಳ್ಳುತ್ತದೆ.

ಒಂದು ಕಾಲಾವಧಿಯಲ್ಲಿ ಅವುಗಳ ವಿಸ್ತಾರ ಹಾಗೂ ನಡವಳಿಕೆಯು ಸರ್ಕಾರವು ನಿರ್ವಹಿಸಿದ ವಿವಿಧ ಕಾರ್ಯಗಳನ್ನು ಅದರ ಮಹತ್ವವನ್ನು ಅಭಿವೃದ್ಧಿ ಪ್ರಕ್ರಿಯೆಯು ಸಾಗುತ್ತಿರುವ ದಿಕ್ಕು ಹಾಗೂ ಸರ್ಕಾರ ಅದರಲ್ಲಿ ಭಾಗವಹಿಸಿರುವುದನ್ನು

ಪ್ರತಿಬಿಂಬಿಸುತ್ತದೆ. ಸ್ಥೂಲವಾಗಿ ಕಾರ್ಯಪರ ವರ್ಗೀಕರಣಗಳನ್ನು ಮಾನವ ಸಂಪನ್ಮೂಲಗಳ ಅಭಿವೃದ್ಧಿ, ಭೌತಿಕ ಸಂಪನ್ಮೂಲ ಅಭಿವೃದ್ಧಿ ಮತ್ತು ಬೆಂಬಲ ಸೇವೆಗಳಂತಹ ಸರ್ಕಾರಿ ಕಾರ್ಯಗಳ ಕೆಳಗೆ ಒಟ್ಟುಗೂಡಿಸಬಹುದು. ಲೆಕ್ಕ ಪತ್ರದ ವ್ಯವಸ್ಥೆಯಲ್ಲಿ ಈ ಸೇವೆಗಳನ್ನು ಸಾಮಾಜಿಕ ಮತ್ತು ಸಮುದಾಯಿಕ ಸೇವೆಗಳು, ಆರ್ಥಿಕ ಸೇವೆಗಳು ಮತ್ತು ಸಾಮಾನ್ಯ ಸೇವೆಗಳು ಎಂದು ಉಲ್ಲೇಖಿಸಲಾಗಿದೆ. ಮೊದಲನೇ ಎರಡು ವಿಷಯಗಳನ್ನು ಅಭಿವೃದ್ಧಿ ವೆಚ್ಚಗಳೆಂದೂ ಉಪಚರಿಸಲಾಗಿದೆ ಹಾಗೂ ಕೊನೆಯದನ್ನು ಅಭಿವೃದ್ಧಿಯೇತರ ಅಥವಾ ನಿರ್ವಹಣ ವೆಚ್ಚವೆಂದೂ ಪರಿಗಣಿಸಲಾಗಿದೆ.

ಸರ್ಕಾರಿ ವೆಚ್ಚದ ಗುಣಾಭಿವೃದ್ಧಿ (Nature) ಸುಧಾರಿಸಲು ಸಹಾಯ ಮಾಡುವುದೇ ಅಥವಾ ಇಲ್ಲವೇ ಎಂಬುದು ಪರಿಗಣಿಸಬೇಕಾದ ಪ್ರಮುಖ ಪ್ರಶ್ನೆಯಾಗಿದೆ. ಸರ್ಕಾರಿ ವೆಚ್ಚವು ಬಹಳ ವೇಗವಾಗಿ ಬೆಳೆಯುತ್ತಿದೆ ಹಾಗೂ ರಾಜ್ಯದ ಆಂತರಿಕ ಉತ್ಪಾದನೆಯಂತಹ ಒಟ್ಟಾರೆ ಆರ್ಥಿಕ ಚಟುವಟಿಕೆಯನ್ನು ಪಡೆದಿರುವುದು ಸರ್ಕಾರವು ತೀವ್ರವಾಗಿ ಆರ್ಥಿಕತೆಯಲ್ಲಿ ಪ್ರಾಮುಖ್ಯತೆ ಪಡೆಯುತ್ತಿರುವುದನ್ನು ಸಾದರಪಡಿಸುತ್ತದೆ. ಇಂತಹ ಬೆಳೆಯುತ್ತಿರುವ ಪ್ರಾಮುಖ್ಯತೆಯೊಂದಿಗೆ ಆರ್ಥಿಕತೆ ಅಭಿವೃದ್ಧಿಗೆ ಸರ್ಕಾರದ ಭಾಗವಹಿಸುವಿಕೆಯು ಯಾವುದೇ ರೀತಿಯ ಸುಧಾರಣೆಯನ್ನು ತಂದಿದೆಯೇ ಅಥವಾ ಇಲ್ಲವೇ ಎಂದು ತಿಳಿದುಕೊಳ್ಳುವುದು ಸೂಕ್ತವೆನಿಸುತ್ತದೆ. ಒಂದು ವೇಳೆ ಹಾಗಿದ್ದರೆ ಸರ್ಕಾರವು ಎಷ್ಟರ ಮಟ್ಟಿಗೆ ಪ್ರಗತಿಪರವಾಗಿದೆ? ಈ ಪ್ರಶ್ನೆಗಳು ಉತ್ತರಿಸಲು ಕಷ್ಟವೆನಿಸುತ್ತವೆ. ಏಕೆಂದರೆ ಸರ್ಕಾರಿ ವೆಚ್ಚದಲ್ಲಿ ಬಹುಪಾಲು ಸೇವೆಗಳನ್ನು ಒದಗಿಸುವುದಕ್ಕೆ ತಗಲುತ್ತದೆ, ಅದರ ಮೌಲ್ಯವನ್ನು ನೇರವಾಗಿ ಪರಿಮಾಣಾತ್ಮಕವಾಗಿ ಮಾಪನ ಮಾಡಲು ಸಾಧ್ಯವಿಲ್ಲ. ಇದರ ಹೆಚ್ಚಿನ ಪಾಲು ಹಣದ ಬಳಕೆಯನ್ನು ಎಷ್ಟರಮಟ್ಟಿನ ನಿರ್ವಹಣಾ ಸಾಮರ್ಥ್ಯದೊಂದಿಗೆ ಬಳಸಲಾಗಿದೆ ಎಂಬುದರ ಮೇಲೆ ನಿಂತಿದೆ. ಆದ್ದರಿಂದ ಸರ್ಕಾರಿ ವೆಚ್ಚಗಳ ಬಳಕೆಯ ಸಂಕ್ಷಿಪ್ತ ಅಂದಾಜು ಅಸಾಧ್ಯ. ಸರ್ಕಾರಿ ವೆಚ್ಚದ ಪ್ರಯೋಜನವನ್ನು ತೀರ್ಮಾನಿಸಲು ಒಂದು ಪರ್ಯಾಯ ವ್ಯವಸ್ಥೆ ಏನೆಂದರೆ ಸರ್ಕಾರಿ ಕಾರ್ಯಕ್ರಮಗಳನ್ನು ಹಾಗೂ ಅದಕ್ಕೆ ತಗಲಿರುವ ಖರ್ಚುಗಳನ್ನು ಮಾಪನ ಮಾಡುವುದು. ಹೇಗೆಂದರೆ, ವೆಚ್ಚದ ಮಟ್ಟವು ಒಂದು ನಿರ್ದಿಷ್ಟ ಸಮರ್ಥತೆಯ ಮಟ್ಟದಲ್ಲಿ ಅದರ ಪ್ರಾಮುಖ್ಯತೆಯ ಮಟ್ಟವನ್ನು ಪ್ರತಿಬಿಂಬಿಸುತ್ತದೆ ಎಂಬ ಕಲ್ಪನೆಯೊಂದಿಗೆ ತುಲನೆ ಮಾಡುವುದು. ವಿವಿಧ ರೀತಿಯ ಕಾರ್ಯಕ್ರಮಗಳು ಮಾನವ ಸಂಪನ್ಮೂಲ ಅಭಿವೃದ್ಧಿ ಹಾಗೂ ಭೌತಿಕ ಸಂಪನ್ಮೂಲ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಒಳಗೊಂಡಿರುತ್ತವೆ.

ಸಾಮಾನ್ಯವಾಗಿ ಮೇಲಿನ ಎರಡು ಉದ್ದೇಶಗಳಿಗೆ ಸಂಬಂಧಿಸಿದ ಕಾರ್ಯಗಳು ಶಿಕ್ಷಣ, ವೈದ್ಯಕೀಯ, ಸಾಮಾಜಿಕ ಆರೋಗ್ಯ, ಕೃಷಿ, ಕೈಗಾರಿಕೆ, ಸಾರಿಗೆ ಇತ್ಯಾದಿ ನಿರ್ದಿಷ್ಟ ಕಾರ್ಯಕ್ರಮಗಳ ಸುಧಾರಣೆಗಳನ್ನು ಒಳಗೊಂಡಿರುತ್ತವೆ. ಹಾಗೂ

ಇವುಗಳನ್ನು ಅಭಿವೃದ್ಧಿ ವೆಚ್ಚಗಳೆಂದು ಪರಿಗಣಿಸಲಾಗಿದೆ. ಸರ್ಕಾರದ ಕಾರ್ಯನಿರ್ವಹಣೆಗೆ ಬೆಂಬಲವಾಗಿರುವ ಕಾರ್ಯಕ್ರಮಗಳ ಮೇಲಿನ ವೆಚ್ಚಗಳನ್ನು ಅಭಿವೃದ್ಧಿಯೇತರ ಪಟ್ಟಿಯಲ್ಲಿ ಸೇರಿಸಲಾಗಿದೆ. ವೆಚ್ಚಗಳ ಪಾವತಿ, ಪಿಂಚಣಿಗಳು, ಹಣಕಾಸು ಸೇವೆಗಳು ಇತ್ಯಾದಿಗಳನ್ನು ಒಳಗೊಂಡಿರುತ್ತದೆ. ಹಾಗೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿರಂತರವಾಗಿಡಲು ತಗಲುವ ಆಡಳಿತಾತ್ಮಕ ಮತ್ತು ನಿರ್ವಹಣಾ ವೆಚ್ಚಗಳೆಂದು ಪರಿಗಣಿಸಲಾಗಿದೆ.

ಇಂತಹ ವರ್ಗೀಕರಣದಲ್ಲಿ ಹಲವಾರು ನ್ಯೂನತೆಗಳಿವೆ. ಈ ವರ್ಗೀಕರಣವು ನಿರ್ದಿಷ್ಟವಾಗಿ ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಈ ಒಂದು ವಾದದ ಆಧಾರದ ಮೇಲೆ ಪ್ರಸ್ತುತವಾಗಿರುವ ಅಭಿವೃದ್ಧಿಯ ಮಟ್ಟಕ್ಕೆ ಇದು ನೇರವಾಗಿ ಕೊಡುಗೆ ನೀಡುತ್ತಿಲ್ಲವೆಂಬ ಕಾರಣಕ್ಕೆ ಆಗಿರುವ ವೆಚ್ಚ ಅಭಿವೃದ್ಧಿಯೇತರ ಎಂದು ಹೇಳಲಾಗುವುದಿಲ್ಲ. ಈ ಸೇವೆಗಳ ಬೆಂಬಲವಿಲ್ಲದೆ ಸರ್ಕಾರವು ಕಾರ್ಯಾಚರಿಸಲು ಸಾಧ್ಯವಿಲ್ಲ ಹಾಗೂ ಈ ವೆಚ್ಚಗಳ ಗೈರುಹಾಜರಿಯಲ್ಲಿ ಮುಂದುವರಿಸುವುದು ಅಸಾಧ್ಯ. ಅದೇ ಸಮಯದಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಆಗುವ ಆಡಳಿತಾತ್ಮಕ ವೆಚ್ಚಗಳು ನೇರವಾಗಿ ಅಭಿವೃದ್ಧಿಗೆ ಕೊಡುಗೆ ನೀಡುವುದಿಲ್ಲ. ಆದ್ದರಿಂದ ಅದನ್ನು ಅಭಿವೃದ್ಧಿಯೇತರ ವರ್ಗದ ಪಟ್ಟಿಯಲ್ಲಿ ಸೇರಿಸಬೇಕು ಎಂದು ವಾದಿಸಬಹುದು.

ಆದ್ದರಿಂದ ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ಎಂಬ ಎರಡು ವರ್ಗಗಳು ಸಾಧ್ಯವಿಲ್ಲ. ಒಂದು ಸಮರ್ಥ ಸರ್ಕಾರವನ್ನು ನಿರ್ವಹಿಸಲು ಇವೆರಡರ ಸರಿಯಾದ ಮಿಶ್ರಣವು ಸಹಾಯವಾಗುವುದು. ಬೆಂಬಲಿತ ಖರ್ಚುಗಳನ್ನು ಕನಿಷ್ಠ ಮಟ್ಟದಲ್ಲಿ ನಿಲ್ಲಿಸಲು ಹಾಗೂ ಅದರಿಂದಾಗಿ ಸರ್ಕಾರಿ ನಿಧಿಯ ಉತ್ಪಾದನಾ ಬಳಕೆಯನ್ನು ಸಾಧ್ಯವಾಗಿಸಲು ನಿಗಾವಹಿಸಬೇಕು ಎಂಬ ತರ್ಕಕ್ಕೆ ಪ್ರತಿವಾದ ಇರಲಾರದು. ಪ್ರಸ್ತುತ ಅಭ್ಯಾಸದಲ್ಲಿ ಮೇಲಿನ ವಾದಗಳನ್ನು ಗಮನಿಸಿಕೊಂಡು ವೆಚ್ಚಗಳನ್ನು ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವರ್ಗಗಳ ಕೆಳಗೆ ಪಟ್ಟಿಮಾಡುವ ಯತ್ನವನ್ನು ಮಾಡಿಲ್ಲ. ಸರ್ಕಾರವು ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವರ್ಗ ಎಂಬ ವರ್ಗೀಕರಣವನ್ನು ಈ ಕೆಳಗಿನಂತೆ ವಿಶ್ಲೇಷಣೆಯನ್ನು ನೀಡುವ ಉದ್ದೇಶಕ್ಕಾಗಿ ಬಳಸಲಾಗಿದೆ. ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವರ್ಗಗಳಲ್ಲಿನ ಒಟ್ಟಾರೆ ವೆಚ್ಚವು ೧೯೬೧-೬೨ರಲ್ಲಿ ೯೫.೧೩ ಕೋಟಿಗಳು ಹಾಗೂ ೩೨.೮೧ ಕೋಟಿಗಳು ಮತ್ತು ೧೯೯೪-೯೫ರಲ್ಲಿ ೬೮೧೬.೫೫ ಕೋಟಿಗಳು ಹಾಗೂ ೨೩೫೪.೦೭ ಕೋಟಿಗಳು ಸಾಮಾನ್ಯ ಲೆಕ್ಕದಲ್ಲಿ ಏರಿವೆ (ಕೋಷ್ಟಕ ೩). ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚ ೭೧ ಪಟ್ಟು ಹೆಚ್ಚಾಗಿರುವುದು ಕುತೂಹಲಕಾರಿ ಅಂಶವಾಗಿದೆ. ಯೋಜನಾ ಅಂಶಗಳಲ್ಲಿ ಹೆಚ್ಚಿನ ಶೇಕಡಾ ಹೆಚ್ಚುವರಿಯನ್ನು ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳು ಯೋಜನಾ ಘಟಕದಲ್ಲಿ ತೋರಿಸಿದರೂ ಅವೆರಡರಲ್ಲಿ (ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ) ಯೋಜನೇತರ ಅಂಶವು ಯೋಜನಾ ಅಂಶಕ್ಕಿಂತ ದೊಡ್ಡದಾಗಿದೆ.

ಅಭಿವೃದ್ಧಿ ವೆಚ್ಚದ ಒಟ್ಟು ಮೊತ್ತದ ಪ್ರಮಾಣ ಅಭಿವೃದ್ಧಿಯೇತರ ವೆಚ್ಚಕ್ಕಿಂತ ಅಗಾಧವಾಗಿದೆ ಎಂದು ಕರ್ನಾಟಕದ ಒಟ್ಟು ವೆಚ್ಚದ ರಚನೆಯ ಅಧ್ಯಯನ ಅವಧಿಯಲ್ಲಿ ತೋರ್ಪಡಿಸಿದೆ. ಮತ್ತೊಂದು ಕುತೂಹಲಕಾರಿ ಅಂಶವೆಂದರೆ, ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳು ಉಲ್ಲೇಖಿತ ವರ್ಷಗಳಲ್ಲಿ ಎರಡು ಅನುರೂಪಕತೆಯನ್ನು ಹೊಂದಿವೆ. ಅಭಿವೃದ್ಧಿ ವೆಚ್ಚದ ಪಾಲು ೭೪ ಶೇಕಡಾವಾಗಿದೆ ಮತ್ತು ಅಭಿವೃದ್ಧಿಯೇತರ ವೆಚ್ಚವು ೨೬ ಶೇಕಡಾವಾಗಿದೆ. ಹೀಗಿದ್ದರೂ. ಈ ರೀತಿಯಲ್ಲಿ ೧೯೯೦-೯೧ ರವರೆಗೆ ಅಭಿವೃದ್ಧಿ ವೆಚ್ಚದ ಪಾಲು ಅನುಕ್ರಮವಾಗಿ ಕುಂಠಿತಗೊಂಡಿದೆ. ಇದಕ್ಕೆ ತದ್ವಿರುದ್ಧವಾಗಿ ಅಭಿವೃದ್ಧಿಯೇತರ ವೆಚ್ಚದಲ್ಲಿ ಕ್ರಮವಾಗಿ ಹೆಚ್ಚಳವಾಗಿದೆ. ನಿಜವಾಗಿಯೂ ೧೯೯೦-೯೧ ರವರೆಗೆ ಅಭಿವೃದ್ಧಿ ಘಟಕದ ದರದ ಹೆಚ್ಚುವರಿಯು ಅಭಿವೃದ್ಧಿಯೇತರ ಘಟಕದ ದರಕ್ಕಿಂತ ಕಡಿಮೆಯಾಗಿತ್ತು. ಅಭಿವೃದ್ಧಿ ಘಟಕಕ್ಕೆ ವಾರ್ಷಿಕವಾಗಿ ೧೪.೭೫ ಶೇಕಡಾವಾಗಿದ್ದು ಇದಕ್ಕೆ ತದ್ವಿರುದ್ಧವಾಗಿ ಅಭಿವೃದ್ಧಿಯೇತರ ಘಟಕಕ್ಕೆ ೧೫.೧೨ ಶೇಕಡಾವಾಗಿತ್ತು. ೧೯೯೧-೯೨ ರಿಂದ ಈ ಸ್ಥಿತಿಯಲ್ಲಿ ಸ್ವಲ್ಪ ಮಟ್ಟಿನ ಸುಧಾರಣೆ ಬಂದಿದೆ. ಈ ಬದಲಾವಣೆಯು ಆದಾಯ ಮತ್ತು ಬಂಡವಾಳ ವೆಚ್ಚಗಳಲ್ಲಿ ಆರ್ಥಿಕ ಸುಧಾರಣೆಯ ಅನುರೂಪ ಪ್ರಕ್ರಿಯೆಯಿಂದಾಗಿದೆ ಹಾಗೂ ಈ ರೀತಿಯು ಮುಂದೆಯೂ ಉಳಿದುಕೊಂಡಲ್ಲಿ ಉತ್ಪಾದನೆ ವೆಚ್ಚದ ಅಂಶವು ಸುಧಾರಣೆಗೊಳ್ಳುತ್ತದೆ.

**ಸರ್ಕಾರಿ ವೆಚ್ಚದ ಹಣಕಾಸು**

ಕರ್ನಾಟಕ ರಾಜ್ಯದ ಹಣಕಾಸು ವೆಚ್ಚವು ಗಣನೀಯ ಪ್ರಮಾಣದಲ್ಲಿ ಹೆಚ್ಚುವರಿಯಾಗಿರುವುದನ್ನು ಈ ಹಿಂದೆಯೇ ಗಮನಿಸಿ ದಾಖಲಿಸಿದೆ. ಈ ಹಿನ್ನೆಲೆಯಲ್ಲಿ, ಬೆಳೆಯುತ್ತಿರುವ ಸರ್ಕಾರದ ವೆಚ್ಚಕ್ಕೆ ಹೇಗೆ ಹಣಕಾಸಿನ ವ್ಯವಸ್ಥೆಗೊಳಿಸುವುದು ಅನ್ನುವ ಮೂಲ ಪ್ರಶ್ನೆಗೆ ಉತ್ತರಿಸುವುದು ಅವಶ್ಯವಾಗಿದೆ. ಹಾಗೂ ವರ್ಷದ ಕಂದಾಯದ ಮೂಲಗಳು ರಾಜ್ಯದ ವೆಚ್ಚವನ್ನು ಭರಿಸುವಲ್ಲಿ ಸಾಕಷ್ಟು ಇವೆಯೇ ಅಥವಾ ಸರ್ಕಾರವು ಹಣಕಾಸಿನ ಮೂಲಕ್ಕಾಗಿ ಜಂಜಾಡುತ್ತಿದೆಯೇ ಎಂದು ಗಮನವಹಿಸುವುದು ಕೂಡ ಅಗತ್ಯವಿದೆ. ಇದು ರಾಜ್ಯದ ಹಣಕಾಸಿನ ಹೆಚ್ಚುವರಿ/ಕೊರತೆ ಸ್ಥಾನಗಳ ಮೇಲೆ ಮತ್ತು ರಾಜ್ಯದ ಹಣಕಾಸಿನ ಸಾಧನೆ ಮೇಲೆ ಬೆಳಕು ಚೆಲ್ಲಬಹುದು.

ಹೆಚ್ಚುತ್ತಿರುವ ಸಾರ್ವಜನಿಕ ವೆಚ್ಚದ ಬೇಡಿಕೆಯಲ್ಲಿ ಸಾರ್ವಜನಿಕರ ಮೇಲೆ ಹೊಸ ಮತ್ತು ಹೆಚ್ಚು ಭಾರ ಹೊರಿಸುವ ಮೊದಲು ಪ್ರಸ್ತುತ ಇರುವ ತೆರಿಗೆ ಮೂಲಗಳನ್ನು ಸಮುದಾಯ ಕಲ್ಯಾಣಕ್ಕಾಗಿ ಹೆಚ್ಚು ಪರಿಣಾಮಕಾರಿಯಾಗಿ ಬಳಕೆ ಮಾಡುವ ಅಗತ್ಯತೆ ಇದೆ ಎಂದು ತರ್ಕಬದ್ಧವಾಗಿ ತೆರಿಗೆ ವಿಚಾರ ಸಮಿತಿಯು ಹೇಳಿಕೆ ನೀಡಿದೆ (೧೯೫೩-೫೪, ૩೪). ಹೀಗಿರುವಾಗ, ಸರ್ಕಾರಿ ಆದಾಯವನ್ನು ಒಟ್ಟು ಸೇರಿಸುವ ಮಟ್ಟದಲ್ಲಿ ವಿವಿಧ ಮೂಲಗಳಿಂದ, ತೆರಿಗೆ, ತೆರಿಗೆಯೇತರ,

ಸಾಲ ಇತ್ಯಾದಿಗಳನ್ನು ಪರಿಶೀಲಿಸುವ ಅಗತ್ಯ ಇದೆ. ಇದು ಸಂಪನ್ಮೂಲದ ಕ್ರೋಢೀಕರಣ ಮಾಡುವಲ್ಲಿ ಸರ್ಕಾರದ ಪ್ರಯತ್ನ ಮತ್ತು ಈ ಆರ್ಥಿಕತೆಯಲ್ಲಿ ಪ್ರತಿಯೊರ್ವ ವ್ಯಕ್ತಿಯ ಮೇಲೆ ಇರುವ ತೆರಿಗೆ ಹೊರೆಯ ಲೆಕ್ಕವನ್ನು ಕೊಡುತ್ತದೆ.

## ಸರ್ಕಾರದ ಆದಾಯದ ರಚನೆ

ತೆರಿಗೆ ಆದಾಯ, ತೆರಿಗೆಯೇತರ ಆದಾಯ ಮತ್ತು ಬಂಡವಾಳ ಜಮೆಗಳಂತಹ ಆದಾಯದ ಒಟ್ಟು ಸೇರಿಸದ ವಿಶ್ಲೇಷಣೆಯಲ್ಲಿ ಸರ್ಕಾರದ ಸಂಪನ್ಮೂಲ ಕ್ರೋಢೀಕರಣದ ಯತ್ನ ಸ್ಪಷ್ಟವಾಗಿ ಕಾಣುತ್ತದೆ. ಭಾರತದಲ್ಲಿ ರಾಜ್ಯಗಳ ಮುಖ್ಯವಾದ ಆದಾಯದ ಮೂಲ ಕೇಂದ್ರದಿಂದ ಜಮೆಯಾಗುವಂತಹ ಹಣ. ಆದುದರಿಂದ, ರಾಜ್ಯ ಹಣಕಾಸಿನಲ್ಲಿ ಜಮೆಯ ಪಾತ್ರವನ್ನು ಪ್ರಸ್ತುತ ವಿಶ್ಲೇಷಣೆಯ ಒಂದು ಪ್ರಮುಖ ಅಂಗವಾಗಿದೆ.

ಕೋಷ್ಟಕ ನಾಲ್ಕರ ಪ್ರಕಟಣೆಯಂತೆ, ರಾಜ್ಯದ ಸ್ವಂತ ತೆರಿಗೆ, ತೆರಿಗೆಯೇತರ ಮೂಲ ಮತ್ತು ತೆರಿಗೆ ಹಾಗೂ ತೆರಿಗೆಯೇತರ ಗುಂಪಿನಲ್ಲಿ ಬರತಕ್ಕ ಕೇಂದ್ರದ ಜಮೆಗಿಂತ ತುಲನಾತ್ಮಕವಾಗಿ ರಾಜ್ಯದಲ್ಲಿ ಎಲ್ಲಾ ಮೂಲಗಳಿಂದ ಬರತಕ್ಕ ಆದಾಯದ ಪಾಲು ಅಗಾಧವಾಗಿದೆ. ಇದು ೧೯೬೧-೬೨ ರಲ್ಲಿ ರೂ. ೯೧.೦೨ ಕೋಟಿಗಳಾಗಿದ್ದು, ೧೯೯೪-೯೫ ರ ಅವಧಿಗೆ ೮೧೬೮.೩೬ ಕೋಟಿ ರೂಪಾಯಿಗೆ ಹೆಚ್ಚುವರಿದಿದೆ. ಇದರ ಪ್ರಮಾಣದ ಮಟ್ಟವು ೮೯ ಪಟ್ಟುವಷ್ಟು ಹೆಚ್ಚಳವಾಗಿದೆ. ರಾಜ್ಯದ ಒಟ್ಟು ಆದಾಯದ ಸಂಬಂಧಿತ ಪಾಲು ೧೯೬೧-೬೨ ರಲ್ಲಿ ೫೯.೬೦ ಶೇಕಡಾವಾಗಿದ್ದು, ೧೯೯೪-೯೫ ರ ಅವಧಿಗೆ ೮೨.೫೪ ಶೇಕಡಾಕ್ಕೆ ಏರಿಕೆಯಾಗಿದೆ. ಇನ್ನೊಂದು ಕಡೆ ಬಂಡವಾಳ ಜಮೆಯ ಒಟ್ಟು ಮೊತ್ತದ ಪ್ರಮಾಣವು ೧೯೬೧-೬೨ ರಲ್ಲಿ ರೂ. ೬೧.೬೯ ಕೋಟಿಯಿಂದ ೧೯೯೪-೯೫ ರ ಅವಧಿಗೆ ರೂ. ೧,೭೨೮.೩೧ ಕೋಟಿಗೆ ಏರಿಕೆಯಾಗಿದ್ದು ಇದರ ಪ್ರಮಾಣ ೨೭ ಪಟ್ಟು ಅಧಿಕಗೊಂಡಿದೆ. ರಾಜಸ್ವ ಜಮೆಯ ವಾರ್ಷಿಕ ಸರಾಸರಿ ಬೆಳವಣಿಗೆಯ ದರವು ೧೩.೨೯ ಆಗಿದ್ದು, ಇದಕ್ಕೆ ವಿರೋಧಾಭಾಸವಾಗಿ ಬಂಡವಾಳ ಜಮೆಯ ವಾರ್ಷಿಕ ಸರಾಸರಿ ಬೆಳವಣಿಗೆಯ ದರವು ೮.೪೮ ಶೇಕಡಾ ಆಗಿದೆ. ಇದು ರಾಜಸ್ವ ಜಮೆಯ ಹೆಚ್ಚಳದ ಮಟ್ಟಕ್ಕಿಂತ ಕಡಿಮೆಯಾಗಿದೆ. ರಾಜ್ಯದ ಒಟ್ಟು ಆದಾಯದ ಸಂಬಂಧಿತ ಪಾಲು ೧೯೬೧-೬೨ ರಲ್ಲಿ ೪೦.೪ ಶೇಕಡವಾಗಿದ್ದು, ೧೯೯೪-೯೫ ರ ಅವಧಿಗೆ ೧೭.೪೬ ಶೇಕಡಾಕ್ಕೆ ತೀವ್ರವಾಗಿ ಇಳಿದಿದೆ.

ರಾಜಸ್ವ ಮತ್ತು ಬಂಡವಾಳ ಜಮೆಯ ವಿಶ್ಲೇಷಣೆಯಿಂದ ತಿಳಿದುಬರುವುದೇನೆಂದರೆ ರಾಜ್ಯವು ರಾಜಸ್ವ ಜಮೆಯನ್ನು ಹೆಚ್ಚಾಗಿ ಅವಲಂಬಿಸಿದೆ. ತೆರಿಗೆ ಮತ್ತು ತೆರಿಗೆಯೇತರ ರೂಪದಲ್ಲಿ ಬರತಕ್ಕ ಕೇಂದ್ರದ ಜಮೆಯು ಕಡಿಮೆಯಾಗಿದೆ.

## ರಾಜ್ಯದ ಸ್ವಂತ ಆದಾಯ - ತೆರಿಗೆ ಮತ್ತು ತೆರಿಗೆಯೇತರ

ಕರ್ನಾಟಕದಲ್ಲಿ ತೆರಿಗೆ ಆದಾಯ ಮತ್ತು ತೆರಿಗೆಯೇತರ ಆದಾಯ ಮೂಲವನ್ನು ತುಲಾನಾತ್ಮಕವಾಗಿ ಗಮನಿಸಿದಾಗ ತೆರಿಗೆ ಆದಾಯವು ತೆರಿಗೆಯೇತರ ಆದಾಯಕ್ಕಿಂತ ಅಧಿಕ ವೇಗದಲ್ಲಿ ಹೆಚ್ಚುವರಿಯಾಗುತ್ತಿದೆ. ತೆರಿಗೆ ಆದಾಯವು ೧೬೫ ಪಟ್ಟು ಹೆಚ್ಚುವರಿಯಾದರೆ, ತೆರಿಗೆಯೇತರ ಆದಾಯವು ೩೮ ಪಟ್ಟು ಅಧಿಕಗೊಂಡಿದೆ. ತೆರಿಗೆ ಆದಾಯದ ಬೆಳವಣಿಗೆ ದರವು ಹಿಂದಿನ ವರ್ಷಗಳಲ್ಲಿ ವಾರ್ಷಿಕ ಸರಾಸರಿ ೧೬.೨೪ ಆಗಿದ್ದು ಮುಂದಿನ ವರ್ಷಗಳಲ್ಲಿ ವಾರ್ಷಿಕ ಸರಾಸರಿ ೯.೫೨ ರಷ್ಟಾಗಿದೆ.

೧೯೬೧-೬೨ರಲ್ಲಿ ತೆರಿಗೆ ಮೂಲಗಳಿಂದ ಬಂದ ಆದಾಯವು ರೂ. ೩೬.೦೫ ಕೋಟಿಯಿಂದ ೧೯೯೪-೯೫ಕ್ಕೆ ರೂ. ೫೯೭.೨ ಕೋಟಿಗೆ ಹೆಚ್ಚಳವಾಗಿದೆ. ಇನ್ನೊಂದು ಕಡೆ, ತೆರಿಗೆಯೇತರ ಮೂಲಗಳಿಂದ ಬಂದ ಆದಾಯವು ೧೯೬೧-೬೨ ರಲ್ಲಿ ರೂ. ೫೪.೯೭ ಕೋಟಿಗಳಾಗಿದ್ದು ೧೯೯೪-೯೫ ರಲ್ಲಿ ರೂ. ೨೧೭೧.೧೬ ಕೋಟಿಗೆ ಪೆಚ್ಚುವರಿದಿದೆ. ಇದು ೯೩ ಪಟ್ಟು ಇವರ ಪ್ರಮಾಣದಲ್ಲಿ ಹೆಚ್ಚುವರಿದಿದೆ. ಆದಾಗ್ಯೂ ಒಟ್ಟು ಮೊತ್ತದಲ್ಲಿ ಹೆಚ್ಚಳವಾಗಿದ್ದರೂ ಒಟ್ಟು ಮೊತ್ತದಲ್ಲಿ ಇವರ ಪಾಲು ೧೯೬೧-೬೨ರಲ್ಲಿ ೩೫.೮೨ ರಷ್ಟಿದ್ದು, ೧೯೯೪-೯೫ ರಲ್ಲಿ ೨೭.೧೫ ಕ್ಕೆ ಕುಂಠಿತಗೊಂಡಿದೆ. ಹಾಗೂ ರಾಜ್ಯದ ಸ್ವಂತ ತೆರಿಗೆಯು ವಾರ್ಷಿಕವಾಗಿ ೧೬.೪೧ ಶೇಕಡಾ ಅಧಿಕಗೊಂಡಿದ್ದು, ಕೇಂದ್ರದ ಜಮೆಯು ವಾರ್ಷಿಕವಾಗಿ ೧೫.೬೯ ಶೇಕಡಾದಷ್ಟು ಹೆಚ್ಚುವರಿದಿದ್ದು, ಇದು ರಾಜ್ಯದ ಜಮೆಯ ಹೆಚ್ಚಳದಂತೆ ಕಡಿಮೆಯಾಗಿದೆ. ಕೇಂದ್ರದ ಜಮೆಯು ಗಣನೀಯವಾಗಿ ಹೆಚ್ಚುವರಿದಿದ್ದರೂ ಇದರಿಂದಾಗಿ ಆರ್ಥಿಕ ಅವಶ್ಯಕತೆಗಳನ್ನು ಎದುರಿಸಲು ಸರ್ಕಾರ ಶಕ್ತವಾದರೂ ಸಹ ಇದರ ಪಾಲಿನಲ್ಲಿ ಇಳಿಕೆಯಾಗಿರುವುದು. ರಾಜ್ಯವು ಸ್ವಂತ ಸಂಪನ್ಮೂಲವನ್ನು ಜಮೆಯಾಗಿರುವ ಸಂಪನ್ಮೂಲಕ್ಕಿಂತ ಹೆಚ್ಚು ಅವಲಂಬಿಸಿದೆ.

## ಸರ್ಕಾರದ ತೆರಿಗೆ ಸ್ಥಿತಿಸ್ಥಾಪಕತೆ

ಉಲ್ಲೇಖ ಮಾಡಿದ ವರ್ಷಗಳಲ್ಲಿ ರಾಜ್ಯದ ಆಂತರಿಕ ಉತ್ಪಾದನೆಗೆ ಸಂಬಂಧಿಸಿದಂತೆ ಸರ್ಕಾರದ ಆದಾಯವು ಎರಡು ಪಟ್ಟು ಹೆಚ್ಚಳವಾಗಿದೆ. ೧೯೬೧-೬೨ರಲ್ಲಿ ರಾಜ್ಯದ ಆಂತರಿಕ ಉತ್ಪಾದನೆಯಲ್ಲಿ ಸರ್ಕಾರದ ಆದಾಯ ೧೪.೫೩ ಶೇಕಡಾದಿಂದ ೧೯೯೪-೯೫ರಲ್ಲಿ ೩೭.೫೮ಕ್ಕೆ ಅಧಿಕಗೊಂಡಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ, ರಾಜ್ಯದ ತೆರಿಗೆ ಜಮೆಯಲ್ಲಿ ಸರ್ಕಾರದ ಆದಾಯದ ಪ್ರತಿಕ್ರಿಯೆಯ (Responsiveness) ವಿಶ್ಲೇಷಣೆಯನ್ನು ಒಟ್ಟು ಮೊತ್ತ (ಒಟ್ಟು ಸರ್ಕಾರದ ಜಮೆ) ಮತ್ತು ಒಟ್ಟು ಮೊತ್ತವಲ್ಲದ (ತೆರಿಗೆ ಆದಾಯ, ತೆರಿಗೆಯೇತರ ಮತ್ತು ಒಟ್ಟು ರಾಜಸ್ವ ಜಮೆ) ಮಟ್ಟದಲ್ಲಿ ಪ್ರಯತ್ನಿಸಲಾಗಿದೆ. ಪಡೆದಿರುವ ಕಂದಾಯ ಮತ್ತು ರಾಜ್ಯದ ಆಂತರಿಕ ಉತ್ಪಾದನೆಯ ಅಂಕಿ-

ಅಂಶಗಳು, ತಲಾ ಕಂದಾಯದಂತೆ ತೆಗೆದುಕೊಳ್ಳಲಾಗಿದೆ (ಬೆಲೆ ಮತ್ತು ಜನಸಂಖ್ಯೆ ಬೆಳವಣಿಗೆಯನ್ನು ಹೊಂದಿಕೊಂಡಿದೆ). ಈ ಮಾದರಿಯ ಉಪಯೋಗವೆಂದರೆ ನೇರವಾಗಿ ನಿರಂತರ ಸ್ಥಿತಿಸ್ಥಾಪಕವು ಬದಲಾವಣೆಯನ್ನು (Variables) ಪಡೆಯುವುದು ಮತ್ತು ರಿಗ್ರೇಷನ್ ಕೋ ಎಫಿಶಿಯಂಟ್ (Regression Co-efficient) (ಬಿ) ಸ್ಥಾಪಕತ್ವ ಕೋ-ಎಫಿಶೀಯೆಂಟ್‌ನ್ನು ಪ್ರತಿನಿಧಿಸುತ್ತದೆ.

ರಾಜ್ಯದ ಜಮೆಯು ಆದಾಯದಲ್ಲಿ ಬದಲಾವಣೆ ತರಲು ಮುಖ್ಯ ಜವಾಬ್ದಾರಿಯಾಗಿದೆ ಎಂದು ಅನುಭವಿ ಫಲಿತಾಂಶವು ತೋರ್ಪಡಿಸುತ್ತದೆ. ತೆರಿಗೆ ಆದಾಯ ಹೆಚ್ಚಿನ ಪ್ರಮಾಣದಲ್ಲಿ ಪ್ರತಿಕ್ರಿಯೆಯನ್ನು ಪ್ರಕಟಗೊಳಿಸಿದೆ ಎಂದು ಗಮನಿಸಲಾಗಿದೆ (೪.೬೬ ಶೇಕಡಾ). ತೆರಿಗೆಯೇತರ ಆದಾಯ ಸ್ಥಿತಿ ಸ್ಥಾಪಕತ್ವವಾಗಿದ್ದರೂ ಪ್ರತಿ ಒಂದು ಶೇಕಡಾ ಆದಾಯದ ಹೆಚ್ಚುವರಿಯಲ್ಲಿ ಕೇವಲ ೧.೭ ಶೇಕಡಾ ಹೆಚ್ಚುವರಿಯು ತೋರಿಸುತ್ತಿದ್ದು ಪಟ್ಟಿಭದ್ರವಾಗಿ ತೆರಿಗೆ ಆದಾಯದಲ್ಲಿ ೪.೬೬ ಶೇಕಡಾ ಹೆಚ್ಚಳವನ್ನು ತೋರುತ್ತದೆ.

ಉನ್ನತ ಆದಾಯ ಸ್ಥಿತಿಸ್ಥಾಪಕತೆಯನ್ನು ಸರ್ಕಾರಿ ಆದಾಯದಲ್ಲಿ ಸಾಮಾನ್ಯವಾಗಿ ಹಾಗೂ ತೆರಿಗೆ ಆದಾಯದಲ್ಲಿ ನಿರ್ದಿಷ್ಟವಾಗಿ ಗಮನಿಸಲಾಗಿದೆ. ಇದು ರಾಜ್ಯ ಹಣಕಾಸಿನ ಒಂದು ಉತ್ತಮ ರೀತಿಯನ್ನು ಸೂಚಿಸುತ್ತದೆ. ಹೇಗೆಂದರೆ ರಾಜ್ಯದ ಆದಾಯವು ಹೆಚ್ಚುತ್ತಿರುವಂತೆ ಸರ್ಕಾರಿ ಆದಾಯವು ತನ್ನಷ್ಟಕ್ಕೆ ಬೆಳೆಯುವುದು ಹಾಗೂ ಇದು ಸರ್ಕಾರವು ತನ್ನ ಜವಾಬ್ದಾರಿಗಳನ್ನು ಈಡೇರಿಸಲು ಸಾಧ್ಯಗೊಳಿಸುತ್ತದೆ. ಸಮೋತದಲ್ಲಿ (೧೯೬೧, vii) ಪ್ರೊ. ವಿ.ಕೆ.ಆರ್.ವಿ. ರಾವ್ ತನ್ನ ಸಂಪಾದಕೀಯ ಪರಿಚಯದಲ್ಲಿ ಈ ಕೆಳಗಿನ ಹೇಳಿಕೆಯನ್ನು ಕೊಟ್ಟಿದ್ದಾರೆ. 'ರಾಷ್ಟ್ರೀಯ ಆದಾಯದ ಹೆಚ್ಚಳವು ಯಾವ ಮಟ್ಟದ ತನಕ ಆರ್ಥಿಕ ಪ್ರಗತಿಯನ್ನು ಹಿಂಬಾಲಿಸುವುದೋ ಅಲ್ಲಿಯ ತನಕ ಸಾರ್ವಜನಿಕ ಖಜಾನೆಯೊಳಗೆ ತೆರಿಗೆಯಾಗಿ ಹೀರಲ್ಪಡುವುದು. ಇದು ಆರ್ಥಿಕ ಬೆಳವಣಿಗೆ ಮತ್ತು ಸ್ಥಿರತೆಯ ವೇಗವನ್ನು ಹೆಚ್ಚಿಸುವ ಒಂದು ಬಹು ಮುಖ್ಯ ವಿಷಯವೆನಿಸುತ್ತದೆ.'

ಹೀಗಿರುವಾಗ, ತೆರಿಗೆಯ ಪ್ರತಿಕ್ರಿಯೆಯನ್ನು (Responsiveness) ಸಾಮಾನ್ಯವಾಗಿ ಸರಕಾರಿ ಚಟುವಟಿಕೆಯ ಮಾರ್ಗದರ್ಶಿ ತತ್ವವೆಂದು ತೆಗೆದುಕೊಳ್ಳಲಾಗಿದೆ. ಆದಾಯದ ಅನುಪಾತಕ್ಕೆ ಅನುಗುಣವಾಗಿ ತೆರಿಗೆಯ ಹೆಚ್ಚಳವು ತೆರಿಗೆಯ ಸಮರ್ಪಕ ಬಳಕೆಯ ಒಂದೇ ಉತ್ತಮ ಪ್ರಗತಿಯಾಗಿದೆ ಎಂದು ವಾದಿಸಲಾಗಿದೆ. ಆದುದರಿಂದ ಕರ್ನಾಟಕದ ಫಲಿತಾಂಶಗಳನ್ನು ಗಮನಿಸಿದಾಗ ತೆರಿಗೆ ಸಾಮರ್ಥ್ಯದ ಉತ್ತಮ ಬಳಕೆಯನ್ನು ಸೂಚಿಸುತ್ತದೆ.

**ಉಪಸಂಹಾರ**

ಹಿಂದಿನ ಭಾಗದಲ್ಲಿ ಗಮನಿಸಿರುವಂತೆ ಕರ್ನಾಟಕ ರಾಜ್ಯದ ಹಣಕಾಸುಗಳು ಗಣನೀಯವಾದ ಬದಲಾವಣೆಗಳಿಗೆ ಒಳಪಟ್ಟಿವೆ. ಹೀಗಿದ್ದರೂ, ಇತ್ತೀಚಿನ ಒಟ್ಟಾರೆ ರೀತಿಗಳು (೧೯೯೧ರಿಂದ ೯೨) ರಾಜ್ಯದ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಹೆಚ್ಚು ಪ್ರೋತ್ಸಾಹದಾಯಕವಾಗಿ ಬದಲಾಗುತ್ತಿದ್ದು ಇದು ಹಿಂದಿನ ವರ್ಷಗಳಲ್ಲಿ ಗಮನಿಸುತ್ತಿದ್ದ ಕೆಟ್ಟ ಪರಿಣಾಮಗಳಿಗೆ ವಿರುದ್ಧವಾಗಿದೆ. ೧೯೮೦-೯೦ ದಶಕವು ಕೊರತೆ ಆದಾಯದ ಬೃಹತ್ ಪ್ರಮಾಣದ ಹೆಚ್ಚಳ ಲಕ್ಷಣವನ್ನು ಹೊಂದಿದೆ ಹಾಗೂ ಆದಾಯದಲ್ಲಿ ಬಂಡವಾಳಕ್ಕಿಂತ ಬೃಹತ್ ಹೆಚ್ಚಳ,· ಯೋಜನೆಗಿಂತ ಯೋಜನೆಯೇತರ ಹಾಗೂ ಯೋಜನೆ ಬಂಡವಾಳ ವೆಚ್ಚಕ್ಕಿಂತ ಯೋಜಿತ ಆದಾಯ ಹೆಚ್ಚಳದ ಲಕ್ಷಣವನ್ನು ಹೊಂದಿದೆ. ಹಾಗೆ, ಮುಂಗಡ ಪತ್ರದ ಮೂಲಗಳಿಂದ ನಿವ್ವಳ ಬಂಡವಾಳ ರಚನೆಯ ಪ್ರಮಾಣ ಗಣನೀಯವಾಗಿ ಇಳಿದಿರುವುದು ಗಮನಿಸಲಾಗಿದೆ. ೧೯೯೧-೯೨ರಿಂದ ನಿವ್ವಳ ಬಂಡವಾಳ ರಚನೆಯಲ್ಲಿ ಸ್ವಲ್ಪ ಪ್ರಮಾಣದ ಸುಧಾರಣೆಯನ್ನು ಗಮನಿಸಲಾಗಿದೆ. ಈ ರೀತಿಯು ಹೀಗೆ ಮುಂದುವರೆದರೆ ರಾಜ್ಯದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಮಟ್ಟವನ್ನು ಹೆಚ್ಚಿಸುವುದು.

## ಕೋಷ್ಟಕ - ೧
## ಕರ್ನಾಟಕದ ಆಯ - ವ್ಯಯದ ಸ್ಥಾನ

| ವರ್ಷ | ಕಂದಾಯ ಲೆಕ್ಕ | ಬಂಡವಾಳ ಲೆಕ್ಕ | ಒಟ್ಟು ಮೊತ್ತ |
|---|---|---|---|
| ೧೯೬೦-೬೧ | ೨.೨೮ | ೨.೨೯ | ೦.೦೧ |
| ೧೯೬೧-೬೨ | ೪.೬೭ | ೧.೩೯ | ೬.೦೧ |
| ೧೯೬೬-೬೭ | ೪.೯೬ | ೧೭.೦೭ | ೧೦.೪೫ |
| ೧೯೬೯-೭೦ | ೨೦.೧೮ | ೨೧.೧ | ೦.೭೪ |
| ೧೯೭೪-೭೫ | ೪೮.೧೮ | ೩೩.೭೭ | ೧೫.೪೨ |
| ೧೯೭೮-೭೯ | ೫೧.೭ | ೪೬.೨೭ | ೭.೯ |
| ೧೯೮೦-೮೧ | ೫೮.೫೬ | ೯೪.೪೯ | ೪೦.೩೨ |
| ೧೯೮೫-೮೬ | ೮೪.೭೪ | ೧೭೧.೨ | ೮೧.೪೮ |
| ೧೯೮೯-೯೦ | ೧೧೭.೮೧ | ೪೬.೮೪ | ೧೭೬.೩ |
| ೧೯೯೦-೯೧ | ೭೮.೯ | ೧೩೧.೩ | ೫೨.೧ |
| ೧೯೯೧-೯೨ | ೧೭೮.೭ | ೨೦೯.೭ | ೩೧ |
| ೧೯೯೨-೯೩ | ೧೭೦.೦೨ | ೧೧೪.೨ | ೫೫.೮೨ |
| ೧೯೯೩-೯೪ (RE) | ೨೧೨.೬೧ | ೨೧೫.೨೪ | ೨.೬೩ |
| ೧೯೯೪-೯೫ (BE) | ೨೧೯.೯೪ | ೪೨೨.೦೨ | ೨೦೨.೦೮ |

ಸೂಚನೆ: ಹೆಚ್ಚುವರಿ + RE = ಪರಿಷ್ಕೃತ ಅಂದಾಜು
ಕೊರತೆ - BE = ಆಯವ್ಯಯ ಅಂದಾಜು

ಮೂಲ: ಗಾಯತ್ರಿ ಕೆ, ೧೯೯೧, ಕರ್ನಾಟಕದಲ್ಲಿ ಸಾರ್ವಜನಿಕ ವೆಚ್ಚದ ಮಾದರಿ, ಸಂಶೋಧನಾ ವರದಿ, ಐಸೆಕ್, ಬೆಂಗಳೂರು, ೧೯೮೯ರಿಂದ ೧೯೯೦ ಮತ್ತು ರಿಸರ್ವ ಬ್ಯಾಂಕ್ ಆಫ್ ಇಂಡಿಯಾ ಪ್ರಕಟಣೆ

## ಕೋಷ್ಟಕ - ೨

### ಕರ್ನಾಟಕದಲ್ಲಿ ಕಂದಾಯ ಮತ್ತು ಆಯವ್ಯಯ ವೆಚ್ಚ

(ರೂ. ಕೋಟಿಗಳಲ್ಲಿ)

| ವರ್ಷ | ಕಂದಾಯ ಲೆಕ್ಕ | ಬಂಡವಾಳ ಲೆಕ್ಕ | ಒಟ್ಟು ಮೊತ್ತ |
|---|---|---|---|
| ೧೯೬೧-೬೨ | ೯೫.೬೯ | ೩೩.೦೬ | ೧೨೮.೭೫ |
| | (೭೪.೩೨) | (೨೫.೬೮) | |
| ೧೯೬೬-೬೭ | ೧೫೧.೪೪ | ೩೮.೨೫ | ೧೮೯.೬೯ |
| | (೭೯.೮೪) | (೨೦.೧೬) | |
| ೧೯೬೯-೭೦ | ೨೧೪.೫೪ | ೫೭.೯೭ | ೨೭೨.೫೧ |
| | (೭೮.೭೩) | (೨೧.೨೭) | |
| ೧೯೭೪-೭೫ | ೩೬೪.೯೨ | ೫೮.೯೨ | ೪೨೩.೮೪ |
| | (೮೬.೧೦) | (೧೩.೯೦) | |
| ೧೯೭೮-೭೯ | ೬೩೬.೮೫ | ೧೩೫.೦೯ | ೭೭೧.೯೪ |
| | (೮೨.೫೦) | (೧೭.೫೦) | |
| ೧೯೮೦-೮೧ | ೮೪೯.೯ | ೧೭೧.೬೮ | ೧೦೬೬.೫೮ |
| | (೮೩.೯೦) | (೧೬.೧೦) | |
| ೧೯೮೫-೮೬ | ೨೦೯೭.೮೫ | ೨೭೮.೨೨ | ೨೩೭೬.೦೭ |
| | (೮೮.೨೯) | (೧೧.೭೦) | |
| ೧೯೮೯-೯೦ | ೩೪೮೨.೯೪ | ೩೩೭.೯೯ | ೩೮೨೦.೯೩ |
| | (೯೧.೧೫) | (೮.೮೫) | |
| ೧೯೯೦-೯೧ | ೩೯೭೧.೦೯ | ೬೫೪.೮೧ | ೪೬೨೫.೯ |
| | (೮೫.೮೪) | (೧೪.೧೬) | |
| ೧೯೯೧-೯೨ | ೪೯೫೪.೧೨ | ೭೮೫.೮೬ | ೫೭೩೯.೯೮ |
| | (೮೬.೩೧) | (೧೩.೬೯) | |
| ೧೯೯೨-೯೩ | ೫೫೯೧.೬೯ | ೭೮೬.೬೩ | ೬೩೭೮.೩೨ |
| | (೮೭.೬೭) | (೧೨.೩೩) | |
| ೧೯೯೩-೯೪ B.E. | ೬೪೫೯.೭೧ | ೧೧೮೦.೬೬ | ೭೬೪೦.೩೭ |
| | (೮೪.೫೫) | (೧೫.೪೫) | |
| ೧೯೯೪-೯೫ B.E. | ೭೯೪೮.೬೩ | ೧೩೮೮.೦೩ | ೯೩೩೬.೬೬ |
| | (೮೫.೧೩) | (೧೪.೮೭) | |

ಸೂಚನೆ: ಆವರಣದೊಳಗೆ ಒಟ್ಟು ಮೊತ್ತದ ಶೇಕಡಾವಾರು ಅಂಕಿ ಅಂಶಗಳನ್ನು ಕೊಡಲಾಗಿದೆ.

ಮೂಲ: ಕೋಷ್ಟಕ ಒಂದರಲ್ಲಿ ತಿಳಿಸಿದಂತೆ

## ಕೋಷ್ಟಕ - ೩

## ಕರ್ನಾಟಕದಲ್ಲಿ ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳು

(ರೂ. ಕೋಟಿಗಳಲ್ಲಿ)

| | ಅಭಿವೃದ್ಧಿ ಯೋಜನೆ | ಯೋಜನೇತರ | ಒಟ್ಟು ಮೊತ್ತ | ಅಭಿವೃದ್ಧಿಯೇತರ ಯೋಜನೇತರ | | ಒಟ್ಟು ಮೊತ್ತ |
|---|---|---|---|---|---|---|
| ೧೯೬೧-೬೨ | ೩೦.೧೮ | ೬೪.೯೫ | ೯೫.೧೩ | ೭.೫೪ | ೨೫.೨೭ | ೩೨.೮೧ |
| ೧೯೭೪-೭೫ | ೮೬.೯ | ೨೨೩.೧೭ | ೩೧೦.೦೬ | ೦.೦೩ | ೧೦೬.೬೫ | ೧೦೬.೬೮ |
| ೧೯೭೮-೭೯ | ೨೧೮.೭೮ | ೩೫೮.೪ | ೫೭೭.೧೮ | ೦.೩೧ | ೧೮೫.೨೮ | ೧೮೫.೫೯ |
| ೧೯೮೦-೮೧ | ೨೮೯.೦೬ | ೪೭೯.೨೭ | ೭೬೮.೩೩ | ೧.೩೪ | ೨೬೩.೨೭ | ೨೬೪.೬೧ |
| ೧೯೮೫-೮೬ | ೬೨೦.೦೬ | ೧೦೫೫.೨೨ | ೧೬೭೫.೨೮ | ೯.೬೪ | ೬೪೦.೩ | ೬೪೯.೯೪ |
| ೧೯೮೯-೯೦ | ೯೮೩.೬೯ | ೧೭೯೭.೪೧ | ೨೭೮೧.೧ | ೧೭.೨೮ | ೧೦೫೮.೧೭ | ೧೦೭೫.೪೫ |
| ೧೯೯೦-೯೧ | ೧೪೪೦.೯೯ | ೧೯೨೦.೬೫ | ೩೩೪೧.೬೪ | ೧೬.೨೮ | ೧೧೬೯.೭ | ೧೧೮೫.೯೮ |
| ೧೯೯೧-೯೨ | ೧೬೬೩.೭೧ | ೨೫೨೨.೭೯ | ೪೧೮೬.೫ | ೧೮.೬೯ | ೧೪೧೬.೯ | ೧೪೩೫.೫೯ |
| ೧೯೯೪-೯೫(B.E.) | ೩೪೨೪.೭೨ | ೩೩೯೧.೮೩ | ೬೮೧೬.೫೫ | ೩೭.೫೧ | ೨೩೧೬.೫೬ | ೨೩೫೪.೦೭ |

ಮೂಲ: ಕೋಷ್ಟಕ ಒಂದರಲ್ಲಿ ತಿಳಿದಂತೆ

## ಕೋಷ್ಟಕ - ೪

## ಕರ್ನಾಟಕ ಸರ್ಕಾರದ ಜಮೆ (ಸಂದಾಯಗಳು)

(ರೂ. ಕೋಟಿಗಳಲ್ಲಿ)

| ವರ್ಷ | ಕಂದಾಯ | ಬಂಡವಾಳ | ಒಟ್ಟು ಮೊತ್ತ |
|---|---|---|---|
| ೧೯೬೧-೬೨ | ೯೧.೦೨ | ೬೧.೬೯ | ೧೫೨.೭೧ |
| | (೫೯.೬೦) | (೪೦.೪೦) | |
| ೧೯೬೬-೬೭ | ೧೫೪.೪ | ೧೦೭.೪೪ | ೨೬೧.೮೪ |
| | (೫೮.೯೭) | (೪೧.೦೩) | |
| ೧೯೬೯-೭೦ | ೨೩೪.೭೨ | ೧೩೨.೪ | ೩೬೭.೧೨ |
| | (೬೩.೯೩) | (೩೬.೦೭) | |
| ೧೯೭೪-೭೫ | ೪೧೩.೧ | ೧೦೭.೯೭ | ೫೨೧.೦೭ |
| | (೭೯.೨೮) | (೨೦.೭೨) | |
| ೧೯೭೮-೭೯ | ೬೮೮.೫೫ | ೨೧೬.೬೨ | ೯೦೫.೧೭ |
| | (೭೬.೦೭) | (೨೩.೯೩) | |
| ೧೯೮೦-೮೧ | ೯೫೩.೪೬ | ೨೮೩.೦೧ | ೧೨೩೬.೪೭ |
| | (೭೭.೧೧) | (೨೨.೮೯) | |
| ೧೯೮೫-೮೬ | ೨೦೧೩.೧೧ | ೧೦೫೯.೭೬ | ೩೦೭೨.೮೭ |
| | (೬೫.೫೧) | (೩೪.೪೯) | |
| ೧೯೮೯-೯೦ | ೩೩೩೬.೪೮ | ೧೦೯೧.೮೬ | ೪೪೨೮.೩೪ |
| | (೭೫.೩೪) | (೨೪.೬೬) | |
| ೧೯೯೦-೯೧ | ೩೮೯೨.೧೮ | ೧೧೧೭.೯೬ | ೫೦೧೦.೧೪ |
| | (೭೭.೬೯) | (೨೨.೩೧) | |
| ೧೯೯೧-೯೨ | ೪೭೭೫.೪೬ | ೧೪೩೨.೨೧ | ೬೨೦೭.೬೭ |
| | (೭೬.೯೩) | (೨೩.೦೭) | |
| ೧೯೯೨-೯೩ | ೫೪೨೧.೬೬ | ೧೬೦೪.೧೯ | ೭೦೨೫.೮೫ |
| | (೭೭.೧೭) | (೨೨.೮೩) | |
| ೧೯೯೩-೯೪ (B.E.) | ೬೬೭೨.೩೨ | ೧೬೫೫.೮೯ | ೮೩೨೮.೨೧ |
| | (೮೦.೧೨) | (೧೯.೮೮) | |
| ೧೯೯೪-೯೫ (B.E.) | ೮೧೬೮.೩೬ | ೧೭೨೮.೩೧ | ೯೯೮೬.೬೭ |
| | (೮೨.೫೪) | (೧೭.೪೬) | |

ಸೂಚನೆ: ಆವರಣದೊಳಗೆ ಒಟ್ಟು ಮೊತ್ತದ ಶೇಕಡಾವಾರು ಅಂಕಿ ಅಂಶಗಳನ್ನು ಕೊಡಲಾಗಿದೆ.

ಮೂಲ: ಕೋಷ್ಟಕ ಒಂದರಲ್ಲಿ ತಿಳಿಸಿದಂತೆ

# ಕರ್ನಾಟಕದಲ್ಲಿ ಕೈಗಾರಿಕಾ ಸಂಬಂಧಗಳು: ಒಂದು ಪಕ್ಷಿನೋಟ

**ಸಿ.ಕೆ. ರೇಣುಕಾರ್ಯ**

ಕೈಗಾರಿಕೆಗಳ ಸ್ಥಾಪನೆ ಮತ್ತು ವಿಕಾಸದ ದೃಷ್ಟಿಯಿಂದ ಕರ್ನಾಟಕ ಇಡೀ ಭಾರತದಲ್ಲೇ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ವಿಪುಲವಾದ ಸಂಪನ್ಮೂಲಗಳು, ಸರ್ಕಾರದ ಪ್ರೋತ್ಸಾಹ, ಖಾಸಗೀ ಉದ್ಯಮಿಗಳ ಉತ್ಸಾಹದಿಂದಾಗಿ ವೈವಿಧ್ಯಮಯವಾದ ಕೈಗಾರಿಕೆಗಳು ಕರ್ನಾಟಕದಲ್ಲಿ ವಿಕಾಸಗೊಂಡಿವೆ. ಖಾಸಗೀ ಕ್ಷೇತ್ರ, ಸಾರ್ವಜನಿಕ ವಲಯಗಳಲ್ಲಿ ಅನೇಕ ರೀತಿಯ ಕೈಗಾರಿಕೆಗಳು ಅಭಿವೃದ್ಧಿಗೊಂಡಿವೆ. ಕೈಗಾರಿಕೆಗಳೊಂದಿಗೆ ಕೈಗಾರಿಕಾ ಕಾರ್ಮಿಕರ ಸಂಖ್ಯೆ ಸಹ ಬೆಳೆದಿದೆ. ಇಂದು ಸುಮಾರು ೧೫.೪೯ ಲಕ್ಷ ಜನರು ವ್ಯವಸ್ಥಿತ ಕ್ಷೇತ್ರದಲ್ಲಿ ಉದ್ಯೋಗಸ್ಥರಾಗಿದ್ದಾರೆ. ಸದ್ಯದಲ್ಲಿ ರಾಜ್ಯದಲ್ಲಿ ೭೨೪ ದೊಡ್ಡ ಹಾಗೂ ಮಧ್ಯಮ ಪ್ರಮಾಣದ ಕೈಗಾರಿಕೆಗಳಿದ್ದು ಇವುಗಳಲ್ಲಿ ೨.೭೭ ಲಕ್ಷ ಜನ ಉದ್ಯೋಗಸ್ಥರಿದ್ದಾರೆ. ಈ ಕೈಗಾರಿಕೆಗಳಲ್ಲಿ ಹೂಡಿಕೆಯಾಗಿರುವ ಬಂಡವಾಳದ ಪ್ರಮಾಣ ೬೨೬೮ ಕೋಟಿ ರೂಪಾಯಿಗಳು.

ಕೈಗಾರಿಕೆಗಳಲ್ಲಿನ ಉತ್ಪಾದನೆಯ ಪ್ರಗತಿ ಅತಿ ಮುಖ್ಯವಾಗಿ ಉತ್ತಮವಾದ ಕೈಗಾರಿಕಾ ಬಾಂಧವ್ಯದ ಮೇಲೆ ಅವಲಂಬಿತವಾಗಿದೆ ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ಕಾರಣದಿಂದಲೇ ಕೈಗಾರಿಕೆಗಳ ಮಾಲೀಕರು ಮತ್ತು ಕಾರ್ಮಿಕರ ನಡುವೆ ಉತ್ತಮವಾದ ಸಂಬಂಧವನ್ನು ಕಾಪಾಡಿಕೊಂಡು ಬರುವುದರಲ್ಲಿ ಸರ್ಕಾರವೂ ತನ್ನ ಪ್ರಯತ್ನಗಳನ್ನು ನಡೆಸುತ್ತಲೇ ಬಂದಿದೆ. ರಾಷ್ಟ್ರ ಸರ್ಕಾರ ಅನೇಕ ಕಾನೂನುಗಳ ಮೂಲಕ ಕೈಗಾರಿಕಾ ಸಂಬಂಧವನ್ನು ಉತ್ತಮ ಮಟ್ಟದಲ್ಲಿಟ್ಟಿರುವ ಪ್ರಯತ್ನದಲ್ಲಿ ತೊಡಗುತ್ತಾ ಬಂದಿದ್ದು ಕರ್ನಾಟಕ ಸರ್ಕಾರವೂ ಸಹ ಇವುಗಳನ್ನು ಅನುಸರಿಸುತ್ತಾ ಬಂದಿದೆ.

## ಹಿನ್ನೆಲೆ

ಸ್ವಾತಂತ್ರ್ಯಪೂರ್ವದಲ್ಲಿ ಕೈಗಾರಿಕಾ ಬಾಂಧವ್ಯವನ್ನು ಉತ್ತಮವಾಗಿಟ್ಟುಕೊಳ್ಳುವ ದೃಷ್ಟಿಯಿಂದ ಸರ್ಕಾರ ಜಾರಿಗೆ ತಂದ ಕಾನೂನುಗಳೆಂದರೆ, ೧೯೩೭ರ ಮೈಸೂರು

ಫ್ಯಾಕ್ಟರಿ ಲೆಜಿಸ್ಲೇಷನ್ ಆಕ್ಟ್, ೧೯೨೭ರ ಮೈಸೂರು ಮೆಟರ್ನಿಟಿ ಬೆನಿಫಿಟ್ ಆ್ಯಕ್ಟ್. ಈ ಕಾನೂನುಗಳು ಮುಖ್ಯವಾಗಿ ಕಾರ್ಖಾನೆಗಳಲ್ಲಿ ಶ್ರಮದ ಶೋಷಣೆಯನ್ನು ತಗ್ಗಿಸುವ ಮತ್ತು ಕಾರ್ಮಿಕರು, ಮಾಲೀಕರೊಡನೆ ಒಡಂಬಡಿಕೆ ಮಾಡಿಕೊಳ್ಳುವ ಶಕ್ತಿಯನ್ನು ಹೆಚ್ಚಿಸಲು ಸಹಾಯಕವಾಗುವಂತಿದ್ದವು.

ಮೇಲಿನ ಕಾನೂನುಗಳ ಜೊತೆಗೆ ೧೯೩೧ರಲ್ಲಿ ಕೈಗಾರಿಕಾ ವಿವಾದಗಳನ್ನು ಇತ್ಯರ್ಥಮಾಡುವ ದೃಷ್ಟಿಯಿಂದ 'ಬೋರ್ಡ್ ಆಫ್ ಕನ್ಸಿಲಿಯೇಷನ್'ಅನ್ನು ಸಹ ಸರ್ಕಾರ ಅಸ್ತಿತ್ವಕ್ಕೆ ತಂದಿತು. ಇದರ ಉದ್ದೇಶ, ಕೈಗಾರಿಕಾ ಮಾಲೀಕರು ಮತ್ತು ಕಾರ್ಮಿಕರ ನಡುವೆ ನಡೆಯುವ ವ್ಯಾಜ್ಯವನ್ನು ತೀರ್ಮಾನಿಸುವುದಾಗಿತ್ತು. ಈ ಬೋರ್ಡಿನಲ್ಲಿ ಮಾಲೀಕರು, ಕಾರ್ಮಿಕರು ಮತ್ತು ಸಾರ್ವಜನಿಕರು ಸದಸ್ಯತ್ವವನ್ನು ಹೊಂದಿರುತ್ತಿದ್ದರು. "ಬೋರ್ಡ್ ಆಫ್ ಕನ್ಸಿಲಿಯೇಷನ್" ಕಾರ್ಮಿಕ ವಿವಾದಗಳನ್ನು ಸದರ್ಥವಾಗಿ ಇತ್ಯರ್ಥ ಮಾಡುವುದಕ್ಕೆ ಶಕ್ತವಾಗಲಿಲ್ಲವಾದುದರಿಂದ ೧೯೪೨ರಲ್ಲಿ 'ಮೈಸೂರ್ ಲೇಬರ್ (ಎಮೆರ್ಜೆನ್ಸಿ) ಆ್ಯಕ್ಟ್' ಅನ್ನು ಜಾರಿಗೆ ತರಲಾಯಿತು. ವಾಸ್ತವವಾಗಿ ಕೈಗಾರಿಕಾ ವಿವಾದಗಳ ವಿಷಯದಲ್ಲಿ ಸರ್ಕಾರ ಮಧ್ಯಪ್ರವೇಶಿಸುವುದಕ್ಕೆ ಅನುಕೂಲವಾದ ಪ್ರಪ್ರಥಮ ಕಾನೂನು ಇದಾಗಿತ್ತು. ಈ ಕಾನೂನಿನ ಪ್ರಕಾರ ಯಾವುದೇ ಕಾರ್ಮಿಕ ವಿವಾದವನ್ನು 'ಆರ್ಬಿಟ್ರೇಷನ್ ಟ್ರಿಬ್ಯೂನಲ್'ಗೆ ಅಥವಾ 'ಲೇಬರ್ ಕೋರ್ಟ್'ಗೆ ಒಪ್ಪಿಸುವ ಅಧಿಕಾರವನ್ನು ಪಡೆದುಕೊಂಡಿತು.

ಎರಡನೆಯ ಮಹಾಯುದ್ಧದ ನಂತರದ ತಕ್ಷಣದ ವರ್ಷಗಳಲ್ಲಿ ಕೈಗಾರಿಕೆಗಳ ಪರಿಸ್ಥಿತಿ ಬಹುಮಟ್ಟಿಗೆ ಬದಲಾಯಿತೆಂದು ಹೇಳಬಹುದು. ಅನೇಕ ಕೈಗಾರಿಕೆಗಳಲ್ಲಿ ಅಶಾಂತಿಯುತವಾದ ಪರಿಸ್ಥಿತಿ ಉದ್ಭವಿಸಿತು. ಮುಷ್ಕರಗಳಿಂದಾಗಿ ಅನೇಕ ಕೈಗಾರಿಕೆಗಳಲ್ಲಿ ಉತ್ಪಾದನಾ ಕಾರ್ಯ ಸ್ಥಗಿತಗೊಂಡಿತು. ರಾಷ್ಟ್ರದ ವಿಭಜನೆ, ಹಣಮುಬ್ಬರ ಪರಿಸ್ಥಿತಿಗಳೂ ಸಹ ಕೈಗಾರಿಕಾ ಅಶಾಂತಿಗೆ ಪೋಷಣೆ ಕೊಟ್ಟವು.

ಕೈಗಾರಿಕೆಗಳಲ್ಲಿ ಕಾರ್ಮಿಕ ಶಾಂತಿ ನೆಲಸುವಂತೆ ಮಾಡಲು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೈಗಾರಿಕಾ ಮಾಲಿಕರು ಮತ್ತು ಕಾರ್ಮಿಕರ ಸಮ್ಮೇಳನಗಳನ್ನು ನಡೆಸಿದವು. ರಾಜ್ಯ ಸರ್ಕಾರದ ಮಟ್ಟದಲ್ಲಿ ೩ ವರ್ಷಗಳವರೆಗೆ ಶಾಂತಿ ನೆಲೆಸಿರಬೇಕೆಂಬ ಒಪ್ಪಂದಕ್ಕೆ ಕೈಗಾರಿಕಾ ಮಾಲಿಕರು ಮತ್ತು ಕಾರ್ಮಿಕರು ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ತಕ್ಷಣದ ಅವಧಿಯಲ್ಲಿ ಕೈಗಾರಿಕಾ ಶಾಂತಿ ಅಸ್ತಿತ್ವಕ್ಕೆ ಬಂತು. ಈ ಬೆಳವಣಿಗೆಯ ಹಿನ್ನೆಲೆಯಲ್ಲಿ ಸರ್ಕಾರ ಕೆಲವು ಕಾರ್ಮಿಕ ಕಾನೂನುಗಳನ್ನು ಸಹ ಜಾರಿಗೆ ತಂದಿತು. ಇವುಗಳಲ್ಲಿ ಮುಖ್ಯವಾದುವೆಂದರೆ, ಮೈಸೂರು ಫ್ಯಾಕ್ಟರೀಸ್ ಆ್ಯಕ್ಟ್ ೧೯೪೮, ಮೈಸೂರು ಮಿನಿಮಮ್ ವೇಜಸ್ ಆ್ಯಕ್ಟ್ ೧೯೪೯, ದಿ ಮೈಸೂರು ಎಂಪ್ಲಾಯೀಸ್ ಸ್ಟೇಟ್ ಇನ್ಸೂರೆನ್ಸ್ ಆ್ಯಕ್ಟ್ ೧೯೪೮

ಮತ್ತು ದಿ ಮೈಸೂರು ಷಾಪ್ಸ್ ಅಂಡ್ ಎಸ್ಟಾಬ್ಲಿಷ್ಮೆಂಟ್ಸ್ ಆಕ್ಟ್. ಈ ಕಾನೂನುಗಳು ಕೈಗಾರಿಕಾ ಕಾರ್ಮಿಕರಿಗೆ ಅನೇಕ ರೀತಿಯ ಸವಲತ್ತುಗಳನ್ನು ದೊರಕಿಸಿ ಕೊಡುವುದರ ಮೂಲಕ ಕೈಗಾರಿಕಾ ಬಾಂಧವ್ಯ ಉತ್ತಮಗೊಳಿಸುವ ಪ್ರಯತ್ನವನ್ನು ನಡೆಸಿದವು. ೧೯೪೭ರಲ್ಲಿ ಕೇಂದ್ರ ಸರ್ಕಾರ ಕೈಗಾರಿಕಾ ವಿವಾದ ಇತ್ಯರ್ಥಕ್ಕೆ ಸಂಬಂಧಿಸಿದಂತೆ ಜಾರಿಗೆ ತಂದ ಕಾನೂನು ಸಹ ಮುಖ್ಯವಾಗಿದ್ದು ಈ ಕಾನೂನಿನ ವ್ಯಾಪ್ತಿಗೆ ಕರ್ನಾಟಕ ರಾಜ್ಯ ಸಹ ಬಂದಿತು. ಆರ್ಥಿಕ ಯೋಜನೆ ಪ್ರಾರಂಭವಾದ ಮೇಲಂತೂ, ಕರ್ನಾಟಕ ರಾಜ್ಯದ ಕೈಗಾರಿಕಾ ಬಾಂಧವ್ಯಕ್ಕೆ ಸಂಬಂಧಿಸಿದ ನೀತಿ, ಕೇಂದ್ರ ಸರ್ಕಾರ ಈ ದಿಕ್ಕಿನಲ್ಲಿ ಜಾರಿಗೆ ತರುವ ಕಾನೂನುಗಳನ್ನು ತಾನೂ ಸಹ ಅನುಸರಿಸುವುದೇ ಆಗಿದೆ. ಹೀಗಾಗಿ, ರಾಜ್ಯ ಸರ್ಕಾರ ಅತಿ ದೊಡ್ಡ ಕೈಗಾರಿಕೆಗಳಲ್ಲಿ ಮಾಲೀಕರು ಮತ್ತು ಕಾರ್ಮಿಕರ ನಡುವೆ ಉಂಟಾಗುವ ಒಪ್ಪಂದಗಳನ್ನು ರಾಜ್ಯ ಸರ್ಕಾರದ ಕಮೀಷನರ್ ಆಫ್ ಲೇಬರ್‌ನಿಂದ ಪ್ರಮಾಣಿತವಾಗಬೇಕೆಂದು ಒತ್ತಾಯಿಸಿದೆ. ಹಾಗೆಯೇ ಪ್ರತಿ ಫ್ಯಾಕ್ಟರಿಯಲ್ಲಿ ಉಂಟಾಗುವ ಸಣ್ಣ ಪುಟ್ಟ ವಿವಾದಗಳನ್ನು ಬಗೆಹರಿಸಿಕೊಳ್ಳುವುದಕ್ಕೆ ತಮ್ಮದೇ ಆದ ಸರಳ ನೀತಿಯನ್ನು ಅನುಸರಿಸುವಂತೆ ಪ್ರೋತ್ಸಾಹಿಸುತ್ತಾ ಬಂದಿದೆ.

ಕೈಗಾರಿಕಾ ಸಂಬಂಧಗಳನ್ನು ಉತ್ತಮವಾಗಿರಿಸಿಕೊಳ್ಳುವ ದೃಷ್ಟಿಯಿಂದ ಉದ್ಯಮ ಮತ್ತು ರಾಜ್ಯಮಟ್ಟಗಳಲ್ಲಿ ಈಗ ವ್ಯವಸ್ಥಿತವಾದ 'ಕೂಡು ಸಂಧಾನ' ವಿಧಾನ ಅಸ್ತಿತ್ವದಲ್ಲಿದೆ. ಉದ್ಯಮದ ಹಂತದಲ್ಲಿ ವರ್ಕ್ಸ್ ಕಮಿಟಿಗಳು ಮತ್ತು ಜಾಯಿಂಟ್ ಕಮಿಟಿಗಳು ಇವೆ. ಹಾಗೆಯೇ ಕೈಗಾರಿಕಾ ಹಂತದಲ್ಲಿ 'ವೇಜ್ ಬೋರ್ಡ್' ಮತ್ತು 'ಇಂಡಸ್ಟ್ರೀಯಲ್ ರಿಲೇಷನ್ಸ್ ಕಮಿಟಿ' ಮತ್ತು ರಾಷ್ಟ್ರ ಮಟ್ಟದಲ್ಲಿ ಇಂಡಿಯನ್ ಲೇಬರ್ ಕಾನ್ಫರೆನ್ಸ್ ಮತ್ತು 'ಸ್ಟಾಂಡಿಂಗ್ ಲೇಬರ್ ಕಮಿಟಿ'ಗಳು ಅಸ್ತಿತ್ವಕ್ಕೆ ಬಂದಿವೆ. ಜೊತೆಗೆ ಕರ್ನಾಟಕ ಸರ್ಕಾರ, ಕಾರ್ಮಿಕರಿಗೆ ಸಂಬಂಧಿಸಿದ ಕಾನೂನುಗಳು ಸರಿಯಾಗಿ ಜಾರಿಗೆ ಬರುತ್ತಿವೆಯೇ ಇಲ್ಲವೇ ಎಂಬುದನ್ನು ಪರಿಶೀಲಿಸಲು ಮತ್ತು ಅವುಗಳನ್ನು ಅನುಷ್ಠಾನಗೊಳಿಸಲು ಒಂದು 'ಇಂಪ್ಲಿಮೆಂಟೇಷನ್ ಅಂಡ್ ಇವ್ಯಾಲ್ಯುಯೇಷನ್ ಕಮಿಟಿ'ಯನ್ನು ಸಹ ರಚಿಸಿದೆ.

ಸಾಧ್ಯವಾದಷ್ಟು ಮಟ್ಟಿಗೂ ಉದ್ಯಮ ಮಟ್ಟದಲ್ಲಿಯೇ ವಿವಾದಗಳು ಅಂತ್ಯಗೊಳ್ಳಬೇಕೆಂಬುದು ಸರ್ಕಾರದ ಬಯಕೆ. ಈ ದೃಷ್ಟಿಯಿಂದ ಉದ್ಯಮದ ಮಟ್ಟದಲ್ಲಿಯೇ ಮಾಲೀಕರು ಮತ್ತು ಕಾರ್ಮಿಕರು 'ಒಪ್ಪಂದ'ಕ್ಕೆ ಬರುವ (ಟ್ರೂಸ್ ಅಗ್ರೀಮೆಂಟ್) ಒಂದು ಪದ್ಧತಿಯನ್ನು ಸಹ ಜಾರಿಗೆ ತರಲಾಗಿದೆ. ಇದರ ಪ್ರಕಾರ, ಒಂದು ಅವಧಿಯವರೆಗೆ ಕೈಗಾರಿಕಾ ಮಾಲೀಕರು ಮತ್ತು ಕಾರ್ಮಿಕರು ವಿವಾದಗಳ ಬಗ್ಗೆ ಒಂದು ಒಪ್ಪಂದಕ್ಕೆ ಬರಬಹುದಾಗಿದೆ.

ಕೈಗಾರಿಕಾ ಸಂಬಂಧಗಳಲ್ಲಿನ ಮತ್ತೊಂದು ಪ್ರಮುಖ ಅಂಶವೆಂದರೆ,

ಕಾರ್ಮಿಕರು ಕೈಗಾರಿಕಾ ಆಡಳಿತದಲ್ಲಿ ಭಾಗವಹಿಸುವ ವಿಧಾನ. ಇದನ್ನು 'ಜಾಯಿಂಟ್ ಮ್ಯಾನೇಜ್‌ಮೆಂಟ್ ಕೌನ್ಸಿಲ್'ಗಳು ಮತ್ತು 'ಫ್ಲೋರ್ ಕೌನ್ಸಿನಲ್'ಗಳ ಮೂಲಕ ಕರ್ನಾಟಕದಲ್ಲಿ ಜಾರಿಗೆ ತರಲಾಗಿದೆ. ಈ ರೀತಿಯ ವ್ಯಾಪಕವಾದ ಕೈಗಾರಿಕಾ ಸಂಬಂಧ ಸುಧಾರಣಾ ಕ್ರಮಗಳ ಜೊತೆಗೆ ಸರ್ಕಾರ ಕಾರ್ಮಿಕರ ಕ್ಷೇಮಾಭಿವೃದ್ಧಿಯನ್ನು ಹೆಚ್ಚಿಸುವಂತಹ 'ಎಂಪ್ಲಾಯೀಸ್ ಸ್ಟೇಟ್ ಇನ್ಸೂರೆನ್ಸ್ ಆ್ಯಕ್ಟ್', 'ದಿ ವರ್ಕರ್ಸ್ ಹೌಸಿಂಗ್ ಸ್ಕೀಂ' ಮುಂತಾದವುಗಳ ಮೂಲಕ ಕೈಗಾರಿಕಾ ಸಂಬಂಧ ಉತ್ತಮಗೊಳ್ಳುವಂತೆ ಪ್ರಯತ್ನಿಸಿದೆ.

ಈ ಮೊದಲೇ ಸೂಚಿಸಿರುವಂತೆ ಕೈಗಾರಿಕಾ ಬಾಂಧವ್ಯದ ಇಬ್ಬರು ಮುಖ್ಯ ಪಾತ್ರಧಾರಿಗಳೆಂದರೆ ಕಾರ್ಮಿಕರು ಮತ್ತು ಕೈಗಾರಿಕಾ ಮಾಲೀಕರು. ಆದ್ದರಿಂದ ಕಾರ್ಮಿಕ ಸಂಘಗಳು ಎಷ್ಟು ಪ್ರಬಲವಾಗಿವೆ ಮತ್ತು ಮಾಲೀಕರು ಎಷ್ಟರ ಮಟ್ಟಿಗೆ ಕಾರ್ಮಿಕ ಸಂಘಗಳಿಗೆ ಮಾನ್ಯತೆ ನೀಡಿ ಅವರ ಬೇಡಿಕೆಗಳನ್ನು ಪೂರೈಸುತ್ತಾರೆ ಎನ್ನುವುದು ಕೈಗಾರಿಕಾ ಸಂಬಂಧವನ್ನು ನಿರ್ಧರಿಸುವ ಮುಖ್ಯ ಅಂಶಗಳಾಗುತ್ತವೆ. ಕಾರ್ಮಿಕ ಸಂಘಗಳು ಮತ್ತು ಮಾಲೀಕರ ನಡುವೆ ಯಾವುದೇ ವಿವಾದದ ಬಗ್ಗೆ ಒಮ್ಮತ ಏರ್ಪಡದಿದ್ದಾಗ ಕಾರ್ಮಿಕ ಕಾನೂನುಗಳು, ಸರ್ಕಾರದ ಮಧ್ಯಪ್ರವೇಶಿಸುವಿಕೆ ಮುಖ್ಯವಾಗುತ್ತವೆ. ಕರ್ನಾಟಕದಲ್ಲಿ ಕಾರ್ಮಿಕ ಸಂಘಗಳ ಹಾಗೂ ಮಾಲೀಕರ ಪಾತ್ರಗಳನ್ನು ವಿವೇಚಿಸುವುದು, ಕೈಗಾರಿಕಾ ಬಾಂಧವ್ಯವನ್ನು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಮುಖ್ಯವಾಗುತ್ತದೆ.

**ಕಾರ್ಮಿಕ ಸಂಘಗಳು**

೧೯೫೬-೫೭ರಿಂದ ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕ ಸಂಘಗಳ ಸಂಖ್ಯೆ ಸತತವಾಗಿ ಹೆಚ್ಚಾಗುತ್ತಾ ಮುಂದುವರಿದಿದೆ. ೧೯೫೬-೫೭ರಲ್ಲಿ ಇವುಗಳ ಸಂಖ್ಯೆ ಕೇವಲ ೨೩೩ ಇದ್ದದ್ದು ೧೯೯೪ರಲ್ಲಿ ಇವುಗಳ ಸಂಖ್ಯೆ ೩೬೩೫ಕ್ಕೆ ಏರಿದೆ. ಕಾರ್ಮಿಕ ಸಂಘಗಳ ಸದಸ್ಯತ್ವ ಸಹ ಸತತವಾಗಿ ಹೆಚ್ಚಾಗುತ್ತಾ ಬಂದಿದೆ. ರಾಜ್ಯದಲ್ಲಿ ಅನೇಕ ಕಾರ್ಮಿಕ ಸಂಘಗಳಿದ್ದರೂ ಕೇವಲ ಕೆಲವು ಸಂಘಗಳ ಸಂಖ್ಯೆ ಮಾತ್ರ ಸರಾಸರಿ ೨೦೦೦ವನ್ನು ದಾಟಿದೆ ಅಷ್ಟೇ. ವಾಸ್ತವವಾಗಿ ಹೆಚ್ಚಿನ ಕಾರ್ಮಿಕ ಸಂಘಗಳ ಸರಾಸರಿ ಸದಸ್ಯತ್ವ ಅಷ್ಟೇನೂ ವ್ಯತ್ಯಾಸವಿಲ್ಲದೆ ಮುಂದುವರಿದಿದೆ. ಕರ್ನಾಟಕ ರಾಜ್ಯದಲ್ಲಿ ವಾಸ್ತವವಾಗಿ ಕಾರ್ಮಿಕ ಸಂಘದ ಗಾತ್ರ ಬಹಳ ಕಿರಿದಾದುದಾಗಿದೆ. ಸುಮಾರು ಶೇ.. ೭೦ರಷ್ಟು ಕಾರ್ಮಿಕ ಸಂಘಗಳ ಸರಾಸರಿ ಸದಸ್ಯತ್ವ ಕೇವಲ ೫೦ರಿಂದ ೧೦೦ರಷ್ಟಿದೆ. ಹೀಗಾಗಿ ಕಾರ್ಮಿಕ ಸಂಘಗಳ ಬಲ ನಮ್ಮ ರಾಜ್ಯದಲ್ಲಿ ತುಂಬಾ ಕಡಿಮೆ ಇದೆ. ಅಂದರೆ ಹೆಚ್ಚಿನ ಸಂಘಗಳು ಬಲಾಢ್ಯವಾಗಿಲ್ಲ. ಕೇವಲ ಶೇ. ೧೦ರಷ್ಟು ಕಾರ್ಮಿಕ ಸಂಘಗಳು ಮಾತ್ರ ಹೆಚ್ಚಿನ ಸದಸ್ಯತ್ವವನ್ನು ಹೊಂದಿದ್ದು ಅವು ಸರ್ಕಾರವನ್ನು ಪ್ರಭಾವಿಸುವುದರಲ್ಲಿ ಶಕ್ತವಾಗಿವೆ.

ಕಾರ್ಮಿಕ ಸಂಘಗಳ ಬಲವನ್ನು ಕೈಗಾರಿಕಾವಾರು ದೃಷ್ಟಿಯಿಂದ ನೋಡಿದರೆ, ಸಣ್ಣ ಉದ್ಯಮಗಳಾದ ಸೋಪು, ಎಣ್ಣೆ, ಕೈಕಸುಬುಗಳು, ಬಳೆ, ಬೀಡಿ, ಬ್ಯಾಟರಿ, ಗೋಡಂಬಿ ಇತ್ಯಾದಿಗಳಲ್ಲಿನ ಕಾರ್ಮಿಕ ಸಂಘಗಳು ಒಟ್ಟು ಕಾರ್ಮಿಕ ಸಂಘಗಳಲ್ಲಿ ಸುಮಾರು ೪೦ರಷ್ಟಾಗುತ್ತವೆ. ಸಾರಿಗೆ ಕ್ಷೇತ್ರದಲ್ಲಿನ ಸಂಘಗಳು ಒಟ್ಟು ಸಂಘಗಳಲ್ಲಿ ಶೇ. ೧೧ರಷ್ಟು, ಬ್ಯಾಂಕಿಂಗ್ ವಿಮೆ ಕ್ಷೇತ್ರದ ಸಂಘಗಳು ಸುಮಾರು ಶೇ. ೮ರಷ್ಟು, ಪಾನೀಯಗಳು ಮತ್ತು ಹೊಗೆಸೊಪ್ಪು ಉದ್ಯಮಗಳಲ್ಲಿ ಸಂಘಗಳು ಶೇ. ೭ರಷ್ಟು ಆಗುತ್ತವೆ. ಉಳಿದ ಸಂಘಗಳು ಗಣಿ ಲೋಹ, ಕಾಗದ ಮತ್ತು ಮುದ್ರಣ, ರೇಡಿಯೋ, ವಿದ್ಯುತ್ ಉಪಕರಣಗಳು, ಟೀ ಮತ್ತು ರಾಸಾಯನಿಕಗಳಿಗೆ ಸೇರುತ್ತವೆ. ಒಟ್ಟಿನಲ್ಲಿ ನೋಡುವುದಾದರೆ, ಜವಳಿ ಮತ್ತು ಎಂಜಿನಿಯರಿಂಗ್ ಉದ್ಯಮಗಳಲ್ಲಿನ ಕಾರ್ಮಿಕ ಸಂಘಗಳು ಒಟ್ಟು ಕಾರ್ಮಿಕ ಸಂಘಗಳಲ್ಲಿನ ಶೇ. ೧೮ರಷ್ಟಾಗುತ್ತವೆ.

ಜಿಲ್ಲಾವಾರು ವಿಂಗಡನೆಯ ದೃಷ್ಟಿಯಿಂದ ನೋಡುವುದಾದರೆ ಸಹಜವಾಗಿಯೇ ಕೈಗಾರಿಕೆಗಳು ಕೇಂದ್ರೀಕೃತವಾಗಿರುವ ಜಿಲ್ಲೆಗಳಲ್ಲಿ ಕಾರ್ಮಿಕ ಸಂಘಗಳು ಸಹ ಕೇಂದ್ರೀಕೃತವಾಗಿವೆ. ಹೀಗಾಗಿ ಬೆಂಗಳೂರು ಜಿಲ್ಲೆಯಲ್ಲಿ ಅತ್ಯಂತ ಹೆಚ್ಚಿನ ಕಾರ್ಮಿಕ ಸಂಘಗಳಿವೆ. ಅದನ್ನುಳಿದರೆ, ಮೈಸೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕಾರ್ಮಿಕ ಸಂಘಗಳು ಹೆಚ್ಚಾಗಿ ಕೇಂದ್ರೀಕೃತವಾಗಿವೆ.

ಭಾರತದ ಕಾರ್ಮಿಕ ಸಂಘಗಳ ಒಂದು ಲಕ್ಷಣವೆಂದರೆ, ಹೆಚ್ಚಿನ ಕಾರ್ಮಿಕರು, ಕಾರ್ಮಿಕ ಸಂಘಗಳಿಗೆ ಸದಸ್ಯರಾಗಿಲ್ಲದೇ ಇರುವುದು. ಕರ್ನಾಟಕ ಸಹ ಇದಕ್ಕೆ ಹೊರತಾದುದೇನಲ್ಲ. ಒಟ್ಟು ಕಾರ್ಮಿಕರಲ್ಲಿ ಶೇ. ೫೦ರಷ್ಟು ಸಹ ಕಾರ್ಮಿಕ ಸಂಘಗಳ ಸದಸ್ಯರಾಗಿಲ್ಲ. ಹೀಗಾಗಿ ಕಾರ್ಮಿಕ ಸಂಘಗಳು ಎಲ್ಲಾ ಕಾರ್ಮಿಕರ ಪ್ರಾತಿನಿಧ್ಯವನ್ನು ಹೊಂದಿಲ್ಲದಿದ್ದು ಅವರ ಸಮಸ್ಯೆಗಳನ್ನು ಸಮರ್ಥವಾಗಿ ಪ್ರತಿಪಾದಿಸುವುದಕ್ಕೆ ಶಕ್ತವಾಗಿಲ್ಲ.

ಕರ್ನಾಟಕ ರಾಜ್ಯ ಕೈಗಾರಿಕಾ ಕಾರ್ಮಿಕ ಸಂಘಗಳ ಮತ್ತೊಂದು ವೈಶಿಷ್ಟ್ಯವೆಂದರೆ, ಅವು ವೃತ್ತಿ ಆಧಾರಿತವಾದುವಲ್ಲ. ಅಂದರೆ ಯಾವುದೇ ನಿರ್ದಿಷ್ಟ ವೃತ್ತಿಗೆ ಸಂಬಂಧಿಸಿದ ಕಾರ್ಮಿಕರು ತಮ್ಮದೇ ಆದ ಕಾರ್ಮಿಕ ಸಂಘವನ್ನು ರಚಿಸಿಕೊಳ್ಳುವುದು ಸಾಮಾನ್ಯವಾಗಿಲ್ಲ. ಬದಲಿಗೆ ಇವು ಸಾರ್ವತ್ರಿಕ ಸ್ವರೂಪವನ್ನು ಹೊಂದಿದ್ದು, ರಾಜಕೀಯ ವ್ಯಕ್ತಿಗಳು, ಕಾರ್ಮಿಕ ಸಂಘಗಳ ನಾಯಕರುಗಳಾಗುವುದಕ್ಕೆ ಸುಲಭವಾಗಿ ಅವಕಾಶವನ್ನು ದೊರಕಿಸಿ ಕೊಡಲಾಗಿದೆ.

ಕರ್ನಾಟಕದ ಕಾರ್ಮಿಕ ಸಂಘಗಳು ಹೆಚ್ಚಾಗಿ ಪ್ರಾಥಮಿಕ ಮಟ್ಟದಲ್ಲಿ ಅಥವಾ ಉದ್ಯಮದ ಮಟ್ಟದಲ್ಲಿ ಅಸ್ತಿತ್ವಕ್ಕೆ ಬಂದಿವೆ. ಹೆಚ್ಚಿನ ಸಂಘಗಳು ರಾಷ್ಟ್ರೀಯ ಸಂಘಗಳಿಗೆ ನೋಂದಾಯಿಸಿಕೊಂಡಿಲ್ಲ. ಕೇವಲ ಕೆಲವು ಸಂಘಗಳು ಮಾತ್ರ

ರಾಷ್ಟ್ರೀಯ ಪ್ರಮುಖ ಸಂಘಗಳಾದ ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಐ.ಎನ್.ಟಿ.ಯು.ಸಿ) 'ದಿ ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್' (ಎ.ಐ.ಟಿ.ಯು.ಸಿ) 'ದಿ ಹಿಂದ್ ಮಜದೂರ್ ಸಭಾ' (ಹೆಚ್.ಎಂ.ಎಸ್) ಮತ್ತು 'ಯೂನಿಯನ್ ಆಫ್ ಟ್ರೇಡ್ ಯೂನಿಯನ್ ಕಾಂಗ್ರೆಸ್' (ಯು.ಟಿ.ಯು.ಸಿ)ಗಳೊಡನೆ ನೊಂದಣಿ ಮಾಡಿಕೊಂಡಿವೆ. ಕರ್ನಾಟಕ ಸರ್ಕಾರದ ಉದ್ಯಮಗಳು ಮಾತ್ರ ಬೆಂಗಳೂರಿನ 'ಕರ್ನಾಟಕ ಗೌರ್ನಮೆಂಟ್ ಇಂಡಸ್ಟ್ರಿಯಲ್ ಕನ್‌ಸರ್ನ್ಸ್ ಟ್ರೇಡ್ ಯೂನಿಯನ್ ಫೆಡರೇಷನ್' ನೊಡನೆ ನೊಂದಾಯಿಸಿಕೊಂಡಿವೆ. ಹೆಚ್ಚಿನ ಕಾರ್ಮಿಕ ಸಂಘಗಳು ಸ್ವತಂತ್ರವಾಗಿ ವರ್ತಿಸುತ್ತಿದ್ದರೂ, ಅವುಗಳ ಸದಸ್ಯತ್ವ ಬಹಳ ಕಡಿಮೆ. ರಾಷ್ಟ್ರೀಯ ಸಂಘಗಳೊಡನೆ ನೊಂದಾಯಿತವಾಗಿರುವ ಸಂಘಗಳು ಒಟ್ಟು ಕಾರ್ಮಿಕ ಸಂಘದ ಶೇ. ೬೫ರಷ್ಟು ಸದಸ್ಯರನ್ನು ಹೊಂದಿವೆ. ಆದರೆ ಒಂದು ಸ್ವಾರಸ್ಯದ ವಿಷಯವೆಂದರೆ, ರಾಷ್ಟ್ರೀಯ ಸಂಘಗಳೊಡನೆ ನೊಂದಾಯಿತವಾಗಿರುವ ಸಂಘಗಳು ಒಟ್ಟು ಕಾರ್ಮಿಕ ಸಂಘದ ಶೇ. ೬೫ರಷ್ಟು ಸದಸ್ಯರನ್ನು ಹೊಂದಿವೆ. ಆದರೆ ಒಂದು ಸ್ವಾರಸ್ಯದ ವಿಷಯವೆಂದರೆ, ರಾಷ್ಟ್ರೀಯ ಫೆಡರೇಷನ್‌ಗಳೊಡನೆ ನೊಂದಾವಣೆ ಹೊಂದದಿದ್ದರೂ ಸಹ ಸ್ಥಳೀಯ ಕಾರ್ಮಿಕ ಸಂಘಗಳು ಅತ್ಯಂತ ಹೆಚ್ಚಿನ ಸ್ವಾತಂತ್ರ್ಯ ಹೊಂದಿದ್ದು, ಕೈಗಾರಿಕಾ ಮಾಲೀಕರ ಜೊತೆ ಸಂಧಾನ ನಡೆಸುವಾಗ, ಫೆಡರೇಷನ್ ನೆರವನ್ನು ಕೋರುವುದಿಲ್ಲ. ತಾವು ಮುಷ್ಕರ ಹೂಡಿದಾಗ ಮಾತ್ರ ಸ್ಥಳೀಯ ಸಂಘಗಳು ಫೆಡರೇಷನ್ ಬೆಂಬಲವನ್ನು ನಿರೀಕ್ಷಿಸುತ್ತವೆ ಅಷ್ಟೇ. ಉಳಿದಂತೆ ಫೆಡರೇಷನ್‌ನೊಡನೆ ಯಾವ ಸಕ್ರಿಯ ಸಂಬಂಧವನ್ನು ಹೊಂದಿರುವುದಿಲ್ಲ. ಫೆಡರೇಷನ್‌ಗಳು ಸಹ ಈ ಬಗ್ಗೆ ಅಷ್ಟಾಗಿ ತಲೆ ಕೆಡಿಸಿಕೊಳ್ಳುವುದಿಲ್ಲ. ಕೇವಲ ಕೆಲವು ಕಾರ್ಮಿಕ ಸಂಘಗಳು ಪ್ರಾಥಮಿಕ ಮಟ್ಟದಲ್ಲಿ ಅಸ್ತಿತ್ವಕ್ಕೆ ಬಂದಿದ್ದು. ಪ್ರಾಥಮಿಕ ಹಾಗೂ ರಾಜ್ಯ ಮಟ್ಟದ ಸಂಘಗಳೊಡನೆ ಸಂಪರ್ಕ ಹೊಂದಿಲ್ಲ. "ಆಟೋಮೊಬೈಲ್ ವರ್ಕರ್ಸ್ ಯೂನಿಯನ್", "ಬ್ಯಾಂಗಲೂರ್ ಡಿಸ್ಟ್ರಿಕ್ಟ್ಸ್ ಟೆಕ್ಸ್‌ಟೈಲ್ ಎಂಪ್ಲಾಯೀಸ್ ಯೂನಿಯನ್", "ದಿ ಬ್ಯಾಂಗಲೂರ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್" ಇಂತಹ ಸಂಘಗಳಿಗೆ ನಿದರ್ಶನಗಳು. ಇವು ಸ್ವತಂತ್ರ ಸಂಘಗಳಾಗಿದ್ದು ಪ್ರಾಥಮಿಕ ಮಟ್ಟದ ಅಥವಾ ರಾಷ್ಟ್ರೀಯ ಮಟ್ಟದ ಸಂಘಗಳೊಡನೆ ಯಾವ ಸಂಬಂಧವನ್ನೂ ಹೊಂದಿಲ್ಲ.

ರಾಷ್ಟ್ರೀಯ ಮಟ್ಟದಲ್ಲಿ ರಾಜಕೀಯ ಸಂಬಂಧ ಹೊಂದಿರುವ ಕೆಲವು ಕಾರ್ಮಿಕ ಸಂಘಗಳು ಅತ್ಯಂತ ಪ್ರಮುಖವಾಗಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಕರ್ನಾಟಕ ಕಾರ್ಮಿಕ ಸಂಘಗಳು ಸಹ ಇಂತಹ ಪ್ರಮುಖ ಸಂಘಗಳಿಗೆ ತಮ್ಮನ್ನು ನೊಂದಾಯಿಸಿಕೊಂಡಿವೆ. ರಾಷ್ಟ್ರೀಯ ಕಾರ್ಮಿಕ ಸಂಘವಾದ ಐ.ಎನ್.ಟಿ.ಯು.ಸಿ. ಜೊತೆ ಅತ್ಯಂತ ಹೆಚ್ಚಿನ ರಾಜ್ಯ ಕಾರ್ಮಿಕ ಸಂಘಗಳು ನೊಂದಾವಣೆ ಹೊಂದಿದೆ. ಇದರ ನಂತರ ಎ.ಐ.ಟಿ.ಯು.ಸಿ, ಸಿ.ಐ.ಟಿ.ಯು, ಬಿ.ಎಂ.ಎಸ್., ಮತ್ತು ಎಚ್.ಎಂ.ಎಸ್. ಜೊತೆ ನೊಂದಾವಣೆಯನ್ನು ಹೊಂದಿವೆ.

ಕರ್ನಾಟಕ ಕಾರ್ಮಿಕ ಸಂಘಗಳ ಮತ್ತೊಂದು ಪ್ರಮುಖ ಅಂಶವೆಂದರೆ, ಅವು ಆರ್ಥಿಕವಾಗಿ ಬಲಿಷ್ಠವಾಗಿಲ್ಲದಿರುವುದು. ಹೆಚ್ಚಿನಂಶ ಇವು ಸದಸ್ಯರ ವಂತಿಗೆಯನ್ನೇ ಅವಲಂಬಿಸಬೇಕಾಗಿದ್ದು, ಈ ಮೂಲದಿಂದ ದೊರೆಯುತ್ತಿರುವ ಆದಾಯ ಬಹಳ ಅಲ್ಪವಾಗಿದ್ದು ಸಂಘಗಳು ಬಲಿಷ್ಠವಾಗುವುದು ಸಾಧ್ಯವಾಗಿಲ್ಲ. ಜೊತೆಗೆ ತಾವು ಪಡೆಯುವ ಆದಾಯದಲ್ಲಿ ಹೆಚ್ಚಿನ ಭಾಗವನ್ನು ಇವು ಸಂಘಗಳ ಆಡಳಿತಕ್ಕಾಗೀ ಖರ್ಚು ಮಾಡುತ್ತಿದ್ದು ಕಾರ್ಮಿಕ ಸದಸ್ಯರ ಕಲ್ಯಾಣಕ್ಕೆ ದೊರೆಯುತ್ತಿರುವ ಹಣ ಬಹಳ ಅಲ್ಪವಾಗಿದೆ. ಹೀಗಾಗಿ, ಸದಸ್ಯರು ತಮ್ಮ ಸಂಘಗಳ ಬಗ್ಗೆ ತುಂಬಾ ಅನಾಸಕ್ತರಾಗಿದ್ದಾರೆ. ಕಾರ್ಮಿಕ ಕಲ್ಯಾಣಕ್ಕಿಂತ ಹೆಚ್ಚಾಗಿ, ಕಾರ್ಮಿಕ ಸಂಘಗಳು ಮುಷ್ಕರಗಳಲ್ಲಿ ಮಾತ್ರ ಸಕ್ರಿಯವಾಗಿರುವುದು ಕೈಗಾರಿಕಾ ಸಂಬಂಧ ದುರ್ಬಲವಾಗಿರುವುದಕ್ಕೆ ಕಾರಣವಾಗಿದೆ. ಈ ಅಂಶವು ನಮ್ಮ ರಾಷ್ಟ್ರದ ಇತರೆ ರಾಜ್ಯಗಳಲ್ಲಿನ ಕಾರ್ಮಿಕ ಸಂಘಗಳಿಗೂ ಅನ್ವಯಿಸುತ್ತದೆ ಎಂಬುದನ್ನು ಮರೆಯುವಂತಿಲ್ಲ.

ಒಟ್ಟಿನಲ್ಲಿ ಹೇಳುವಾಗ, ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕ ಸಂಘಗಳು ಉತ್ತಮ ಕೈಗಾರಿಕಾ ಸಂಬಂಧವನ್ನು ಸೃಷ್ಟಿಸುವುದರಲ್ಲಿ ಹೆಚ್ಚು ಮಹತ್ವಪೂರ್ಣ ಪಾತ್ರವನ್ನು ವಹಿಸುತ್ತಿಲ್ಲ. ಕಡಿಮೆ ಸಂಖ್ಯೆಯ ಸದಸ್ಯತ್ವ, ರಾಜಕೀಯ ಧುರೀಣರ ಮುಖಂಡತ್ವ, ಕೂಲಿಗೆ ಸಂಬಂಧಿಸಿದ ವಿಷಯಗಳಿಗೆ ಹೆಚ್ಚಿನ ಮಹತ್ವ, ದುರ್ಬಲ ಆರ್ಥಿಕ ಪರಿಸ್ಥಿತಿ ಕಾರ್ಮಿಕ ಸಂಘಗಳ ಪ್ರಮುಖ ಲಕ್ಷಣವಾಗಿದ್ದು, ಉತ್ತಮ ಕೈಗಾರಿಕಾ ಸಂಬಂಧ ಏರ್ಪಡಿಸುವುದರಲ್ಲಿ ಇವು ವಿಫಲವಾಗಿವೆ.

ಈ ಹಿಂದೆಯೇ ಸೂಚಿಸಿರುವಂತೆ ಕೈಗಾರಿಕಾ ಸಂಬಂಧದ ಮತ್ತೊಬ್ಬ ಪಾತ್ರಧಾರಿಯೆಂದರೆ, ಕೈಗಾರಿಕಾ ಮಾಲಿಕೆ. ಕಾರ್ಮಿಕ ಸಂಘಗಳಿರುವಂತೆಯೇ, ರಾಜ್ಯದಲ್ಲಿ ಮಾಲೀಕರ ಸಂಘಗಳು ಸಹ ಅಸ್ತಿತ್ವದಲ್ಲಿದೆ. ಕರ್ನಾಟಕದ ಕೈಗಾರಿಕಾ ಮಾಲೀಕರು, ಇಲ್ಲವೇ 'ಕರ್ನಾಟಕ ಛೇಂಬರ್ ಆಫ್ ಕಾಮರ್ಸ್'ನ ಸದಸ್ಯರಾಗಿದ್ದಾರೆ ಅಥವಾ ಅಖಿಲ ಭಾರತೀಯ ಮಾಲೀಕರ ಸಂಘಗಳಲ್ಲಿನ ಸದಸ್ಯತ್ವವನ್ನು ಹೊಂದಿದ್ದಾರೆ. ಆದರೆ ಮಾಲೀಕರ ಸಂಘಗಳು, ಉತ್ತಮ ಕೈಗಾರಿಕಾ ಬಾಂಧವ್ಯವನ್ನು ಸೃಷ್ಟಿಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿಲ್ಲ. ಉದಾಹರಣೆಗೆ, ಕರ್ನಾಟಕ ಛೇಂಬರ್ ಆಫ್ ಕಾಮರ್ಸ್ ಹೆಚ್ಚಾಗಿ ವಾಣಿಜ್ಯ ವಿಷಯಗಳಲ್ಲಿ ಆಸಕ್ತವಾಗಿದೆ. ಇದಲ್ಲದೆ, ರಾಜ್ಯದ ಕೈಗಾರಿಕಾ ಮಾಲೀಕರ ಸಂಘಗಳು ಸಹ ಪ್ರತಿಯೊಂದು ಕೈಗಾರಿಕೆಗೆ ಸಂಬಂಧಿಸಿದಂತೆ ತಮ್ಮನ್ನು ಸಂಘಟಿಸಿ ಕೊಂಡಿಲ್ಲ. ಇದಕ್ಕೆ ಕಾರಣ ಸಹ ಸುಸ್ಪಷ್ಟ. ಒಂದು ಉದ್ಯಮದಲ್ಲಿ ಉಂಟಾಗುವ ಕಾರ್ಮಿಕ ವಿವಾದಕ್ಕೆ ಮತ್ತೊಂದು ಉದ್ಯಮ ತಲೆಕೆಡೆಸಿಕೊಳ್ಳುವುದಕ್ಕೆ ತಯಾರಿಲ್ಲ. ಅದ್ದರಿಂದ ಉದ್ಯಮದ ಮಾಲೀಕರು ತಮ್ಮ ಉದ್ಯಮಕ್ಕೆ ಸಂಬಂಧಿಸಿದ ಕೈಗಾರಿಕಾ ವಿವಾದವನ್ನು ಪರಿಹರಿಸಿಕೊಳ್ಳುವುದರಲ್ಲಿ ಹೆಚ್ಚು ಆಸಕ್ತರಾಗಿರುವುದರಿಂದ ಇಡೀ ಕೈಗಾರಿಕೆಗೆ ಸಂಬಂಧಿಸಿದ ಉದ್ಯಮಪತಿಗಳ ಸಂಘಗಳು ಅಸ್ತಿತ್ವಕ್ಕೆ ಬಂದಿಲ್ಲ. ಒಟ್ಟಿನಲ್ಲಿ

ಮಾಲೀಕರ ಸಂಘಗಳು, ಕೈಗಾರಿಕಾ ಸಂಬಂಧವನ್ನು ಉತ್ತಮ ಪಡಿಸುವುದರಲ್ಲಿ ವಹಿಸುತ್ತಿರುವ ಪಾತ್ರ ಬಹಳ ಗೌಣ.

ಕೈಗಾರಿಕಾ ಮಾಲೀಕರು ಮತ್ತು ಕಾರ್ಮಿಕರು ವಿವಾದಗಳನ್ನು ಬಗೆಹರಿಸಿಕೊಳ್ಳುವುದರಲ್ಲಿ ನಿರೀಕ್ಷಿತ ಪಾತ್ರವನ್ನು ವಹಿಸುತ್ತಿಲ್ಲದಿರುವಾಗ, ಸಹಜವಾಗಿಯೇ ಸರ್ಕಾರದ ಮಧ್ಯ ಪ್ರವೇಶಿಸುವಿಕೆ ಅನಿವಾರ್ಯವಾಗುತ್ತದೆ. ಆದ್ದರಿಂದ ಕರ್ನಾಟಕದಲ್ಲಿ ಸರ್ಕಾರ ಅನೇಕ ಕಾನೂನುಗಳು ಮತ್ತು ಒಡಂಬಡಿಕೆಗಳ ಮೂಲಕ ಉತ್ತಮ ಕೈಗಾರಿಕಾ ಸಂಬಂಧವನ್ನು ಏರ್ಪಡಿಸುವುದಕ್ಕೆ ಪ್ರಯತ್ನಿಸುತ್ತಾ ಬಂದಿದೆ. ಈ ಕಾನೂನುಗಳ ಪರಿಚಯವನ್ನು ಈ ಮೊದಲೇ ಮಾಡಿಕೊಡಲಾಗಿದೆ.

**ಕೈಗಾರಿಕಾ ವಿವಾದಗಳು ಮತ್ತು ಕೈಗಾರಿಕಾ ಬಾಂಧವ್ಯ**

ಮೇಲೆ ವಿವರಿಸಿರುವಂತೆ ಕಾರ್ಮಿಕ ಸಂಘಗಳು ಮತ್ತು ಕೈಗಾರಿಕಾ ಮಾಲೀಕರ ಸಂಘಗಳು ದುರ್ಬಲವಾಗಿರುವುದರಿಂದ ಅನಿವಾರ್ಯವಾಗಿ ಕೈಗಾರಿಕಾ ವಿವಾದಗಳು ವೃದ್ಧಿಯಾಗುವುದಷ್ಟೇ ಅಲ್ಲದೆ, ಅವು ವಿವಿಧ ಸ್ವರೂಪವನ್ನು ಸಹ ಪಡೆದುಕೊಳ್ಳುತ್ತವೆ. ಕಾರ್ಮಿಕರು ತಮ್ಮ ಅಸಮಾದಾನಗಳನ್ನು ಅತ್ಯಂತ ವ್ಯಕ್ತವಾಗಿ ಮುಷ್ಕರ ಹೂಡುವುದು ಮತ್ತು ಕೈಗಾರಿಕೆಯನ್ನು ಮುಚ್ಚಿಸುವುದರ ಮೂಲಕ, ಹಾಗೂ ಅವ್ಯಕ್ತವಾಗಿ ಕೆಲಸಕ್ಕೆ ಹಾಜರಾಗದೇ ಹೋಗುವುದು, ಕಡಿಮೆ ಉತ್ಪಾದಿಸುವುದು ಮತ್ತು ಅಶಿಸ್ತಿನ ಮೂಲಕ ವ್ಯಕ್ತಪಡಿಸುತ್ತಾ ಬಂದಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಇವು ಹೇಗೆ ವ್ಯಕ್ತಗೊಳ್ಳುತ್ತಾ ಬಂದಿವೆ ಎನ್ನುವುದನ್ನು ನೋಡೋಣ.

ಕೈಗಾರಿಕಾ ವಿಕಾಸದ ಪ್ರಾರಂಭಿಕ ಹಂತದಲ್ಲಿ ಕರ್ನಾಟಕದಲ್ಲಿ ಕೈಗಾರಿಕಾ ಮುಷ್ಕರ ಮತ್ತು ಕೈಗಾರಿಕೆಗಳಿಗೆ ಬೀಗ ಹಾಕಿಸುವ ಕ್ರಮ ತುಂಬಾ ವಿರಳವಾಗಿತ್ತು. ೧೯೩೬ರವರೆಗೂ ಕೈಗಾರಿಕೆಗಳಲ್ಲಿ ಮಾಲೀಕರುಗಳು ಪ್ರಾಬಲ್ಯವಿದ್ದುದಷ್ಟೇ ಅಲ್ಲದೆ, ಸರ್ಕಾರ ಸಹ ಕೈಗಾರಿಕಾಪತಿಗಳಿಗೇ ಹೆಚ್ಚಿನ ಬೆಂಬಲ ನೀಡುತ್ತಿತ್ತು. ಹೀಗಾಗಿ, ಕಾರ್ಮಿಕರ ಶಕ್ತಿ ತುಂಬಾ ಕ್ಷೀಣವಾಗಿತ್ತು. ಇದರಿಂದಾಗಿ ೧೯೨೦-೩೬ರ ನಡುವೆ ಕೇವಲ ೩೬ ಮುಷ್ಕರಗಳು ಮತ್ತು ಬೀಗ ಮುದ್ರೆಗಳು ನಡೆದಿದ್ದವು ಅಷ್ಟೇ. ಇವುಗಳಲ್ಲಿ ಭಾಗವಹಿಸಿದ್ದ ಕಾರ್ಮಿಕರ ಸಂಖ್ಯೆ ಸಹ ಬಹಳ ಕಡಿಮೆ ಇದ್ದು ಅದು ಕೇವಲ ೩೮.೫೯೫ ಆಗಿತ್ತು ಅಷ್ಟೇ.

ಎರಡನೇ ಮಹಾ ಯುದ್ಧದ ನಂತರ, ಅನೇಕ ದೊಡ್ಡ ದೊಡ್ಡ ಕಾರ್ಮಿಕ ಮುಷ್ಕರಗಳು ರಾಜ್ಯದಲ್ಲಿ ನಡೆದವು. ಸತತವಾಗಿ ಏರಿದ ಸರಕುಗಳ ಬೆಲೆಗಳ ಬಿಸಿ ಕಾರ್ಮಿಕರಿಗೆ ತಟ್ಟಿ ಹೆಚ್ಚಿನ ವೇತನದ ಬೇಡಿಕೆಗಾಗಿ ಸಹ ಚಳುವಳಿ ನಡೆಯಿತು. ಜೊತೆಗೆ, ಹೆಚ್ಚು ಹೆಚ್ಚು ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದವು ಮತ್ತು ಕರ್ನಾಟಕದ ಏಕೀಕರಣದಿಂದ, ರಾಜ್ಯಕ್ಕೆ ಸೇರಿದ ಕೈಗಾರಿಕೆಗಳ ಸಂಖ್ಯೆಯಲ್ಲಿ ಸಹ ಹೆಚ್ಚಳವಾಯಿತು. ಕೈಗಾರಿಕಗಳ ಸಂಖ್ಯೆಯಲ್ಲಿನ ಹೆಚ್ಚಳದಿಂದಾಗಿ ಮುಷ್ಕರಗಳ ಸಂಖ್ಯೆ

ಸಹ ಹೆಚ್ಚಾಯಿತು. ಜೊತೆಗೆ, ಕಾರ್ಮಿಕರ ಬಗ್ಗೆ ಸರ್ಕಾರದ ಧೋರಣೆ ಸಹ ಬದಲಾಯಿತು. ೧೯೪೭ರಲ್ಲಿ ಅಸ್ತಿತ್ವಕ್ಕೆ ಬಂದ 'ಇಂಡಸ್ಟ್ರಿಯಲ್ ಡಿಸ್‌ಪ್ಯೂಟ್ಸ್ ಆಕ್ಟ್' ಕಾರ್ಮಿಕರ ಬಲವನ್ನು ಹೆಚ್ಚು ಮಾಡಿತು. ಅವರ ಬೇಡಿಕೆಯ ಶಕ್ತಿ ವೃದ್ಧಿಗೊಂಡು, ತಮ್ಮ ಹಕ್ಕೊತ್ತಾಯಕ್ಕಾಗಿ ಅವರು ಮುಷ್ಕರ ಮತ್ತು ಬೀಗಮುದ್ರೆಗಳನ್ನು ಸಹ ಅವಲಂಬಿಸಿದ್ದರು. ಹೀಗಾಗಿ ೧೯೪೦ರ ನಂತರ ರಾಜ್ಯದಲ್ಲಿ ಕಾರ್ಮಿಕ ಮುಷ್ಕರಗಳ ಸಂಖ್ಯೆ ಸತತವಾಗಿ ಹೆಚ್ಚಾಯಿತು. ೧೯೬೬-೯೪ರ ನಡುವಣ ಕಾರ್ಮಿಕ ಚಳುವಳಿ ಮತ್ತು ಬೀಗ ಮುದ್ರೆಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ಪಟ್ಟಿ (೧)ರಲ್ಲಿ ಕೊಡಲಾಗಿದೆ.

ಪಟ್ಟಿ (೧): ಕರ್ನಾಟಕದಲ್ಲಿ ಮುಷ್ಕರ ಮತ್ತು ಬೀಗಮುದ್ರೆಗಳು

| ವರ್ಷ | ಮುಷ್ಕರಗಳ ಸಂಖ್ಯೆ | ಬೀಗಮುದ್ರೆಗಳು |
|---|---|---|
| ೧೯೬೬ | ೮೮ | ೩ |
| ೧೯೬೭ | ೭೦ | ೩ |
| ೧೯೬೮ | ೯೨ | ೧ |
| ೧೯೬೯ | ೧೨೭ | ೧೭ |
| ೧೯೭೦ | ೮೫ | ೬ |
| ೧೯೭೧ | ೭೨ | ೬ |
| ೧೯೭೨ | ೮೯ | ೧೬ |
| ೧೯೭೩ | ೭೩ | ೧೪ |
| ೧೯೭೪ | ೩೫ | ೮ |
| ೧೯೮೭ | ೪೭ | ೧೩ |
| ೧೯೮೮ | ೫೨ | ೧೩ |
| ೧೯೮೯ | ೪೪ | ೮ |
| ೧೯೯೦ | ೩೧ | ೫ |
| ೧೯೯೧ | ೨೦ | ೦ |
| ೧೯೯೨ | ೦ | ೦ |

(ಜನವರಿಯಿಂದ ನವೆಂಬರ್)

ಕರ್ನಾಟಕದಲ್ಲಿನ ಕೈಗಾರಿಕೆಗಳಲ್ಲಿನ ಮುಷ್ಕರಗಳು ಮತ್ತು ಬೀಗಮುದ್ರೆಗಳು ಗಣನೀಯ ಪ್ರಮಾಣದ್ದೇನಲ್ಲ. ಇಷ್ಟೇ ಅಲ್ಲದೆ ಹೆಚ್ಚಿನ ಕಾರ್ಮಿಕ ವ್ಯಾಜ್ಯಗಳು ಇತ್ಯರ್ಥಗೊಂಡು, ಇತ್ತೀಚಿನ ವರ್ಷಗಳಲ್ಲಿ ದೊಡ್ಡ ಪ್ರಮಾಣದ ಮುಷ್ಕರಗಳಿಗೆ ಈ ರಾಜ್ಯದಲ್ಲಿ ಎಡೆ ಮಾಡಿಕೊಡುತ್ತಿಲ್ಲದಿರುವುದು ಸಹ ಗಮನಿಸಬೇಕಾದ ಅಂಶ. ಕೈಗಾರಿಕಾವಾರು ಮುಷ್ಕರಗಳನ್ನು ಗಮನಿಸಿದರೆ ಸಹ ಗೋಚರವಾಗುತ್ತದೆ. ಹಾಗೆಯೇ ಹೆಚ್ಚಿನ ಮುಷ್ಕರಗಳು, ಕೂಲಿ ಮತ್ತು ಭತ್ಯೆ ಹೆಚ್ಚಳ ಮತ್ತು ಬೋನಸ್‌ಗಳಿಗಾಗಿ ನಡೆದಿವೆ. ಅತ್ಯಂತ ಹೆಚ್ಚಿನ ಮುಷ್ಕರಗಳು ಆರ್ಥಿಕ ಕಾರಣಗಳಿಗಾಗೇ ನಡೆದಿವೆ.

ಹೆಚ್ಚಿನ ಕೈಗಾರಿಕಾ ವಿವಾದಗಳು, ಉದ್ಯಮಗಳ ಮಟ್ಟದಲ್ಲಿ ತೀರ್ಮಾನಗೊಳ್ಳುತ್ತಿರುವುದು ಸಹ ಗಮನಿಸಬೇಕಾದ ವಿಷಯ. ತುಂಬಾ ಕಡಿಮೆ ಪ್ರಮಾಣದ ವಿವಾದಗಳನ್ನು ಮಾತ್ರ ಸರ್ಕಾರದ ಮಧ್ಯಸ್ಥಿಕೆಗೆ (ಅಡ್ಜೂಡಿಕೇಷನ್)ಗಾಗಿ ಒಪ್ಪಿಸಲಾಗುತ್ತಿದೆ ಅಷ್ಟೇ. ಅನೇಕ ಮುಷ್ಕರಗಳನ್ನು ಇತ್ಯರ್ಥ ಪಡಿಸುವುದರಲ್ಲಿ ಕಾರ್ಮಿಕ ಸಂಘಗಳು ಸಹ ಪ್ರಮುಖ ಪಾತ್ರ ವಹಿಸಿವೆ.

## ಕರ್ನಾಟಕ ಮತ್ತು ಇತರ ರಾಜ್ಯಗಳು

ಬೀಗ ಮುದ್ರೆ, ಇದರಿಂದ ತೊಂದರೆಯಾಗಿರುವ ಕಾರ್ಮಿಕರು, ಬೀಗ ಮುದ್ರೆಯಿಂದ ಕಳೆದುಕೊಳ್ಳಲಾಗಿರುವ ಮಾನವ ದಿನಗಳಿಗೆ ಸಂಬಂಧಿಸಿದಂತೆ, ಇತರ ರಾಜ್ಯಗಳಿಗೆ ಹೋಲಿಸಿದಂತೆ ಕರ್ನಾಟಕದಲ್ಲಿ ಉತ್ತಮ ಪರಿಸ್ಥಿತಿ ಇದೆ. ಅದರಲ್ಲೂ ಪಶ್ಚಿಮ ಬಂಗಾಳ, ಮಹಾರಾಷ್ಟ್ರ, ಕೇರಳ, ಆಂಧ್ರ ಪ್ರದೇಶಗಳಿಗೆ ಹೋಲಿಸಿದಂತೆ ಕರ್ನಾಟಕದ ಕೈಗಾರಿಕೆಗಳಿಗೆ ಹಾಕಲಾಗಿರುವ ಬೀಗ ಮುದ್ರೆ ಬಹಳ ಕಡಿಮೆ. ಉದಾಹರಣೆಗೆ ೧೯೯೧ರಲ್ಲಿ ಆಂಧ್ರದಲ್ಲಿ ೨೦೦, ಮಹಾರಾಷ್ಟ್ರದಲ್ಲಿ ೬೮, ಪಶ್ಚಿಮ ಬಂಗಾಳದಲ್ಲಿ ೧೦೮, ಕೇರಳದಲ್ಲಿ ೧೧ ಕೈಗಾರಿಕೆಗಳಿಗೆ ಬೀಗ ಮುದ್ರೆಯ ಪರಿಸ್ಥಿತಿ ಇದ್ದರೆ, ಕರ್ನಾಟಕದಲ್ಲಿ ಕೇವಲ ೨ ಕೈಗಾರಿಕೆಗೆ ಮಾತ್ರ ಬೀಗಮುದ್ರೆ ಬಿದ್ದಿತು. ಹಾಗೆಯೇ ಆಂದ್ರದಲ್ಲಿ ೩೪೦, ಗುಜರಾತಿನಲ್ಲಿ ೧೪೬, ಕೇರಳದಲ್ಲಿ ೩೯, ಮಹಾರಾಷ್ಟ್ರದಲ್ಲಿ ೧೦೫, ತಮಿಳುನಾಡಿನಲ್ಲಿ ೧೫೪ ಮುಷ್ಕರಗಳು ನಡೆದಿದ್ದರೆ, ೧೯೯೧ರಲ್ಲಿ ಕರ್ನಾಟಕದಲ್ಲಿ ಕೇವಲ ೨೦ ಮುಷ್ಕರಗಳು ನಡಿದಿದ್ದವು. ಆದ್ದರಿಂದ ಕೈಗಾರಿಕಾ ಶಾಂತಿಯ ದೃಷ್ಟಿಯಿಂದ ಕರ್ನಾಟಕ ಇತರ ರಾಜ್ಯಗಳಿಗೆ ಹೋಲಿಸಿದಂತೆ ತುಲನಾತ್ಮಕವಾಗಿ ಉತ್ತಮವಾದ ಪರಿಸ್ಥಿತಿಯಲ್ಲಿರುವುದು ನಿರ್ವಿವಾದ.

## ಕೈಗಾರಿಕಾ ಗೈರುಹಾಜರಿ

ಮುಷ್ಕರ ಮತ್ತು ಬೀಗ ಮುದ್ರೆಗಳು ಕಾರ್ಮಿಕರು ನೇರವಾಗಿ ವ್ಯಕ್ತಪಡಿಸುವ ಪ್ರತಿಭಟನೆಗಳಾದರೆ ಕೆಲಸಕ್ಕೆ ಗೈರು ಹಾಜರಾಗುವುದು, ಕೆಲಸಕ್ಕೆ ಬಂದರೂ ಕೆಲಸ ಮಾಡದೆ ಇರುವುದು, ಅಶಿಸ್ತನ್ನು ತೋರಿಸುವುದು ಕಾರ್ಮಿಕರು ಪರೋಕ್ಷವಾಗಿ ವ್ಯಕ್ತಪಡಿಸುವ ಅಸಮಾಧಾನಗಳಾಗಿವೆ. ಕರ್ನಾಟಕದಲ್ಲಿ ಉದ್ಯಮಗಳಲ್ಲಿ ಕಾರ್ಮಿಕರ ಗೈರು ಹಾಜರಿ ಹೆಚ್ಚಿನ ಪ್ರಮಾಣದ್ದಾಗಿದೆ. ಅನಾರೋಗ್ಯ, ಅಪಘಾತ, ಸಾಮಾಜಿಕ ಹಾಗೂ ಧಾರ್ಮಿಕ ಹಾಗೂ ಇತರ ಕಾರಣಗಳಿಗಾಗಿ ಕಾರ್ಮಿಕರು ಗೈರುಹಾಜರಾಗುವುದು ವ್ಯಕ್ತವಾಗಿದೆ. ತಮ್ಮ ಹಕ್ಕಿನಲ್ಲಿರುವ ರಜೆಗಳನ್ನು ಮುಗಿಸಿಕೊಂಡು, ವೇತನ ರಹಿತವಾದ ಗೈರು ಹಾಜರಾತಿಯ ಪ್ರಮಾಣ ಸಹ ಕರ್ನಾಟಕದಲ್ಲಿ ಹೆಚ್ಚಾಗಿದೆ. ಪಟ್ಟಿ (೨)ರಲ್ಲಿ ೧೯೯೫ರ ಮಾರ್ಚಿಗೆ ಸಂಬಂಧಿಸಿದ ಕೆಲವು ಮುಖ್ಯ ಕೈಗಾರಿಕೆಗಳಲ್ಲಿನ ಗೈರು ಹಾಜರಿಗೆ ಸಂಬಂಧಿಸಿದ ಮಾಹಿತಿಯನ್ನು ನೀಡಲಾಗಿದೆ. ಸುಮಾರು ಶೇ. ೧೩.೫ರಷ್ಟು ಗೈರು ಹಾಜರಿ ಅತಿ ಮುಖ್ಯ ಕೈಗಾರಿಕೆಗಳಲ್ಲಿರುವುದು ಈ ಪಟ್ಟಿಯಲ್ಲಿ ವ್ಯಕ್ತವಾಗುತ್ತದೆ.

ಪಟ್ಟಿ ೨: ಕರ್ನಾಟಕದಲ್ಲಿ ಕಾರ್ಮಿಕ ಗೈರು ಹಾಜರಿ, ೧೯೯೨-೯೩ - ೧೯೯೩-೯೪

| | | | ಏಪ್ರಿಲ್‌ನಿಂದ ನವೆಂಬರ್‌ವರೆಗೆ | |
|---|---|---|---|---|
| | ೧೯೯೨-೯೩ | ೧೯೯೩-೯೪ | ೧೯೯೩ | ೧೯೯೪ |
| ೧. ಕೈಗಾರಿಕಾ ಕಾರ್ಮಿಕರು | | | | |
| ಅ. ಕೆಲಸ ಮಾಡಬೇಕಾಗಿರುವ ಮಾನವ ದಿನಗಳು (೦೦೦)ದಲ್ಲಿ | ೧೦೩೫೯ | ೯೭೦೦ | ೬೪೮೩ | ೬೪೯೦ |
| ಆ. ಗೈರುಹಾಜರಾದ ಮಾನವ ದಿನಗಳು | ೧೫೪೨ | ೧೩೩೧ | ೮೧೬ | ೭೪೬ |
| ಇ. ಗೈರು ಹಾಜರಿ (ಶೇಕಡಾಂಶದಲ್ಲಿ) | ೧೪.೮ | ೧೩.೭ | ೧೨.೫ | ೧೧.೫ |
| ೨. ಪ್ಲಾಂಟೇಷನ್‌ಗಳಲ್ಲಿ | | | | |
| ಅ. ಕೆಲಸ ಮಾಡಬೇಕಾಗಿರುವ ಮಾನವ ದಿನಗಳು (೦೦೦)ದಲ್ಲಿ | ೮೦೫ | ೧೦೦೦ | ೫೬೮ | ೬೨೦ |
| ಆ. ಗೈರು ಹಾಜರಾದ ಮಾನವ ದಿನಗಳು | ೧೫೩ | ೧೬೬ | ೯೭ | ೧೩೫ |
| ಇ. ಗೈರು ಹಾಜರಿ (ಶೇಕಡಾಂಶದಲ್ಲಿ) | ೧೯.೦ | ೧೬.೬ | ೧೭.೧ | ೨೧.೮ |

## ಕೈಗಾರಿಕಾ ವಿವಾದಗಳ ಇತ್ಯರ್ಥ

ಕೈಗಾರಿಕಾ ಸಂಬಂಧ ಉತ್ತಮಗೊಳ್ಳಬೇಕಾದರೆ, ಕೈಗಾರಿಕಾ ವಿವಾದಗಳು ಕ್ಷಿಪ್ರವಾಗಿ ಮತ್ತು ಸಮಾಧಾನಕರವಾಗಿ ಇತ್ಯರ್ಥಗೊಳ್ಳಬೇಕಾದುದು ಅತ್ಯಗತ್ಯ. ಕರ್ನಾಟಕದಲ್ಲಿ ಅನೇಕ ಕಾರ್ಯತಂತ್ರಗಳ ಮೂಲಕ ಕೈಗಾರಿಕಾ ವಿವಾದವನ್ನು ಬಗೆಹರಿಸಿ, ಕೈಗಾರಿಕಾ ಬಾಂಧವ್ಯವನ್ನು ಉತ್ತಮವಾಗಿಸುವ ಪ್ರಯತ್ನಗಳು ಸರ್ಕಾರದ ವತಿಯಿಂದ ನಡೆದಿವೆ. ಪ್ರಸ್ತುತದ ಈ ಕಾರ್ಯ ತಂತ್ರಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು (ಅ) ನೇರ ಸಂಧಾನದ ಮೂಲಕ ವಿವಾದಗಳ ಇತ್ಯರ್ಥ (ಆ) ಮಧ್ಯಸ್ಥಿಕೆದಾರರ ಮೂಲಕ ವಿವಾದಗಳ ಇತ್ಯರ್ಥ. ಇವುಗಳ ಪ್ರಗತಿಯನ್ನು ಸ್ವಲ್ಪ ವಿವರವಾಗಿ ನೋಡೋಣ.

ನೇರ ಸಂಧಾನಕ್ರಮಗಳು, ಫಿರ್ಯಾದು ಪರಿಹಾರ (ಗ್ರೀವೆನ್ಸ್ ಪ್ರೊಸಿಜರ್) ವರ್ಕ್ಸ್ ಕಮಿಟಿ ಮತ್ತು ಸಾಮೂಹಿಕ ಚೌಕಾಶಿ (ಕಲೆಕ್ಟಿವ್ ಬಾರ್‌ಗೈನಿಂಗ್) ಗಳನ್ನು ಒಳಗೊಳ್ಳುತ್ತವೆ. ಇವುಗಳ ಮುಖ್ಯ ಲಕ್ಷಣ ಮೂರನೆಯ ಮಧ್ಯಸ್ಥಿಕೆದಾರರಿಲ್ಲದೆ, ಕೈಗಾರಿಕಾ ವಿವಾದಗಳನ್ನು ಪರಿಹರಿಸಿಕೊಳ್ಳುವುದಾಗಿದೆ. ಕರ್ನಾಟಕದಲ್ಲಿನ ಹೆಚ್ಚಿನ ಪ್ರಮುಖ ಕೈಗಾರಿಕೆಗಳು ೧೯೫೮ರಲ್ಲಿ ಜಾರಿಗೆ ಬಂದ ಮಾದರಿ ಫಿರ್ಯಾದು ಪರಿಹಾರ ವಿಧಾನವನ್ನು (ಮಾಡೆಲ್ ಗ್ರೀವಿನ್ಸ್ ಪ್ರೋಸೀಜರ್) ಅನುಸರಿಸುತ್ತಿವೆ. ಆದರೆ ಕರ್ನಾಟಕದಲ್ಲಿ ಈ ಕ್ರಮ ಅಷ್ಟೇನೂ ಯಶಸ್ಸನ್ನು ಸಾಧಿಸಿಲ್ಲ. ಇದಕ್ಕೆ ಕಾರಣ ಈ ಕ್ರಮ ಐಚ್ಛಿಕವಾಗಿದ್ದು ಕಾರ್ಮಿಕರು ಮತ್ತು ಮಾಲೀಕರ ನಡುವೆ ವಿವಾದಗಳಿಗೆ, ಒಮ್ಮತ ಏರ್ಪಡುವುದು ಕಷ್ಟವಾಗಿರುವುದೇ.

೧೯೪೮ರಷ್ಟು ಹಿಂದೆಯೇ, ಭದ್ರಾವತಿಯ ಮೈಸೂರು ಐರನ್ ಅಂಡ್ ಸ್ಟೀಲ್ ವರ್ಕ್ಸ್‌ನಲ್ಲಿ, ವರ್ಕ್ಸ್ ಕಮಿಟಿಯನ್ನು ಸ್ಥಾಪಿಸಲಾಯಿತು. ಇದರ ನಂತರ ಅನೇಕ ಉದ್ಯಮಗಳು ವರ್ಕ್ಸ್ ಕಮಿಟಿಗಳನ್ನು ರಚಿಸಿಕೊಂಡಿವೆ. ಸುಮಾರು ೧೮೦ ವರ್ಕ್ಸ್ ಕಮಿಟಿಗಳು ಕೆಲಸ ಮಾಡುತ್ತಿದ್ದರೂ, ಕೈಗಾರಿಕಾ ಬಾಂಧವ್ಯವನ್ನು ಉತ್ತಮ ಪಡಿಸುವುದರಲ್ಲಿ ಅವು ಅಷ್ಟರ ಮಟ್ಟಿಗಿನ ಯಶಸ್ಸನ್ನು ಸಾಧಿಸಿಲ್ಲ. ವರ್ಕ್ಸ್ ಕಮಿಟಿಗಳಲ್ಲಿ ಅಂಗೀಕರಿಸಿದ ನಿಲುವಳಿಗಳನ್ನು ಕಾರ್ಯರೂಪಕ್ಕೆ ತರಲಾಗುತ್ತಿಲ್ಲ. ಈ ಕೈಗಾರಿಕಾ ಮಾಲೀಕರು, ಕಾರ್ಮಿಕ ನಾಯಕರನ್ನು ವರ್ಕ್ಸ್ ಕಮಿಟಿಗಳಲ್ಲಿ ತಮ್ಮ ಸಮಾನವೆಂದು ಪರಿಗಣಿಸಲು ಹಿಂದೆಗೆಯುತ್ತಿರುವುದು ಇನ್ನೂ ಸಾಮಾನ್ಯವಾಗಿ ಉಳಿದುಕೊಂಡ ಬಂದಿದೆ. ಕಾರ್ಮಿಕ ಸಂಘಗಳು ವರ್ಕ್ಸ್ ಕಮಿಟಿಗಳನ್ನು ತಮ್ಮ ಶಸ್ತ್ರವೆಂದೇ ಭಾವಿಸುತ್ತಿವೆ. ಸರ್ಕಾರ ಸಹ ವರ್ಕ್ಸ್ ಕಮಿಟಿಗಳನ್ನು ಗಂಭೀರಕರವಾಗಿ ಪರಿಗಣಿಸುತ್ತಿಲ್ಲ.

ಇನ್ನು "ಸಾಮೂಹಿಕ ಚೌಕಾಶಿ"ಯನ್ನು ಹೆಚ್ಚು ಕಡಿಮೆ ಶಾಂತಿ ಒಪ್ಪಂದವೆಂದೇ ಪರಿಗಣಿಸಲಾಗುತ್ತಿದೆ. ಇನ್ನೂ ಒಂದು ವಿಶೇಷವೆಂದರೆ, ಈ ಶಾಂತಿ ಒಪ್ಪಂದ ಕಾರ್ಮಿಕರು ಮತ್ತು ಮಾಲೀಕರುಗಳ ನಡುವೆ ಏರ್ಪಟ್ಟರೂ, ಈ ಒಪ್ಪಂದವನ್ನು ರಾಜ್ಯಮಟ್ಟದ, "ಸ್ಟೇಟ್ ಕನ್ಸಿಲಿಯೇಷನ್" ಅಧಿಕಾರಿಯೊಡನೆ ನೊಂದಾಯಿಸುವುದರಿಂದ ಅವು ತ್ರಿಪಕ್ಷೀಯ ಒಪ್ಪಂದದ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಕರ್ನಾಟಕದಲ್ಲಿ ಮೊದಲನೆಯ ಒಪ್ಪಂದ ೧೯೫೨ರಲ್ಲಿ "ಇಂಪೀರಿಯಲ್ ಟೊಬ್ಯಾಕೋ ಕಂಪನಿ"ಯಲ್ಲಿ ಜಾರಿಗೆ ಬಂದಿತು. ಇದರ ನಂತರ ಭದ್ರಾವತಿ ಕಬ್ಬಿಣದ ಕೈಗಾರಿಕೆಯಲ್ಲಿ ಈ ರೀತಿಯ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಇದರ ನಂತರ ಅನೇಕ ಕೈಗಾರಿಕೆಗಳಲ್ಲಿ ಕೈಗಾರಿಕಾ ಶಾಂತಿಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಅನೇಕ ಉದ್ಯಮಗಳಲ್ಲಿ ಇಂತಹ ಒಪ್ಪಂದಗಳು ಏರ್ಪಟ್ಟಿವೆ. ಸಾಮಾನ್ಯವಾಗಿ ಒಂದು ಅವಧಿಗೆ ಜಾರಿಗೆ ಬರುವಂತೆ ಈ ರೀತಿಯ ಒಪ್ಪಂದಗಳನ್ನು ಮಾಡಿಕೊಳ್ಳಲಾದರೂ, ಒಪ್ಪಂದದ ಚೌಕಟ್ಟಿನೊಳಕ್ಕೆ ಬರದಿರುವ ವಿಷಯಗಳ ಬಗ್ಗೆ ವಿವಾದಗಳು ಏರ್ಪಡುವುದು ಮತ್ತು ಒಪ್ಪಂದವಾಗಿರುವ ವಿಷಯವನ್ನು ಬೇರೆ ಬೇರೆ ರೀತಿಯಲ್ಲಿ ಅರ್ಥೈಸುವ ಕಾರಣಗಳಿಗಾಗಿ ವಿವಾದಗಳು ಬಗೆಹರಿಯದೆ ಇರುವ ಸಂದರ್ಭಗಳೂ ಏರ್ಪಟ್ಟಿವೆ.

ಮೇಲೆ ವಿವರಿಸಿರುವ ಕ್ರಮಗಳು ಸ್ವಯಂ ಶಿಸ್ತಿನಿಂದ ಏರ್ಪಡುವಂತವು. ಆದರೆ ಇಂತಹ ಕ್ರಮಗಳು ಕೈಗಾರಿಕಾ ಶಾಂತಿಯನ್ನು ಏರ್ಪಡಿಸುವುದರಲ್ಲಿ ಬಹಳ ಮಿತವಾದ ಯಶಸ್ಸನ್ನು ಸಾಧಿಸಿವೆ. ಹೀಗಾಗಿ ಮಧ್ಯಸ್ಥಿಕೆದಾರರನ್ನು ಒಳಗೊಳ್ಳುವಂತಹ ವಿವಾದ ಪರಿಹಾರ ಕ್ರಮಗಳು ಸಹ ಅಭಿವೃದ್ಧಿಗೊಂಡಿವೆ. ಇವುಗಳೆಂದರೆ, "ಕನ್ಸಿಲಿಯೇಷನ್", "ಮೀಡಿಯೇಷನ್", "ಅರ್ಬಿಟ್ರೇಷನ್" ಅಥವಾ "ಅಡ್ಜೂಡಿಕೇಷನ್".

೧೯೫೭ ಮತ್ತು ೧೯೪೭ರ ಅವದಿಯಲ್ಲಿ 'ಕನ್ಸೀಲಿಯೇಷನ್'ಗೋಸ್ಕರ ಒಪ್ಪಿಸಲಾದ ವಿವಾದಗಳು ವಾರ್ಷಿಕ ಸರಾಸರಿ ೯೨೯ ಆಗಿದ್ದು, ಇದು ನಂತರ ಬಹಳವಾಗಿ ಬೆಳೆದು ಬಂದಿದೆ. ೧೯೪೪ರಲ್ಲಿ ಸುಮಾರು ೧೮೩೭ ವಿವಾದಗಳನ್ನು 'ಕನ್ಸೀಲಿಯೇಷನ್'ಗೋಸ್ಕರ ಒಪ್ಪಿಸಲಾಗಿದೆ. ಇವುಗಳಲ್ಲಿ ಕನ್ಸೀಲಿಯೇಷನ್ ಅಧಿಕಾರಿಯ ಮುಖಾಂತರ ಕೇವಲ ೩೬೫ ವ್ಯಾಜ್ಯಗಳನ್ನು ಪರಿಹರಿಸಲಾಗಿದೆ. ಸುಮಾರು ೧೧೧ ವ್ಯಾಜ್ಯಗಳನ್ನು ಹಿಂದೆಗೆದುಕೊಳ್ಳಲಾಗಿದ್ದರೂ, ಇನ್ನೂ ಇತ್ಯರ್ಥವಾಗದೇ ಉಳಿದುಕೊಂಡ ವ್ಯಾಜ್ಯಗಳು ೭೭೬. ಹಾಗೆಯೇ ರಾಜ್ಯದಲ್ಲಿರುವ ೪ ಟ್ರಿಬ್ಯೂನಲ್‌ಗಳು ಮತ್ತು ೧೦ ಕಾರ್ಮಿಕ ನ್ಯಾಯಾಲಯಗಳು ಸಹ ಕಾರ್ಮಿಕ ವಿವಾದಗಳನ್ನು ಬಗೆಹರಿಸಲು ಯತ್ನಿಸುತ್ತಿವೆ. ಆದರೆ "ಅಡ್ಜೂಡಿಕೇಷನ್"ಗೋಸ್ಕರ ಬರುತ್ತಿರುವ ವಿವಾದಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಿರುವುದು ಗೋಚರವಾಗುತ್ತದೆ. ಉದಾಹರಣೆಗೆ ೧೯೯೦ ರಲ್ಲಿ ಅಡ್ಜೂಡಿಕೇಷನ್‌ಗೆ ಬಂದ ವಿವಾದಗಳ ಸಂಖ್ಯೆ ೧೩,೮೧೬ ಆಗಿದ್ದರೆ, ೧೯೯೪ರಲ್ಲಿ ಇದು ೧೬,೨೪೭ಕ್ಕೆ ಹೆಚ್ಚಿದೆ. ಹಾಗೆಯೇ ಇತ್ಯರ್ಥವಾಗದೇ ಉಳಿದಿರುವ ವಿವಾದಗಳ ಸಂಖ್ಯೆ ಇದೇ ವರ್ಷಗಳಲ್ಲಿ ೧೧,೧೭೦ರಿಂದ ೧೪,೨೫೧ಕ್ಕೆ ಹೆಚ್ಚಾಗಿದೆ. ಅಂದರೆ ಇತ್ಯರ್ಥವಾಗದೇ ಉಳಿದು ಬರುತ್ತಿರುವ ವಿವಾದಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಬೆಳೆಯುತ್ತಾ ಬಂದಿದೆ. 'ಕನ್ಸೀಲಿಯೇಷನ್' ಅಧಿಕಾರಿಗಳು ಇತ್ಯರ್ಥವಾಗದೇ ಇರುವ ವಿವಾದದ ಬಗ್ಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲು ಅತ್ಯಂತ ವಿಳಂಬ ಮಾಡುವುದು, ತಾವು ನಿರ್ವಹಿಸಬಹುದಾದುದಕ್ಕಿಂತಲೂ ಹೆಚ್ಚಿನ ವಿವಾದಗಳನ್ನು ಕೈಗಾರಿಕಾ ಟ್ರಿಬ್ಯೂನಲ್‌ಗಳು ಮತ್ತು ಕಾರ್ಮಿಕ ನ್ಯಾಯಾಲಯಗಳು ಪಡೆಯುತ್ತಿರುವುದು, ಇತ್ಯರ್ಥ ಮಾಡುವುದಕ್ಕೆ ಅತ್ಯಂತ ಕಠಿಣವಾದ ವಿವಾದಗಳು ನ್ಯಾಯಾಲಯಕ್ಕೆ ಬರುವುದು ಮುಂತಾದ ಕಾರಣಗಳಿಂದಾಗಿ, ರಾಜ್ಯದಲ್ಲಿ 'ಅಡ್ಜೂಡಿಕೇಷನ್' ಯಂತ್ರ ಹೆಚ್ಚು ಯಶಸ್ಸನ್ನು ಸಾದಿಸಿಲ್ಲ. ಒಟ್ಟಿನಲ್ಲಿ ಕರ್ನಾಟಕದ ಕೈಗಾರಿಕಾ ಸಂಬಂಧವನ್ನು ಪರಿಗಣಿಸಿದಾಗ ಕೆಲವು ಮುಖ್ಯ ವಿಷಯಗಳು ಗಮನಕ್ಕೆ ಬರುತ್ತವೆ. ಇವುಗಳನ್ನು ಕೆಳಗಿನಂತೆ ಸಾರಾಂಶಿಸಬಹುದು.

ಭಾರತದ ಇತರ ರಾಜ್ಯಗಳಲ್ಲಿ ಜಾರಿಯಲ್ಲಿರುವಂತೆಯೇ, ಕರ್ನಾಟಕದಲ್ಲಿ ಸಹ ಕೈಗಾರಿಕಾ ಸಂಬಂಧವನ್ನು ಉತ್ತಮವಾಗಿಸುವ ಪ್ರಯತ್ನಗಳು ನಡಿದಿವೆ. ಈ ರಾಜ್ಯಗಳಲ್ಲಿ ಸಹ ಕಾರ್ಮಿಕ ಸಂಘಗಳು, ಕಾರ್ಮಿಕ ಮಾಲೀಕರ ಸಂಘಗಳು ಮತ್ತು ರಾಜ್ಯ ಸರ್ಕಾರ ಕೈಗಾರಿಕಾ ಬಾಂಧವ್ಯವನ್ನು ಕಾಪಾಡುವುದರಲ್ಲಿ ಭಾಗಿಯಾಗಿವೆ. ಆದರೆ ಕರ್ನಾಟಕದಲ್ಲಿ ಸಹ, ಅನೇಕ ಕಾರ್ಮಿಕ ಸಂಘಗಳಿದ್ದರೂ, ಅವುಗಳಲ್ಲಿ ಬಾಹ್ಯ ನಾಯಕತ್ವವಿವೆ. ಕಾರ್ಮಿಕ ಸಂಘಗಳು ತುಂಬಾ ದುರ್ಬಲವಾಗಿವೆ. ಇವು ಕೂಲಿ ಹೆಚ್ಚಳ, ಬೋನಸ್ ಮುಂತಾದ ಆರ್ಥಿಕ ಕಾರಣಗಳಿಗಾಗಿ ಶ್ರಮಿಸುತ್ತಿವೆಯೇ ಹೊರತು ಕಾರ್ಮಿಕರ ಕಲ್ಯಾಣಕ್ಕೆ ಆದ್ಯತೆಯನ್ನು ನೀಡುತ್ತಿಲ್ಲ. ಕೈಗಾರಿಕಾ ಮಾಲೀಕರ

ಸಂಘಗಳು ಇದ್ದರೂ ಇವು ಕಾರ್ಮಿಕರ ಕಲ್ಯಾಣಕ್ಕೆ ಆಧ್ಯತೆಯನ್ನು ನೀಡದೆ, ತಮ್ಮದೇ ಆರ್ಥಿಕ ಆಧ್ಯತೆಗಳನ್ನು ಇಟ್ಟುಕೊಂಡಿವೆ. ಹೀಗಾಗಿ ಅವು ಈ ದಿಶೆಯಲ್ಲಿ ಅಷ್ಟು ಯಶಸ್ವಿಯುತವಾಗಿಲ್ಲ.

ಸರ್ಕಾರ ಕಾರ್ಮಿಕ ಬಾಂಧವ್ಯ ಕ್ಷೇತ್ರವನ್ನು ಸಹ ವ್ಯಾಪಕವಾಗಿ ಪ್ರವೇಶಿಸಿದೆ. ಕಾರ್ಮಿಕರ ಹಿತರಕ್ಷಣೆಗೆ ಸಂಬಂಧಿಸಿದ ವ್ಯಾಪಕ ಕಾನೂನುಗಳನ್ನು ಜಾರಿಗೆ ತಂದಿದೆ. ಕಾರ್ಮಿಕ ವಾದಗಳ ಪರಿಹಾರಕ್ಕಾಗಿ, ಅತ್ಯಂತ ವ್ಯಾಪಕವಾದ ಯಂತ್ರವನ್ನು ರೂಪಿಸಿದೆ. ಕಾರ್ಮಿಕ ಕಾನೂನುಗಳು ಜಾರಿಗೆ ಬಂದಿವೆಯೇ ಇಲ್ಲವೇ ಎನ್ನುವುದನ್ನು ಪರಿಶೀಲಿಸಲು, ನಿರೀಕ್ಷಕ ಅಧಿಕಾರಿಗಳ ಜಾಲವನ್ನು ಸೃಷ್ಟಿಸಿದೆ. ಆದರೆ, ಸರ್ಕಾರದ ಯಂತ್ರ ಸಹ ಉತ್ತಮ ಕೈಗಾರಿಕಾ ಬಾಂಧವ್ಯವನ್ನು ಏರ್ಪಡಿಸುವುದರಲ್ಲಿ ಯಶಸ್ಸನ್ನು ಸಾಧಿಸಿಲ್ಲ. ಕೈಗಾರಿಕಾ ವಿವಾದಗಳ ಸಂಖ್ಯೆ ಬೆಳೆಯುತ್ತಿದೆ. ಇತ್ಯರ್ಥವಾಗದೇ ಉಳಿಯುತ್ತಿರುವ ವಿವಾದಗಳ ಸಂಖ್ಯೆ ಸಹ ರಾಜ್ಯದಲ್ಲಿ ಬೆಳೆಯುತ್ತಿದೆ. ಕಾರ್ಮಿಕರಿಗೆ ಕೈಗಾರಿಕಾ ಆಡಳಿತದಲ್ಲಿ ಭಾಗವಹಿಸಲು ಅವಕಾಶಗಳನ್ನು ಕಲ್ಪಿಸಿಕೊಡಬೇಕೆಂಬ ವಿಚಾರ ಬಹಳ ಕಾಲದಿಂದ ಚರ್ಚಿಸಲ್ಪಡುತ್ತಿದ್ದರೂ, ಅತ್ಯುನ್ನತ ನಿರ್ಣಯಗಳನ್ನು ತೆಗೆದುಕೊಳ್ಳುವ ನಿರ್ಣಾಯಕ ಮಂಡಳಿಗಳಲ್ಲಿ ಅವರಿಗೆ ಅವಕಾಶಗಳನ್ನು ಕಲ್ಪಿಸಿಕೊಡುವ ಪ್ರಯತ್ನ ಯಾವ ಯಶಸ್ಸನ್ನೂ ಸಾಧಿಸಿಲ್ಲ.

### ಹೊಸ ಆರ್ಥಿಕ ನೀತಿ ಮತ್ತು ಕೈಗಾರಿಕಾ ಸಂಬಂಧಗಳು

ಇಂದು ರಾಷ್ಟ್ರದಲ್ಲಿ ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತರುವ ಪ್ರಯತ್ನದಲ್ಲಿರುವುದು ಎಲ್ಲರಿಗೂ ತಿಳಿದ ವಿಷಯ. ಕೈಗಾರಿಕಾ ಕ್ಷೇತ್ರದಲ್ಲಿ ಸಹ ಹೊಸ ಆರ್ಥಿಕ ನೀತಿಗಳನ್ನು ಜಾರಿಗೆ ತರುವ ಪ್ರಯತ್ನ ಎಲ್ಲಾ ರಾಜ್ಯಗಳಲ್ಲೂ ನಡೆದಿದೆ. ಖಾಸಗೀಕರಣ ಮತ್ತು ಜಾಗತೀಕರಣ ನಡೆದಾಗ ಕೈಗಾರಿಕೆಗಳು ಹೊಸ ನೀತಿಗಳನ್ನು ಅನಿವಾರ್ಯವಾಗಿ ಅನುಸರಿಸಬೇಕಾಗುತ್ತವೆ. ಇದುವರೆಗೆ ಸರ್ಕಾರ ವ್ಯವಸ್ಥಿತ ಕೈಗಾರಿಕಾ ಕ್ಷೇತ್ರದಲ್ಲಿ ಹೂಡಿಕೆ ನಡೆದಿಲ್ಲ ಮತ್ತು ಉದ್ಯೋಗ ಸೃಷ್ಟಿಯಾಗಿಲ್ಲವೆಂಬ ವಾದವಿದೆ. ಆದ್ದರಿಂದ, ಹೊಸ ಕೈಗಾರಿಕಾ ಬಾಂಧವ್ಯ ಮಸೂದೆ (ಇಂಡಸ್ಟ್ರೀಯಲ್ ರಿಲೇಷನ್ಸ್ ಬಿಲ್) ಅನ್ನು ಜಾರಿಗೆ ತರುವ ಯತ್ನಗಳು ನಡೆದಿವೆ. ಈ ಮಸೂದೆಯ ಪ್ರಕಾರ, (ಅ) ಮುಷ್ಕರ ಮತ್ತು ಬೀಗಮುದ್ರೆಗಳಿಗೆ ಕನಿಷ್ಠ ಅವಧಿಯ ಮುನ್ಸೂಚನೆಯನ್ನು ನೀಡಬೇಕು, (ಆ) ಧರ್ಮ, ಜಾತಿ, ಪಂಥಗಳ ಆಧಾರದ ಮೇಲೆ ಕಾರ್ಮಿಕ ಸಂಘಗಳನ್ನು ರಚಿಸಕೂಡದು, (ಇ) ಕೆಲಸದಿಂದ ತೆಗೆದುಹಾಕಿದಾಗ ಹೆಚ್ಚಿನ ಆರ್ಥಿಕ ಸೌಲತ್ತುಗಳನ್ನು ದೊರಕಿಸಿಕೊಡಬೇಕು, (ಈ) ಕಾರ್ಮಿಕರು ಮತ್ತು ಮಾಲೀಕರ ಪ್ರತಿನಿಧಿಗಳನ್ನೊಳಗೊಂಡ ಕೈಗಾರಿಕಾ ಸಂಬಂಧ ಕಮೀಷನ್ ಒಂದನ್ನು ರಚಿಸಬೇಕು, (ಉ) ಈ ಕಮಿಷನ್ ಕನ್ಸಿಲಿಯೇಷನ್, ಅಡ್ಜೂಡಿಕೇಷನ್ ಮತ್ತು ಕಾರ್ಮಿಕ ಸಂಘಗಳ ಸದಸ್ಯರ ಸಂಖ್ಯೆಯ ತಪಾಸಣಾ ಕಾರ್ಯಗಳನ್ನು ನಿರ್ವಹಿಸಬೇಕು.

ಈ ಮಸೂದೆ ಜಾರಿಗೆ ಬಂದರೆ ಕೈಗಾರಿಕಾ ಬಾಂಧವ್ಯ ಸುಧಾರಿಸುತ್ತದೆಂದು ಖಚಿತವಾಗಿ ಹೇಳುವಂತಿಲ್ಲ. ಇದಕ್ಕೆ ಕಾರ್ಮಿಕ ನಾಯಕರ ವಿರೋಧವಿದೆ. ಆದರೆ ಹೊಸ ಆರ್ಥಿಕ ನೀತಿಯೊಂದಿಗೆ, ಕೈಗಾರಿಕಾ ಬಾಂಧವ್ಯದಲ್ಲಿ ಅನೇಕ ಬದಲಾವಣೆಗಳು ಬರುವುದು ಖಚಿತ. ಸಾರ್ವಜನಿಕ ಉದ್ಯಮಗಳಲ್ಲಿ ಈ ಹಿಂದೆ ಇದ್ದಷ್ಟು ರಕ್ಷಣೆ ಕಾರ್ಮಿಕರಿಗೆ ದೊರೆಯುವುದು ಸಾಧ್ಯವಿಲ್ಲ. ಹೊಸ ನೀತಿಯಿಂದ ನಿರುದ್ಯೋಗದ ಭಯವೂ ಇದೆ. ಆದರೆ ಹೊಸ ಆರ್ಥಿಕ ನೀತಿಯಿಂದ ಕೈಗಾರಿಕಾ ಬಾಂಧವ್ಯದ ಮೇಲೆ ಯಾವ ರೀತಿಯ ಪರಿಣಾಮ ಉಂಟಾಗಬಹುದು ಎನ್ನುವುದರ ಬಗ್ಗೆ ಇನ್ನೂ ಯಾವ ಒಲವೂ ದೊರೆತಿಲ್ಲ. ಅದನ್ನು ವಿಮರ್ಶಿಸಲು ಇನ್ನೂ ಸಮಯಬೇಕು.

# ಕರ್ನಾಟಕದಲ್ಲಿ ಔದ್ಯೋಗಿಕ ಮಾಲಿನ್ಯದ ನಿಯಂತ್ರಣ

ಎಂ.ವಿ. ನಾಡಕರ್ಣಿ, ಜಿ.ಎಸ್. ಶಾಸ್ತ್ರಿ

ಆರ್ಥಿಕ ಅಭಿವೃದ್ಧಿಯು ಔದ್ಯಮೀಕರಣದ ಜೊತೆಗೆ ಹೋಗುವುದು ಸಾಮಾನ್ಯವಾದ ಸಂಗತಿ. ಕೃಷಿಯಲ್ಲಿಯ ಅಭಿವೃದ್ಧಿಯೂ ಸಹ ಔದ್ಯಮೀಕರಣದಿಂದ ಮುಂದೆ ಹೋಗುವುದು ಕಂಡು ಬರುತ್ತದೆ. ಇದಕ್ಕೆ ಕರ್ನಾಟಕ ಅಪವಾದವಾಗಿಲ್ಲ. ಬಟ್ಟೆಬರೆ (Textiles) ಕಬ್ಬಿಣ ಮತ್ತು ಉಕ್ಕು, ಸಿಮೆಂಟ್, ರಾಸಾಯನಿಕ ಗೊಬ್ಬರ ಇವೇ ಮುಂತಾದ ಅನೇಕಾನೇಕ ಉದ್ಯಮಗಳು ಇಲ್ಲಿ ಸ್ಥಾಪಿತವಾಗಿ ದಶಕಗಳೇ ಸಂದಿವೆ. ಈ ಉದ್ಯಮಗಳಿಂದ ರಾಷ್ಟ್ರೀಯ ಉತ್ಪನ್ನ ಮತ್ತು ಉದ್ಯೋಗಾವಕಾಶಗಳು ಸಿಗುತ್ತವೆಯೇನೋ ನಿಜ. ಆದರೆ ಇವುಗಳಿಂದ ಆಗುವ ದುಷ್ಪರಿಣಾಮಗಳನ್ನು ನಾವು ನಿಯಂತ್ರಿಸಬೇಕಾಗುತ್ತದೆ. ಇವುಗಳಲ್ಲಿ ಮುಖ್ಯವಾದ ದುಷ್ಪರಿಣಾಮ ಪರಿಸರದ ಮಾಲಿನ್ಯ.

ಪರಿಸರದ ಮಾಲಿನ್ಯವನ್ನು ನಿಯಂತ್ರಿಸುವುದು ನಾವು ಪ್ರಕೃತಿಯನ್ನು ಸುಂದರವಾಗಿಡಲಷ್ಟೇ ಅಲ್ಲ. ನೀರು, ಗಾಳಿ, ನೆಲ ಇವೇ ಮೊದಲಾದವುಗಳಿಂದ ಒಡಗೂಡಿದ ಪರಿಸರದಲ್ಲಿ ನಾವು ಔದ್ಯಮೀಕರಣದ ಮೂಲಕ ವಿಷವಸ್ತುಗಳನ್ನು ಬಿಡುತ್ತೇವೆ. ಇದರ ಬೆಲೆಯನ್ನು ತೆತ್ತುವ, ಪರಿಣಾಮಗಳನ್ನು ಅನುಭವಿಸುವ ಭಾರ ಉದ್ಯಮಗಳ ಮಾಲೀಕರ ಮೇಲೆ ಬೀಳದೆ ಸಾಮಾನ್ಯ ಜನರ ಮೇಲೆ ಬೀಳುತ್ತದೆ. ಅವರ ಆರೋಗ್ಯ ಹಾಳಾಗುತ್ತದೆ, ಕ್ಯಾನಸರ್ ರೋಗದ ಪ್ರಮಾಣ ಹೆಚ್ಚುತ್ತದೆ, ದನಕರುಗಳ ಆರೋಗ್ಯ ಹಾಳಾಗಿ ಅವುಗಳಿಂದ ಬರುವ ಉತ್ಪಾದನೆ ಕುಂಠಿತವಾಗುತ್ತದೆ. ಮೀನುಗಳ ಸಮೂಹಕ್ಕೆ ಸಮೂಹಗಳೇ ನಾಶವಾಗಿ ಅವುಗಳ ಮೇಲೆ ಜೀವಿಸುವ ಮೀನುಗಾರರ ಜೀವನದ ಮೇಲೆ ಕೊಡಲಿ ಬೀಳುತ್ತದೆ, ಕುಡಿಯುವ ನೀರು ಕಡಿಮೆಯಾಗಿ ಅದರ ಸಲುವಾಗಿ ದೂರ ಕ್ರಮಿಸಬೇಕಾಗುತ್ತದೆ. ತೆಂಗಿನ ತೋಟ ಮತ್ತು ಇತರ ಬೆಳೆಗಳ ಮೇಲೆ ಸಿಮೆಂಟ್ ಧೂಳು ಬಿದ್ದು ಉತ್ಪಾದನೆ ಇಳಿಯುತ್ತದೆ. ಹೀಗೆಯೇ ಒಂದಲ್ಲ, ಎರಡಲ್ಲ. ಅನೇಕ ಪರಿಣಾಮಗಳನ್ನು ಜನತೆ ಎದುರಿಸಬೇಕಾಗುತ್ತದೆ.

ದುಷ್ಪರಿಣಾಮಗಳನ್ನು ಹೋಗಲಾಡಿಸಲು ಉದ್ಯಮಗಳನ್ನೇ ಹೋಗಲಾಡಿಸಬೇಕಾಗಿಲ್ಲ. ಆದರೆ ದುಷ್ಪರಿಣಾಮಗಳ ಜವಾಬ್ದಾರಿಯನ್ನು ಉದ್ಯಮಗಳು ಹೊರುವಂತೆ ಮಾಡಬೇಕಾಗುತ್ತದೆ. ಭಾರತದಲ್ಲಷ್ಟೇ ಅಲ್ಲ, ಎಲ್ಲ ರಾಷ್ಟ್ರಗಳಲ್ಲಿಯೂ Polluter Pays Principle ಅಂದರೆ ಯಾರು ಮಾಲಿನ್ಯಕ್ಕೆ ಅಥವಾ ದುಷ್ಪರಿಣಾಮಗಳಿಗೆ ಕಾರಣೀಭೂತರೋ ಅವರೇ ಅದರ ಬೆಲೆಯನ್ನು ಅಥವಾ ವೆಚ್ಚವನ್ನು ಹೊರಬೇಕು ಎಂಬ ತತ್ತ್ವವನ್ನು ಒಪ್ಪಿಕೊಂಡು ಅದರ ಪ್ರಕಾರ ಕಾನೂನನ್ನು ಮಾಡಲಾಗಿದೆ. ಮಾಲಿನ್ಯವನ್ನು ನಿಯಂತ್ರಿಸದೇ ಜನರ ಮೇಲೆಯೇ ಪರಿಣಾಮವಾದರೆ ಜನರಿಗೆ ತಕ್ಕ ಪರಿಹಾರವನ್ನು ಕೊಡುವುದು ಉದ್ಯಮಗಳ ಜವಾಬ್ದಾರಿಯಾಗುತ್ತದೆ. ಜನರ ಮೇಲೆ ಅಥವಾ ಪರಿಸರದ ಮೇಲೆ ದುಷ್ಪರಿಣಾಮವಾಗದಂತೆ ಮಾಲಿನ್ಯವನ್ನು ಅದರ ಮೂಲದಲ್ಲಿಯೇ ನಿಯಂತ್ರಿಸುವುದೂ, ಅದಕ್ಕೆ ತಗಲುವ ವೆಚ್ಚವನ್ನು ಉದ್ಯಮಗಳೇ ಹೊರುವುದು ಮೇಲೆ ಹೇಳಿದ ತತ್ತ್ವದ ಇನ್ನೊಂದು ರೂಪ.

ಜನರಿಗೆ ಕಷ್ಟ ಕೊಟ್ಟು, ಆಮೇಲೆ ಪರಿಹಾರಧನವನ್ನು ಕೊಡುವುದಕ್ಕಿಂತ ಮೂಲದಲ್ಲಿಯೇ ಮಾಲಿನ್ಯವನ್ನು ನಿಯಂತ್ರಿಸುವುದು ಹೆಚ್ಚು ಸೂಕ್ತವೆಂದು ಜಲ ಮಾಲಿನ್ಯ ನಿಯಂತ್ರಣ ಕಾಯಿದೆಯನ್ನು ೧೯೭೪ರಲ್ಲೂ, ವಾಯು ಮಾಲಿನ್ಯ ನಿಯಂತ್ರಣ ಕಾಯಿದೆಯನ್ನು ೧೯೮೧ರಲ್ಲೂ ಭಾರತದಲ್ಲಿ ಅಂತೆಯೇ ಎಲ್ಲ ರಾಜ್ಯಗಳಲ್ಲಿಯೂ ಅನುಷ್ಠಾನಕ್ಕೆ ತರಲಾಯಿತು. ಈ ಕಾಯಿದೆಯನ್ನು ಅನುಷ್ಠಾನಕ್ಕೆ ತರಲು ಕೇಂದ್ರದ ಮಟ್ಟದಲ್ಲಿಯೂ, ರಾಜ್ಯಗಳ ಮಟ್ಟದಲ್ಲಿಯೂ ಮಾಲಿನ್ಯ ನಿಯಂತ್ರಣ ಮಂಡಳಿಗಳ ಸ್ಥಾಪನೆಯನ್ನು ಮಾಡಲಾಯಿತು. ಇದೇ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯೂ ಸ್ಥಾಪನೆಯಾಯಿತು. ಮಾಲಿನ್ಯದ ಪ್ರಮಾಣ ಇಂತಿಷ್ಟೇ ಮಿತಿಯೊಳಗೆ ಇರಬೇಕೆಂದು ಈ ಮಂಡಳಿಗಳು ಮಿತಿ (standard)ಗಳನ್ನು ನಿರ್ಧರಿಸುತ್ತವೆ. ಮಾಲಿನ್ಯದ ಮಾಪನ ಮಾಡಲು ಲ್ಯಾಬೋರೇಟರಿಗಳನ್ನು ಸ್ಥಾಪಿಸುತ್ತವೆ. ಮಾಲಿನ್ಯದ ಪ್ರಮಾಣ ನಿರ್ಧರಿಸಿದ ಮಿತಿಗಳಿಗೆ ಮೀರಿದರೆ ಈ ಮಂಡಳಿಗಳು ಉದ್ಯಮಗಳ ವಿರುದ್ಧ ಕಾಯಿದೆ ಬದ್ಧ ಕ್ರಮಗಳನ್ನು ಜಾರಿ ಮಾಡಬೇಕಾಗುತ್ತದೆ. ಕಾಯಿದೆಯಿಂದ ತಪ್ಪಿಸಿಕೊಂಡ ಉದ್ಯಮಗಳಿಗೆ ನೀರು ಮತ್ತು ವಿದ್ಯುತ್ ಶಕ್ತಿಯ ಪೂರೈಕೆಗೆ ತಡೆ ಹಾಕುವುದು ಅಥವಾ ತೀರ ಕೆಟ್ಟ ಪರಿಸ್ಥಿತಿಯಲ್ಲಿ ಅಂಥ ಉದ್ಯಮಗಳನ್ನು ನಿಲ್ಲಿಸಿಬಿಡುವ ಅಧಿಕಾರವೂ ಸಹ ಈ ಮಂಡಳಿಗಳಿಗೆ ಇದೆ. ಸಾಮಾನ್ಯವಾಗಿ ಮಂಡಳಿಗಳು ಅಷ್ಟು ಮಟ್ಟಿಗೆ ಹೋಗುವುದಿಲ್ಲ. ಅವು ಕಾಯಿದೆ ಬದ್ಧ ಕ್ರಮಗಳನ್ನು ಕೈಗೊಳ್ಳಲು ದಾವೆ ಮಾಡುವುವು, ದಂಡ ಜುಲ್ಮಾನೆಗಳನ್ನು ಹೇರುವುವು, ಆದರೆ ನಿರುದ್ಯೋಗವಾಗುವ ಭೀತಿಯಿಂದಲೋ ಏನೋ ಉದ್ಯಮಗಳನ್ನೇ ನಿಲ್ಲಿಸಿ ಬಿಡುವ ಕ್ರಮ ತೆಗೆದುಕೊಳ್ಳುವುದು ವಿರಳ. ತಕ್ಕ ಸಂದರ್ಭದಲ್ಲಿ ತಪ್ಪಿತಸ್ಥರನ್ನು ಮೂರು ತಿಂಗಳಿಂದ ಆರು ವರ್ಷಗಳವರಿಗೆ ಜೈಲಿಗೂ ಕಳುಹಿಸಬಹುದು. ಆದರೆ ಹಾಗೆ ನಿಜವಾಗಿ ಜೈಲಿಗೆ ಕಳುಹಿಸಿದ ಉದಾಹರಣೆ ಗೊತ್ತಿಲ್ಲ.

ಉದ್ಯಮಗಳನ್ನು ಪ್ರಾರಂಭಿಸುವ ಮೊದಲೇ ಪರಿಸರ ಮಾಲಿನ್ಯದ ದೃಷ್ಟಿಯಿಂದ ಮಾಲಿನ್ಯ ನಿಯಂತ್ರಣ ಮಂಡಳಿಯ ಒಪ್ಪಿಗೆಯನ್ನು ಪಡೆಯಬೇಕಾಗುತ್ತದೆ. ಮಾಲಿನ್ಯ ನಿಯಂತ್ರಣಕ್ಕೆ ಬೇಕಾದ ಯಂತ್ರ ಸೌಕರ್ಯಗಳನ್ನು ಉದ್ಯಮಗಳು ಹಾಕಿಕೊಂಡಿವೆಯೋ ಎಂಬುದನ್ನು ಮಂಡಳಿಯು ಪರಿಷ್ಕರಿಸಿ ಆ ಮೇಲೆಯೇ ಉದ್ಯಮಗಳನ್ನು ಪ್ರಾರಂಭಿಸುವ ಒಪ್ಪಿಗೆಯನ್ನು ನೀಡುವುದು ವಾಡಿಕೆ. ಆದರೆ ಅನೇಕ ಉದ್ಯಮಗಳು ಈ ಒಪ್ಪಿಗೆಯನ್ನು ಪಡೆಯಲು ಮಾತ್ರ ಸಾಕಷ್ಟು ನಿಯಂತ್ರಣ ಸೌಕರ್ಯಗಳನ್ನು ಹಾಕಿಕೊಂಡು ವಿದ್ಯುಚ್ಛಕ್ತಿಯನ್ನು ಉಳಿಸಲು ಆಮೇಲೆ ಸಾಕಷ್ಟು ಮಾಲಿನ್ಯ ನಿಯಂತ್ರಣ ಮಾಡುವುದೇ ಇಲ್ಲ. ಇಂತಹ ಸಂದರ್ಭವನ್ನು ಎದುರಿಸಲು ಸಹ ಮಂಡಳಿಗಳು ಮಾರ್ಗ ಮಾಡಿಕೊಂಡಿವೆ. ಮಂಡಳಿಗಳಿಗೆ ಉದ್ಯಮಗಳ ತನಿಖೆ ನಡೆಸುವ ಅಧಿಕಾರವಿದೆ. ಈ ದೃಷ್ಟಿಯಿಂದ ಉದ್ಯಮಗಳ ವಿಭಜನೆಯನ್ನು ಮೂರು ಗುಂಪುಗಳಲ್ಲಿ ಎರಡು ವಿಧವಾಗಿ ಮಾಡಲಾಗಿದೆ. ಗಾತ್ರದ ದೃಷ್ಟಿಯಿಂದ - ದೊಡ್ಡ ಮಧ್ಯಮ ಮತ್ತು ಸಣ್ಣ ಎಂತಲೂ, ಮಾಲಿನ್ಯದ ದೃಷ್ಟಿಯಿಂದ - ಕೆಂಪು, ಕಿತ್ತಳೆ ಮತ್ತು ಹಸಿರು ಎಂತಲೂ ಮಾಡಲಾಗಿದೆ. ದೊಡ್ಡ ಮತ್ತು ಕೆಂಪು ಉದ್ಯಮಗಳನ್ನು ಹೆಚ್ಚು ಮತ್ತು ಮೇಲಿಂದ ಮೇಲೆ ತನಿಖೆಗೆ ಒಳಪಡಿಸಲಾಗುವುದು. ಸಣ್ಣ ಮತ್ತು ಹಸಿರು ಗುಂಪುಗಳಲ್ಲಿಯು ಉದ್ಯಮಗಳ ಮೇಲೆ ಎಲ್ಲಕ್ಕೂ ಕಡಿಮೆ ತನಿಖೆ. ಇವನ್ನು ಕೋಷ್ಟಕ-೧ರಲ್ಲಿ ಕಾಣಬಹುದು.

ಕೋಷ್ಟಕ ೧ ಉದ್ಯಮಗಳ ವರ್ಗೀಕರಣ ಮತ್ತು ಮಾಲಿನ್ಯ ತನಿಖೆಯ ತೀವ್ರತೆ

| ಗಾತ್ರದ ದೃಷ್ಟಿಯಿಂದ | ಮಾಲಿನ್ಯದ ದೃಷ್ಟಿಯಿಂದ | ತನಿಖೆಯ ತೀವ್ರತೆ |
|---|---|---|
| ದೊಡ್ಡ | ಕೆಂಪು | ತಿಂಗಳಿಗೊಮ್ಮೆ (ಮಾಲಿನ್ಯ ಕಡಿಮೆಯಿದ್ದರೆ ಆರು ತಿಂಗಳಿಗೊಮ್ಮೆ) |
| ಮಧ್ಯಮ | ಕೆಂಪು | ೩ ತಿಂಗಳಿಗೊಮ್ಮೆ |
| | ಕಿತ್ತಳೆ | ೬ ತಿಂಗಳಿಗೊಮ್ಮೆ |
| | ಹಸಿರು | ವರ್ಷಕ್ಕೊಮ್ಮೆ |
| ಸಣ್ಣ | ಕೆಂಪು | ೬ ತಿಂಗಳಿಗೊಮ್ಮೆ |
| | ಕಿತ್ತಳೆ | ವರ್ಷಕ್ಕೊಮ್ಮೆ |
| | ಹಸಿರು | ೨ ವರ್ಷಕ್ಕೊಮ್ಮೆ |

ಟಿಪ್ಪಣಿ: ಸ್ಥಿರ ಬಂಡವಾಳ ೫ ಕೋಟಿ ರೂಪಾಯಿಗಳಿಗೆ ಮೇಲ್ಪಟ್ಟು ಇದ್ದರೆ ದೊಡ್ಡ ಉದ್ಯಮಗಳೆಂದು, ೩೫ ಲಕ್ಷ ರೂ.ಗಳು ಅಥವಾ ಅದಕ್ಕೂ ಕಡಿಮೆ ಇದ್ದರೆ ಸಣ್ಣ ಉದ್ಯಮಗಳೆಂದೂ, ಇವಕ್ಕೆ ನಡುವಿನ ಉದ್ಯಮಗಳಿಗೆ ಮಧ್ಯಮ ಉದ್ಯಮಗಳೆಂದು ಪರಿಗಣಿಸಲಾಗುತ್ತದೆ. ಹಸಿರು ಗುಂಪಿನ ಉದ್ಯಮಗಳಲ್ಲಿಯೂ ಸ್ವಲ್ಪ ಮಾಲಿನ್ಯವಿದ್ದೇ ಇದೆ. ಏನೂ ಮಾಲಿನ್ಯ ತರದ ಉದ್ಯಮಗಳು ಈ ವರ್ಗೀಕರಣಕ್ಕೆ ಒಳಪಟ್ಟಿಲ್ಲ.

ಮಾಲಿನ್ಯ ನಿಯಂತ್ರಣ ಕಾನೂನುಗಳ ಅನುಷ್ಠಾನದಲ್ಲಿ ೧೯೮೬ರಿಂದ ಈಚೆಗೆ ಸಾಕಷ್ಟು ಅಲ್ಲದಿದ್ದರೂ ಗಮನೀಯ ಸುಧಾರಣೆ ಕಂಡು ಬಂದಿದೆ. ಇದಕ್ಕೆ ಮುಖ್ಯವಾದ ಕಾರಣ ನಿಯಂತ್ರಣ ಮಂಡಳಿಗಳಿಗೆ ಕೊಟ್ಟ ಹೆಚ್ಚಿನ ಅಧಿಕಾರಗಳು ಮತ್ತು ಜನತೆಗೆ ಸಹ ತಪ್ಪಿತಸ್ಥ ಉದ್ಯಮಗಳ ವಿರುದ್ಧ ದಾವೆ ಹೂಡುವ ಅಧಿಕಾರ ಕೊಟ್ಟದ್ದು. ೧೯೮೬ರ ಪರಿಸರ ಸಂರಕ್ಷಣಾ ಕಾನೂನು (Environment Protection Act) ಈ ಸಂದರ್ಭದಲ್ಲಿ ಒಂದು ಮಹತ್ವದ ಮೈಲಿಗಲ್ಲು. ಇದಕ್ಕೂ ಮೊದಲು ತಪ್ಪನ್ನು ಸಿದ್ಧಪಡಿಸುವ ಭಾರ ಮಾಲಿನ್ಯ ನಿಯಂತ್ರಣ ಮಂಡಳಿಗಳ ಮೇಲೆ ಇತ್ತು. ಈಗ ತಪ್ಪು ಮಾಡಿಲ್ಲವೆಂದು ಸಿದ್ಧಪಡಿಸುವ ಭಾರ ಉದ್ಯಮಗಳ ಮೇಲೆ ಇದೆ. ನ್ಯಾಯಾಲಯಕ್ಕೆ ಹೋಗಿಯೇ ಕ್ರಮ ತೆಗೆದುಕೊಳ್ಳುವ ಬದಲು, ಆಡಳಿತ ಕ್ರಮಗಳ ಮೂಲಕ ಮಾಲಿನ್ಯ ನಿಯಂತ್ರಣವನ್ನು ಅನುಷ್ಠಾನಕ್ಕೆ ತರಲು ಈಗ ಸಾಧ್ಯವಿದೆ. ಬೇಕಾದರೆ, ಉದ್ಯಮಗಳು ಮಂಡಳಿಗಳ ವಿರುದ್ಧ ನ್ಯಾಯಾಲಯಗಳ ಹತ್ತಿರ ದೂರು ಕೊಡಬಹುದು. ತೀರ್ಪು ಕೊಡಲು ವಿಳಂಬವಾಗದಂತೆ ಪರಿಸರಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಮೀಸಲಾದ ವಿಶೇಷ Environmental Tribunalಗಳನ್ನು ಹಮ್ಮಿಕೊಳ್ಳಲಾಯಿತು.

ಮಂಡಳಿಗಳು ಉದ್ಯಮಿಗಳ ಪ್ರಭಾವಕ್ಕೆ ಒಳಪಟ್ಟು ಕಾಯಿದೆ ಕಾಗದದಲ್ಲಿ ಮಾತ್ರ ಉಳಿದರೆ ಬೇರೆ ಮಂಡಳಿಗಳು ಔದ್ಯಮಿಕ ಮಾಲಿನ್ಯದ ಬಗ್ಗೆ ಜಾಗೃತವಾಗಿದ್ದು ತಮ್ಮ ಕರ್ತವ್ಯವನ್ನು ನಿರ್ವಹಿಸಲು ಸದಾ ಒತ್ತಡ ಇರಬೇಕೆಂದು ಸಾರ್ವಜನಿಕ ಹಿತಾಸಕ್ತಿ ದಾವೆ (Public Interest Litigations)ಗಳಿಗೆ ೧೯೮೬ರಿಂದ ಈಚೆಗೆ ಅನುವು ಮಾಡಲಾಗಿದೆ. ಸರಕಾರದ ನಿಯಂತ್ರಣ ಮಂಡಳಿಗಳು ಹತ್ತಿರವಿದ್ದ ಮಾಹಿತಿಯನ್ನು ದೊರಕಿಸುವ ಹಕ್ಕನ್ನು ಈ ಸಂದರ್ಭದಲ್ಲಿ ಇಂತಹ ದಾವೆ ಮಾಡುವವರಿಗೆ ಕೊಡಲಾಯಿತು. ಹೀಗಾಗಿ ಔದ್ಯಮಿಕ ಮಾಲಿನ್ಯಕ್ಕೆ ಒಳಪಟ್ಟ ಜನರ ವತಿಯಿಂದ ಇತರ ಉದ್ಯಮಗಳ ಮತ್ತು ನಿಯಂತ್ರಣ ಮಂಡಳಿಗಳ ವಿರುದ್ಧ ದಾವೆ ಮಾಡಬಹುದು.

ಅನೇಕ ಸಲ ರಾಜ್ಯ ಸರಕಾರಗಳು ಪರಿಸರದ ಕಡೆಗೆ ಗಮನ ಕೊಡುವುದಲ್ಲವಷ್ಟೇ ಅಲ್ಲ, ಈ ನೀತಿಯ ಆಧಾರದ ಮೇಲೆ ಉದ್ಯಮಿಗಳನ್ನು ತಮ್ಮ ತಮ್ಮ ರಾಜ್ಯಗಳಲ್ಲಿಯೇ ಬರುವಂತೆ ಆಕರ್ಷಿಸಲು ಇತರ ರಾಜ್ಯಗಳೊಡನೆ ಸ್ಪರ್ಧಿಸುತ್ತವೆ. ಇಂತಹ ಪ್ರತಿಗಾಮಿ ಸ್ಪರ್ಧೆ ಪರಿಸರದ ಮೇಲೆ ಮಾರಕವಾಗುತ್ತದೆ. ಕಾರಣ ಪರಿಸರದ ವಿಷಯವನ್ನು ಈಗ ಸಂವಿಧಾನದ concurrent listನಲ್ಲಿ ಇಡಲಾಗಿದೆ. ಕೇಂದ್ರ ಸರ್ಕಾರದ ಪರಿಸರ ಇಲಾಖೆಯೂ, ಕೇಂದ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿಯೂ ಔದ್ಯೋಗಿಕ ಮಾಲಿನ್ಯ ಮತ್ತು ರಾಜ್ಯಮಟ್ಟದ ಮಂಡಳಿಗಳ ಮೇಲೆ ಲಕ್ಷ್ಯಕೊಟ್ಟು ಅವುಗಳಿಗೆ ನಿರ್ದೇಶನಗಳನ್ನೂ ನೀಡುತ್ತವೆ.

ಮಾಲಿನ್ಯ ನಿಯಂತ್ರಣದಲ್ಲಿ ಕಂಡುಬಂದ ಸುಧಾರಣೆಗೆ ಒಂದು ನಿದರ್ಶನವೆಂದರೆ ಚಲಿಸುತ್ತಿರುವ ಮಾಲಿನ್ಯ ನಿಯಂತ್ರಣ ಯಂತ್ರ ಸೌಕರ್ಯಗಳನ್ನು ಇಟ್ಟುಕೊಂಡು ಉದ್ಯಮಗಳ ಪ್ರತಿಶತ ಪ್ರಮಾಣ. ಈ ಅಂಕಿ ಸಂಖ್ಯೆಗಳು ಕರ್ನಾಟಕದ ಮಾಲಿನ್ಯ ನಿಯಂತ್ರಣ ಮಂಡಳಿಯು ವಾರ್ಷಿಕ ವರದಿಗಳ ಮೇಲೆ ಆಧರಿಸಿದ್ದು, ಅವನ್ನು ಕೋಷ್ಟಕ - ೨ರಲ್ಲಿ ಕೊಡಲಾಗಿದೆ.

ಕೋಷ್ಟಕ ೨: ಚಲಿಸುತ್ತಿರುವ ಮಾಲಿನ್ಯ ನಿಯಂತ್ರಣ ಯಂತ್ರ ಸೌಕರ್ಯಗಳನ್ನು ಇಟ್ಟುಕೊಂಡ ಉದ್ಯಮಗಳ ಪ್ರತಿಶತ ಪ್ರಮಾಣ (ಕರ್ನಾಟಕದಲ್ಲಿ)

| | ೩೧.೩.೧೯೯೧ | ೩೧.೩.೧೯೯೩ |
|---|---|---|
| **ಜಲಮಾಲಿನ್ಯ** | | |
| ದೊಡ್ಡ ಉದ್ಯಮಗಳು | ೬೫.೮ | ೭೦.೩ |
| ಮಧ್ಯಮ ಉದ್ಯಮಗಳು | ೬೫.೦ | ೫೩.೦ |
| ಸಣ್ಣ ಉದ್ಯಮಗಳು | ಮಾಹಿತಿ ಇಲ್ಲ | ೫೨.೫ |
| **ವಾಯು ಮಾಲಿನ್ಯ** | | |
| ದೊಡ್ಡ ಉದ್ಯಮಗಳು | ೩೩.೮ | ೬೨.೬ |
| ಮಧ್ಯಮ ಉದ್ಯಮಗಳು | ೩೩.೫ | ೬೦.೧ |
| ಸಣ್ಣ ಉದ್ಯಮಗಳು | ಮಾಹಿತಿ ಇಲ್ಲ | ೩೪.೫ |

ಮೂಲ: ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ೧೯೯೦-೯೧ ಮತ್ತು ೧೯೯೨-೯೩ರ ವಾರ್ಷಿಕ ವರದಿಗಳು.

ಈ ಕೋಷ್ಟಕದಲ್ಲಿ ಜಲಮಾಲಿನ್ಯದ ಕೆಳಗೆ ಮಧ್ಯಮ ಉದ್ಯಮಗಳನ್ನು ಬಿಟ್ಟರೆ ಎರಡು ವರ್ಷಗಳಲ್ಲೇ ಸುಧಾರಣೆಯಾಗಿದ್ದೂ ಕಂಡು ಬರುತ್ತದೆ. ಮಧ್ಯಮ ಉದ್ಯಮಗಳ ಮಟ್ಟಿಗೆ ಪ್ರತಿಶತ ಪ್ರಮಾಣ ಇಳಿದಿದ್ದು ಅವುಗಳ ಸಂಖ್ಯೆ ಭಾರೀ ಮೊತ್ತದಲ್ಲಿ ಏರಿದ್ದೇ ಕಾರಣ. ವಾಯು ಮಾಲಿನ್ಯದ ಸಂದರ್ಭದಲ್ಲಿ ಗಮನೀಯ ಸುಧಾರಣೆಯಾಗಿದ್ದು ಈ ಕೋಷ್ಟಕದಲ್ಲಿ ಕಾಣಬರುತ್ತದೆ. ಇನ್ನೊಂದು ಸ್ಪಷ್ಟೀಕರಣ ಇಲ್ಲಿ ಅವಶ್ಯ. ಈ ಸಂಖ್ಯೆಗಳು ಚಲಿಸುತ್ತಲು ಯೋಗ್ಯವಾದ ಸ್ಥಿತಿಯಲ್ಲಿ ಇದ್ದು ಯಂತ್ರ ಸೌಕರ್ಯಗಳನ್ನು ಇಟ್ಟುಕೊಂಡು ಉದ್ಯಮಗಳಿಗೆ ಅನ್ವಯಿಸುತ್ತವೆ. ಇದರ ಅರ್ಥ ಈ ಉದ್ಯಮಗಳು ಅವುಗಳನ್ನು ಪ್ರತಿದಿನವೂ ಚಲಾಯಿಸುತ್ತವೆ ಎಂದಲ್ಲ. ಎಷ್ಟರ ಮಟ್ಟಿಗೆ ಮಂಡಳಿಗಳೂ ಮತ್ತು ಜನತೆಯೂ ಇದರ ಬಗ್ಗೆ ಜಾಗೃತವಾಗಿದ್ದು ತಕ್ಕ ಕ್ರಮಗಳನ್ನು ಕೈಗೊಳ್ಳುತ್ತವೆಯೋ ಅದರ ಮೇಲೆ ಅದು ಅವಲಂಬಿಸಿರುತ್ತದೆ. ಇಂತಹ ಸದಾಕಾಲ ಜಾಗೃತೆ ಕಷ್ಟವಾದದ್ದುರಿಂದ ಈಗ Process Integrated

Technologyಗಳನ್ನು ಅಳವಡಿಸಬೇಕಾಗುತ್ತದೆ. ಉತ್ಪಾದನೆ ಮಾಡುವ ಮತ್ತು ಮಾಲಿನ್ಯವನ್ನು ನಿಯಂತ್ರಿಸುವ ಎರಡೂ ಯಂತ್ರಗಳಲ್ಲಿ ಸಮನ್ವಯ ಸಾಧಿಸಿ ಒಂದು ಚಲಿಸಬೇಕಾದರೆ ಇನ್ನೊಂದೂ ಚಲಿಸಬೇಕಾಗುತ್ತದೆ. ಇಂತಹ ತಂತ್ರ ವ್ಯವಸ್ಥೆಯಿಂದ ಒಟ್ಟು ವೆಚ್ಚ ಉತ್ಪಾದನೆಯ ಪ್ರಮಾಣದಲ್ಲಿ ಕಡಿಮೆಯಾಗುವ ಸಂಭವವಿದೆ.

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ತನ್ನ ಮಟ್ಟಿಗೆ ತನಿಖೆಗಳನ್ನು ನಡೆಸಿ ದಾವೆಗಳನ್ನು ಹೂಡುವ ಕಾರ್ಯವನ್ನು ನಡೆಸುತ್ತಲೇ ಇದೆ. ೩೧.೩.೧೯೯೩ರ ತನಕ ೧೯೭೪ರ ಜಲಮಾಲಿನ್ಯ ನಿಯಂತ್ರಣ ಕಾಯಿದೆಯ ಕೆಳಗೆ ೮೪ ದಾವೆಗಳನ್ನು, ೧೯೮೧ರ ವಾಯು ಮಾಲಿನ್ಯ ನಿಯಂತ್ರಣ ಕಾಯಿದೆಯ ಕೆಳಗೆ ೩೯ ದಾವೆಗಳನ್ನು ಹೂಡಲಾಗಿತ್ತು. ಅದರಲ್ಲಿ ನಿರ್ಣಯವಾದ ಕೇಸುಗಳು ಅನುಕ್ರಮವಾಗಿ ೩೦ ಮತ್ತು ೭. ಅವುಗಳಲ್ಲಿ ಮಂಡಳಿಗೆ ಪರವಾಗಿ ತೀರ್ಪು ಆದ ಕೇಸುಗಳು ಅನುಕ್ರಮವಾಗಿ ೧೦ ಮತ್ತು ೧ ಮಾತ್ರ. ಉದ್ಯಮಗಳನ್ನು ನಿಲ್ಲಿಸಿಬಿಡುವ ತೀರ್ಮಾನವನ್ನು ಮಂಡಳಿಯು ತೆಗೆದುಕೊಂಡಿದ್ದೂ ಬರೀ ೫ (ಜಲ ಮಾಲಿನ್ಯದ ಮೂಲಕ) ಮತ್ತು ೪ (ವಾಯು ಮಾಲಿನ್ಯದ ಮೂಲಕ) ಮಾತ್ರ. ಮಂಡಳಿಯು ತನ್ನ ಅಧಿಕಾರಿಗಳನ್ನು ಬಹಳ ಜಾಗರೂಕತೆಯಿಂದ ಉಪಯೋಗಿಸುವುದು ಕಂಡುಬರುತ್ತದೆ.

ಮಾಲಿನ್ಯ ನಿಯಂತ್ರಣ ಮಂಡಳಿಗೆ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಲು ಬೇಕಾದ ಧನ ಬಲ ಮತ್ತು ಸಿಬ್ಬಂದಿ ಇಲ್ಲ. ೧೯೯೩ರಲ್ಲಿ ಸರಾಸರಿ ಒಂದು ಉದ್ಯಮದ ಮೇಲೆ ಲಕ್ಷ್ಯ ಕೊಟ್ಟು ತನಿಖೆ ನಡೆಸಲು ಮಂಡಳಿಗೆ ಇದ್ದುದು ರೂ. ೨೮೯ ಮಾತ್ರ. ಅದು ತಾನೇ ತನ್ನ ಧನ ಸಂಪನ್ಮೂಲಗಳನ್ನು ಹುಟ್ಟಿಸಿಕೊಳ್ಳಬೇಕಾಗುತ್ತದೆ. ಅದರ ಸ್ವಾಯತ್ತತೆಯನ್ನು ರಕ್ಷಿಸಿಕೊಳ್ಳಲು ಈ ನೀತಿ ಬೇಕಾಗಿದ್ದರೂ, ಅದು ಒಂದು ಆರ್ಥಿಕ ಅಡ್ಡಿಯಾಗುತ್ತದೆ. ತಾನು ಹೇರಿದ (water cess), ಫೀಜು ಮತ್ತು ಜುಲ್ಮಾನೆಗಳೇ ಮಂಡಳಿಯ ಸಂಪನ್ಮೂಲ. ಇದರ ಧನಪೂರೈಕೆಯನ್ನು ಹೆಚ್ಚಿಸುವ ಮಾರ್ಗಗಳನ್ನು ಹುಡುಕುವುದು ಅವಶ್ಯಕವಾಗಿದೆ. ಇದೇ ಕಾರಣದಿಂದ ಮಂಡಳಿಗೆ ಬೇಕಾಗುವಷ್ಟು ಸಿಬ್ಬಂದಿಯೂ ಇಲ್ಲ. ೧೯೯೩ರಲ್ಲಿ ಇವರ ಹತ್ತಿರವಿದ್ದ ಸಿಬ್ಬಂದಿ ೨೦೫ ಮಾತ್ರ. ಒಪ್ಪಿಗೆ (sanction) ಪಟ್ಟ ೩೫೮ ಸಿಬ್ಬಂದಿಗೆ ಹೋಲಿಸಿದರೆ ಅದು ಕಡಿಮೆ. ಅಲ್ಲದೆ, ಈ ಎಲ್ಲ ಸಿಬ್ಬಂದಿಯ ಸಹಾಯದಿಂದ ಇಡೀ ರಾಜ್ಯದಲ್ಲಿ ಪಸರಿಸಿದ ೧೩೮ ಸಾವಿರ ಉದ್ಯಮಗಳ ತನಿಖೆಗಳನ್ನು ಮಾಡುವುದು ಕಷ್ಟಸಾಧ್ಯ.

ಈ ಕಾರಣದಿಂದಾಗಿ ಮಧ್ಯಮ ಮತ್ತು ವಿಶೇಷವಾಗಿ ಸಣ್ಣ ಉದ್ಯಮಗಳಿಂದ ಆಗುವ ಮಾಲಿನ್ಯದ ತನಿಖೆ ಸರಿಯಾಗಿ ಆಗುತ್ತಿಲ್ಲ. ಅವುಗಳ ಸಂಖ್ಯೆಯೂ ಬಹಳವಾಗಿದ್ದು ಸಣ್ಣ ಉದ್ಯಮಗಳು ಸುಲಭವಾಗಿ ಕಾಯಿದೆಯನ್ನು ತಪ್ಪಿಸಿಕೊಳ್ಳುತ್ತವೆ. ಈ ಉದ್ಯಮಗಳಿಗೇ ತಮ್ಮದೇ ಆದ ಮಾಲಿನ್ಯ ನಿಯಂತ್ರಣ ಯಂತ್ರ ಸೌಕರ್ಯಗಳನ್ನು ಹಾಕಿಕೊಳ್ಳುವುದು ದುಬಾರಿ ವೆಚ್ಚದ್ದೆಂದು ಅನಿಸುತ್ತದೆ.

ಟ್ಯಾನರಿಗಳಂಥ (ಚರ್ಮ ಹದ ಮಾಡುವ) ಸಣ್ಣ ಉದ್ಯಮಗಳು ಗಾತ್ರದಲ್ಲಿ ಸಣ್ಣದಾದರೂ ಒಟ್ಟೊಟ್ಟಿಗೆ ತುಂಬಾ ವಿಷವನ್ನು ಪರಿಸರದಲ್ಲಿ ತೂರುತ್ತವೆ. ಇಡೀ ನದಿಗಳೇ ಈ ವಿಷದಿಂದ ಹಾಳಾಗಿ ಹೋಗುತ್ತಿವೆ. ಇಂತಹ ಸಂದರ್ಭದಲ್ಲಿ ಮಾಲಿನ್ಯ ನಿಯಂತ್ರಣ ಮಂಡಳಿಯು ಸಾಮೂಹಿಕ ನಿಯಂತ್ರಣ ಸೌಕರ್ಯವನ್ನು ಸಣ್ಣ ಉದ್ಯಮಗಳು ಹಮ್ಮಿಕ್ರೊಳ್ಳುವಂತೆ ಸಹಾಯ ಮಾಡುತ್ತವೆ. ಆದರೆ, ಇನ್ನೂ ಇವು ಆಗಬೇಕಾಗಿವೆ, ಸರಿಯಾಗಿ ಆಗಿಲ್ಲ.

ಆರ್ಥಿಕ ಮತ್ತು ಸಿಬ್ಬಂದಿಯ ಕೊರತೆ ಇವೆರಡರ ಮಿತಿಯಲ್ಲಿ ಮಂಡಳಿಯು ಕಾರ್ಯ ಮಾಡಬೇಕಾದರೂ, ಅದು ಒಂದು ವಿಷಯದಲ್ಲಿ ಸಲ್ಲದ ಭಾರವನ್ನು ವಹಿಸಬೇಕಾಗುತ್ತದೆ. ಅನೇಕ ಸಲ ಉದ್ಯಮಗಳು ಕೆಲ ತರಹದ ಮಾಲಿನ್ಯಗಳನ್ನು ನಿರ್ಧರಿಸಿದ ಮಿತಿಯೊಳಗೆ ಬರುವಂತೆ ನಿಯಂತ್ರಿಸಲು ಬೇಕಾದ ತಂತ್ರಜ್ಞಾನವೇ ಇಲ್ಲವೆಂದು ವಾದಮಾಡಿ ತಮ್ಮ ಕರ್ತವ್ಯವನ್ನು ಮಾಡದೇ ಇದ್ದುದಕ್ಕೆ ಸಬೂಬು ಕೊಡುತ್ತವೆ ಮತ್ತು ಮಾಲಿನ್ಯ ನಿಯಂತ್ರಣ ಮಂಡಳಿಗೆ ಇಂತಹ ತಂತ್ರಜ್ಞಾನವನ್ನು ಕೊಡುವಂತೆ ಕೇಳಿಕೊಳ್ಳುತ್ತವೆ. ಅದನ್ನು ಕೊಡಲು ಮಂಡಳಿಗೆ ಆಗದಿದ್ದರೆ ಉದ್ಯಮಗಳು ಅಂತಹ ಮಾಲಿನ್ಯವನ್ನು ನಿಯಂತ್ರಿಸುವ ಗೊಡವೆಗೇ ಹೋಗುವುದಿಲ್ಲ ಮತ್ತು ಕಾಯಿದೆಯನ್ನು ತಪ್ಪಿಸಿಕೊಳ್ಳುತ್ತವೆ. ಈಗ ಖಾಸಗೀ ರಂಗದಲ್ಲಿ ತಂತ್ರಜ್ಞಾನವನ್ನು ನೀಡುವ ಸಂಸ್ಥೆಗಳು ಪ್ರಾರಂಭವಾಗಿದ್ದು ಉದ್ಯಮಗಳು ಈ ಜ್ಞಾನವನ್ನು ಅವರ ಮೂಲಕ ದೊರಕಿಸಲು ಸಾಧ್ಯವಿದೆ. ಅದಕ್ಕೆ ಮಂಡಳಿಯ ಅಧಿಕಾರಿಗಳು ತಮ್ಮ ತಲೆಯನ್ನು ಚಚ್ಚಿಕೊಳ್ಳಬೇಕಾಗಿಲ್ಲ. ಅವರ ಕರ್ತವ್ಯ ಮಾಲಿನ್ಯದ ತನಿಖೆಯನ್ನು ಮಾಡುವುದು ಮತ್ತು ನಿರ್ಧರಿಸಿದ ಮಿತಿಗಳನ್ನು ಮೀರುವ ಉದ್ಯಮಗಳ ಮೇಲೆ ಕ್ರಮ ತೆಗೆದುಕೊಳ್ಳುವುದು. ತಂತ್ರಜ್ಞಾನವನ್ನು ಕೊಡಲು ಅವರು ಕಾಯಿದೆಬದ್ಧರಲ್ಲ.

ಮಾಲಿನ್ಯ ನಿಯಂತ್ರಣ ಕಾನೂನು ಇದ್ದರೂ ಅದನ್ನು ತೋರಿಕೆಗೆ ಅನುಷ್ಠಾನದಲ್ಲಿ ತಂದು ನೈಜಿಕವಾಗಿ ನಿರ್ಧರಿಸಿದ ಮಿತಿಗಳಿಗೆ ಮೀರಿ ಮಾಲಿನ್ಯವನ್ನು ಪರಿಸರದಲ್ಲಿ ಬಿಡುವುದೇ ಅನೇಕ ಉದ್ಯಮಗಳಿಗೆ ಸಾಮಾನ್ಯವಾಗಿ ಹೋಗಿದೆ. ಮಾಲಿನ್ಯವನ್ನು ನಿಯಂತ್ರಿಸದೇ ಕಲುಷಿತ ನೀರನ್ನೂ ನಗರದ ಚರಂಡಿಗಳಲ್ಲಿ, ಹಳ್ಳಿಗಳಲ್ಲಿ ತೂರಿ ಬಿಡುತ್ತವೆ. ಮನೆಗಳಿಂದ ಬರುವ ಚರಂಡಿ ನೀರೂ ಇದಕ್ಕೆ ಸೇರಿಕೊಂಡು ನೈಸರ್ಗಿಕವಾಗಿ ಸುಂದರವಾದ ಹಳ್ಳಗಳು ರಾಡಿಯ ನೀರಿನಿಂದ ತುಂಬಿ ಅದರ ದುರ್ನಾತ ಮೈಲುಗಟ್ಟಲೆ ಪಸರಿಸುತ್ತದೆ ಮತ್ತು ಭೂಗರ್ಭದಲ್ಲಿದ್ದ ಶುಚಿಯಾದ ನೀರೂ ಸಹ ಮಲಿನವಾಗುತ್ತದೆ. ಇದನ್ನು ಪರಿಹರಿಸಲು ಕಾನೂನು ಅಲ್ಲದೇ ಜನಬಲವೂ ಮಾಲಿನ್ಯ ನಿಯಂತ್ರಣೆಗೆ ಬೇಕಾಗುತ್ತದೆ.

ಕಾನೂನು ಮತ್ತು ಜನರ ಬೆಂಬಲಗಳ ಜೊತೆಗೆ ಇನ್ನೊಂದು ಆರ್ಥಿಕ

ಪರಿಹಾರವನ್ನು ಯೋಜಿಸಬಹುದು. ಅದೇ ಮಾಲಿನ್ಯದ ಮೇಲೆ ಹಾಕುವ ಕರಭಾರ ಅಥವಾ pollution tax. ನೀರಿನಲ್ಲಿ ಮತ್ತು ಹವೆಯಲ್ಲಿ ಎಷ್ಟು ಮತ್ತು ಯಾವ ತರಹದ ಮಾಲಿನ್ಯವನ್ನು ಉದ್ಯಮಗಳು ಬಿಡುತ್ತವೆಯೆಂದು ಮಾಪನ ಮಾಡುವ ತಂತ್ರಜ್ಞಾನ ಲಭ್ಯವಿದೆ. ಮಾಲಿನ್ಯದ ಪ್ರಮಾಣಕ್ಕೆ ತಕ್ಕಂತೆ ಈ ಕರವನ್ನು ಹೇರಬಹುದು. ಈ ಕರದ ಭಾರ ಎಷ್ಟು ಇರಬೇಕೆಂದರೆ ಕರವನ್ನು ಕೊಡುವುದಕ್ಕಿಂತ ಮಾಲಿನ್ಯವನ್ನು ನಿಯಂತ್ರಿಸುವುದೇ ಕಡಿಮೆ ವೆಚ್ಚದ್ದು ಎಂದು ಉದ್ಯಮಗಳಿಗೆ ಅನಿಸಬೇಕು. ಕರಭಾರ ಅದಕ್ಕೂ ಹಗುರವಾದರೆ ಮಾಲಿನ್ಯವನ್ನು ನಿಯಂತ್ರಿಸುವುದನ್ನು ಬಿಟ್ಟು ಕರಕೊಟ್ಟು ಕೈತೊಳೆದುಕೊಳ್ಳ ಬಹುದು. ಈ ಅಡಚಣೆಯಿಂದಾಗಿ ಮಾಲಿನ್ಯಕರವನ್ನು ಭಾರತದಲ್ಲಿ ಹೇರಿಲ್ಲ. ನೆದರ್‌ಲ್ಯಾಂಡಿನಲ್ಲಿ ಜಲಮಾಲಿನ್ಯದ ಮೇಲೆ ಕರ ಹೇರಿ ಮಾಲಿನ್ಯವನ್ನು ಬಹಳ ಕಡಿಮೆ ಮಾಡಿದ ಅನುಭವವುಂಟು. ಭಾರತದಲ್ಲು ಇಂತಹ ಕರವನ್ನು ಹೇರುವ ಸಾಧ್ಯತೆಯ ಬಗ್ಗೆ ವಿಚಾರ ನಡೆದಿದೆ. ಇಂತಹ ಕರ ಕಾನೂನಿನ ಬದಲಾಗಿ ಅಲ್ಲ, ಪೂರಕವಾಗಿ ಹೇರಬೇಕಾಗುತ್ತದೆ. ಸದ್ಯದಲ್ಲಿ ಚರಂಡಿಗಳಲ್ಲಿ ದೂಷಿತ ನೀರನ್ನು ಬಿಡುವ ಉದ್ಯಮಗಳು ಅವುಗಳ ಸಾಮೂಹಿಕ ನಿಯಂತ್ರಣದ ಖರ್ಚನ್ನಾದರೂ ಹೊರುವಂತೆ ನೋಡಿಕೊಳ್ಳಲು ಸಾಧ್ಯವಿದೆ. ನಗರ ಪಾಲಿಕೆಗಳು ಈಗ ಈ ಭಾರವನ್ನು ಹೊರಬೇಕಾಗುತ್ತದೆ. ಅವುಗಳಿಗೆ ಯಾವಾಗಲೂ ಇಂತಹ ವಿಷಯದಲ್ಲಿ ಆರ್ಥಿಕ ಕೊರತೆ ಇದ್ದೇ ಇದೆ. ಉದ್ಯಮಗಳು ಈ ಖರ್ಚಿನ ಭಾರವನ್ನು ನೋಡಿಕೊಂಡರೆ ನಗರಪಾಲಿಕೆಗಳ ಹಣದ ಅಭಾವ ಕಡಿಮೆಯಾಗಿ ಮಾಲಿನ್ಯ ನಿಯಂತ್ರಣವನ್ನು ಅವು ಹೆಚ್ಚು ಪರಿಣಾಮಕಾರಿಯಾಗಿ ಮಾಡುವ ಸಾಮರ್ಥ್ಯ ಹೊಂದುತ್ತವೆ. ನಾಗರೀಕರು ಈ ದೃಷ್ಟಿಯಲ್ಲಿ ಜಾಗ್ರತರಾಗಿದ್ದು ನಗರ ಪಾಲಿಕೆಗಳು ತಮ್ಮ ಕರ್ತವ್ಯವನ್ನು ಪಾಲಿಸುವಂತೆ ಒತ್ತಡ ತರಬೇಕಾಗುತ್ತದೆ.

ಮಾಲಿನ್ಯ ನಿಯಂತ್ರಣದ ವೆಚ್ಚ ಉದ್ಯಮಗಳಿಗೆ ನೀಗಲಾದಷ್ಟು ದುಬಾರಿಯೆ? ಇದರಿಂದ ಅವುಗಳ ಲಾಭದಾಯಕತೆ ಕಡಿಮೆಯಾಗುವುದೆ? ಈ ಕಾರಣಕ್ಕಾಗಿಯೇ ಉದ್ಯಮಗಳು ಮಾಲಿನ್ಯ ನಿಯಂತ್ರಣವನ್ನು ಸಾಕಷ್ಟು ಮಾಡಲು ಹಿಂಜರಿಯುತ್ತಿವೆಯೆ? ಇದರ ಬಗ್ಗೆ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ಅಧ್ಯಯನ ಸಂಸ್ಥೆಯಲ್ಲಿ ಎರಡು ಅಧ್ಯಯನಗಳನ್ನು ನಡೆಸಲಾಯಿತು. ಅವೆರಡೂ ಕರ್ನಾಟಕದ ಉದ್ಯಮಗಳನ್ನು ಕುರಿತದ್ದೆ! ಅದರಲ್ಲಿ ಮೊದಲನೆಯದು ರವಿಚಂದ್ರನ್ ಅವರು ನಾಡಕರ್ಣಿಯವರ ಮಾರ್ಗದರ್ಶನದಲ್ಲಿ ಮಾಡಿದ ಪಿ.ಹೆಚ್.ಡಿ. ಪ್ರಬಂಧ (೧೯೮೯). ಎರಡನೆಯದು ಇತ್ತೀಚೆಗೆ ಇನ್ನೂ ಸ್ವಲ್ಪ ಉದ್ಯಮಗಳನ್ನು ತೆಗೆದುಕೊಂಡು ನಾಡಕರ್ಣಿ ಮತ್ತು ಶಾಸ್ತ್ರಿಯವರು ಆಮ್‌ಸ್ಟರ್ ಡ್ಯಾಮ್‌ನಲ್ಲಿಯ ಪರಿಸರ ಅಧ್ಯಯನ ಸಂಸ್ಥೆಯ ಜೊತೆಗೆ IDPADದ ಅನುದಾನದ ಕೆಳಗೆ ನೆದರ್‌ಲ್ಯಾಂಡಿನೊಡನೆ ತುಲನಾತ್ಮಕವಾಗಿ ಮಾಡಿದ ಅಧ್ಯಯನ (೧೯೯೫). ಎರಡೂ ಅಧ್ಯಯನಗಳಲ್ಲಿ ಕಂಡುಬಂದ ಅಂಶವೇನೆಂದರೆ ಮಾಲಿನ್ಯ ನಿಯಂತ್ರಣವನ್ನು ಕೈಗೊಂಡ ಉದ್ಯಮಗಳಲ್ಲಿ ಅದರ ಮೇಲಿನ ವೆಚ್ಚ

ಅಷ್ಟೇನೂ ಭಾರವಾಗಿಲ್ಲ. ಒಂದೆರಡು ಅಪವಾದಗಳನ್ನು ಬಿಟ್ಟರೆ, ವಾರ್ಷಿಕ ತಳಹದಿಯ ಮೇಲೆ ತೆಗೆದುಕೊಂಡ ಮಾಲಿನ್ಯ ನಿಯಂತ್ರಣದ ಖರ್ಚನ್ನು (Annualised cost) ಒಟ್ಟು ಉತ್ಪಾದನೆಯ (turnover) ಜೊತೆಗೆ ಹೋಲಿಸಿದರೆ ಅದು ಪ್ರತಿಶತ ೦.೧೫ರಿಂದ ೨ರಷ್ಟು ಆಗುವುದು. ಈ ಪ್ರಮಾಣ ಹೆಚ್ಚಲ್ಲ. ಮದ್ಯವನ್ನು ತಯಾರಿಸುವ ಡಿಸ್ಟಿಲರೀಗಳಲ್ಲಿ, ಸಣ್ಣ ಗಾತ್ರದ ಕಾಗದ ಉತ್ಪಾದಕ ಉದ್ಯಮಗಳಲ್ಲಿ ಮಾತ್ರ ಇದರ ಪ್ರಮಾಣ ಗಣನೀಯವಾಗಿ ಹೆಚ್ಚಿತ್ತು (೫ರಿಂದ ೨೨ ಪ್ರತಿಶತ). ಸಾಮಾನ್ಯವಾಗಿ ಎಲ್ಲ ಉದ್ಯಮಗಳಿಗೆ ಮಾಲಿನ್ಯ ನಿಯಂತ್ರಣ ವೆಚ್ಚವನ್ನು ಸಹಿಸುವ ಸಾಮರ್ಥ್ಯವಿದೆ. ಹೀಗಾದರೂ ಅವು ಈ ಕರ್ತವ್ಯವನ್ನು ಕೈಗೊಳ್ಳಲು ಏಕೆ ಹಿಂದೆ ಮುಂದೆ ನೋಡುತ್ತವೆ? ಆಯಕರ (Income Tax) ಕೊಡುವ ಸಾಮರ್ಥ್ಯವಿದ್ದೂ ಅದನ್ನು ತಪ್ಪಿಸಲು ನೋಡುವ ಧನಿಕರಿಲ್ಲವೆ? ಸಮಾಜಕ್ಕೆ ಜನರಿಗೆ ಯಾವ ಧಕ್ಕೆ ಬಂದರೇನು ನಮ್ಮ ದುಡ್ಡು ಆದಷ್ಟು ಉಳಿತಾಯವಾಗಬೇಕು ಎಂಬ ಸಂಕುಚಿತ ಮನಸ್ಸೇ ಮಾಲಿನ್ಯ ನಿಯಂತ್ರಣಕ್ಕೆ ಮುಖ್ಯ ಅಡಚಣೆ. ಸರ್ಕಾರ ಮತ್ತು ಮಾಲಿನ್ಯ ನಿಯಂತ್ರಣ ಮಂಡಳಿಯ ಜೊತೆಗೆ ಜನರೂ ಸಹ ಉದ್ಯಮಗಳು ತಮ್ಮ ಕರ್ತವ್ಯದಿಂದ ಜಾರಿಕೊಳ್ಳುವಂತೆ ನೋಡಿಕೊಳ್ಳುವುದೇ ಈ ಸಮಸ್ಯೆಗೆ ಪರಿಹಾರ.

ಮಾಲಿನ್ಯ ನಿಯಂತ್ರಣದ ವೆಚ್ಚ ವಿಪರೀತವಿದ್ದೂ ಅದನ್ನು ವಹಿಸುವ ಸಾಮರ್ಥ್ಯವೇ ಇಲ್ಲದ ಪ್ರಸಂಗಗಳಲ್ಲಿ ಏನು ಮಾಡಬೇಕು? ಸಣ್ಣ ಪ್ರಮಾಣದ ಉದ್ಯಮಗಳಲ್ಲಿ ಈ ಅಡ್ಡಿ ಕಂಡು ಬಂದಲ್ಲಿ ಸಾಮೂಹಿಕವಾಗಿ ಮಾಲಿನ್ಯ ನಿಯಂತ್ರಣ ಮಾಡಿ ಅದರ ತಕ್ಕ ವೆಚ್ಚವನ್ನು ಈ ಉದ್ಯಮಗಳು ಹಂಚಿಕೊಳ್ಳಬೇಕಾಗುವುದು. ಸಾಮೂಹಿಕ ಮಾಲಿನ್ಯ ನಿಯಂತ್ರಣದ ಪರಿಮಿತಿಯ ಹೊರಗೆ ಅಥವಾ ನಗರಗಳ ಹೊರಗೆ ಒಂದೊಂದಾಗಿ ಇದ್ದ ದೊಡ್ಡ ಮತ್ತು ಮಧ್ಯಮ ಉದ್ಯಮಗಳಿಗೆ ಈ ಸಮಸ್ಯೆ ಇದ್ದರೆ ಈ ಉದ್ಯಮಗಳನ್ನು ಚಲಿಸಲು ಪರವಾನಗಿ ಕೊಡದೇ ನಿಲ್ಲಿಸಿ ಬಿಡುವುದೇ ಸೂಕ್ತ. ಆರ್ಥಿಕ ದೃಷ್ಟಿಯಿಂದ ಬರುವ ಆಯಕ್ಕಿಂತ ವ್ಯಯವೇ ಹೆಚ್ಚಾದರೆ ಅಂತಹ ಆರ್ಥಿಕ ಚಟುವಟಿಕೆಯನ್ನು ಬಿಟ್ಟುಬಿಡುವುದೇ ಮೇಲು. ಆದರೆ ಇಂಥ ಆಯ ಮತ್ತು ವ್ಯಯದ ಗಣಿಕೆಯನ್ನು ಮಾಡುವಾಗ ಸಮಾಜಕ್ಕೆ ಆಗುವ ಲಾಭ ಮತ್ತು ಹಾನಿಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಮಾಲಿನ್ಯದ ಮೂಲಕ ಲಾಭಕ್ಕಿಂತ ಹಾನಿಯೇ ಹೆಚ್ಚಾದರೆ ಇಂತಹ ಉದ್ಯಮಗಳಿಗೆ ಆಸ್ಪದವೇ ಇರಕೂಡದು.

ನೆದರ್‌ಲ್ಯಾಂಡಿನೊಡನೆ ತುಲನಾತ್ಮಕವಾಗಿ ಮಾಡಿದ ಉಪಯುಕ್ತ ಅಧ್ಯಯನದಲ್ಲಿ ಇನ್ನೂ ಎರಡೂ ಅಂಶಗಳು ಹೊರಬಂದವು. ಸರಕಾರ ಮಾಲಿನ್ಯ ಮಿತಿಗಳನ್ನು (Pollution standards) ನಿರ್ಧರಿಸುತ್ತದೆ ಎಂದು ಹೇಳಿದೆಯಲ್ಲವೆ? ಮಾಲಿನ್ಯಗಳನ್ನು ಈ ಮಿತಿಗಳಿಗೆ ಮೀರದಂತೆ ಉದ್ಯಮಗಳು ನಿಯಂತ್ರಿಸಬೇಕಾಗುತ್ತದೆ. ಈ ಮಿತಿಗಳು ಭಾರತಕ್ಕಿಂತ ನೆದರ್‌ಲ್ಯಾಂಡಿನಲ್ಲಿ ಬಿಗಿಯಾಗಿವೆ ಅಂದರೆ ಕೆಳಗಿವೆ. ಅಲ್ಲಿಯಕ್ಕಿಂತ

ಭಾರತದಲ್ಲಿ ಕಾಯಿದೆ ಪ್ರಕಾರ ಹೆಚ್ಚು ಮಾಲಿನ್ಯವನ್ನು ಪರಿಸರದಲ್ಲಿ ತೂರುವ ಅವಕಾಶವಿದೆ. ಎರಡನೇ ಅಂಶವೆಂದರೆ ಇಷ್ಟಿದ್ದರು ಈ ಸುಲಭ ಮಿತಿಗಳನ್ನು ಸಹ ಭಾರತದಲ್ಲಿ (ಕರ್ನಾಟಕದಲ್ಲಿ) ಅನುಸರಿಸಲಾಗುತ್ತಿಲ್ಲ. ಅನೇಕ ಉದ್ಯಮಗಳು ಅದಕ್ಕಿಂತ ಹೆಚ್ಚು ಮಾಲಿನ್ಯವನ್ನು ಬಿಡುತ್ತವೆಯಷ್ಟೇ ಅಲ್ಲ ಅನೇಕ ತರಹದ ಮಾಲಿನ್ಯ ತೂರುವಿಕೆಯ ಮೇಲೆ ಮಾಲಿನ್ಯ ನಿಯಂತ್ರಣ ಮಂಡಳಿ ಲಕ್ಷ್ಯ ಕೊಡುವುದಿಲ್ಲ. ಬಟ್ಟೆಬರೆ ಉದ್ಯಮದಲ್ಲಿ ಸಾಧಾರಣ ೩೦ ತರಹದ ಮಾಲಿನ್ಯಗಳ ಬಗ್ಗೆ ಮಾಲಿನ್ಯ ಮಿತಿಗಳ ಮೇಲಿನ ಆದೇಶದಲ್ಲಿ ಉಲ್ಲೇಖಿಸಿದೆ. ಆದರೆ ತನಿಖೆ ನಡೆಸುವುದು ನಾಲ್ಕೈದು ತರಹದ ಮಾಲಿನ್ಯಗಳ ಬಗ್ಗೆ ಮಾತ್ರ. ನೆದರ್‌ಲ್ಯಾಂಡಿನಲ್ಲಿ ಹಾಗಲ್ಲ. ಅಲ್ಲಿ ಬಹುಮಟ್ಟಿಗೆ ಎಲ್ಲ ತರಹದ ಮಾಲಿನ್ಯಗಳ ಬಗ್ಗೆ ಲಕ್ಷ್ಯ ಕೊಡಲಾಗುವುದು.

ಇಂತಹ ಪರಿಸ್ಥಿತಿಯಲ್ಲಿ ಭವಿಷ್ಯದ ದೃಷ್ಟಿಯಿಂದ ಇನ್ನೊಂದು ಮಾತು ಚಿಂತೆಗೆ ಆಸ್ಪದ ಕೊಡುತ್ತಲಿದೆ. ಉದ್ಯಮಗಳನ್ನು ಸರಳವಾಗಿ ಮಾಲಿನ್ಯದ ದೃಷ್ಟಿಯಿಂದ ಅತೀವ ಮಾಲಿನ್ಯಗಳನ್ನು ಬಿಡುವ ಮತ್ತು ಇತರ ಉದ್ಯಮಗಳೆಂದು ಎರಡು ವಿಧವಾಗಿ ವಿಭಜಿಸುವುದು ಇದೆ. ಮೊದಲನೆಯ ವರ್ಗದಲ್ಲಿ ಸಕ್ಕರೆ, ರಾಸಾಯನಿಕ ಗೊಬ್ಬರ, ಸಿಮೆಂಟ್, ಡಿಸ್ಟಿಲರಿ, ಅಲ್ಯುಮಿನಿಯಮ್, ಪೆಟ್ರೋಕೆಮಿಕಲ್ಸ್, ಥರ್ಮಲ್ ಪಾವರ್, ಕಾಸ್ಟಿಕ್ ಸೋಡಾ, ಆಯಿಲ್ ರಿಫೈನರಿ, ಸಲ್ಫ್ಯುರಿಕ್ ಆ್ಯಸಿಡ್, ಟ್ಯಾನರೀಗಳು, ಕಾಪರ್ ಸಲ್ಫೇಟ್, ಝಿಂಕ್ ಸಲ್ಫೇಟ್, ಕಬ್ಬಿಣ ಮತ್ತು ಉಕ್ಕು, ಸಣ್ಣ ಗಾತ್ರದ ಕಾಗದ ಮತ್ತು ಪಲ್ಪ್, ಕೀಟನಾಶಕ ರಾಸಾಯನಿಕಗಳು, ಡೈ ಮತ್ತು ಡೈ ಇಂಟರ್ ಮೀಡಿಯಟ್ಸ್ ಮತ್ತು ಔಷಧಿ (ಫಾರ್ಮಾಸ್ಯೂಟಿಕಲ್ಸ್) ಇವುಗಳು ಬರುತ್ತವೆ.

ಚಿಂತೆಗೆ ಆಸ್ಪದ ಕೊಡುವ ವಿಷಯವೆಂದರೆ ಇತರ ಉದ್ಯಮಗಳಿಗಿಂತ ಈ ಅತಿ ಹೆಚ್ಚು ಪ್ರದೂಷಣೆಯನ್ನು ಮಾಡುವ ಉದ್ಯಮಗಳೇ ಹೆಚ್ಚಿನ ಗತಿಯಿಂದ ಅಭಿವೃದ್ಧಿ ಹೊಂದುತ್ತಲಿವೆ. ಈ ಮಾತನ್ನು ನಾಲ್ಕು ದೃಷ್ಟಿಯಿಂದ ಹೇಳಬಹುದು - ಉದ್ಯಮಗಳ ಸಂಖ್ಯೆ, ಇಂಧನದ ಬಳಕೆ, ಉತ್ಪಾದಕ ಸಾಮಗ್ರಿ (inputs)ಗಳ ಬಳಕೆ ಮತ್ತು ಉತ್ಪಾದನಾ ಮೌಲ್ಯ ಇದನ್ನು ಕೆಳಗಿನ ಕೋಷ್ಟಕ - ೩ರಲ್ಲಿ ಕಾಣಬಹುದು. ನಮ್ಮ ಮಾಲಿನ್ಯ ನಿಯಂತ್ರಣ ವ್ಯವಸ್ಥೆಯನ್ನು ಮುಂದೆ ಇನ್ನೂ ಬಿಗಿಗೊಳಿಸದೇ ಗತ್ಯಂತರವಿಲ್ಲ.

ಕೋಷ್ಟಕ - ೩: ಅತೀವ ಮಾಲಿನ್ಯವನ್ನು ತೂರುವ ಉದ್ಯಮಗಳ ಮತ್ತು ಇತರ ಉದ್ಯಮಗಳ ಪ್ರಗತಿ - ತುಲನಾತ್ಮಕವಾಗಿ (೧೯೮೦-೮೧ ಮತ್ತು ೧೯೮೮-೮೯ರ ನಡುವಿನ ಪ್ರತಿಶತ ವೃದ್ಧಿ)

| | ಅತೀವಮಾಲಿನ್ಯ ತೂರುವ ಉದ್ಯಮಗಳು | | ಇತರ ಉದ್ಯಮಗಳು | |
|---|---|---|---|---|
| | ಭಾರತ | ಕರ್ನಾಟಕ | ಭಾರತ | ಕರ್ನಾಟಕ |
| ಉದ್ಯಮದ ಘಟಕಗಳ ಸಂಖ್ಯೆ | ೩೪.೪ | ೩೧.೬ | ೩.೨ | ೫.೭ |
| ಇಂದನ ಬಳಕೆ | ೩೬೭.೮ | ೨೫೨.೮ | ೨೫೦.೫ | ೨೦೯.೦ |
| ಉತ್ಪಾದಕ ಸಾಮಗ್ರಿಗಳ ಬಳಕೆ | ೨೭೧.೬ | ೨೩೮.೯ | ೧೯೮.೮ | ೧೮೧.೬ |
| ಉತ್ಪಾದನಾ ಮೌಲ್ಯ | ೨೪೧.೪ | ೨೪೪.೪ | ೧೯೩.೭ | ೧೭೮.೨ |

ಟಿಪ್ಪಣಿ: (೨), (೩) ಮತ್ತು (೪) ಇವು ಮೌಲ್ಯದಲ್ಲಿಯ ವೃದ್ಧಿಯನ್ನು ತೋರಿಸುತ್ತವೆ. ಈ ವೃದ್ಧಿಯಲ್ಲಿ ಬೆಲೆಯೇರಿಕೆಯೂ ಸೇರ್ಪಡೆಯಾಗಿದೆ. Annual Survey of Industriesನಲ್ಲಿ ಕೊಟ್ಟ ಅಂಕಿ-ಸಂಖ್ಯೆಗಳನ್ನು ಆಧರಿಸಿ ಈ ಕೋಷ್ಟಕವನ್ನು ತಯಾರಿಸಲಾಗಿದೆ.

ಭಾರತವು ತನ್ನ ಉತ್ಪಾದನೆಯನ್ನು ನಿರ್ಯಾತಗೊಳಿಸುವಲ್ಲಿ ಪರಿಸರದ ಬಗ್ಗೆ ಇರುವ ಸಡಿಲ ಮನೋಭಾವ ಒಂದು ಅಡ್ಡಿಯಾಗಿ ಬರುತ್ತದೆ. ಪಾಶ್ಚಾತ್ಯ ದೇಶಗಳು ತಮ್ಮ ಮಾಲಿನ್ಯ ಮಿತಿಗಳಿಗೆ ಮೀರಿ ತಯಾರಿಸಿದ ಸರಕುಗಳ ಆಮದುಗಳಿಗೆ ಈಗ ಆಸ್ಪದ ಕೊಡುವುದಿಲ್ಲ. ಹೀಗಾಗಿ ತಮ್ಮ ಹಿತದ ದೃಷ್ಟಿಯಿಂದಲೂ. ಸಹ ನಮ್ಮ ಉದ್ಯಮಿಗಳು ಪರಿಸರದ ಬಗ್ಗೆ ಹೆಚ್ಚು ಗಂಭೀರ ಆಸಕ್ತಿಯನ್ನು ವಹಿಸಬೇಕಾಗಿದೆ.

ನಮ್ಮ ಸಂಸ್ಕೃತಿಯ ಬಗ್ಗೆ ನಮಗೆ ಬಹಳ ಹೆಮ್ಮೆಯಿದೆ. ನಾವು ಒಂದು ಸುಸಂಸ್ಕೃತವಾದ ಉನ್ನತ ನಾಗರಿಕತೆಯನ್ನು ಅಳವಡಿಸಿಕೊಂಡ ರಾಷ್ಟ್ರವೆಂದು ಪರಿಗಣಿಸಲ್ಪಡಬೇಕಾದರೆ ಅದು ಮಲಿನ ರಹಿತವೂ ಆಗಿರಬೇಕಾಗುತ್ತದೆ. ಉದ್ಯಮಿಗಳಿಗಷ್ಟೇ ಅಲ್ಲ ನಮ್ಮ ಜನಸಾಮಾನ್ಯರಿಗೂ ನಮ್ಮ ಮೂಲಕ ಇತರರ ಸೌಖ್ಯ ಕೆಡಬಹುದೋ ಎಂದು ಯೋಚನೆ ಮಾಡುವ ಮನೋಭಾವವಿರುವುದಿಲ್ಲ. ನಮ್ಮ ಮನೆಯನ್ನು ಸ್ವಚ್ಛವಾಗಿಟ್ಟುಕೊಂಡರೆ ಸಾಕು ಮನೆಯೊಳಗಿನ ಮಾಲಿನ್ಯವನ್ನು ಹೊರಕ್ಕೆ ಬೀದಿಯಲ್ಲಿ ಸಾಗಿಸಿ ಬಿಟ್ಟರೆ ನಮ್ಮ ಮನಸ್ಸಿಗೆ ನೆಮ್ಮದಿ ಇದೇ ಮನೋಭಾವ ನಮ್ಮ ಉದ್ಯಮಿಗಳಿಗೂ ಇದೆ. ನಮ್ಮಲ್ಲಿಯ ಬಡತನದ ನೆವವೊಡ್ಡಿ ಮಾಲಿನ್ಯವನ್ನು ಸಹಿಸಬೇಕಾಗಿಲ್ಲ. ಸಾರ್ವಜನಿಕ ಮಾಲಿನ್ಯದಿಂದ, ಪರಿಸರ ಪ್ರದೋಷಣೆಯಿಂದ ಅವರಿಗೆ ಬರುವಷ್ಟು ಹೊಡೆತ ಇತರರಿಗೆ ಬರುವುದಿಲ್ಲ. ಮಾಲಿನ್ಯಕ್ಕೆ ಮುಖ್ಯ ಕಾರಣಭೂತರೇ ಶ್ರೀಮಂತರು. ಇಂತಹ ನೆವಗಳನ್ನು ಬಿಟ್ಟು ಈಗ ನಿರ್ಮಲವಾದ ಭಾರತವನ್ನು ವಿಶೇಷವಾಗಿ ಕರ್ನಾಟಕವನ್ನು ಕಟ್ಟುವಲ್ಲಿ ಕೆಲಸ ಮಾಡಬೇಕಾಗಿದೆ.

# ಕರ್ನಾಟಕ ಆರ್ಥಿಕತೆ ವಿಚಾರ ಸಂಕಿರಣದ ವರದಿ (೧೩-೧೧-೯೫ ಮತ್ತು ೧೪-೧೧-೯೫)

ಕನ್ನಡ ವಿಶ್ವವಿದ್ಯಾಲಯದ ಮಾಹಿತಿ ಕೇಂದ್ರದ ಆಶ್ರಯದಲ್ಲಿ ದಿನಾಂಕ ೧೩-೧೧-೯೫ ಮತ್ತು ೧೪-೧೧-೯೫, ಈ ಎರಡು ದಿನಗಳ ಕಾಲ 'ಕರ್ನಾಟಕದ ಆರ್ಥಿಕತೆ' ಕುರಿತ ಮಹತ್ವದ ವಿಚಾರ ಸಂಕಿರಣ ನಡೆಯಿತು. ಕರ್ನಾಟಕ ರಾಜ್ಯದ ಆರ್ಥಿಕ ಪರಿಸ್ಥಿತಿಯ, ಸ್ಥಿತಿ-ಗತಿಗಳ ಕುರಿತು ಕನ್ನಡದಲ್ಲಿ ಆಲೋಚಿಸಿ, ಚರ್ಚಿಸಿ, ಪ್ರಗತಿಗೆ ಪೂರಕವಾದ ಅಂಶಗಳನ್ನು ಮನದಟ್ಟು ಮಾಡಿಕೊಂಡು, ಮುಂದಿನ ಹೆಜ್ಜೆಗಳನ್ನು ಹಾಕುವುದರ ಹಿನ್ನೆಯಲ್ಲಿ ಈ ವಿಚಾರ ಸಂಕಿರಣ ಏರ್ಪಾಟಾಗಿತ್ತು.

ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ ಆವರಣದ 'ಚಾವಡಿ'ಯಲ್ಲಿ ನಡೆದ ಈ ವಿಚಾರ ಸಂಕಿರಣದಲ್ಲಿ ನಾಡಿನ ಗಣ್ಯ ಅರ್ಥಶಾಸ್ತ್ರಜ್ಞರು, ವಿದ್ವಾಂಸರು, ರೈತಮುಖಂಡರು, ವಿವಿಧಗಣ್ಯರು ಪಾಲ್ಗೊಂಡಿದ್ದರು. ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ದಿ ೧೩-೧೧-೧೯೯೫ರಂದು ಬೆಳಿಗ್ಗೆ ವಿಚಾರ ಸಂಕಿರಣವನ್ನು ಉದ್ಘಾಟಿಸಿದರು. ಖ್ಯಾತ ಅರ್ಥಶಾಸ್ತ್ರಜ್ಞರಾದ ಪ್ರೊ. ಅಬ್ದುಲ್ ಅಜೀಜ್ ಪ್ರಾಸ್ತಾವಿಕ ಭಾಷಣ ಮಾಡಿದರು. ಐಸೆಕ್ ಸಂಸ್ಥೆಯ ಡಾ.ಎಂ. ವೆಂಕಟರೆಡ್ಡಿ ಅಧ್ಯಕ್ಷತೆ ವಹಿಸಿದ್ದರು. ಉದ್ಘಾಟನೆಯ ನಂತರ ಗೋಷ್ಠಿಗಳು ಆರಂಭಾವದವು.

ಪ್ರೊ. ಅಬ್ದುಲ್ ಅಜೀಜ್ ಅವರ ಅಧ್ಯಕ್ಷತೆಯಲ್ಲಿ ಆರಂಭವಾದ ಬೆಳಗಿನ ಮೊದಲ ಗೋಷ್ಠಿಯಲ್ಲಿ ಮುಖ್ಯರಾಗಿ ಮೂರು ಪ್ರಬಂಧಗಳನ್ನು ಮಂಡಿಸಲಾಯಿತು. ಡಾ. ಪಿ. ಬ್ರಹ್ಮಾನಂದ ಅವರ 'ಕರ್ನಾಟದಕ ಬೆಳವಣಿಗೆಯ ಕೆಲವು ಅಂಶಗಳ' ಕುರಿತ ಪ್ರಬಂಧವನ್ನು ಅವರಗೈರು ಹಾಜರಿಯಲ್ಲಿ ಡಾ. ಶಿವಣ್ಣ ಮಂಡಿಸಿದ್ದರು. ಡಾ.ಎಂ. ಪ್ರಹ್ಲಾದಾಚಾರ್ ಅವರು ಕರ್ನಾಟಕದಲ್ಲಿ ಕೈಗಾರಿಕಾಭಿವೃದ್ಧಿ ಅನುಭವ ಸಮಸ್ಯೆ ಹಾಗೂ ಅವಕಾಶಗಳ ಬಗ್ಗೆ, ಡಾ.ಎಂ.ವಿ. ನಾಡಕರ್ಣಿ ಮತ್ತು ಡಾ. ಜಿ.ಎಸ್. ಶಾಸ್ತ್ರಿ, ಔದ್ಯೋಗಿಕರಣದ ಇನ್ನೊಂದು ಮುಖದ ಬಗ್ಗೆ ಪ್ರಬಂಧಗಳನ್ನು ಮಂಡಿಸಿದರು. ಈ ಉಪನ್ಯಾಸಗಳ ನಂತರ ಅರ್ಥಪೂರ್ಣ ಚರ್ಚೆ ನಡೆಯಿತು. ಮಾಹಿತಿ ಕೇಂದ್ರದ ನಿರ್ದೇಶಕರಾದ ಶ್ರೀ ಕೆ.ಜಿ.

ವಾಸುಕಿ ಹಾಗೂ ಡಾ. ಪಿ.ಕೆ. ರೇಣುಕಾರ್ಯ ಅವರು ಗೋಷ್ಠಿಯ ಸಂಯೋಜಕರಾಗಿ ಕಾರ್ಯ ನಿರ್ವಹಿಸಿದರು.

ದಿ. ೧೩-೧೧-೯೫ರಂದು ನಡೆದ ಎರಡನೆ ಗೋಷ್ಠಿಯಲ್ಲಿ ಒಟ್ಟು ನಾಲ್ಕು ಪ್ರಬಂಧಗಳು ಮಂಡಿತವಾದವು. ಡಾ. ಎಂ. ವೆಂಕಟರೆಡ್ಡಿ ಅವರು 'ನೀರಾವರಿ ಅಭಿವೃದ್ಧಿಯ ಸಮಸ್ಯೆಗಳು' ಬಗ್ಗೆ ಪ್ರಬಂಧ ಮಂಡಿಸಿದರು. ಡಾ. ಪಿ.ಪಿ. ಶೆಣೈ ಅವರು ಗೈರು ಹಾಜರಿಯಲ್ಲಿ ಶ್ರೀ ಎಂ. ವಿವೇಕನಾಂದ ಅವರು 'ಕರ್ನಾಟಕವಲ್ಲಿ ಕೃಷಿ ಅಭಿವೃದ್ಧಿ' ಕುರಿತು ವಿಚಾರ ಮಂಡಿಸಿದರು. ಡಾ. ಪಿ.ಎಂ. ರಾವ್ ಅವರು 'ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ' ಕುರಿತು ಹಾಗೂ ಡಾ. ಸಿ.ಕೆ. ರೇಣುಕಾಚಾರ್ಯ ಅವರು 'ಕರ್ನಾಟಕದಲ್ಲಿ ಕೈಗಾರಿಕಾ ಸಂಬಂಧಗಳು' ಕುರಿತು ಪ್ರಬಂಧಗಳನ್ನು ಮಂಡಿಸಿದರು. ಡಾ. ಹನುಮಂತ ರಾಯಪ್ಪ ಅವರು ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಗೋಷ್ಠಿಯ ನಂತರ ಚರ್ಚೆ - ಸಂವಾದಗಳು ನಡೆದವು. ಶ್ರೀ ಬಿ.ಎಸ್. ಶ್ರೀಕಂಠಾರಾಧ್ಯ ಮತ್ತು ಶ್ರೀ ಟಿ.ಎಸ್. ಸತ್ಯನಾಥ್ ಗೋಷ್ಠಿಯ ಸಂಯೋಜಕರಾಗಿದ್ದರು.

ದಿನಾಂಕ ೧೪-೧೧-೯೫ರಂದು ಆರಂಭವಾದ ಮೂರನೇ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ. ಎಂ. ಪ್ರಹ್ಲಾದಾಚಾರ್ ವಹಿಸಿದ್ದರು. ಪ್ರೊ. ಬಿ.ಎಸ್. ಶ್ರೀಕಂಠಾರಾಧ್ಯ ಅವರು 'ಕರ್ನಾಟಕದ ಸಾರ್ವಜನಿಕ ಉದ್ಯಮಗಳ ಬೆಳವಣಿಗೆ ಮತ್ತು ಕಾರ್ಯನಿರ್ವಹಣೆ' ಕುರಿತು 'ಕರ್ನಾಟಕ ರಾಜ್ಯದ ಹಣಕಾಸಿನ' ಬಗ್ಗೆ ಕೆ. ಗಾಯತ್ರಿ ಅವರು ಪ್ರಬಂಧಗಳನ್ನು ಮಂಡಿಸಿದರು. ಡಾ.ಎಂ. ಜಾನ್ಸನ್ ಸಾಮ್ಯುಯೆಲ್ ಮತ್ತು ಶ್ರೀ ಎಂ. ಲಿಂಗರಾಜು ಅವರು ಕರ್ನಾಟಕದಲ್ಲಿ ಆರ್ಥಿಕ ಸಾಧನ ಸಂಪತ್ತುಗಳು : ಸಮಸ್ಯೆಗಳು ಹಾಗೂ ನಿರೀಕ್ಷೆಗಳು ಕುರಿತು ಪ್ರೊ. ಸಿ. ಹನುಮಂತಪ್ಪ ರಾಯಪ್ಪ ಮತ್ತು ಶ್ರೀಮತಿ ಕೆ.ಎಸ್. ಉಮಾಮಣಿ ಅವರು 'ಜನಸಂಖ್ಯಾ ಬೆಳವಣಿಗೆ, ಕುಟುಂಬ ಯೋಜನೆ ಹಾಗೂ ಆರೋಗ್ಯ ಸೌಕರ್ಯಗಳ' ಬಗ್ಗೆ ಹಾಗೂ ಶ್ರೀ ವಿ. ಶಾಂತಪ್ಪ ಮತ್ತು ಶ್ರೀ ಕೇಶವ ಅವರು 'ಬಡತನ ನಿರುದ್ಯೋಗ ಮತ್ತು ರಕ್ಷಣಾ ಕಾರ್ಯಕ್ರಮಗಳ' ಬಗ್ಗೆ ತಮ್ಮ ವಿಚಾರಪೂರ್ಣ ಪ್ರಬಂಧಗಳನ್ನು ಮಂಡಿಸಿದರು. ಗೋಷ್ಠಿಯ ನಂತರ ವಿಚಾರಮಂಥನ ನಡೆಯಿತು. ಪ್ರೊ. ಶೇಷಾದ್ರಿ ಮತ್ತು ಡಾ. ಪುರುಷೋತ್ತಮ ಬಿಳಿಮಲೆ ಅವರು ಗೋಷ್ಠಿಯ ಸಂಯೋಜಕರಾಗಿದ್ದರು ಹಾಗೂ ಮಂಗಳೂರು ವಿಶ್ವವಿದ್ಯಾಲಯದ ಪತ್ರಿಕೋದ್ಯಮ ಮತ್ತು ಸಂವಹನ ವಿಭಾಗದ ಉಪನ್ಯಾಸಕರಾದ ಶ್ರೀ ಪೂರ್ಣನಂದ ಅವರು ವಿಶೇಷ ಆಹ್ವಾನಿತರಾಗಿ ಗೋಷ್ಠಿಯಲ್ಲಿ ಭಾಗವಹಿಸಿದ್ದರು.

ನಾಲ್ಕನೆಯ ಗೋಷ್ಠಿಯಲ್ಲಿ ಪ್ರೊ. ಅಬ್ದುಲ್ ಅಜೀಜ್ ಅವರು ಡಾ. ಐ.ಜಿ.ಎಚ್. ಲೂಯಿಸ್ ಅವರ ಭೌತಿಕ ಜೀವನ ಗುಣಮಟ್ಟ ಸೂಚಿ-ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಒಂದು ಮಾಪನ ಎಂಬ ಪ್ರಬಂಧವನ್ನು ಪ್ರೊ. ಅಬ್ದುಲ್ ಅಜೀಜ್ ಅವರು ಮಂಡಿಸಿವರು. ಡಾ. ಎಸ್. ಶಿವಣ್ಣ ಅವರು ಸಾಮಾಜಿಕ ಬದಲಾವಣೆ ಪಂಚಾಯತ್

ಮತ್ತು ಸ್ವಯಂ ಸೇವಾ ಸಂಸ್ಥೆಗಳ ಪಾತ್ರದ ಬಗ್ಗೆ ಹಾಗೂ ಶ್ರೀ ಗೋವಿಂದರಾಜು ಅವರು 'ಕರ್ನಾಟಕದಲ್ಲಿ ರೇಷ್ಮೆ ಕೃಷಿ ಮತ್ತು ಉದ್ಯಮ' ಕುರಿತು ಪ್ರಬಂಧಗಳನ್ನು ಮಂಡಿಸಿದರು. ಪ್ರೊ. ಹಿ.ಚಿ. ಬೋರಲಿಂಗಯ್ಯನವರು ಗೋಷ್ಠಿಯ ಸಂಯೋಜಕರಾಗಿ ಕಾರ್ಯ ನಿರ್ವಹಿಸಿದರು.

೧೪-೧೧-೯೫ರಂದು ಸಂಜೆ ವಿಚಾರ ಸಂಕಿರಣದ ಸಮಾರೋಪ ಸಮಾರಂಭ ನಡೆಯಿತು. ಪ್ರೊ. ಅಬ್ದುಲ್ ಅಜೀಜ್ ಸಮಾರೋಪ ಭಾಷಣ ಮಾಡಿದರು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಅಧ್ಯಕ್ಷತೆ ವಹಿಸಿದ್ದರು.

ಒಟ್ಟು ಎರಡು ದಿನಗಳ ವಿಚಾರ ಸಂಕಿರಣದಲ್ಲಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಅಧ್ಯಾಪಕರು, ಸಂಶೋಧಕರು ಹಾಗೂ ಇತರೆ ಸಿಬ್ಬಂದಿ ಪಾಲ್ಗೊಂಡು, ಚರ್ಚೆಗೆ ಅನುವು ಮಾಡಿಕೊಟ್ಟು ಅವರ ಲಾಭ ಪಡೆದರು. ಈ ವಿಚಾರ ಸಂಕಿರಣ ನಡೆಸಲು ತಗುಲಿದ ಒಟ್ಟು ವೆಚ್ಚ ಸುಮಾರು ರೂ. ೫೨,೦೦೦.೦೦ಗಳು. ಬ್ಯಾಂಕ್ ಆಫ್ ಇಂಡಿಯಾದ ಕಮಲಾಪುರ ಶಾಖೆಯು ರೂ. ೨೦,೦೦೦.೦೦ಗಳ ನೆರವು ನೀಡಿ ವಿಚಾರ ಸಂಕಿರಣದ ಯಶಸ್ಸಿಗೆ ಸಹಕರಿಸಿತು. ವಿಚಾರ ಸಂಕಿರಣದಲ್ಲಿ ಮಂಡಿತವಾದ ಉತ್ತಮ ಪ್ರಬಂಧಗಳನ್ನು ಚರ್ಚೆಯ ಫಲವಾಗಿ ಹೊರಬಂದ ಅಂಶಗಳನ್ನು ಸೇರಿಸಿ ಪುನಃ ಪರಿಷ್ಕರಿಸಿ ಪ್ರಕಟಿಸುವ ತೀರ್ಮಾನ ಕೈಗೊಳ್ಳಲಾಯಿತು.

ನಿರ್ದೇಶಕರು
ಮಾಹಿತಿ ಕೇಂದ್ರ

# ಎರಡನೆಯ ಗೋಷ್ಠಿಯ ವರದಿ

೧೩-೧೧-೯೫ರಂದು ನಡೆದ ಎರಡನೆ ತಾಂತ್ರಿಕ ಗೋಷ್ಠಿಯಲ್ಲಿ ಒಟ್ಟು ನಾಲ್ಕು ಪ್ರಬಂಧಗಳು ಮಂಡಿತವಾದವು. ಇವುಗಳ ಪೈಕಿ ಮೊದಲನೆಯದು ಡಾ.ಎಂ. ವೆಂಕಟರೆಡ್ಡಿಯವರು ನೀರಾವರಿ ಅಭಿವೃದ್ಧಿಯ ಸಮಸ್ಯೆಗಳನ್ನು ಕುರಿತದ್ದು. ದೊಡ್ಡ ಹಾಗೂ ಮಧ್ಯಮ ಪ್ರಮಾಣದ ಸಣ್ಣ ಪ್ರಮಾಣದ ಮತ್ತು ಅಂತರ್ಜಲ ಮೂಲದ ನೀರಾವರಿ ಸೌಲಭ್ಯಗಳನ್ನು ಹೀಗೆ ಬಳಸಿಕೊಳ್ಳಲಾಗಿದೆ ಮತ್ತು ಇನ್ನು ಮುಂದೆ ಹೇಗೆ ನಾವು ದೊಡ್ಡ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಸೌಲಭ್ಯಗಳನ್ನು ಹೆಚ್ಚಾಗಿ ಅವಲಂಬಿಸಬೇಕಾಗುತ್ತದೆ ಎಂಬುದನ್ನು ವಿವರಿಸಿದರು. ನೀರಾವರಿ ಅಂತರ್ ಸಾಮರ್ಥ್ಯವನ್ನು ರಾಜ್ಯ ಸರಿಯಾಗಿ ಬಳಸಿಕೊಂಡಿಲ್ಲದಿರುವುದನ್ನು ಮತ್ತು ಮುಂದಿನ ಐದು ವರ್ಷಗಳಲ್ಲಿ ಕೃಷ್ಣಾನದಿಯ ನೀರಿನ ಕರ್ನಾಟಕದ ಪಾಲನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳ ಬೇಕಾಗಿರುವುದರ ಅಗತ್ಯವನ್ನು ಪ್ರಸ್ತಾಪಿಸಿದರು. ನೀರಾವರಿಯ ಸಮಸ್ಯೆಗಳನ್ನು ಪ್ರಸ್ತಾಪಿಸುತ್ತಾ ಹಣಕಾಸಿನ ಕೊರತೆ, ನೀರಾವರಿ ಸೌಲಭ್ಯ ಸೃಷ್ಟಿಯಾಗಿದ್ದರೂ ನೀರಿನ ವಿತರಣೆ ಸರಿಯಾಗಿ ಆಗದಿರುವುದು ಜಮೀನಿನ ಆಗದಿರುವುದು, ನೀರಿನ ನಿಲ್ಲುವಿಕೆಯಿಂದ ಕ್ಷಾರಾಂಶ ಜಾಸ್ತಿಯಾಗಿ ಭೂಮಿ ಅನುಪಯುಕ್ತವಾಗಿರುವುದು ಮುಂತಾದವುಗಳನ್ನು ವಿವರಿಸಿದರು. ರಾಜ್ಯದ ನೀರಾವರಿ ಸಮಸ್ಯೆಗಳಿಗೆ ಈ ಕೆಳಗಿನ ಪರಿಹಾರಗಳನ್ನು ಸೂಚಿಸಿದರು. ೧. ದೊಡ್ಡ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಯೋಜನೆಗಳಿಂದ ದೊರಕುತ್ತಿರುವ ಸೌಲಭ್ಯ ರೈತರಿಗೆ ಸರಿಯಾಗಿ ಮುಟ್ಟುವ ವ್ಯವಸ್ಥೆಯಾಗಬೇಕು, ೨. ಅಪೂರ್ಣ ಸ್ಥಿತಿಯಲ್ಲಿರುವ ಕಾಮಗಾರಿಗಳು ತ್ವರಿತವಾಗಿ ಪೂರ್ಣಗೊಳ್ಳಬೇಕು, ೩. ಅಂತರ್ಜಲ ಮತ್ತು ಕಾಲುವೆ ನೀರಾವರಿ ಸಂಯುಕ್ತವಾಗಿ ಅಭಿವೃದ್ಧಿಯಾಗಬೇಕು, ೪. ನೀರಾವರಿ ನಿರ್ವಹಣೆಗೆ ನೀರಾವರಿ ಸಂಘಗಳು ಅಸ್ತಿತ್ವಕ್ಕೆ ಬರಬೇಕು.

ಈ ಗೋಷ್ಠಿಯಲ್ಲಿ ಮಂಡಿತವಾದ ಎರಡನೇ ಪ್ರಬಂಧ ಡಾ. ಪಿ.ಪಿ. ಶೆಣೈ ಮತ್ತು ಡಾ. ಎಂ. ವಿವೇಕಾನಂದ ಅವರ ಕರ್ನಾಟಕದಲ್ಲಿ ಕೃಷಿ ಅಭಿವೃದ್ಧಿಯನ್ನು ಕುರಿತದ್ದು. ಈ ಪ್ರಬಂಧದಲ್ಲಿ ಕರ್ನಾಟಕದ ಕೃಷಿಗೆ ಸಂಬಂಧಿಸಿದ ಕೆಲವು ಸಮಸ್ಯೆಗಳನ್ನು

ವಿಶ್ಲೇಷಿಸಲಾಯಿತು. ಬೆಳೆಯ ಮಾದರಿ, ಇಳುವಳಿ, ಪ್ರಾದೇಶಿಕ ವ್ಯತ್ಯಾಸಗಳು, ವಾಣಿಜ್ಯ ಬೆಳೆಗಳು ಪ್ರಾಧಾನ್ಯಗಳಿಸಿಕೊಂಡಿರುವುದು, ಕೃಷಿ ಉತ್ಪಾದನೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಾ ಹೋಗುವ ಬದಲು ಸ್ಥಗಿತಗೊಂಡಿರುವುದು ಮುಂತಾದ ಅಂಶಗಳನ್ನು ಈ ಪ್ರಬಂಧದಲ್ಲಿ ಪ್ರಸ್ತಾಪ ಮಾಡಲಾಯಿತು.

ಈ ಗೋಷ್ಠಿಯಲ್ಲಿ ಮಂಡಿತವಾದ ಮೂರನೆಯ ಪ್ರಬಂಧ ಡಾ. ವಿ.ಎಂ. ರಾವ್ ಅವರ ಕರ್ನಾಟಕದ ಗ್ರಾಮೀಣ ಅಭಿವೃದ್ಧಿಯನ್ನು ಕುರಿತದ್ದು. ಗ್ರಾಮೀಣ ಅಭಿವೃದ್ಧಿಯ ಸಮಸ್ಯೆಗಳನ್ನು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ಅಗತ್ಯವನ್ನು ಈ ಪ್ರಬಂಧ ಒತ್ತಿ ಹೇಳುತ್ತದೆ. ಈ ಪ್ರಬಂಧ ಮುಖ್ಯ ಕೊಡುಗೆ ಎಂದರೆ ಬಂಬಲ ನೀತಿಗಳು, ಹೂಡಿಕೆಯ ನೀತಿಗಳು ಮತ್ತು ನಿಯಂತ್ರಕ ನೀತಿಗಳು ಇವುಗಳ ಮುಖಾಂತರ ಹೇಗೆ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಬಹುದು ಎಂಬುದು.

ಈ ಗೋಷ್ಠಿಯ ನಾಲ್ಕನೆಯ ಪ್ರಬಂಧವನ್ನು ಮಂಡಿಸಿದವರು ಡಾ. ಸಿ.ಕೆ. ರೇಣುಕಾರ್ಯ ಅವರು. ಈ ಪ್ರಬಂಧ ಕರ್ನಾಟಕದಲ್ಲಿ ಕೈಗಾರಿಕಾ ಸಂಬಂಧಗಳ ಒಂದು ಪಕ್ಷಿನೋಟವನ್ನು ಕೊಡಲಾಯಿತು. ಕೈಗಾರಿಕಾ ಸಂಬಂಧಗಳಲ್ಲಿ ಕಾರ್ಮಿಕರು, ಉದ್ಯಮಪತಿಗಳು ಮತ್ತು ಸರ್ಕಾರ ವಹಿಸಬೇಕಾಗುವ ಮತ್ತು ವಾಸ್ತವವಾಗಿ ವಹಿಸುತ್ತಿರುವ ಪಾತ್ರವನ್ನು ತಮ್ಮ ಮಂಡನೆಯಲ್ಲಿ ಅವರು ಪ್ರಸ್ತಾಪಿಸಿದರು. ಕೆಲವು ಪ್ರಮುಖ ಸಮಸ್ಯೆಗಳನ್ನು ಪ್ರಸ್ತಾಪಿಸುತ್ತಾ ಕಾರ್ಮಿಕ ಸಂಘಗಳು ದುರ್ಬಲವಾಗಿರುವುದಕ್ಕೆ ಕಾರಣವಾಗಿರುವ ಅಂಶಗಳನ್ನು ವಿವರಿಸಿದರು. ಒಟ್ಟಿನಲ್ಲಿ ಕರ್ನಾಟಕದಲ್ಲಿ ಉತ್ತಮ ಕೈಗಾರಿಕಾ ಸಂಬಂಧಗಳು ಇರುವುದನ್ನೂ ಮತ್ತು ಇದರಿಂದ ರಾಜ್ಯಕ್ಕೆ ಹೊರಗಿನಿಂದ ಬಂಡವಾಳ ಹರಿದುಬರುವುದಕ್ಕೆ ಸಹಾಯವಾಗಿರುವುದನ್ನು ಗಮನಕ್ಕೆ ತಂದರು.

ಈ ನಾಲ್ಕು ಪ್ರಬಂಧಗಳು ಮಂಡನೆಯ ನಂತರ ಚರ್ಚೆಯಲ್ಲಿ ಅನೇಕರು ಭಾಗವಹಿಸಿದರು.

ಮೊದಲನೆಯದಾಗಿ ಡಾ. ಪುರುಷೋತ್ತಮ ಬಿಳಿಮಲೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆದ ಕೃಷಿಯ ಬದಲಾವಣೆಗಳ ಬಗ್ಗೆ ಕೆಲವು ಆತಂಕಗಳನ್ನು ವ್ಯಕ್ತಪಡಿಸಿದರು. ಆಹಾರ ಧಾನ್ಯಗಳಿಂದ ರಬ್ಬರ್‌ನಂತಹ ವಾಣಿಜ್ಯ ಕೃಷಿಗೆ ಆದ ಬದಲಾವಣೆ ಹಾಗೂ ಇಂತಹ ಬದಲಾವಣೆಗಳಲ್ಲಿ ಮೂಲಕ ಗ್ರಾಮೀಣ ಅಭಿವೃದ್ಧಿಯ ಹೆಸರಿನಲ್ಲಿ ನಮ್ಮ ಗ್ರಾಮಗಳನ್ನು ಪ್ರವೇಶಿಸುತ್ತಿರುವ ನವವಸಾಹತು ಶಾಹಿ ಶಕ್ತಿಗಳು ಹಾಗೂ ಇಂತಹ ಬದಲಾವಣೆಗಳನ್ನು ಸೂಚಿಸಲು ಉಪಯೋಗಿಸಲಾಗುತ್ತಿರುವ ಅಧ್ಯಯನ ಕ್ರಮ ಮತ್ತು ಅಂಕಿ ಅಂಶಗಳ ಬಗ್ಗೆ ಅವರು ವಿದ್ವಾಂಸರ ಗಮನ ಹರಿಯಬೇಕೆಂದು ಸೂಚಿಸಿದರು.

ನೀರಾವರಿ ಕಾಲುವೆ ವ್ಯವಸ್ಥೆ ಅದರ ಸಂರಕ್ಷಣೆ ಬಗ್ಗೆ ಚರ್ಚೆಯನ್ನು ಎತ್ತಿದ ಡಾ. ಸಿ. ಮಹದೇವ ಅವರು ಮಂಡ್ಯ ಜಿಲ್ಲೆಯ ನೀರಾವರಿ ಕಾಲುವೆ ವ್ಯವಸ್ಥೆಗೆ ಸಂಬಂಧಿಸಿದಂತೆ

ಕೆಲವು ಅಂಶಗಳನ್ನು ಪ್ರಸ್ತಾಪಿಸಿದರು. ದುರಸ್ತಿ ಕಾರ್ಯಗಳಲ್ಲಿ ಆಗುವ ಅನಗತ್ಯ ವಿಳಂಬ, ಅವಕ್ಕೆ ಸಂಬಂಧಿಸಿದ ಸಿಬ್ಬಂದಿ ವರ್ಗದಲ್ಲಿ ವ್ಯಾಪಕವಾಗಿರುವ ಲಂಚಗುಳಿತನ ಹಾಗೂ ಕಾಲುವೆಯ ಮೇಲು ದಂಡೆ ಹಾಗೂ ಕೆಲದಂಡೆಗಳ ಆಶ್ರಯದಲ್ಲಿರುವ ಭೂಮಿಗೆ ನೀರು ಒದಗಿಸುವಲ್ಲಿ ಉಂಟಾಗುತ್ತಿರುವ ತಾರತಮ್ಯ ಇಂತಹ ಅಂಶಗಳ ಬಗ್ಗೆ ಪ್ರಸ್ತಾಪಿಸಿದ ಅವರು ಬೃಹತ್ ಪ್ರಮಾಣದ ನೀರಾವರಿ ಯೋಜನೆಗಿಂತ ಸಣ್ಣ ಪ್ರಮಾಣದ ನೀರಾವರಿ ಯೋಜನೆ ನಿಯೋಗಾತ್ಮಕವಾಗಿ ಹೆಚ್ಚು ಉಪಯುಕ್ತವಾಗಬಹುದು ಎಂದು ಸೂಚಿಸಿದರು.

ಹೊಸ ಭೂಕಾಯಿದೆ ಮತ್ತು ಸಣ್ಣ ಹಿಡುವಳಿಯ ರೈತರು ಸಮಸ್ಯೆಗಳ ಬಗ್ಗೆ ಪ್ರಸ್ತಾಪಿಸಿದ ಪ್ರೊ. ಹಿ.ಚಿ. ಬೋರಲಿಂಗಯ್ಯನವರು ಸಣ್ಣ ಹಿಡುವಳಿಯ ರೈತರ ಆರ್ಥಿಕ ಬೆಂಬಲಕ್ಕಾಗಿ ರೂಪಿಸಿದ ರೇಷ್ಮೆ ವ್ಯವಸಾಯ ತಾಂತ್ರಿಕ ಸಂಪನ್ಮೂಲದ ಕೊರತೆಯಿಂದಾಗಿ ಅಸಫಲವಾಯಿತು ಎಂದರು. ರೈತರ ಹಿತವನ್ನು ನಿರ್ಲಕ್ಷಿಸಿ ವಿದೇಶೀ ಹಿತಾಸಕ್ತಿಗಳನ್ನು ಕಾಪಾಡಲು ಪ್ರಯತ್ನ ಮಾಡಲಾಗುತ್ತಿದೆ ಎಂಬ ಅವರು ಉತ್ತರಪ್ರದೇಶದ ರೇಷ್ಮೆ ನೇಕಾರರಿಗೆ ಕರ್ನಾಟಕದ ರೇಷ್ಮೆ ಉಪಲಬ್ಧವಿರುವಾಗಲು ಚೀನಾದಿಂದ ರೇಷ್ಮೆಯನ್ನು ಸರ್ಕಾರ ಆಮದು ಮಾಡಿಕೊಳ್ಳುತ್ತಿದೆ ಎಂದರು.

ನೀರಾವರಿ ದರದ ಬಗ್ಗೆ ಪ್ರಸ್ತಾಪಿಸಿದ ಡಾ. ಟಿ.ಆರ್. ಚಂದ್ರಶೇಖರ ಅವರು ಇಂದು ನೀರಾವರಿ ಯೋಜನೆಯ ನೀರಿನದರ ರಿಯಾಯಿತಿಯಿಂದ ಕೂಡಿದ್ದಾಗಿದ್ದು ಅದು ದೊಡ್ಡ ಹಿಡುವಳಿದಾರರಿಗೆ ಮತ್ತು ಹೆಚ್ಚು ಉಪಯುಕ್ತವಾಗುತ್ತಿದ್ದ ಸಣ್ಣ ಹಿಡುವಳಿದಾರರ ಹಿತಾಸಕ್ತಿಗಳನ್ನು ನಿರ್ಲಕ್ಷಿಸಲಾಗಿದೆ ಎಂದು ಹೇಳಿದರು. ಅಲ್ಲದೆ ತರಿ ಮತ್ತು ಚುಕ್ಕಿ ಭೂಮಿಗಳಲ್ಲಿ ಸಂಬಂಧಿಸಿದಂತೆ ನೀರಾವರಿ ದರವನ್ನು ಸಮತೋಲನಗೊಳಿಸಬೇಕಾದ ಅಗತ್ಯವಿದೆ ಎಂದು ಸೂಚಿಸಿದರು.

ಡಾ. ಬಿಳಿಮಲೆ ಮತ್ತು ಪ್ರೊ. ಹಿ.ಚಿ. ಬೋರಲಿಂಗಯ್ಯನವರು ಎತ್ತಿದ ಸಮಸ್ಯೆಗಳಿಗೆ ಸಂಬಂಧಿಸಿದಂತೆ ತಮ್ಮ ಚರ್ಚೆಯನ್ನು ವಿಸ್ತರಿಸಿದ ಡಾ. ಅಬ್ದುಲ್ ಅಜೀಜ್ ಅವರು ಅಧ್ಯಯನ ಕ್ರಮದ ದೃಷ್ಟಿಯಿಂದ ಮಾಹಿತಿಯ ಸಂಗ್ರಹವನ್ನು ಗುಣಾತ್ಮಕ ಮತ್ತು ಗಣನಾತ್ಮಕವಾಗಿ ಸಂಗ್ರಹಿಸಿ ಉಪಯೋಗಿಸಿಕೊಳ್ಳಬೇಕಾದ ಅವಶ್ಯಕತೆ ಇದೆ ಎಂದರು. ಗ್ರಾಮೀಣಾಭಿವೃದ್ಧಿಯ ಸೂಚನೆಗಳನ್ನು ಗುರುತಿಸಿ Compound Index ಒಂದನ್ನು ರೂಪಿಸಿಕೊಳ್ಳುವುದರಿಂದ ಸಮಗ್ರವಾದ ಒಟ್ಟು ನೋಟವೊಂದನ್ನು ಪರಿಭಾವಿಸಲು ಸಾಧ್ಯವಿದೆ ಎಂದು ಅವರು ಹೇಳಿದರು.

ಡಾ. ಶೇಷಾದ್ರಿಯವರು ಗ್ರಾಮೀಣ ಆರ್ಥಿಕ ವ್ಯವಸ್ಥೆ ಮತ್ತು ಗ್ಲೋಬಲೈಜೇಷನ್‌ಗಳು ಪರಸ್ಪರ ವಿರುದ್ಧಗತಿಯ ದ್ವಂದ್ವಗಳು ಹೀಗಾಗಿ ಗ್ಲೋಬಲೈಜೇಷನ್ ಪರಿಕಲ್ಪನೆಯನ್ನು ನಮ್ಮ ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಹೇಗೆ ಅಳವಡಿಸಬೇಕು ಎಂಬ ವಿವರಗಳ ಬಗ್ಗೆ ನಾವು ಗಮನಹರಿಸಬೇಕಾಗಿದೆ ಎಂದರು. ಕೈಗಾರಿಕಾಕ್ರಾಂತಿ ಕರ್ನಾಟಕದಲ್ಲಿ ನೆಲೆನಿಂತಿರುವ ಬಗ್ಗೆ ಡಾ. ರೇಣುಕಾರ್ಯರ ಪ್ರಬಂಧ ಸೂಚಿಸುವಂತೆ ಇದು ಕೇವಲ ಕಾರ್ಮಿಕ ಇಲಾಖೆಯ

ಮಧ್ಯಪ್ರವೇಶದಿಂದ ಮಾತ್ರ ಸಾಧ್ಯವಾಯಿತೋ ಅಥವಾ ಅನ್ಯ ಕಾರಣಗಳು ಇವೆಯೇ ಎಂಬ ಬಗ್ಗೆ ಯೋಚಿಸಬೇಕು, ಮುಂದುವರೆದು ಈ ಕೈಗಾರಿಕಾ ಶಾಂತಿ ಅನ್ಯರಾಜ್ಯಗಳು ಮತ್ತು ವಿದೇಶೀ ಬಂಡವಾಳವನ್ನು ಆಕರ್ಷಿಸುತ್ತಿದ್ದಾರೆ ಅದು ಯಾವುದಾದರೂ ಬದಲಾವಣೆಗಳನ್ನು ಅಪೇಕ್ಷಿಸುತ್ತಿದೆಯೇ ಎಂಬುದನ್ನು ನೋಡಬೇಕು ಎಂದರು.

ಅಭಿವೃದ್ಧಿ ಎಂಬ ಪರಿಕಲ್ಪನೆಯ ಆರ್ಥಿಕ ಮುಖವನ್ನು ಪ್ರಶ್ನಿಸಿದ ಶ್ರೀ ಖಾಜಾಹುಸೇನ್ ನಿಯಾಜಿಯವರು ಕೇವಲ ಭೌತಿಕ ವಸ್ತುಗಳ ಗಳಿಕೆಯಿಂದ ಆಧರಿಸಿದ ಜೀವನ ಮಟ್ಟದ ಏರಿಕೆಯಷ್ಟೇ ಅಭಿವೃದ್ಧಿಯಾಗುವುದಿಲ್ಲ ಒಂದು ಸರ್ವತೋಮುಖ ಏಳಿಗೆಯ ಪರಿಕಲ್ಪನೆಯಾಗಿ ಅಭಿವೃದ್ಧಿಯನ್ನು ಪರಿಗಣಿಸಬೇಕು ಎಂದು ಹೇಳಿದರು ಅಭಿವೃದ್ಧಿಯ ನಿರ್ವಹಣ ಮತ್ತು ಯೋಜನೆಯಲ್ಲಿ ಸ್ಥಳೀಯರ ಅಗತ್ಯ ಹಾಗೂ ಸ್ಥಳೀಯ ತಾಂತ್ರಿಕತೆಗಳನ್ನು ಉಪಯೋಗಿಸಿಕೊಳ್ಳಬೇಕಾದ ಅಗತ್ಯವಿದೆ ಎಂದು ಡಾ. ವಾಸುಕಿ ಸೂಚಿಸಿದರು. ನೀರಿನ ವಿತರಣೆಗೆ ಸಂಬಂಧಿಸಿದಂತೆ ರಾಷ್ಟ್ರೀಯ ಜಲನೀತಿಯೊಂದಿದ್ದು ಅದರ ಬಗ್ಗೆ ವಿವರಣೆ ನೀಡಲು ಸಾಧ್ಯವೇ ಎಂದು ಡಾ. ವೆಂಕಟರೆಡ್ಡಿಯವರನ್ನು ಅವರು ಕೇಳಿದರು.

ಚರ್ಚೆ ಮತ್ತು ಪ್ರಶ್ನೆಗಳಿಗೆ ಸಂಬಂಧಿಸಿದಂತೆ ಉತ್ತರಿಸುತ್ತಾ ಡಾ. ರೇಣುಕಾರ್ಯರವರು ಅಭಿವೃದ್ಧಿ ಸೂಚಿಗೆ ಸಂಬಂಧಿಸಿದಂತೆ ಒಂದು Compant Indexನ ಅಗತ್ಯವಿದೆ ಎಂದು ಸೂಚಿಸಿದ ಡಾ. ಅಜೀಜ್‌ರವರ ಸೂಚನೆಯನ್ನು ಒಪ್ಪಿಕೊಳ್ಳುತ್ತೇನೆ ಎಂದರು. ಡಾ. ಸೇಷಾದ್ರಿಯವರು ಪ್ರಸ್ತಾಪಿಸಿದ ಕರ್ನಾಟಕ ಕೈಗಾರಿಕಾಶಾಂತಿ ಮತ್ತು ಇದರಲ್ಲಿ ಸರ್ಕಾರದ ಮಧ್ಯಪ್ರದೇಶದ ನಿರ್ಣಾಯಕ್ಕೆ ಪಾತ್ರವನ್ನು ಇನ್ನಷ್ಟು ಸಮರ್ಥಿಸುತ್ತಾ ಕಾರ್ಮಿಕ ಬಿಕ್ಕಟ್ಟುಗಳಿರುವ ಕೇರಳ ಮತ್ತು ಪಶ್ಚಿಮ ಬಂಗಾಳಗಳನ್ನು ವಿದೇಶೀ ಬಂಡವಾಳ ಹೂಡಿಕೆ ಗಮನೀಯವಾಗಿ ಕರ್ನಾಟಕಕ್ಕಿಂತ ಕಡಿಮೆ ಎಂಬುದನ್ನು ಗಮನಿಸಬೇಕು ಎಂದು ಸೂಚಿಸಿದರು.

ಡಾ. ವೆಂಕಟರೆಡ್ಡಿಯವರು ನೀರಾವರಿ ಅಭಿವೃದ್ಧಿಗೆ ಸಂಬಂಧಿಸಿದಂತೆ ನಡೆದ ಚರ್ಚೆಗೆ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು. ನೀರಾವರಿದರದ ಅಸಮರ್ಪಕತೆಯನ್ನು ಒಪ್ಪಿಕೊಂಡ ಅವರು ಹೊಸ ನೀತಿಯೊಂದನ್ನು ಈಗಾಗಲೇ ರೂಪಿಸಲಾಗಿದ್ದು ಅದು ರಾಜಕೀಯ ಕಾರಣಗಳಿಂದಾಗಿ ಮೂಲೆಯಲ್ಲಿ ಕೂತಿದೆ ಎಂದರು. ನೀರಾವರಿ ಕಾಲುವೆಗಳು ಸಂರಕ್ಷಣೆ ಬಗ್ಗೆ ಪ್ರಸ್ತಾಪಿಸಿದ ಅವರು ಇದಕ್ಕೆ ಸರ್ಕಾರ ರೈತರ ನಡುವೆ ಕೆಲವು ಹೊಂದಾಣಿಕೆಗಳ ಅಗತ್ಯವಿದ್ದು ಅದು ಸಾಧ್ಯವಾದರೆ ಮಾತ್ರ ಸಮರ್ಪಕವಾಗಿ ಯೋಜಿಸಿ ಕಾರ್ಯಗತವಾಗಲು ಸಾಧ್ಯ ಎಂದರು. ನೈಸರ್ಗಿಕ ನೀರು ಹರಿದು ಹೋಗುವ ಕಾಲುವೆಗಳನ್ನು ರೈತರು ಆಕ್ರಮಿಸಿಕೊಂಡಿರುವುದನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡು ನೀರು ನಿಲ್ಲುವಿಕೆ, ಜಾಗು ಪ್ರದೇಶ ಮತ್ತು ಅದರ ಉಪದ್ರವಗಳನ್ನು ತಪ್ಪಿಸಲು ಸಾಧ್ಯವಿದೆ ಎಂದರು. ಕರ್ನಾಟಕ ನೀರಾವರಿ ಕಾಯಿದೆ ಮತ್ತು ರಾಷ್ಟ್ರೀಯ ಜಲಸಂಪನ್ಮೂಲಗಳನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳುವ ಬಗ್ಗೆ ಪ್ರಾದೇಶಿಕ ಹಾಗೂ ರಾಜ್ಯಮಟ್ಟದಲ್ಲಿ

ಸೂಕ್ತ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಮರ್ಥವಾದ ರಾಜಕೀಯ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ಡಾ. ವಿವೇಕಾನಂದರವರು ಗ್ರಾಮೀಣೀಕರಣಕ್ಕೆ ಸಂಬಂಧಿಸಿದಂತೆ ಗ್ಲೋಬಲೈಜೇಷನನ್ನು ಒಂದು ತೌಲನಿಕ ಉಪಯುಕ್ತತೆ ಎಂದು ಪರಿಗಣಿಸುವ ಮೂಲಕ ಎತ್ತಲಾದ ಹಲವಾರು ಸಮಸ್ಯೆಗಳನ್ನು ಸಮರ್ಪಕವಾಗಿ ಉತ್ತರಿಸಬಹುದು ಎಂದರು. ಕೃಷಿಗೆ ಸಂಬಂಧಿಸಿದಂತೆ ಸಣ್ಣ ಹಿಡುವಳಿದಾರರು ದೊಡ್ಡ ಹಿಡುವಳಿದಾರರ ವಿರುದ್ಧ ಸ್ಪರ್ಧಿಸುವುದು ಅಸಾಧ್ಯವಾದುದರಿಂದ ಲ್ಯಾಂಡ್‌ಟೇನನ್ಸಿ ನಿಯಮಾವಳಿಗಳಲ್ಲಿ ಬದಲಾವಣೆ ಮಾಡುವ ಅಗತ್ಯವಿದೆ ಎಂದು ಸೂಚಿಸಿದರು.

ಅಧ್ಯಕ್ಷರ ಮಾತುಗಳನ್ನಾಡಿದ ಡಾ. ರಾಯಪ್ಪನ್ ಅವರು ಪ್ರಬಂಧಗಳು ಮತ್ತು ಚರ್ಚೆಗಳು ಕರ್ನಾಟಕ ಆರ್ಥಿಕ ಬೆಳವಣಿಗೆ ಸಂಬಂಧಿಸಿದಂತೆ ಹಲವಾರು ಪ್ರಶ್ನೆಗಳನ್ನು ಎತ್ತಿವೆ, ಇವು ಆಹಾರ ಧಾನ್ಯಗಳ ಉತ್ಪಾದನೆ ಮತ್ತು ಅದನ್ನು ಸರ್ಕಾರ ನಿಯಂತ್ರಿಸಬೇಕೇ ಎಂಬ ಪ್ರಶ್ನೆ, ಗ್ರಾಮೀಣ ಅಭಿವೃದ್ಧಿ ಆದಾಯ, ಉತ್ಪನ್ನಗಳ ಏರುಮುಖವೋ ಅಥವಾ ವಿದ್ಯಾಭ್ಯಾಸ, ಆರೋಗ್ಯ ತಿಳುವಳಿಕೆಗಳನ್ನೊಳಗೊಂಡ ಸಾರ್ವತ್ರಿಕ ಏರಮುಖವಾಗಬೇಕೆ ಎಂಬ ಪ್ರಶ್ನೆಗಳನ್ನು ನಮ್ಮ ಮುಂದಿಟ್ಟಿವೆ. ಈ ಸಮಸ್ಯೆಗಳನ್ನು ಗುರುತಿಸಿ ಅರ್ಥಮಾಡಿಕೊಂಡು ಸೂಕ್ತ ಉತ್ತರಗಳನ್ನು ಹುಡುಕಿಕೊಂಡು ಅವನ್ನು ಅನುಷ್ಠಾನಗೊಳಿಸಬೇಕಾಗಿದೆ ಎಂದು ಅವರು ಅಭಿಪ್ರಾಯ ಪಟ್ಟರು.

ಒಟ್ಟಿನಲ್ಲಿ ನೋಡಿದಾಗ ಮಂಡಿತವಾದ ಪ್ರಬಂಧಗಳು ಹಾಗೂ ಅದರ ಸುತ್ತ ನಡೆದ ಚರ್ಚೆ ಕರ್ನಾಟಕದ ಆರ್ಥಿಕತೆಯ ವಿವಿಧ ಮುಖಗಳಲ್ಲಿ ಕಂಡುಬರುತ್ತಿರುವ ಬದಲಾವಣೆಗಳ ಬಗ್ಗೆ ಆತಂಕ ಮತ್ತು ಭಯಗಳನ್ನು ವ್ಯಕ್ತಪಡಿಸಿದವು. ಇಂತಹ ಆತಂಕಕಾರಿ ಪರಿಸ್ಥಿತಿಯನ್ನು ಎದುರಿಸಿ ನಿಭಾಯಿಸುವ ಬಗ್ಗೆ ಸಾಕಷ್ಟು ಕಾಳಜಿ ವ್ಯಕ್ತವಾಯಿತು. ಆದರೆ ಕೃಷಿ, ನೀರಾವರಿ, ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಎದ್ದ ಪ್ರಶ್ನೆಗಳಷ್ಟು ಗಣನೀಯ ಪ್ರಮಾಣದಲ್ಲಿ ಕೈಗಾರಿಕಾ ಸಂಬಂಧಗಳನ್ನು ಕುರಿತಂತೆವುಗಳಲ್ಲಿ ಎಂಬುದು ಗಮನೀಯ.

ಅರ್ಥಶಾಸ್ತ್ರದ ಅಂಕಿ-ಅಂಶಗಳ ತಾತ್ವಿಕ ಚೌಕಟ್ಟಿನಲ್ಲಿ ಮಂಡಿತವಾದ ಪ್ರಬಂಧಗಳ ಬಗ್ಗೆ ಹಾಗೂ ಅವುಗಳಿಂದ ಪ್ರಣೀತಗೊಂಡಿರುವ ಸರ್ಕಾರದ ನೀತಿಗಳ ಬಗ್ಗೆ ಸಾಮೂದಾಯಿಕ ನೆರೆಯಿಂದ ಸಮಾಜ ಶಾಸ್ತ್ರೀಯ ಹಿನ್ನೆಲೆಯಲ್ಲಿ ಕೆಲವು ಆತಂಕಗಳು ವ್ಯಕ್ತವಾದವು. ಇವು ಸರ್ಕಾರದ ಆರ್ಥಿಕ ನೀತಿಯಿಂದ ಸಮಾಜದಲ್ಲಿ ಅಭಿವೃದ್ಧಿ ಸಮಾನವಾಗಿ ಆಗದೆ ಹೋಗುತ್ತಿರುವ ಬಗ್ಗೆ ವ್ಯಕ್ತಪಡಿಸಿದ ಕಾಳಜಿಗಳು ಇನ್ನು ಕೆಲವು ನಿರ್ವಜನಾತ್ಮಕ ಪುನರ್ ಪರಿಶೀಲನೆಗೆ ಆಗ್ರಹ ಪಡಿಸಿದವು. ಅಭಿವೃದ್ಧಿ ಬೆಳವಣಿಗೆಯ ಕಾರ್ಯಕ್ರಮಗಳಲ್ಲಿ ಸರ್ಕಾರ ನೀತಿ, ಆರ್ಥಿಕ ಮಟ್ಟದಲ್ಲಷ್ಟೆ ಕೇಂದ್ರೀಕೃತಗೊಂಡಿರುವುದನ್ನು ಎಲ್ಲರ ಗಮನಕ್ಕೆ ತಂದ ಈ ಅಭಿಪ್ರಾಯಗಳು ಸಮಾನ ಸಾಮಾಜಿಕ ನ್ಯಾಯದ ಚೌಕಟ್ಟಿನಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ರೂಪುಗೊಳ್ಳಬೇಕು ಎಂದು ಸೂಚಿಸಿದವು.

ಇದಕ್ಕಿಂತ ಭಿನ್ನವಾಗಿ ಉಪೇಕ್ಷಿತ ಮತ್ತು ಸಾಮಾಜಿಕವಾಗಿ ಹಿಂದುಳಿದ ಗುಂಪುಗಳ ಹಿನ್ನೆಲೆಯಿಂದ ಇಡೀ ಅಭಿವೃದ್ಧಿಯನ್ನು ಗ್ರಹಿಸಲು ವಾದಿಸಿದ ಆಂದೋಳನ (activists) ಕಾರಿ ದೋರಣೆ ಕೂಡ ಕೆಲವು ಅಭಿಪ್ರಾಯಗಳನ್ನು ಕಂಡು ಬಂದಿತು. ವಸಾಹತೋತ್ತರ ಅಧ್ಯಯನ ಸಂಕಥನ ಪ್ರಮುಖ ನೆಲೆಯಾದ ದೃಷ್ಟಿಕೋನದಿಂದ ಅಭಿವೃದ್ಧಿಯ ಪರಿಕಲ್ಪನೆ ಪುನರ್ ನಿರ್ವಚಿತವಾಗ ಬೇಕಾಗಿರುವ ಅಗತ್ಯವನ್ನು ಒತ್ತಿಹೇಳಿದ ಈ ಅಭಿಪ್ರಾಯಗಳಾಗಿ ಸಮಾನ ಸಾಮಾಜಿಕ ನ್ಯಾಯಕ್ಕೆ ಅಗತ್ಯವಿರುವ compensatory ತತ್ವದ ಆಧಾರದ ಮೇಲೆ ಅದು ರೂಪುಗೊಳ್ಳುವ ಅಗತ್ಯವಿದೆ ಎಂದು ಹೇಳಿದರು.

ಪ್ರಸ್ತುತ ಅಧ್ಯಯನ ಕ್ರಮವನ್ನು ಹಾಗೂ ವಿಶ್ಲೇಷಣಾ ವಿದಾನವನ್ನು ಪ್ರಶ್ನಿಸುತ್ತಾ ಹೊಸ ಹೊಸ ಅಧ್ಯಯನ ಕ್ರಮಗಳನ್ನು, ಸೂಚಿಗಳನ್ನು ಮತ್ತು ಅದ್ಯಮದ ವಿಧಾನಗಳನ್ನು ಅಳವಡಿಸಿಕೊಳ್ಳುವ ತುರ್ತು ಅಗತ್ಯವಿದೆ ಎಂಬ ಅಂಶ ಗೋಷ್ಠಿಯ ಸರ್ವಾನುಮತವಾದ ಅಂಶವಾಗಿತ್ತು.

ರಾಜಕೀಯ ಅಂಗ ಸಾರ್ವತ್ರಿಕವಾಗಿ ಒಳಗಾಯಿತು. ಒಂದು ಸರಕಾರಕ್ಕೆ ಅಗತ್ಯವಾಗಿ ಇರಬೇಕಾಗಿರುವ ಗಟ್ಟಿಯಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ರಾಜಕೀಯ ಶಕ್ತಿ ಇಲ್ಲದಿರುವುದರಿಂದ ನೀತಿಗಳ ಅನುಷ್ಠಾನದಲ್ಲಿ ವಿಳಂಬ ಮತ್ತು ಹಿಂಜರಿತಗಳು ಉಂಟಾಗುತ್ತದೆ ಎಂದು ಒಮ್ಮತದಿಂದ ಒಪ್ಪಿಕೊಂಡ ಈ ಗೋಷ್ಠಿ ಗ್ಲೋಬಲೈಜೇಷನ್ ಮತ್ತು ಅದರ ಪರಿಣಾಮವಾಗಿ ರೂಪುಗೊಳ್ಳುತ್ತಿರುವ ಹೊಸ ಸಮಸ್ಯೆಗಳನ್ನು ಇದುರಿಸುವಲ್ಲಿ ಅವುಗಳನ್ನು ತಾತ್ವಿಕ, ಸಾಮಾಜಿಕ, ಆಂದೋಳನಿಕ ಹಾಗೂ ರಾಜಕೀಯ ನೆಲೆಗಳಿಂದ ನೋಡಿ ಅರ್ಥಮಾಡಿಕೊಂಡು ಆ ನೆಲೆಗಳ ಪರಸ್ಪರ ಸಂವಾದದೊಂದಿಗೆ ಹೊಸ ನೀತಿಯನ್ನು ನಿರೂಪಿಸಬೇಕಾಗಿದೆ ಎಂಬ ಅಭಿಪ್ರಾಯವನ್ನು ತಳೆಯಿತು. ಉತ್ತರಗಳು ಇನ್ನೂ ಕಂಡುಬರಬೇಕಾಗಿದೆಯಾದರೂ ಅದನ್ನು ಹುಡುಕುವ ನೆಲೆಗಟ್ಟು ಸರ್ವತೋಮುಖ ಏಳಿಗೆಯನ್ನು ಅಧರಿಸಿದ್ದಾಗಿರಬೇಕು ಮತ್ತು ಬಹುಕೇಂದ್ರಿತವಾಗಿರಬೇಕು ಎಂಬ ಅಂಶಕ್ಕೆ ಒತ್ತು ನೀಡಲಾಯಿತು.

# ಕರ್ನಾಟಕದ ಆರ್ಥಿಕತೆ
# ಮೂರನೆಯ ಗೋಷ್ಠಿಯ ವರದಿ ೧೪-೧೧-೯೫

ಪ್ರೊ. ಶೇಷಾದ್ರಿ, ಡಾ. ಪುರುಷೋತ್ತಮ ಬಿಳಿಮಲೆ

ಕರ್ನಾಕದ ಆರ್ಥಿಕತೆಯ ಕುರಿತಾದ ಎರಡನೆಯ ದಿನದ ಮೊದಲನೆಯ ಗೋಷ್ಠಿಯಲ್ಲಿ ಒಟ್ಟು ಆರು ಪ್ರಬಂಧಗಳನ್ನು ಮಂಡಿಸಲಾಯಿತು. ಡಾ. ಪ್ರಹ್ಲಾದಾಚಾರ್ ಅವರು ಈ ಗೋಷ್ಠಿಯ ಅಧ್ಯಕ್ಷರಾಗಿದ್ದರು. ಗೋಷ್ಠಿಯ ಪ್ರಬಂಧಗಳನ್ನು ಎರಡು ಗುಂಪಾಗಿ ವಿಂಗಡಿಸಿಕೊಳ್ಳಬಹುದು. ಮೊದಲನೆಯ ಗುಂಪಿನಲ್ಲಿ ಕರ್ನಾಟಕದ ಸಾರ್ವಜನಿಕ ಉದ್ಯಮಗಳು ಬೆಳವಣಿಗೆ ಮತ್ತು ಕಾರ್ಯನಿರ್ವಹಣೆ (ಪ್ರೊ. ಬಿ.ಎಸ್. ಶ್ರೀಕಂಠಾರಾಧ್ಯ) ಕರ್ನಾಟಕ ರಾಜ್ಯ ಹಣಕಾಸು (ಕೆ. ಗಾಯತ್ರಿ) ಮತ್ತು ಕರ್ನಾಟಕದಲ್ಲಿ ಆರ್ಥಿಕ ಸಾಧನ ಸಂಪತ್ತುಗಳು-ಸಮಸ್ಯೆಗಳು ಹಾಗೂ ನಿರೀಕ್ಷೆಗಳು (ಎಂ. ಜಾನ್ಸ್‌ನ್ ಸ್ಯಾಮುಲ್ ಮತ್ತು ಎಂ. ಲಿಂಗರಾಜು) ಎಂಬ ಪ್ರಬಂಧಗಳಿದ್ದರೆ ಎರಡನೆಯ ಗುಂಪಿನಲ್ಲಿ ಜನಸಂಖ್ಯಾ ಬೆಳವಣಿಗೆ ಕುಟುಂಬಯೋಜನೆ ಹಾಗೂ ಆರೋಗ್ಯ ಸೌಕರ್ಯಗಳು (ಪಿ. ಹನುಮಂತ ರಾಯಪ್ಪ ಮತ್ತು ಕೆ.ಎಸ್. ಉಮಾಮಣಿ) ಬಡತನ ನಿರುದ್ಯೋಗ ಮತ್ತು ರಕ್ಷಣಾ ಕಾರ್ಯಕ್ರಮಗಳು (ವಿ. ಶಾಂತಪ್ಪ ಹಾಗೂ ಶ್ರೀ ಕೇಶವ) ಮತ್ತು ಕರ್ನಾಟಕದಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಒಂದು ಸಮೀಕ್ಷೆ (ಉಷಾ ರಾಮಕುಮಾರ್) ಎಂಬ ಪ್ರಬಂಧಗಳಿದ್ದವು.

ಬಿ.ಎಸ್. ಶ್ರೀಕಂಠಾರಾಧ್ಯರು ತಮ್ಮ ಪ್ರಬಂಧದಲ್ಲಿ ಮೊದಲಿಗೆ ಕರ್ನಾಟಕದ ಸಾರ್ವಜನಿಕ ಉದ್ಯಮಗಳ ಬೆಳವಣಿಗೆಯ ಚಾರಿತ್ರಿಕ ವಿಶ್ಲೇಷಣೆ ನೀಡಿ ವ್ಯಾವಹಾರಿಕ ಪ್ರಯೋಜನದ ದೃಷ್ಟಿಯಿಂದ ಸಾರ್ವಜನಿಕ ಉದ್ಯಮಗಳನ್ನು ಸ್ಥಾಪಿಸಲಾಯಿತು ಎಂಬ ನಿರ್ಣಯವನ್ನು ಮಂಡಿಸಿದರು. ಮುಂದೆ ಸ್ವಾತಂತ್ರ್ಯಾನಂತರ ಕಾಲದಲ್ಲಿ ವ್ಯಾವಹಾರಿಕ ಪ್ರಯೋಜನಾ ದೃಷ್ಟಿಯೊಂದಿಗೆ ಭಾವನಾವಾದವೂ ಸೇರಿಕೊಂಡು ಸಾರ್ವಜನಿಕ ವಲಯ ಬೆಳೆಯಿತು ಎಂದು ಅವರು ವಾದಿಸಿದರು. ವಿಷಯ ಮಂಡನೆಗಾಗಿ ಅವರು ಸಾರ್ವಜನಿಕ ಉದ್ಯಮಗಳನ್ನು ೭ ವರ್ಗಗಳಾಗಿ ವಿಂಗಡಿಸಿಕೊಂಡು ಈ ಉದ್ಯಮಗಳ ಬೆಳವಣಿಗೆಯ

ಮತ್ತು ಸಮಸ್ಯೆಯ ವಿಶ್ಲೇಷಣೆ ನಡೆಸಿದರು. ಕರ್ನಾಟಕದಲ್ಲಿರುವ ಒಟ್ಟು ೭೨ ಉದ್ಯಮಗಳಲ್ಲಿ ಕೇವಲ ೬ ಉದ್ಯಮಗಳು ಬಾರೀ ಮೊತ್ತದ ಬಂಡವಾಳದಲ್ಲಿ ೮೬.೪೨ ಶೇಕಡ ಹಣವನ್ನು ಹೊಂದಿದ್ದು ಉಳಿದ ೬೨ ಉದ್ಯಮಗಳಲ್ಲಿ ಕೇವಲ ೧೩.೫೮ ಶೇಕಡ ಬಂಡವಾಳ ವಿನಿಯೋಗಿಸಿದ ತಾರತಮ್ಯವನ್ನು ಅವರು ಎತ್ತಿ ತೋರಿಸಿದರು. ವಾಣಿಜ್ಯೇತರ ಅಭಿವೃದ್ಧಿ ಶೀಲ ಉದ್ಯಮ ವರ್ಗದಲ್ಲಿ ಮಹಿಳೆಯರ ಮತ್ತು ಪರಿಶಿಷ್ಟ ಜಾತಿಗಳ ಅಭಿವೃದ್ಧಿ ನಿಗಮಗಳು ಮಾತ್ರ ಲಾಭಗಳಿಸಿದ್ದು ಅದೇ ವರ್ಗಕ್ಕೆ ಸೇರಿದ ಇತರ ನಿಗಮಗಳೆಲ್ಲ ನಷ್ಟ ಅನುಭವಿಸಿವೆ ಎಂಬ ಅವರ ಗಮನಿಸುವಿಕೆ ಕುತೂಹಲಕಾರಿಯಾಗಿದೆ. ಒಟ್ಟಿನಿಂದ ಅವರ ಪ್ರಬಂಧವು 'ಸಾರ್ವಜನಿಕ ಉದ್ಯಮಗಳು ರಾಜ್ಯಕ್ಕೆ ವರದಾನವಾಗುವ ಬದಲು ಒಂದು ಹೊರೆಯಾಗಿರುವುದು ಅವುಗಳ ಕಾರ್ಯನಿರ್ವಹಣೆಯ ಸಮೀಕ್ಷೆಯಿಂದ ಸ್ಪಷ್ಟವಾಗುತ್ತದೆ' ಎಂಬ ಅಂಶವನ್ನು ಅಂಕಿಅಂಶಗಳ ಮೂಲಕ ಸಾಬೀತುಪಡಿಸಿತು. ಸಂಖ್ಯಾಬಾಹುಳ್ಯ ನಿಯಮಗಳ ಅಸಮರ್ಪಕ ಅನುಷ್ಠಾನ ಉನ್ನತ ಹುದ್ದೆಗಳಿಗೆ ಅಸಮರ್ಪಕ ನೇಮಕಾತಿ ಮತ್ತು ಸರಕಾರದ ಹಸ್ತಕ್ಷೇಪಗಳಿಂದಾಗಿ ಸಾರ್ವಜನಿಕ ಉದ್ಯಮಗಳು ಸೊರಗುತ್ತಿವೆ ಎಂದು ಅವರು ವಾದಿಸಿದರು. ಇದಕ್ಕೆ ಪರಿಹಾರವಾಗಿ ಅವರು ಉದ್ಯಮಗಳ ಸುದಾರಣ, ಉದ್ಯಮಗಳ ವಿಲೀನಗೊಳಿಸುವಿಕೆ ಉದ್ಯಮಗಳ ಖಾಸಗೀಕರಣ ಮತ್ತು ಉದ್ಯಮಗಳನ್ನು ಮುಚ್ಚುವ ೫ ಸಲಹೆಗಳನ್ನು ಮುಂದಿಟ್ಟರು.

ಈ ಪ್ರಬಂಧದ ಕುರಿತು ಸಾಕಷ್ಟು ಮುಕ್ತವಾದ ಚರ್ಚೆ ನಡೆಯಿತು. ಹಿ.ಚಿ. ಬೋರಲಿಂಗಯ್ಯ ನವರು ಅಭಿವೃದ್ಧಿಯೇತರ ಬಾಬ್ತುಗಳ ಬಂಡವಾಳಕ್ಕೆ ಸರಕಾರ ಹಾಕಿದ ಕಡಿವಾಣವನ್ನು ವಿರೋಧಿಸಿದರು. ಪ್ರೊ. ರೇಣುಕಾರ್ಯ ಅವರು ಖಾಸಗೀಕರಣದ ಅಪಾಯವು ಸರಕಾರಕ್ಕುಂಟಾಗುವ ನಷ್ಟಕ್ಕಿಂತ ಹೆಚ್ಚಿನ ತೊಂದರೆಗಳನ್ನು ತರಬಲ್ಲದು, ಸರಕಾರವು ಜನರಿಗೆ ಹೆಚ್ಚು ಜವಾಬ್ದಾರಿಯನ್ನು ವಹಿಸಬೇಕು ಮತ್ತು ಸಾರ್ವಜನಿಕ ಉದ್ಯಮಕ್ಕೆ ಸಂಬಂಧಿಸಿದಂತೆ ಈಗ ನಡೆಯುತ್ತಿರುವ ವಿದೇಶೀಕರಣದ ವಿರುದ್ಧ ಚಿಂತಿಸಬೇಕು ಎಂದರು. ಡಾ. ಸಿ. ಮಹಾದೇವ ಅವರು ಸಾರ್ವಜನಿಕ ಉದ್ಯಮಗಳಿಂದ ರಾಜಕಾರಣವನ್ನು ಬೇರ್ಪಡಿಸಬೇಕು ಮತ್ತು ಖಾಸಗಿಯವರಿಗಿರುವ ಸ್ವಾತಂತ್ರ್ಯವನ್ನು ಸರಕಾರಿ ಕೆಲಸಗಾರರೂ ಅನುಭವಿಸಬೇಕು ಎಂಬ ಅಭಿಪ್ರಾಯ ಮಂಡಿಸಿದರು. ವಿದ್ಯುತ್ ನಿಗಮದ ಕಾರ್ಯನಿರ್ವಹಣೆಯ ಬಗೆಗೆ ಅನೇಕ ಆಕ್ಷೇಪ ವ್ಯಕ್ತಪಡಿಸಿದರು. ನಿಯಾಜಿಯವರು ರೈತರ ವಿದ್ಯುತ್ ಬಳಕೆಯೂ ಪರವಾಗಿ ಮಾತಾಡಿದರೆ ಪೂರ್ಣಾನಂದ ಅವರು ರೈತರಿಗೆ ಉಚಿತ ವಿದ್ಯುತ್ ನೀಡುವುದರಿಂದ ಸಮಸ್ಯೆ ಪರಿಹಾರವಾಗದು, ಎಂದು ಅಭಿಪ್ರಾಯಪಟ್ಟರು. ಪ್ರಶ್ನೆಗಳಿಗೆ ಉತ್ತರಿಸಿದ ಆರಾಧ್ಯರು ವಿದ್ಯುಚ್ಛಕ್ತಿ ಮಂಡಳಿಯು ದರ ಹೆಚ್ಚು ಮಾಡಿದ್ದು ಉಚಿತವಾದದ್ದಲ್ಲ ಮತ್ತು ಆಯ್ಕೆಯುಕ್ತ ಖಾಸಗೀಕರಣ (Selective Privitisation) ಅನೇಕ ಸಮಸ್ಯೆಗಳನ್ನು ಪರಿಹರಿಸಬಲ್ಲದು ಎಂದು ಅಭಿಪ್ರಾಯಪಟ್ಟರು.

ಕೆ. ಗಾಯತ್ರಿಯವರ ಅನುಪಸ್ಥಿತಿಯಲ್ಲಿ ಬಿ.ಎಸ್. ಶ್ರೀಕಂಠಾರಾಧ್ಯರು ಅವರ ಪ್ರಬಂಧವನ್ನು ಮಂಡಿಸಿದರು. ರಾಜ್ಯದ ಹಣಕಾಸಿನಲ್ಲಿ ಬೃಹತ್ ಪ್ರಮಾಣದ ಹೆಚ್ಚಳವಾಗಿರುವುದನ್ನು ಗುರುತಿಸಿದ ಗಾಯತ್ರಿಯವರು ತಮ್ಮ ಪ್ರಬಂಧವಲ್ಲಿ ಸರಕಾರ ವೆಚ್ಚಗಳ ಬೆಳವಣಿಗೆ ಮತ್ತು ಅವರ ವ್ಯಾಪರಿಯಲ್ಲಿ ಪ್ರತಿಬಿಂಬವಾಗಿರುವ ಸರಕಾರಿ ಚಟುವಟಿಕೆ ಹಾಗೂ ಬೆಳೆಯುತ್ತಿರುವ ವೆಚ್ಚಗಳಿಗೆ ಆಗುವ ಹಣಕಾಸು ಪೂರೈಕೆಯನ್ನು ಅಭ್ಯಸಿಸುವ ಪ್ರಯತ್ನ ನಡೆಸಿದರು ಮತ್ತು ಮುಂಗಡ ಪತ್ರದ ಹೆಚ್ಚುವರಿ ಕೊರತೆ ಸ್ಥಿತಿಯ ಬಗ್ಗೆ ವಿಶೇಷ ಗಮನಹರಿಸಲಾಗಿತ್ತು. ಪ್ರಬಂಧದ ಎರಡನೆಯ ಭಾಗದಲ್ಲಿ ಆಧಾಯ ತಃಖ್ತೆಯನ್ನು ನೀಡಿ ಮೂರನೆಯ ಭಾಗದಲ್ಲಿ ತೆರಿಗೆ ಮತ್ತು ವೆಚ್ಚಗಳ ವಿಶ್ಲೇಷಣೆಯನ್ನು ನೀಡಲಾಗಿತ್ತು. ರಾಜ್ಯದ ಹಣ ಕಾಸಿನ ಕೊರತೆ ಸ್ಥಿತಿಗೆ ಬೆಳೆಯುತ್ತಿರುವ ರಾಜಸ್ವ ವೆಚ್ಚವು ಒಂದು ಮೂಲ ಕಾರಣವಾಗಿದೆ ಎಂಬುದು ಅವರ ಮುಖ್ಯ ತರ್ಕವಾಗಿತ್ತು. ಆದರೂ ರಾಜ್ಯದ ತೆರಿಗೆ ಆದಾಯವು ಹೆಚ್ಚುತ್ತಿರುವುದರ ಬಗ್ಗೆ ಅವರಿಗೆ ಸಾಕಷ್ಟು ತೃಪ್ತಿಯಾಯಿತು. ಪ್ರಬಂಧಕಾರರ ಅನುಪಸ್ಥಿತಿಯಿಂದಾಗಿ ಪ್ರಬಂಧದ ಬಗ್ಗೆ ಚರ್ಚೆ ನಡೆಯಲಿಲ್ಲ. ಸಂಕಿರಣದ ಮೂರನೆಯ ಪ್ರಬಂಧವನ್ನು ಲಿಂಗರಾಜು ಅವರು ಮಂಡಿಸಿದರು. ಆರ್ಥಿಕ ಸಾಧನ ಸಂಪತ್ತುಗಳಲ್ಲಿ ಸಾರಿಗೆ, ಸಂಪರ್ಕ ಮತ್ತು ವಿದ್ಯುತ್ ವಿಭಾಗಗಳಲ್ಲಿ ರಾಜ್ಯ ತೋರಿದ ಅಭಿವೃದ್ಧಿಯ ಬಗೆಗೆ ಅವರು ಅಶಾದಾಯಕ ವಿವರ ನೀಡಿದರು. ಸಂಪರ್ಕಗಳಲ್ಲಿ ಬಂದರು ಮತ್ತು ವಿಮಾನ ನಿಲ್ದಾಣ ಮತ್ತು ಅಂಚೆ ತಂತಿ ಕ್ಷೇತ್ರದಲ್ಲಾದ ಪ್ರಗತಿಯ ಕುರಿತು ವಿವರ ನೀಡಿದರು. ವಿದ್ಯುತ್ ಶಕ್ತಿಗೆ ಸಂಬಂಧಿಸಿದಂತೆ ರಾಜ್ಯ ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ವಿವರಿಸಿದರು. ದೇಶದ ಇತರ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕ ರಾಜ್ಯ ತೀವ್ರ ಸ್ವರೂಪದ ವಿದ್ಯುಚ್ಛಕ್ತಿ ಕೊರತೆ ಅನುಭವಿಸುವುದನ್ನು ಅವರು ಬೊಟ್ಟು ಮಾಡಿ ತೋರಿಸಿದರು. ಹಾಗೆಯೇ ಖಾಸಗೀಕರಣ ಮತ್ತು ವಿದೇಶೀಕರಣ ಜನರ ಶ್ರೇಯೋಭಿವೃದ್ಧಿಯನ್ನು ಉತ್ತಮಗೊಳಿ ಸುತ್ತದೆಯೇ ಎಂಬ ಪ್ರಶ್ನೆಯನ್ನು ಸಭಿಕರ ಮುಂದಿಟ್ಟರು.

ಈ ಪ್ರಬಂಧವು ತೀವ್ರತರವಾದ ಆಕ್ಷೇಪಗಳಿಗೆ ಒಳಗಾಯಿತು. ಮುಖ್ಯವಾಗಿ ಆರ್ಥಿಕ ಸಾಧನ ಸಂಪತ್ತುಗಳನ್ನು ಸಾರಿಗೆ, ಸಂಪರ್ಕ ಮತ್ತು ವಿದ್ಯುತ್ತಿಗೆ ಮಾತ್ರ ಸೀಮಿತಗೊಳಿಸಿದ್ದನ್ನು ಹಲವರು ಆಕ್ಷೇಪಿಸಿದರು. ಪಿ.ಬಿ. ಹೋರಲಿಂಗಯ್ಯನವರು ರಸ್ತೆಗಳು ನಮ್ಮಲ್ಲಿವೆ ಆದರೆ ಅವು ಹೇಗಿವೆ? ಎಂಬ ಪ್ರಶ್ನೆಗೆ ಪ್ರಬಂಧದಲ್ಲಿ ಉತ್ತರವಿಲ್ಲದ್ದಕ್ಕೆ ವಿಷಾದಿಸಿದರು. ಕೆ.ಕೆ. ಮಾಧವ ಅವರು ಇಂಥ ಪ್ರಬಂಧಗಳಲ್ಲಿಮಾನವ ಸಂಬಂಧಗಳು ಗೈರುಹಾಜರಿಯಾಗಿರುತ್ತವೆ, ನಮ್ಮ ಆರ್ಥಿಕ ವೈರುಧ್ಯಗಳನ್ನು ವಿಶ್ಲೇಷಿಸಿಕೊಳ್ಳಬೇಕು ಎಂಬ ಸಲಹೆ ನೀಡಿದರು. ಡಾ. ಮೋಹನ್‌ಕುಂಟಾರ್ ಅವರು ಆರ್ಥಿಕತೆ ಮತ್ತು ಸಾರಿಗೆ ಸಂಪರ್ಕಗಳ ನಡುವಣ ಸಂಬಂಧಗಳನ್ನು ನೆರೆಯ ಕೇರಳ ರಾಜ್ಯದ ಪರಿಸ್ಥಿತಿಯೊಂದಿಗೆ ಹೋಲಿಸಿ ನೋಡಬೇಕೆಂಬ ಸಲಹೆ ನೀಡಿದರು. ಸಭಿಕರ ಪ್ರಶ್ನೆಗಳನ್ನು ಗಂಭೀರವಾಗಿ ಪರಿಗಣಿಸುವುದಾಗಿ ಶ್ರೀ ಲಿಂಗರಾಜು ಅವರು ಹೇಳಿದರು.

## ಎರಡನೆಯ ಗುಂಪಿನ ಪ್ರಬಂಧಗಳು

ಎರಡನೆಯ ಗುಂಪಿನ ಮೊದಲ ಪ್ರಬಂಧವು ಜನಸಂಖ್ಯಾ ಬೆಳವಣಿಗೆ, ಕುಟುಂಬ ಯೋಜನೆ ಮತ್ತು ಆರೋಗ್ಯ ಸೌಕರ್ಯಗಳ ಕುರಿತಾಗಿತ್ತು. ಈ ಪ್ರಬಂಧದಲ್ಲಿ ಮೂರು ಮುಖ್ಯ ಅಂಶಗಳಿಗೆ ಆದ್ಯತೆ ನೀಡಲಾಗಿತ್ತು. ಮೊದಲನೆಯದಾಗಿ, ನಮ್ಮ ಜನಸಂಖ್ಯೆಯ ಚಾರಿತ್ರಿಕ ಹಿನ್ನೆಲೆ, ಬೆಳವಣಿಗೆಯ ಪ್ರಮಾಣ, ವಿವಿಧ ಪ್ರದೇಶ ಹಾಗೂ ಜಿಲ್ಲೆಗಳಲ್ಲಿನ ಪರಿಸ್ಥಿತಿ, ಗ್ರಾಮಾಂತರ ಹಾಗೂ ನಗರಗಳ ಬೆಳವಣಿಗೆಯ ನಡುವಿನ ಅಂತರದ ಪರಿಶೀಲನೆ, ಎರಡನೆಯದಾಗಿ ಜನನ ಹಾಗೂ ಮರಣ ಪ್ರಮಾಣ, ಮದುವೆಯ ವಯಸ್ಸು, ಸಂತಾನ ನಿಯಂತ್ರಣ ಕಾರ್ಯಕ್ರಮಗಳ ಪರಿಶೀಲನೆ ಮತ್ತು ಮೂರನೆಯದಾಗಿ ಜನರಿಗೆ ಸಂತಾನ ನಿಯಂತ್ರಣ ಕಾರ್ಯಕ್ರಮಗಳ ವಿಚಾರವಾಗಿ ತಿಳುವಳಿಕೆ ಕೊಡುವ ಸಂಸ್ಥೆಗಳು ಹಾಗೂ ಸಾಧನಗಳ ಪರಿಶೀಲನೆ ಜನಸಂಖ್ಯಾ ಬೆಳವಣಿಗೆಯಲ್ಲಿ ಕಾಣಿಸಿಕೊಂಡ ಪ್ರಾದೇಶಿಕ ಅಸಮತೋಲನದ ಪರಿಶೀಲನೆ ಮತ್ತು ಅದರ ಕಾರಣಗಳ ವಿಶ್ಲೇಷಣೆ ನಡೆಸಿದ್ದು ಈ ಪ್ರಬಂಧದ ಮಹತ್ವ ವಿಚಾರವಾಗಿತ್ತು. ಪ್ರಬಂಧದ ಉತ್ತರಾರ್ಧವನ್ನು ಮಂಡಿಸಿದ ಉಮಾರಾಣಿಯವರು ಮಹಿಳೆಯರು ಮತ್ತು ಮಕ್ಕಳ ಪಾಲನೆ ಪೋಷಣೆಯ ಬಗ್ಗೆಗೆ ಹೆಚ್ಚು ಒತ್ತು ನೀಡಬೇಕಾದ ಅಗತ್ಯವನ್ನು ಪ್ರತಿಪಾದಿಸಿದರು. ಕುಟುಂಬ ಯೋಜನೆಯ ಯಶಸ್ಸಿಗೆ ಸೌಲಭ್ಯಗಳ ಗುಣಮಟ್ಟಗಳ ಸುಧಾರಣೆ ಆರೋಗ್ಯ ಕಾರ್ಯಕರ್ತರು ಜನರ ಮನವೊಲಿಸುವ ಕಾರ್ಯಗಳನ್ನು ಮಾಡುವ ಸಲಹೆಗಳನ್ನು ಮುಂದಿಟ್ಟರು.

ಈ ಪ್ರಬಂಧವು ಬಹಳ ಉಪಯುಕ್ತವಾದ ಚರ್ಚೆಗೆ ಎಡೆ ಮಾಡಿಕೊಟ್ಟಿತು. ಡಾ. ಮಹದೇವ ಅವರು ಕುಟುಂಬಯೋಜನೆಯ ಪ್ರಾಯೋಗಿಕ ಸಮಸ್ಯೆಗಳನ್ನು ಪರಿಶೀಲಿಸಿ ಅಲ್ಲಿ ನಡೆವ ಅವ್ಯವಹಾರದ ಬಗೆಗೆ ಗಮನಸೆಳೆದರು. ಪೂರ್ಣಾನಂದ ಅವರು ಜನಸಂಖ್ಯೆ ಮತ್ತು ಬಡತನ ಸಂಬಂಧವನ್ನು ಇನ್ನೂ ಸೂಕ್ಷ್ಮವಾಗಿ ವಿಶ್ಲೇಷಿಸಬೇಕೆಂದು ಅಭಿಪ್ರಾಯಪಟ್ಟರು. ಟಿ.ಆರ್. ಚಂದ್ರಶೇಖರ್ ಅವರು ಪ್ರಬಂಧದ ಬಗ್ಗೆ ಮೆಚ್ಚುಗೆ ಸೂಚಿಸಿ ಜನಸಂಖ್ಯೆಯ ಬಗೆಗೆ ನಮ್ಮ ನಿಲುವುಗಳಲ್ಲಿ ಸಾಕಷ್ಟು ಗೊಂದಲ ಇದೆ ಎಂಬುದನ್ನು ಪ್ರಸ್ತಾಪಿಸಿ, ಮಕ್ಕಳೂಳಿಗೆ ಸಂಬಂಧಿಸಿದಂತೆ ಗ್ರಾಮಾಂತರ ಪ್ರದೇಶದಲ್ಲಿರುವ ಜನರ ವಿವೇಕದ ಬಗೆಗೆ ಹೊಸ ತಿಳುವಳಿಕೆಯನ್ನು ಮೂಡಿಸಿಕೊಳ್ಳಬೇಕು ಎಂದರು. ಮರಾಠವಾಡ, ತೆಲಂಗಾಣ, ಹೈದರಾಬಾದ್ ಕರ್ನಾಟಕದಲ್ಲಿರುವ ಜನಸಂಖ್ಯಾ ಹೆಚ್ಚಳಕ್ಕೂ ಅಲ್ಲಿ ಇನ್ನೂ ಉಳಿದುಕೊಂಡಿರುವ ಊಳಿಗಮಾನ್ಯ ವ್ಯವಸ್ಥೆಗೂ ಸಂಬಂಧ ಇರಬಹುದೇ? ಎಂದು ಅವರು ತಮ್ಮ ಸಂದೇಹವನ್ನು ಮುಂದಿಟ್ಟರು. ಪ್ರಶ್ನೆಗಳಿಗೆ ಉತ್ತರಿಸಿದ ಹನುಮಂತ ರಾಯಪ್ಪ ಅವರು 'ಜನಸಂಖ್ಯೆಯ ಹೆಚ್ಚಳ ಒಂದು ಸಮಸ್ಯೆಯೂ ಹೌದು ಸಮಸ್ಯೆಗೆ ಉತ್ತರವೂ ಹೌದು' ಎಂಬುದನ್ನು ತರ್ಕಬದ್ಧವಾಗಿ ಮಂಡಿಸಿದರು. ಜನಸಂಖ್ಯಾ ನಿಯಂತ್ರಣವು ಅಭಿವೃದ್ಧಿ ಚಟುವಟಿಕೆಗಳ ಅವಿಭಾಜ್ಯ ಅಂಗವಾದರೆ ಆಗ ಆರ್ಥಿಕ

ಅಭಿವೃದ್ಧಿಯೇ ಜನಸಂಖ್ಯಾ ನಿಯಂತ್ರಣಕ್ಕೆ ಸರಿಯಾದ ಉತ್ತರವಾಗುತ್ತದೆ ಎಂಬ ಅವರ ಅಭಿಪ್ರಾಯವನ್ನು ಸಭೆ ಮನ್ನಿಸಿತು.

ಬಡತನ ನಿರುದ್ಯೋಗ ಮತ್ತು ರಕ್ಷಣಾ ಕಾರ್ಯಕ್ರಮಗಳ ಕುರಿತಾದ ಪ್ರಬಂಧವನ್ನು ಶ್ರೀ ಕೇಶವ ಅವರು ಮಂಡಿಸಿದರು. ಈ ಪ್ರಬಂಧದಲ್ಲಿ ಬಡತನ ಮತ್ತು ನಿರುದ್ಯೋಗಗಳ ವ್ಯಾಪ್ತಿ, ಸಾಮಾನ್ಯ ತಿಳುವಳಿಕೆ, ಕಲ್ಪನೆ, ಲಕ್ಷಣ ಮತ್ತು ವ್ಯಾಪ್ತಿ ಇವುಗಳನ್ನು ಇದಿರಿಸಲು ರಾಜ್ಯ ಸರಕಾರದ ಯೋಜಿಸಿರುವ ರಕ್ಷಣಾ ಕಾರ್ಯಕ್ರಮಗಳ ವಿವರ ನೀಡಲಾಗಿತ್ತು. ಪ್ರಬಂಧದ ಕೊನೆಯಲ್ಲಿ ಅವರು ೨೧ ಮುಖ್ಯ ತೀರ್ಮಾನಗಳನ್ನು ನೀಡಿದರು. ಅದರಲ್ಲಿ ಕರ್ನಾಟಕದಲ್ಲಿ ಬಡತನದ ರೇಖೆಗಿಂತ ಕೆಳಗಿರುವ ಜನರ ಶೇಕಡಾವಾರು ಒಟ್ಟು ಭಾರತದ ಮಟ್ಟಕ್ಕಿಂತ ಹೆಚ್ಚಾಗಿರುವುದನ್ನು ಅವರು ಗುರುತಿಸಿದ್ದಾರೆ. ಉದ್ಯೋಗದ ದರವು ಕಾರ್ಮಿಕ ಶಕ್ತಿಯ ಬೆಳವಣಿಗೆಯ ದರಕ್ಕಿಂತ ಕಡಿಮೆಯಾಗುತ್ತಿರುವುದರಿಂದ ನಿರುದ್ಯೋಗ ಹೆಚ್ಚಾಗುವುದನ್ನು ಅವರ ಪ್ರಬಂಧ ಗುರುತಿಸಿದೆ. ಕಾರ್ಮಿಕ ಶಕ್ತಿಯ ವ್ಯಾಪ್ತಿಗಿಂತ ಮಹಿಳೆಯರು ಹೊರಗುಳಿದಿದ್ದಾರೆ ಎಂಬ ಅವರ ಗುರುತಿಸುವಿಕೆ ಮಹತ್ವದ್ದಾಗಿದೆ. ಇದಕ್ಕೆ ಪರಿಹಾರವಾಗಿ ಅವರು ಸಣ್ಣ ಮತ್ತು ಗೃಹ ಕೈಗಾರಿಕೆಗಳಂತಹ ಕೆಲವು ಗುರುತರ ಸಲಹೆಗಳನ್ನು ನೀಡಿದ್ದಾರೆ.

ಚರ್ಚೆಯಲ್ಲಿ ಪ್ರೊ. ರೇಣುಕಾರ್ಯ ಅವರು ಪ್ರಬಂಧದ ಶೀರ್ಷಿಕೆಯ ಅಸಮರ್ಪಕತೆಯನ್ನು ಗುರುತಿಸಿ ರಕ್ಷಣಾ ಕಾರ್ಯಕ್ರಮಗಳು ಎಂದಿರುವುದರ ಬದಲು ನಿವಾರಣೆಯೆಂದಿದ್ದರೆ ಸಾಕು ಎಂದರು. ಮಾಧವ ಅವರು ಕೂಲಿ ಕೆಲಸದ ಬಗೆಗೆ ಗಮನಿಸಬೇಕು ಎಂಬ ಸೂಚನೆ ನೀಡಿದರು. ಡಾ. ಮಹದೇವ ಅವರು ರಾಜಕಾರಣದ ಅಕ್ರಮ ಪ್ರವೇಶದಿಂದಾಗಿ ಬಡತನ ಮತ್ತು ನಿರುದ್ಯೋಗಗಳು ಹೆಚ್ಚಾಗುತ್ತಿವೆ ಎಂದರು. ನಿಯಾಜಿಯವರು ರಾಜ್ಯದ ಸಂಪತ್ತಿನ ಸದುಪಯೋಗ ಆಗಬೇಕು ನಗರ ಮತ್ತು ಹಳ್ಳಿಗಳ ನಡುವಣ ವೈರುಧ್ಯ ಅಳಿಯಬೇಕು ರೈತರಿಗೆ ಹೆಚ್ಚಿನ ಸವಲತ್ತು ದೊರೆಯಬೇಕು ಎಂದು ಅಭಿಪ್ರಾಯಪಟ್ಟರು. ಟಿ.ಆರ್. ಚಂದ್ರಶೇಖರ್ ಅವರು ಬಡವರು ನಿರುದ್ಯೋಗಿಗಳಾಗಿರಲು ಸಾಧ್ಯವೇ ಇಲ್ಲವೆಂದು ವಾದಿಸಿದರು. ಪ್ರಶ್ನೆಗಳಿಗೆ ಉತ್ತರ ನೀಡಿದ ಕೇಶವ ಅವರು ಶೀರ್ಷಿಕೆ ಬದಲಾವಣೆಗೆ ಒಪ್ಪಿಗೆ ಸೂಚಿಸಿದರು.

ಕರ್ನಾಟಕದಲ್ಲಿ ಮಾನವ ಸಂಪನ್ಮೂಲಾಭಿವೃದ್ಧಿಯ ಬಗೆಗಿನ ಉಷಾ ರಾಮಕುಮಾರ್ ಅವರ ಪ್ರಬಂಧವನ್ನು ಸಿ.ಕೆ. ಶ್ಯಾಮಲಾ ಅವರು ಮಂಡಿಸಿದರು. ಪ್ರಬಂಧದಲ್ಲಿ ಮಾನವ ಸಂಪನ್ಮೂಲಾಭಿವೃದ್ಧಿ ಮತ್ತು ವಿಕಾಸದ ಪರಿಕಲ್ಪನೆಯನ್ನು ಸಮರ್ಪಕವಾಗಿ ನಿರ್ವಚಿಸಿಕೊಳ್ಳಲಾಗಿತ್ತು. ಅನಂತರ ಪ್ರಬಂಧವು ಶಿಕ್ಷಣದ ಪ್ರಗತಿಯ ಪರಿಶೀಲನೆಗೆ ಬದ್ಧವಾಗಿ ಪೂರ್ವ ಪ್ರಾಥಮಿಕ, ಪ್ರೌಢ ಪದವಿಪೂರ್ವ, ವೃತ್ತಿ, ಉನ್ನತ, ತಾಂತ್ರಿಕ,

ವೈದ್ಯಕೀಯ ಮತ್ತು ವಯಸ್ಕರ ಶಿಕ್ಷಣದಲ್ಲಿ ರಾಜ್ಯ ತೋರಿದ ಪ್ರಗತಿಯ ವಿಶ್ಲೇಷಣೆ ನಡೆಸಿತು. ಪ್ರಬಂಧದ ಕೊನೆಯಲ್ಲಿ ಮಾನವ ಸಂಪನ್ಮೂಲಾಭಿವೃದ್ಧಿ ಮುಂದಿರುವ ಸಮಸ್ಯೆಗಳನ್ನು ಪ್ರಬಂಧದಲ್ಲಿ ಗುರುತಿಸಲಾಗಿತ್ತು.

ಮಾನವ ಸಂಪನ್ಮೂಲವನ್ನು ಕೇವಲ ಶಿಕ್ಷಣಕ್ಕೆ ಮಿತಿಗೊಳಿಸಿಕೊಂಡು ರಚಿತವಾದ ಈ ಪ್ರಬಂಧವು ತೀವ್ರವಾದ ಪ್ರತಿಕ್ರಿಯೆಗಳಿಗೆ ಒಳಗಾಯಿತು. ಹಿ.ಚಿ. ಬೋರಲಿಂಗಯ್ಯನವರು ಶಿಕ್ಷಣ ಕೇಂದ್ರದಿಂದ ಹೊರಗಿರುವ ಸಂಪನ್ಮೂಲಗಳನ್ನು ಗುರುತಿಸಬೇಕಾದ ಅವಶ್ಯಕತೆಯನ್ನು ಒತ್ತಿಹೇಳಿದರು. ಕೆ.ಜಿ. ವಾಸುಕಿಯವರು ಈ ಪ್ರಬಂಧವು ಸರಕಾರವೇ ಸಿದ್ಧಪಡಿಸಿದ ವರದಿಯಂತಿದೆ ಎಂದು ಹೇಳಿದರು. ಡಾ. ಸಿ. ಮಹಾದೇವ ಅವರು ಶಿಕ್ಷಣ ಕ್ಷೇತ್ರದಲ್ಲಿ ಕಂಡುಬರುವ ಡೊನೇಶನ್ ಪಿಡುಗಿನ ಬಗೆಗೆ ಗಮನ ಸೆಳೆದರು. ಪೂರ್ಣಾನಂದ ಅವರು ಶಾಲೆಗಳಲ್ಲಿ ಮಕ್ಕಳಿಗೆ ಹಾಲು ಕೊಡುವ ಕ್ರಮ ಹಾಸ್ಯಾಸ್ಪದವಾದುದು. ಅದರ ಬದಲು ಪೋಷಕರೇ ಮಕ್ಕಳಿಗೆ ಹಾಲು ಕೊಡುವಂತಹ ವಾತಾವರಣವನ್ನು ನಿರ್ಮಾಣ ಮಾಡಬೇಕು ಎಂದರು. ಶಿಕ್ಷಣ ಕ್ಷೇತ್ರದಲ್ಲಿ ಕಾಣಿಸಿಕೊಂಡ ಪ್ರಗತಿಯನ್ನು ಸಮಾಜದ ಮೌಲ್ಯ ವ್ಯವಸ್ಥೆಯೊಂದಿಗೆ ಹೋಲಿಸಿ ನೋಡುವ ಪ್ರಯತ್ನ ಪ್ರಬಂಧದಲ್ಲಿ ಇಲ್ಲವಾದ್ದರಿಂದ ಸಮಸ್ಯೆಯನ್ನು ಸರಳಗೊಳಿಸಲಾಗಿದೆ ಎಂಬ ಅಭಿಪ್ರಾಯವನ್ನು ಹಲವರು ಪ್ರಕಟಿಸಿದರು. ಪ್ರಬಂಧಕಾರರ ಗೈರು ಹಾಜರಿಯಲ್ಲಿ ಪ್ರಶ್ನೆಗಳಿಗೆ ಉತ್ತರವಿರದಾಯಿತು.

ಗೋಷ್ಠಿಯ ಅಧ್ಯಕ್ಷ ಭಾಷಣ ಮಾಡಿದ ಪ್ರೊ. ಪ್ರಹ್ಲಾದಚಾರ್ ಅವರು ಆರಂಭದಲ್ಲಿ ಪ್ರಬಂಧ ಮಂಡನೆ ಮಾಡಿದ ಮತ್ತು ಸಮಸ್ಯೆಗಳ ಮಂಡನೆ ಮಾಡಿದ ಎಲ್ಲರಿಗೂ ಅಭಿನಂದನೆ ಸಲ್ಲಿಸಿ ಜನರ ಪ್ರತಿಕ್ರಿಯೆಗಳಿಂದ ಅರ್ಥಶಾಸ್ತ್ರಜ್ಞರಿಗೆ ಲಾಭವಾಗಿದೆ ಎಂದು ಸ್ಪಷ್ಟಪಡಿಸಿದರು. ಅರ್ಥಶಾಸ್ತ್ರವು ಯಾವಾಗಲೂ ಗುಣಾತ್ಮಕ ಅಂಶಗಳ ಪರಿಶೀಲನೆಯನ್ನು ಬಿಟ್ಟು ಕೊಡುವುದಿಲ್ಲ ಎಂದು ಅವರು ಅಂಕಿ ಅಂಶಗಳ ಬಗೆಗೆ ಎದ್ದಿರುವ ಅಸಮಾಧನಗಳಿಗೆ ಉತ್ತರ ಹೇಳಿದರು. ನಮ್ಮ ಸಮಾಜ ಸಂಕ್ರಮಣ ಸ್ಥಿತಿಯಲ್ಲಿದೆ. ಇದರ ಕಾರಣವಾಗಿ ಹೊಸ ನೀತಿಗಳೂ ಕಾಣಿಸಿಕೊಳ್ಳುತ್ತಿವೆ. ಈ ಹಂತದಲ್ಲಿ ಅಭ್ಯಸಿಸಬೇಕು ಮತ್ತು ಅಧ್ಯತೆಯಿಂದ ಅವುಗಳನ್ನು ಪರಿಹರಿಸಲು ಕ್ರಿಯಾಶೀಲರಾಗಬೇಕು ಎಂದು ಹೇಳಿದರು.

## ಮುಕ್ತಾಯ

ಒಟ್ಟಿನಿಂದ ಮಂಡಿಸಲಾದ ಆರೂ ಪ್ರಬಂಧಗಳಲ್ಲಿ ಪ್ರಬಂಧಕಾರರ ಅಪಾರಶ್ರಮ, ವಿದ್ವತ್ತು ಮತ್ತು ರಾಜ್ಯದ ಅಭಿವೃದ್ಧಿಯ ಬಗೆಗಿನ ಕಳಕಳಿ ಎದ್ದುಕಾಣುತ್ತಿತ್ತು. ಪ್ರಬಂಧಕಾರರ ಈ ಅರ್ಥ ಶಾಸ್ತ್ರೀಯ ಜ್ಞಾನಕ್ಕೆ ವಿರುದ್ಧವಾಗಿ ಸಾಮಾಜಿಕ ನೆಲೆಯಿಂದ ಪ್ರತಿಕ್ರಿಯಿಸಿದ ಹಲವರು ಪ್ರಬಂಧಗಳ ಮಿತಿಗಳನ್ನು ಎತ್ತಿ ತೋರಿಸುವಲ್ಲಿ ಯಶಸ್ವಿಯಾದರು. ಈ ನಿಟ್ಟಿನಲ್ಲಿ

ಅದು ಬಹಳ ಮುಕ್ತವಾದ ಚರ್ಚೆಗೂ, ಭಾವುಕವಾದ ಪ್ರತಿಕ್ರಿಯೆಗಳಿಗೂ ಎಡೆ ಮಾಡಿಕೊಟ್ಟಿತು. ಬಹುಪಾಲು ಪ್ರಬಂಧಗಳು ಸರಕಾರವೇ ಸಿದ್ಧಪಡಿಸಿದ ವರದಿಗಳಂತಿವೆ, ಅರ್ಥಶಾಸ್ತ್ರಜ್ಞರು ವ್ಯವಸ್ಥೆಯ ಪರವಾಗಿದ್ದಾರೆ ಎಂಬಂಥಹ ಮಾತುಗಳು ಸಭೆಯ ಒಳಗೂ ಹೊರಗೂ ಕೇಳಿ ಬರುತ್ತಿತ್ತು. ಇದರ ಜೊತೆಗೆ ಬದಲಾದ ಪರಿಸ್ಥಿತಿಯ ಸೂಕ್ಷ್ಮ ವಿಶ್ಲೇಷಣೆ ಅಗತ್ಯ ಎಂಬಂತಹ ಎಚ್ಚರದ ಮಾತುಗಳನ್ನು ಅರ್ಥಶಾಸ್ತ್ರಜ್ಞರೂ ಹೇಳುತ್ತಿದ್ದರು. ಈ ಬಗೆಯ ಸಂಕಥನಗಳೇ ಮೂರನೆಯ ಗೋಷ್ಠಿಯ ಯಶಸ್ಸನ್ನು ಪ್ರಕಟಪಡಿಸುತ್ತದೆ.

ಪ್ರೊ. ಶೇಷಾದ್ರಿ
ಅರ್ಥಶಾಸ್ತ್ರ ಪ್ರಾಧ್ಯಾಪಕರು
ಮಹಿಳಾ ಕಾಲೇಜು, ಬಳ್ಳಾರಿ

ಪುರುಷೋತ್ತಮ ಬಿಳಿಮಲೆ
ಪ್ರಾಧ್ಯಾಪಕ, ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿ ಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವುದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ. ಅವಕಾಶವೂ ಇದೆ.

ಚಂದ್ರಶೇಖರ ಕಂಬಾರ
ಕುಲಪತಿಗಳು

Reg. No. 055999/23/AL/93/TL